[illegible] ಗ್ರಂಥರತ್ನಮಾಲೆ, ನಂ. ೨.

ಶ್ರೀ

ಶ್ರೀವ್ಯಾಸಮಹರ್ಷಿಪ್ರಣೀತ

# ಶ್ರೀಮದ್ಭಾಗವತವು

ಕರ್ಣಾಟಕ ವಚನವು.

(ಪ್ರಥಮ ದ್ವಿತೀಯಸ್ಕಂಧಗಳು)

ಶ್ರೀಮದ್ಯದುಶೈಲನಿವಾಸರಸಿಕ

ಪಂಡಿತ. ದೇವಶಿಖಾಮಣಿ ಅಳಸಿಂಗರಾಚಾರ್ಯವಿರಚಿತವು.

[REPRINT]

Vol. 1.





ಮದ್ರಾಸು. —

ಆನಂದಮುದ್ರಾಕ್ಷರಶಾಲೆಯಲ್ಲಿ ಮುದ್ರಿತವಾಗಿ,

ಆರ್. ವೆಂಕಟೇಶ್ವರ ಕಂಪೆನಿಯವರಿಂದ

ಪ್ರಕಟಿಸಲ್ಪಟ್ಟಿದೆ

1954.



Price Rs. 3/-

# ಪ್ರಥಮಸ್ಕಂಧದ ವಿಷಯಾನುಕ್ರಮಣಿಕೆ.







---

# ದ್ವಿತೀಯಸ್ಕಂಧದ ವಿಷಯಾನುಕ್ರಮಣಿಕೆ.

<u>ಪ್ರಥಮ ದ್ವಿತೀಯಸ್ಕಂಧಗಳೊಳಗಿನ ಪಟಗಳ ಪಟ್ಟಿ.</u>



ಶ್ರೀಃ

ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ

# ಶ್ರೀಮದ್ಭಾಗವತಮಾಹಾತ್ಮ್ಯವು.

---

ಪೂರ್ವದಲ್ಲಿ ಒಮ್ಮೆ ಶೌನಕಮಹಾಮುನಿಯು ನೈಮಿಶಾರಣ್ಯದಲ್ಲಿ ಸೂತ ಪೌರಾಣಿಕನ ಬಳಿಗೆ ಬಂದು ನಮಸ್ಕರಿಸಿ “ ಎಲೈ ಮಹಾತ್ಮನೆ! ಕರ್ಣರಸಾಯನ ರೂಪವಾದ ಕಥೆಯೊಂದನ್ನು ನನಗೆ ವಿಸ್ತರಿಸಿ ತಿಳಿಸಬೇಕು. ಅಜ್ಞಾನವನ್ನು ನೀಗಿಸಿ ಭಕ್ತಿ ಜ್ಞಾನ ವೈರಾಗ್ಯಗಳನ್ನು ಹೆಚ್ಚಿಸಿಕೊಳ್ಳುವುದಕ್ಕೆ ದಾರಿಯಾವುದು? ಈ ಕಲಿಯುಗದ ಪ್ರಾಬಲ್ಯದಿಂದ ಸಮಸ್ತ ಜೀವರಾಶಿಗಳೂ ರಾಕ್ಷಸಪ್ರಕೃತಿಯನ್ನು ಹೊಂದಿ ಕೆಡುತ್ತಿರುವುವು. ಈ ದೋಷನಿವೃತ್ತಿಗೆ ಮಾರ್ಗವಾವುದು? ಪರಮ ಯೋಗಿಗಳಿಗೂ ದುರ್ಲಭವಾದ ಮೋಕ್ಷವನ್ನು ಸಾಧಿಸುವುದಕ್ಕೆ ಉಪಾಯ ಯಾವುದು?” ಎಂದನು. ಅದಕ್ಕಾ ಸೂತನು ಶೌನಕನನ್ನು ಕುರಿತು “ಎಲೈ ಮುನಿ ಶ್ರೇಷ್ಠನೆ! ಈ ಕಲಿಯುಗದಲ್ಲಿ ಶ್ರೀ ಶುಕಮಹಾಮುನಿಯಿಂದುಪದೇಶಿಸಲ್ಪಟ್ಟ ಭಾಗ ತವೇ ಸರ್ವಾರ್ಥಸಿದ್ಧಿಯನ್ನುಂಟುಮಾಡತಕ್ಕುದು. ಕಲಿಕಾಲವೆಂಬ ಕ್ರೂರ ಸರ್ಪದ ಬಾಯಿಂದ ತಪ್ಪಿಸಿ ಕಾಪಾಡುವುದಕ್ಕೆ ಶ್ರೀಮದ್ಭಾಗವತಕಥಾನುಸಂಧಾ ನವೇ ಸರ್ವೋತ್ತಮವಾದ ಸಾಧನವು. ಮನಶ್ಶುದ್ಧಿಗೆ ಇದಕ್ಕಿಂತಲೂ ಮೇಲಾದ ಉಪಾಯಾಂತರವಿಲ್ಲ. ಜನ್ಮಾಂತರದಲ್ಲಿ ವಿಶೇಷಸುಕೃತಗಳನ್ನು ಮಾಡಿದ್ದವರಿ ಲ್ಲದೆ, ಆ ಭಾಗವತವೆಂಬ ಶಾಸ್ತ್ರವು ಸುಲಭವಲ್ಲ. ಹಿಂದೆ ಶುಕಮುನಿಯು ಪರೀಕ್ಷಿ ದ್ರಾಜನಿಗೆ ಭಾಗವತವನ್ನುಪದೇಶಿಸುವುದಕ್ಕಾಗಿ ಸಭೆಗೆ ಬಂದು ಕುಳಿತೊಡನೆ, ದೇವತೆಗಳೆಲ್ಲರೂ ತಮ್ಮಲ್ಲಿದ್ದ ಅಮೃತಕಲಶದೊಡನೆ ಬಂದು, ಆ ಮಹರ್ಷಿಗೆ ನಮಸ್ಕರಿ ಸಿ “ಎಲೈ ಮಹಾಮುನಿಯೆ? ಇದೋ! ನಾವು ತಂದಿರುವ ಈ ಅಮೃತಕಲಶ ವನ್ನು ಸ್ವೀಕರಿಸು! ಇದನ್ನು ನಿನ್ನ ಭಕ್ತನಾದ ಪರೀಕ್ಷಿದ್ರಾಜನಿಗೆ ಕೊಟ್ಟು, ಈಗ ನೀನು ಅವನಿಗೆ ಅನುಗ್ರಹಿಸಿ ಕೊಡಬೇಕೆಂದಿರುವ ಶ್ರೀಮದ್ಭಾಗವತಕಥಾಮೃತ ವನ್ನು ನಮಗೆ ಕೊಡು! ಎಂದು ವಿನಯದಿಂದ ಪ್ರಾರ್ಥಿಸಿದರು. ಹೀಗೆ ದೇವತೆಗಳು

ಕೇಳುತ್ತಿರಲು, ಶುಕಮಹಾಮುನಿಯು ತನ್ನೊಳಗೆ ತಾನು ಆ ದೇವತೆಗಳ ಸ್ವಾರ್ಥಪರತೆಯನ್ನೂ, ತಂತ್ರವನ್ನೂ ನೋಡಿ ನಗುತ್ತ "ಆಹಾ! ಆ ಸುಧೆಯೆಲ್ಲಿ? ಈ ಕಥಾಮೃತವೆಲ್ಲಿ? ಸಾಮಾನ್ಯವಾದ ಗಾಜನ್ನು ಬೆಲೆಯುಳ್ಳ ರತ್ನದೊಡನೆ ಹೋಲಿಸುವುದೇ?" ಎಂದು ಚಿಂತಿಸಿ ತಾನುದ್ದೇಶಿಸಿದ ಆ ಕಥಾಮೃತವನ್ನು, ಪರಮಭಕ್ತನಾದ ಪರೀಕ್ಷಿದ್ರಾಜನಿಗಲ್ಲದೆ ಭಕ್ತಿಹೀನರಾದ ಆ ದೇವತೆಗಳಿಗೆ ಕೊಡುವುದಕ್ಕೆ ಇಷ್ಟಪಡಲಿಲ್ಲ. ಹೀಗೆ ಭಾಗವತವೆಂಬ ಕಥಾಮೃತವು ದೇವತೆಗಳಿಗೂ ದುರ್ಲಭವಾಯಿತು. ಕೊನೆಗೆ ಈ ಸತ್ಕಥಾಶ್ರವಣದಿಂದ ಪರೀಕ್ಷಿದ್ರಾಜನಿಗೆ ಅತಿಸುಲಭವಾಗಿ ಮೋಕ್ಷವುಂಟಾದುದನ್ನು ನೋಡಿ, ಸೃಷ್ಟಿಕರ್ತನಾದ ಚತುರ್ಮುಖಬ್ರಹ್ಮನಿಗೂ ಆಶ್ಚರ್ಯವು ಹುಟ್ಟಿತು. ಆಗ ಬ್ರಹ್ಮನು ಈ ಮಹಾಗ್ರಂಥದ ಮಹಿಮೆಯನ್ನು ಇನ್ನೂ ಸ್ಪಷ್ಟವಾಗಿ ಪರೀಕ್ಷಿಸಬೇಕೆಂದು ನಿಶ್ಚಯಿಸಿ, ಸತ್ಯಲೋಕದಲ್ಲಿ ಒಂದು ದೊಡ್ಡ ತುಲೆಯನ್ನು ಕಟ್ಟಿ, ಸಮಸ್ತ ಧರ್ಮಸಾಧನಗಳನ್ನೂ ಒಂದು ಕಡೆಯಲ್ಲಿರಿಸಿ, ಈ ಮಹಾಗ್ರಂಥವನ್ನೇ ಬೇರೊಂದು ಕಡೆಯಲ್ಲಿಟ್ಟು ತೂಗಿದನು. ಆಗಲೂ ಇದರಲ್ಲಿಯೇ (ಭಾರವು) ಗೌರವವು ಕಂಡುಬಂದಿತು. ಇದನ್ನು ನೋಡಿ ಅಲ್ಲಿದ್ದ ಸಮಸ್ತ ಋಷಿಗಳೂ ಅತ್ಯಾಶ್ಚರ್ಯವನ್ನು ಹೊಂದಿದರು. ಭಾಗವತವೆಂಬುದು ಸಾಕ್ಷಾದ್ಭಗವತ್ಸ್ವರೂಪವಾಗಿ ಭೂಮಿಯಲ್ಲಿ ಪ್ರಚಾರಗೊಂಡಿರುವ ಶಾಸ್ತ್ರವೇ ಹೊರತು ಬೇರೆಯಲ್ಲವೆಂದು ನಿಶ್ಚಯಿಸಿದರು. ಇದರ ಪಠನಶ್ರವಣಗಳಿಂದ ತಪ್ಪದೆ ಮೋಕ್ಷಫಲವು ಸಿದ್ಧಿಸುವುದೆಂಬ ನಿಶ್ಚಯವೂ ಹುಟ್ಟಿತು. ಎಲೈ ಶೌನಕನೆ! ಈ ಭಾಗವತವನ್ನು ಏಳುದಿನಗಳಲ್ಲಿ ಶ್ರವಣಮಾಡಿದವರಿಗೆ ಸರ್ವಪ್ರಕಾರದಿಂದಲೂ ಮುಕ್ತಿಯು ಕೈಗೂಡುವುದು. ಪೂರ್ವದಲ್ಲಿ ಈ ವಿಷಯವನ್ನೇ ಪರಮದಯಾಳುಗಳಾದ ಸನಕಾದಿಗಳು ನಾರದನಿಗೆ ತಿಳಿಸಿರುವರು. ಅದಕ್ಕೆ ಮೊದಲೇ ನಾರದನು ಚತುರ್ಮುಖಬ್ರಹ್ಮನಿಂದ ಈ ಗ್ರಂಥಕಥೆಯನ್ನು ಕೇಳಿದ್ದರೂ, ಸಪ್ತಾಹಶ್ರವಣವೆಂಬ ವಿಧಿಯು ಮಾತ್ರ ಅವನಿಗೆ ಸನಕಾದಿಗಳಿಂದಲೇ ಉಪದೇಶಿಸಲ್ಪಟ್ಟಿತು." ಎಂದನು. ಆಗ ಶೌನಕನು ತಿರುಗಿ ಸೂತಪೌರಾಣಿಕನನ್ನು ಕುರಿತು "ಎಲೈ ಮಹಾತ್ಮನೆ! ಕೇವಲ ಯುದ್ಧದರ್ಶನದಲ್ಲಿಯೇ ಆಸಕ್ತನಾಗಿ, ನಿಂತ ಕಡೆಯಲ್ಲಿ ನಿಲ್ಲದೆ ಲೋಕಸಂಚಾರಿಯಾಗಿ ತಿರುಗುತ್ತಿರುವ ನಾರದನಿಗೆ, ಈ ಸಪ್ತಾಹವಿಧಿಯನ್ನನುಸರಿಸಿ ಭಾಗವತವನ್ನು ಕೇಳಬೇಕೆಂಬ ಪ್ರೀತಿಯು ಹೇಗೆ ಹುಟ್ಟಿತು? ಸನಕಾದಿಗಳೊಡನೆ ಅವನಿಗೆ ಸಮಾಗಮವುಂಟಾದುದು ಹೇಗೆ? ಇದರ ವಿವರವನ್ನು ನನಗೆ ತಿಳಿಸಬೇಕು" ಎಂದನು. ಅದಕ್ಕಾ ಸೂತಪೌರಾಣಿಕನು ಶೌನಕನನ್ನು ಕುರಿತು "ಶೌನಕಾ! ಈ ವಿಷಯದಲ್ಲಿ ಒಂದು ಪೂರ್ವವೃತ್ತಾಂತವುಂಟು. ಹೇಳುವೆನು

ಕೇಳು! ಮೊದಲೊಮ್ಮೆ ನಾರದನು ಜ್ಞಾನಭಕ್ತಿವೈರಾಗ್ಯಗಳ ಸಾಧನೆಗೆ ಭೂಮಿಯೇ ಉತ್ತಮಸ್ಥಾನವೆಂದು ತಿಳಿದು, ಈ ಭೂಲೋಕಕ್ಕೆ ಬಂದನು. ಆಗ ಸಮಸ್ತಭೂಮಿಯೂ ಕಲಿದೋಷದಿಂದ ದೂಷಿತವಾಗಿತ್ತು. ಸತ್ಯವಾಗಲಿ, ತಪಸ್ಸಾಗಲಿ, ದಾನ ಧರ್ಮ ದಯಾ ದಾಕ್ಷಿಣ್ಯಾದಿಗಳಾಗಲಿ ಯಾವುದೆಂದೂ ಕಾಣುತ್ತಿರಲಿಲ್ಲ. ಒಬ್ಬೊಬ್ಬರೂ ತಮ್ಮ ತಮ್ಮ ಹೊಟ್ಟೆಹೊರೆಯುವುದರಲ್ಲಿಯೇ ನಿರತರಾಗಿದ್ದರೇಹೊರತು, ಧರ್ಮದಲ್ಲಿ ಯಾರೊಬ್ಬರಿಗೂ ದೃಷ್ಟಿಯಿಲ್ಲ. ಸಮಸ್ತಪ್ರದೇಶವೂ ಪಾಷಂಡಪ್ರಚುರವಾಗಿದ್ದಿತು. ವಿರಕ್ತರೆನಿಸಿಕೊಂಡವರೂ ಸ್ತ್ರೀಲೋಲರಾಗಿರುತ್ತಿದ್ದರು. ಮನೆಯಲ್ಲಿ ಸ್ತ್ರೀಯರಿಗೇ ಸ್ವಾತಂತ್ರ್ಯವು! ಮೈದುನನೇ ಬುದ್ಧಿಕಲಿಸುವವನು. ಕನ್ಯಾವಿಕ್ರಯವು ಹೆಚ್ಚಿತು. ದಂಪತಿಗಳಲ್ಲಿ ಸ್ವಲ್ಪವಾದರೂ ಸೌಮನಸ್ಯವಿಲ್ಲ! ಪುಣ್ಯಾಶ್ರಮಗಳೂ ಪುಣ್ಯತೀರ್ಥಗಳೂ, ದೇವಾಲಯಗಳೂ ನೀಚಜಾತಿಯವರಿಂದಾವೃತವಾಯಿತು. ಹುಡುಕಿ ನೋಡಿದರೂ ಯೋಗಿಯಾಗಲಿ, ಜ್ಞಾನಿಯಾಗಲಿ, ಸಿದ್ಧನಾಗಲಿ, ಸತ್ಕಾರಪರನಾಗಲಿ ಒಬ್ಬನಾದರೂ ಸಿಕ್ಕುತ್ತಿರಲಿಲ್ಲ. ಕಲಿದೋಷವೆಂಬ ಕಾಡುಗಿಚ್ಚಿನಿಂದ ಸಮಸ್ತಸಿದ್ಧಿಗಳೂ ಭಸ್ಮವಾಗುತ್ತಿದ್ದುವು. ಜನರು ಅನ್ನವಿಕ್ರಯದಿಂದಲೂ, ಬ್ರಾಹ್ಮಣರು ವೇದವಿಕ್ರಯದಿಂದಲೂ, ಸ್ತ್ರೀಯರು ರೂಪವಿಕ್ರಯದಿಂದಲೂ ಜೀವಿಸುತ್ತಿದ್ದರು. ಹೀಗೆ ಸಮಸ್ತಭೂಭಾಗವೂ ಕಲಿದೋಷಪ್ರಚುರವಾಗಿರುವುದನ್ನು ನೋಡಿ ನಾರದನು, ಪುಷ್ಕರಪ್ರಯಾಗಾದಿ ದಿವ್ಯತೀರ್ಥಗಳೆಲ್ಲವನ್ನೂ ಸುತ್ತಿ, ಎಲ್ಲಿಯೂ ಮನಸ್ಸಿಗೆ ನೆಮ್ಮದಿಯಿಲ್ಲದೆ, ಕೊನೆಗೆ ಕೃಷ್ಣಪರಮಾತ್ಮನಿಗೆ ಲೀಲಾಸ್ಥಾನವಾಗಿದ್ದ ಯಮುನಾತೀರಕ್ಕೆ ಬಂದು ಸೇರಿದನು. ಅಲ್ಲಿ ಸಣ್ಣವಯಸ್ಸಿನ ಹೆಂಗಸೊಬ್ಬಳು ಕೇವಲ ದುಃಖಾಕುಲೆಯಾಗಿ ಕುಳಿತಿದ್ದಳು. ಅವಳ ಪಾರ್ಶ್ವದಲ್ಲಿ ವೃದ್ಧರಿಬ್ಬರು ಪ್ರಜ್ಞೆಯಿಲ್ಲದೆ ಮೇಲುಸಿರುಬಿಡುತ್ತ ಮಲಗಿದ್ದರು. ಆ ಯುವತಿಯು ಅವರಿಬ್ಬರನ್ನೂ ನಾನಾವಿಧವಾಗಿ ಉಪಚರಿಸಿ ಸಮಾಧಾನವನ್ನು ಹೇಳುತ್ತ, ತನ್ನ ಕಷ್ಟವನ್ನು ನೀಗಿಸುವರಾರೆಂದು ನಾನಾದಿಕ್ಕುಗಳಿಗೆ ಕಣ್ಣಿಟ್ಟು ನೋಡುತ್ತ, ಸಂಕಟವನ್ನು ತಡೆಯಲಾರದೆ ಅವರ ಮುಂದೆ ಕುಳಿತು ಬಹಳವಾಗಿ ರೋದಿಸುತ್ತಿದ್ದಳು. ಬೇರೆ ನೂರಾರು ಮಂದಿ ಸ್ತ್ರೀಯರು ಅವಳಿಗೆ ಬಾರಿಬಾರಿಗೂ ದುಃಖಸಮಾಧಾನವನ್ನು ಮಾಡಿ ಉಪಚರಿಸುತ್ತಿದ್ದರು. ಈ ಸನ್ನಿವೇಶವನ್ನು ನೋಡಿ ನಾರದನಿಗೆ ಆಶ್ಚರ್ಯವು ಹುಟ್ಟಿತು. ಇದರ ನಿಜಾಂಶವನ್ನು ತಿಳಿಯಬೇಕೆಂಬ ಕುತೂಹಲದಿಂದ ನಾರದನು ಮುಂದೆ ಬರುವಷ್ಟರಲ್ಲಿ ಆ ತರುಣಿಯೇ ಸಂಭ್ರಮದಿಂದ ತಟ್ಟನೆ ಮೇಲೆದ್ದು ಬಂದು "ಎಲೈ ಸೌಮ್ಯನೆ! ನಿಲ್ಲು ನಿಲ್ಲು! ನನ್ನ ವ್ಯಸನವನ್ನು ನೀಗಿಸು! ನಿನ್ನ

ದರ್ಶನಮಾತ್ರದಿಂದಲೇ ಸಮಸ್ತಲೋಕವೂ ಪಾಪವನ್ನು ನೀಗಿ ಸುಖವನ್ನು ಹೊಂದುವುದರಲ್ಲಿ ಸಂದೇಹವಿಲ್ಲ. ನನ್ನ ಮುಂದಿನ ಭಾಗ್ಯಕ್ಕೆ ನಿನ್ನ ದರ್ಶನವೇ ಸೂಚಕವಾಗಿರುವುದು. ನಿನ್ನಮಾತಿನಿಂದ ನನಗೆ ತಪ್ಪದೆ ಈ ದುಃಖವು ನೀಗ ಬಹುದು." ಎಂದಳು. ಆಗ ನಾರದನು ಅವಳನ್ನು ಕುರಿತು "ಎಲೆ ಭದ್ರೆ! ನೀನು ಯಾರು? ಈ ವೃದ್ಧರಾರು? ನಿನ್ನನ್ನು ಸುತ್ತಿ ಉಪಚರಿಸುತ್ತಿರುವ ಈ ಸ್ತ್ರೀಯರಾರು? ನಿನ್ನ ದುಃಖಕ್ಕೆ ಕಾರಣವೇನು?" ಎಂದು ಕೇಳಿದನು. ಅದಕ್ಕಾ ತರುಣಿಯು ನಾರದನನ್ನು ಕುರಿತು "ಎಲೈ ಮಹಾತ್ಮನೆ! ನಾನು ಭಕ್ತಿಯು! ಈ ವೃದ್ಧರಿಬ್ಬರೂ ಜ್ಞಾನವೈರಾಗ್ಯಗಳೆಂಬ ನನ್ನ ಮಕ್ಕಳು! ಕಲಿ ದೋಷದಿಂದ ಇವರಿಗೆ ಈ ದುರವಸ್ಥೆಯುಂಟಾಗಿರುವುದು. ಈ ಸ್ತ್ರೀಯರೆಲ್ಲರೂ ಗಂಗಾದಿಪುಣ್ಯನದಿಗಳು. ಇವರೆಲ್ಲರೂ ನನ್ನ ಸೇವಾರ್ಥವಾಗಿಯೇ ಇಲ್ಲಿಗೆ ಬಂದಿರುವರು! ದೇವತೆಗಳೂ ನನ್ನನ್ನು ಎಷ್ಟೋ ಪ್ರೀತಿಯಿಂದಾದರಿಸುತ್ತಿದ್ದರೂ, ನನ್ನ ಮನಸ್ಸಿಗೆ ನೆಮ್ಮದಿಯಿಲ್ಲದಂತಿದೆ. ಎಲೈ ಪೂಜ್ಯನೆ! ನನ್ನ ಪೂರ್ವವೃತ್ತಾಂತವೆಲ್ಲವನ್ನೂ ಇನ್ನೂ ವಿಶದವಾಗಿ ತಿಳಿಸುವೆನು ಕೇಳು. *ನಾನು ಮೊದಲು ದ್ರವಿಡ ದೇಶದಲ್ಲಿ ಹುಟ್ಟಿ, ಕರ್ಣಾಟಕದೇಶದಲ್ಲಿ ಚೆನ್ನಾಗಿ ಬೆಳೆದು, ಮಹಾರಾಷ್ಟ್ರದೇಶದ ಕೆಲವು ಭಾಗಗಳಲ್ಲಿ ಮಾತ್ರ ಮೂಲೆ ಮೂಲೆಗಳಲ್ಲಿ ಅಡಗಿದ್ದು, ಕೊನೆಗೆ ಗುರ್ಜರ ದೇಶದಲ್ಲಿ ಕೇವಲಜೀರ್ಣದಶೆಯನ್ನು ಹೊಂದಿದೆನು. ಅಲ್ಲಿ ಅತಿಭಯಂಕರವಾದ ಕಲಿಸಂಬಂಧದಿಂದ ಪಾಷಂಡಿಗಳ ಬಾಧೆಗೆ ಸಿಕ್ಕಿ, ಶಕ್ತಿಗುಂದಿ, ಈ ನನ್ನ ಮಕ್ಕಳೊಡನೆ ಬಹಳ ದೀನದಶೆಯನ್ನು ಹೊಂದಿದೆನು. ಆದರೆ ಒಮ್ಮೆ ನಾನು ಅಕಸ್ಮಾತ್ತಾಗಿ ಬೃಂದಾವನಕ್ಕೆ ಹೋದಾಗ ಅಲ್ಲಿ ನನಗೆತಿರುಗಿ ಈ ರೂಪವೂ, ಈ ಯೌವನವೂ ಪ್ರಾಪ್ತವಾಗಿ ಹೊಸಯುವತಿಯಂತಾದೆನು. ಇಲ್ಲಿ ಮಲಗಿರುವ ನನ್ನ ಮಕ್ಕಳಾದರೋ ಶ್ರಮದಿಂದ ಬಹಳವಾಗಿ ಬಳಲುತ್ತಿರುವರು. ಈ ಸ್ಥಳವನ್ನು ಬಿಟ್ಟು ವಿದೇಶಕ್ಕಾದರೂ ಹೋಗುವೆನೆಂದರೆ, ಈ ನನ್ನ ಮಕ್ಕಳು ಬಹಳ ಜೀರ್ಣ ದಶೆಯಲ್ಲಿರುವುದರಿಂದ ಅದಕ್ಕೂ ಅವಕಾಶವಿಲ್ಲದೆ ಬಹಳವಾಗಿ ದುಃಖಿಸುತ್ತಿರುವೆನು. ಎಲೈ ಮುನಿಸತ್ತಮನೆ! ಲೋಕದಲ್ಲಿ ತಾಯಿಯು ವೃದ್ಧಳಾಗಿ, ಮಕ್ಕಳು ಯೌವನವುಳ್ಳವರಾಗಿರುವುದು ಸಹಜವು. ನಾವು ಮೂವರೂ ಒಂದಾಗಿರುವ ಕಾಲದಲ್ಲಿ ನಾನು ಯುವತಿಯಾಗಿಯೂ, ಈ ನನ್ನ ಮಕ್ಕಳು ವೃದ್ಧರಾಗಿಯೂ ಇರುವುದಕ್ಕೆ ಕಾರಣವೇನೋ ತಿಳಿಯಲಿಲ್ಲ. ಈ ವೈಪರೀತ್ಯವನ್ನು ನೋಡಿ ನನ್ನ

---

* ಇಲ್ಲಿ "ಉತ್ಪನ್ನಾ ದ್ರಾವಿಡೇ ಸಾಹಂ ವೃದ್ಧಿಂ ಕರ್ಣಾಟಕೇ ಗತಾ । ಕ್ವಚಿತ್ಕ್ವಚಿನ್ಮಹಾರಾಷ್ಟ್ರೇ ಗುರ್ಜರೇ ಜೀರ್ಣತಾಂ ಗತಾ ॥" ಎಂದುಮೂಲವು.

ಮನಸ್ಸಿನಲ್ಲಿ ಆಶ್ಚರ್ಯವೂ, ದುಃಖವೂ ಹೆಚ್ಚುತ್ತಿರುವುದು. ಎಲೈ ಮಹಾತ್ಮನೆ! ಇದರ ಕಾರಣವೇನೆಂಬುದನ್ನು ನೀವು ನನಗೆ ದಯೆಯಿಟ್ಟು ತಿಳಿಸುವೆಯಾ?" ಎಂದಳು. ಅದಕ್ಕೆ ನಾರದನು "ಎಲೆ ಭಕ್ತೆ! ಇದರ ಕಾರಣವೆಲ್ಲವನ್ನೂ ನಾನು ಜ್ಞಾನದೃಷ್ಟಿಯಿಂದ ತಿಳಿದು ಹೇಳುವೆನು. ದುಃಖವನ್ನು ಬಿಡು. ಶ್ರೀಮನ್ನಾರಾಯಣನು ನಿನಗೆ ಸುಖವನ್ನುಂಟುಮಾಡುವನು" ಎಂದು ಹೇಳಿ, ಕ್ಷಣಮಾತ್ರದಲ್ಲಿಯೇ ತನ್ನ ಜ್ಞಾನದೃಷ್ಟಿಯಿಂದ ಅದರ ಪೂರ್ವವೃತ್ತಾಂತಗಳೆಲ್ಲವನ್ನೂ ಚೆನ್ನಾಗಿ ತಿಳಿದು ಹೇಳಲಾರಂಭಿಸಿದನು.

"ಎಲೆ ಬಾಲೆ! ಕೇಳು! ಈ ಕಲಿಯುಗವಾದರೋ ಅತಿಕ್ರೂರವಾದುದು. ಇದರಿಂದ ಲೋಕದಲ್ಲಿ ಸದಾಚಾರಗಳೆಲ್ಲವೂ ಕೆಟ್ಟುಹೋದುವು. ತಪಸ್ಸಮಾಧಿಗಳೆಲ್ಲವೂ ನಷ್ಟವಾದುವು. ಜನರೆಲ್ಲರೂ ದುಷ್ಕರ್ಮದಲ್ಲಿ ಪ್ರವರ್ತಿಸಿ ಆಸುರಪ್ರಕೃತಿಯನ್ನು ಹೊಂದಿರುವರು. ಸತ್ಪುರುಷರು ದುಃಖವನ್ನನುಭವಿಸುತ್ತಿರುವರು. ದುರ್ಜನರು ಸಂತೋಷದಿಂದುಬ್ಬುತ್ತಿರುವರು. ದುಷ್ಕರ್ಮದಿಂದುಂಟಾದ ಭಾರವನ್ನು ಸಹಿಸಲಾರದೆ ಭೂದೇವಿಯು ಕ್ರಮಕ್ರಮವಾಗಿ ಕುಗ್ಗುತ್ತಿರುವಳು. ನಿನ್ನನ್ನಾಗಲೀ ನಿನ್ನ ಮಕ್ಕಳನ್ನಾಗಲಿ ಕಣ್ಣೆತ್ತಿನೋಡುವವರೇ ಇಲ್ಲದಂತಾಗಿರುವುದು. ಇದರಿಂದಲೇ ನಿಮಗೆ ಈ ವಿಧವಾದ ಜೀರ್ಣದಶೆಯುಂಟಾಯಿತು. ಆದರೆ ಬೃಂದಾವನಕ್ಷೇತ್ರದ ಸಂಬಂಧದಿಂದ ತಿರುಗಿ ನಿನಗೆ ಈ ಹೊಸಯೌವನವುಂಟಾಯಿತು. ಆ ಕ್ಷೇತ್ರವೊಂದೇ ಈಗ ಪರಮಪುಣ್ಯವೆನಿಸಿಕೊಂಡಿರುವುದು. ಆ ಸ್ಥಳವೊಂದರಲ್ಲಿಯೇ ಈಗ ಭಕ್ತಿಯು ನಲಿದಾಡುತ್ತಿರುವುದು. ಆ ನಿನ್ನ ಮಕ್ಕಳಿಗೆ ಅಲ್ಲಿ ಹೋಗುವುದಕ್ಕೂ ಅವಕಾಶವಿಲ್ಲವಾದುದರಿಂದ ಈ ಜೀರ್ಣದಶೆಯಲ್ಲಿ ನರಳುತ್ತಿರುವರು." ಎಂದನು. ಅದಕ್ಕೆ ಭಕ್ತಿಯು "ಎಲೈ ಮಹಾತ್ಮನೆ! ಅಷ್ಟು ಧಾರ್ಮಿಕನಾದ ಪರೀಕ್ಷಿದ್ರಾಜನಿದ್ದಾಗಲೂ, ಇಲ್ಲಿ ಆ ಕಲಿಗೆ ಹೇಗೆ ಪ್ರವೇಶವುಂಟಾಯಿತು? ಪರಮ ದಯಾಳುವಾದ ಶ್ರೀಮಹಾವಿಷ್ಣುವಾದರೂ ಈ ಅಧರ್ಮಪ್ರಾಚುರ್ಯವನ್ನು ನೋಡಿ ಹೇಗೆ ಸಹಿಸುತ್ತಿರುವನು? ಈ ಸಂದೇಹವನ್ನು ನನಗೆ ನೀಗಿಸಬೇಕು" ಎಂದಳು. ಇದನ್ನು ಕೇಳಿ ನಾರದನು "ಎಲೆ ಭಕ್ತೆ, ಕೇಳು! ಯಾವಾಗ ಶ್ರೀಕೃಷ್ಣಪರಮಾತ್ಮನು ಈ ಭೂಮಿಯನ್ನು ಬಿಟ್ಟು ಶಾಶ್ವತವಾದ ತನ್ನ ಸ್ಥಾನಕ್ಕೆ ಸೇರಿದನೋ, ಆ ದಿನದಿಂದಲೇ ಕಲಿಯು ಈ ಭೂಮಿಯಲ್ಲಿ ಕಾಲಿಟ್ಟನು. ಪರೀಕ್ಷಿದ್ರಾಜನು ದಿಗ್ವಿಜಯಕ್ಕಾಗಿ ಹೊರಟಕಾಲದಲ್ಲಿ ಆ ಕಲಿಯು ಇವನ ದೃಷ್ಟಿಗೆ ಗೋಚರಿಸಿದನು. ಆದರೆ ಅವನು ಈ ರಾಜನನ್ನು ನೋಡಿದೊಡನೆ ಅತ್ಯಂತ ದೈನ್ಯದಿಂದ ಇವನಲ್ಲಿಯೇ ಮರೆಹೊಕ್ಕನು. ಅದಕ್ಕಾಗಿ ರಾಜನು ಆ ಕಲಿಯನ್ನು

ಕೊಳ್ಳದೆ ಕೃಪಾಪರವಶನಾಗಿ ಬಿಟ್ಟುಬಿಟ್ಟನು. ಆದರೇನು? ಈ ಕಲಿಪ್ರಾಚುರ್ಯದಿಂದ ಲೋಕದಲ್ಲಿ ಸಮಸ್ತಸತ್ಕರ್ಮಗಳೂ ಕೆಟ್ಟುಹೋಗಿದ್ದರೂ, ತಪಸ್ಸಿನಿಂದಲೂ, ಯೋಗಾಭ್ಯಾಸ ಸಮಾಧಿಗಳಿಂದಲೂ ಲಭ್ಯವಾಗದ ಮಹಾಫಲಗಳೆಲ್ಲವೂ ಈ ಕಲಿಕಾಲದಲ್ಲಿ ಭಗವತ್ಕೀರ್ತನವೊಂದರಿಂದಲೇ ಲಭಿಸುವುವು. ಇತರ ಸತ್ಕರ್ಮಸಾರಗಳೆಲ್ಲವೂ ಈ ಕಲಿಕಾಲದಲ್ಲಿ ಕೆಟ್ಟುಹೋಗಿರುವುವು. ಮನೆಮನೆಗಳಲ್ಲಿಯೂ ಬ್ರಾಹ್ಮಣರು ಧನಧಾನ್ಯಗಳ ಆಸೆಯಿಂದಲೇ ಪುರಾಣಕಥೆಗಳನ್ನು ಹೇಳಲಾರಂಭಿಸಿರುವರು. ಇದರಿಂದ ಕಥಾಸಾರವು ಕೆಟ್ಟುಹೋಯಿತು. ಕೇವಲನಾಸ್ತಿಕರಾದ ಕ್ರೂರಕರ್ಮಿಗಳೇ ಪುಣ್ಯತೀರ್ಥಗಳಲ್ಲಿ ಸೇರಿರುವರು. ಇದರಿಂದ ತೀರ್ಥಸಾರವು ಕೆಟ್ಟಿತು. ಕೇವಲದುರಾಶಾಗ್ರಸ್ತರಾಗಿ, ಕಾಮಕ್ರೋಧವಶರಾದವರೂ ಕೂಡ ತಪೋನಿರತರಾದುದರಿಂದ ತಪಸ್ಸಿನ ಸಾರವೂ ಕೆಟ್ಟಿತು. ಹೀಗೆಯೇ ಅಪಾತ್ರಸಂಬಂಧದಿಂದ ಕಲಿಕಾಲದಲ್ಲಿ ಸತ್ಕರ್ಮಗಳ ಸಾರವೆಲ್ಲವೂ ನಷ್ಟವಾಯಿತು. ಇದು ಕಲಿಕಾಲದ ಸಹಜಧರ್ಮವಾದುದರಿಂದ ಈ ವಿಷಯದಲ್ಲಿ ಬೇರೆಯಾರನ್ನೂ ಅಪರಾಧಿಗಳೆಂದು ಹೇಳುವುದಕ್ಕಿಲ್ಲ. ಇದರಿಂದಲೇ ಪುಂಡರೀಕಾಕ್ಷನೂ ಕೂಡ ಸಹಿಸಿಕೊಂಡಿರುವನು" ಎಂದನು. ಇದನ್ನು ಕೇಳಿ ಭಕ್ತಿಯು ನಾರದನ ಮಹಾಮಹಿಮೆಯನ್ನು ನೋಡಿ ಆಶ್ಚರ್ಯಭರಿತಳಾಗಿ, ಅವನಿಗೆ ನಮಸ್ಕರಿಸಿ, ಈ ಕ್ರೂರವಾದ ಕಲಿಕಾಲದಲ್ಲಿ ತನ್ನನ್ನುದ್ಧರಿಸುವುದಕ್ಕೆ ಉಪಾಯವಾವುದೆಂದು ಚಿಂತಾಕುಲೆಯಾಗಿ ನಿಂತಿದ್ದಳು.

ಆಗ ನಾರದನು ತಿರುಗಿ, ಆ ಭಕ್ತಿಯನ್ನು ನೋಡಿ "ಎಲೆ ಭದ್ರೆ! ನೀನೇಕೆ ಚಿಂತಿಸುವೆ? ಶ್ರೀಕೃಷ್ಣನ ಪಾದಕಮಲವನ್ನು ಸ್ಮರಿಸುತ್ತಿರು! ನಿನ್ನ ದುಃಖವು ನೀಗುವುದು. ಯಾವನು ಪೂರ್ವದಲ್ಲಿ ದ್ರೌಪದಿಯ ಮಾನಸಂರಕ್ಷಣವನ್ನು ಮಾಡಿದನೋ, ಯಾವನು ಗೋಪಸ್ತ್ರೀಯರನ್ನುದ್ಧರಿಸಿದನೋ, ಆ ಪರಮಾತ್ಮನು ನಿನ್ನ ಭಾಗಕ್ಕೆ ಇಲ್ಲದೆ ಹೋಗುವನೇ? ದಯಾಸಮುದ್ರನಾದ ಆತನಿಗೆ ನೀನೇ ಪ್ರಾಣಕ್ಕಿಂತಲೂ ಪ್ರಿಯತಮಳು. ನೀನು ಮನಃಪೂರ್ವಕವಾಗಿ ಒಂದಾವರ್ತಿ ಕರೆದಪಕ್ಷದಲ್ಲಿ ಆತನು ಕೇವಲನೀಚರ ನಿವಾಸಗಳಿಗಾದರೂ ಬಂದು ಸೇರದಿಲಾರನು. ಕೃತತ್ರೇತಾ ದ್ವಾಪರಗಳೆಂಬ ಹಿಂದಿನ ಮೂರುಯುಗಗಳಲ್ಲಿಯೂ ಜ್ಞಾನವೈರಾಗ್ಯಗಳೆರಡೂ ಮೋಕ್ಷಸಾಧಕಗಳಾಗಿದ್ದುವು. ಈ ಕಲಿಕಾಲದಲ್ಲಿಯೋ ಕೇವಲಭಕ್ತಿಯೊಂದೇ ಬ್ರಹ್ಮಸಾಯುಜ್ಯವನ್ನುಂಟುಮಾಡತಕ್ಕುದು. ಈ ನಿಶ್ಚಯದಿಂದಲೇ ಸಚ್ಚಿದಾನಂದಸ್ವರೂಪನಾದ ಆ ಪರಮಾತ್ಮನು ನಿನ್ನನ್ನು ಈ ಲೋಕದಲ್ಲಿ ಸೃಷ್ಟಿಸಿದನು. ಹಿಂದೆ ನೀನೊಮ್ಮೆ ಆತನಿಗೆ ಕೈಮುಗಿದು, "ನಾನು ಮಾಡತಕ್ಕ

ಕಾರ್ಯವೇನು" ಎಂದು ಕೇಳಿದುದಕ್ಕೆ, ತನ್ನ ಭಕ್ತರನ್ನುದ್ಧರಿಸುತ್ತಿರಬೇಕೆಂದು ನಿನಗೆ ಆಜ್ಞಾಪಿಸಿರುವನು. ನೀನೂ ಸಂತೋಷಪೂರ್ವಕವಾಗಿ ಅಂಗೀಕರಿಸಿದೆ. ಅದರ ಮೇಲೆ ಭಗವಂತನು ನಿನ್ನಲ್ಲಿ ಬಹಳ ಪ್ರಸನ್ನನಾಗಿ, ಆ ಕಾರ್ಯಕ್ಕಾಗಿಯೇ ನಿನಗೆ ಮುಕ್ತಿಯನ್ನು ದಾಸಿಯನ್ನಾಗಿಯೂ ಈ ಜ್ಞಾನವೈರಾಗ್ಯಗಳನ್ನು ಪುತ್ರರನ್ನಾಗಿಯೂ ಮಾಡಿರುವನು. ಎಲೆ ಭಕ್ತಿ! ನಿನ್ನ ನಿಜಸ್ವರೂಪದಿಂದ ನೀನು ವೈಕುಂಠದಲ್ಲಿ ನೆಲೆಸಿರುವೆ. ಈ ಭೂಮಿಯಲ್ಲಿ ಛಾಯಾರೂಪದಿಂದ ಮುಕ್ತಿ ಜ್ಞಾನವೈರಾಗ್ಯಗಳೊಡನೆ ಸೇರಿ ಬಂದು ಕೃತಯುಗದಿಂದ ದ್ವಾಪರಾಂತ್ಯದವರೆಗೆ ಮಹಾನಂದದಿಂದ ಸಮಸ್ತಭೂಭಾಗವನ್ನೂ ವ್ಯಾಪಿಸಿದೆ! ಕಲಿಯು ಪ್ರಾಪ್ತವಾದೊಡನೆ ಪಾಷಂಡಮತಗಳಿಂದ ಮುಕ್ತಿಯು ಕ್ಷೀಣಗತಿಯನ್ನೊಂದಿದುದನ್ನು ನೋಡಿ, ನೀನೇ ಆಕೆಯನ್ನು ಹಿಂತಿರುಗಿ ವೈಕುಂಠಕ್ಕೆ ಕಳುಹಿಸಿಬಿಟ್ಟೆ? ಆದರೇನು? ಈಗಲೂ ನೀನು ಸ್ಮರಿಸಿದ ಕ್ಷಣದಲ್ಲಿ ಆ ಮುಕ್ತಿದೇವಿಯು ಇಲ್ಲಿ ಬಂದು ಹೋಗುವುದರಲ್ಲಿ ಸಂದೇಹವಿಲ್ಲ. ಜ್ಞಾನವೈರಾಗ್ಯಗಳೆಂಬ ಇವರಿಬ್ಬರೂ ನಿನಗೆ ಪುತ್ರಭೂತರಾಗಿ ನಿನ್ನ ಸಮೀಪದಲ್ಲಿಯೇ ಇರುವರು. ಕಲಿದೋಷದಿಂದ ಇವರಿಗೆ ಈ ದುಃಸ್ಥಿತಿಯು ಬಂದಿರುವುದು. ಹಾಗಿದ್ದರೂ ನೀನು ಚಿಂತಿಸಬೇಡ. ಇದಕ್ಕಾಗಿ ನಾನೊಂದು ತಕ್ಕ ಉಪಾಯವನ್ನು ಯೋಚಿಸುವೆನು. ಎಲೆ ಭಾಮಿನಿ! ಈ ಕಲಿಯುಗಕ್ಕೆ ಸಮಾನವಾದ ಕಾಲವು ಬೇರೊಂದಿಲ್ಲ. ಈ ಕಾಲದಲ್ಲಿ ನಿನ್ನನ್ನು ಪ್ರತಿಯೊಂದು ಮನೆಯಲ್ಲಿಯೂ, ಪ್ರತಿಯೊಂದು ಜನದಲ್ಲಿಯೂ ನೆಲೆಗೊಳಿಸುವುದಕ್ಕೆ ನಾನು ಪ್ರಯತ್ನಿಸುವೆನು. ಎಲ್ಲರೂ ಸಮಸ್ತಧರ್ಮಗಳನ್ನೂ ಬಿಟ್ಟು ನಿನ್ನೊಬ್ಬಳನ್ನೇ ಆಶ್ರಯಿಸುವಂತೆ ಮಾಡುವೆನು. ಈ ರೀತಿಯಾಗಿ ನಿನಗೆ ಸರ್ವತೋಮುಖವಾದ ಪ್ರವೃತ್ತಿಯನ್ನುಂಟುಮಾಡದಿದ್ದ ಪಕ್ಷದಲ್ಲಿ, ಆಗ ನಾನು ಹರಿದಾಸನಲ್ಲವೆಂದೇ ತಿಳಿ! ಎಲೆ ಭಕ್ತಿ! ಈ ಕಾಲದಲ್ಲಿ ನಿನ್ನ ಆಶ್ರಯದಿಂದ ಪಾಪಿಗಳೂ ಕೂಡ ನಿರ್ಭಯರಾಗಿ ವಿಷ್ಣುಲೋಕವನ್ನು ಸೇರಬಹುದು. ಯಾರ ಮನಸ್ಸಿನಲ್ಲಿ ಪ್ರೇಮರೂಪವಾದ ಈ ಭಗವದ್ಭಕ್ತಿಯು ನೆಲೆಗೊಳ್ಳುವುದೋ ಅಂತವರು ಸ್ವಪ್ನದಲ್ಲಿಯೂ ನರಕವೆಂಬುದನ್ನು ಕಾಣಲಾರರು. ಪ್ರೇತವಾಗಲಿ, ಪಿಶಾಚವಾಗಲಿ, ರಕ್ಷಸ್ಸಾಗಲಿ, ಭಕ್ತಿಯುಕ್ತವಾದ ಮನಸ್ಸುಳ್ಳವರನ್ನು ಮುಟ್ಟಿ ಬದುಕಲಾರದು. ಶ್ರೀಮನ್ನಾರಾಯಣನು ಭಕ್ತಿಯಿಂದ ಹೇಗೆ ವಶನಾಗುವನೋ, ಹಾಗೆ ತಪಸ್ಸಿನಿಂದಲೂ, ವೇದಾಧ್ಯಯನದಿಂದಲೂ, ಜ್ಞಾನದಿಂದಲೂ, ಸತ್ಕರ್ಮದಿಂದಲೂ ಸಾಧ್ಯನಾಗಲಾರನು. ಈ ವಿಷಯದಲ್ಲಿ ಗೋಪಸ್ತ್ರೀಯರೇ ಪ್ರಮಾಣವು. ಇತರಯುಗಗಳಲ್ಲಿ ಮನುಷ್ಯರು ಸಾವಿರಾರು ಜನ್ಮವನ್ನೆತ್ತಿದಮೇಲಲ್ಲದೆ ಅವರಿಗೆ ಭಕ್ತಿಯಲ್ಲಿ

ಪ್ರೀತಿಯು ಹುಟ್ಟಿದು. ಮುಖ್ಯವಾಗಿ ಈ ಕಲಿಕಾಲದಲ್ಲಿ ಭಕ್ತಿಯೇ ಪ್ರಧಾನವು. ಈ ಕಾಲದಲ್ಲಿ ಭಕ್ತಿಯು ಹೊರತು ಬೇರೆ ಉಪಾಯವಿಲ್ಲವು. ಭಕ್ತಿಯಿಂದ ಶ್ರೀ ಕೃಷ್ಣನನ್ನು ಕರೆತಂದು ಕಣ್ಣಮುಂದೆ ನಿಲ್ಲಿಸಬಹುದು! ಭಕ್ತಿದ್ರೋಹಿಗಳಿಗೆ ಮೂರುಲೋಕದಲ್ಲಿ ಎಲ್ಲಿದ್ದರೂ ದುಃಖವು ತಪ್ಪಿದುದಲ್ಲ. ಇದರಿಂದಲೇ ಪೂರ್ವ ದಲ್ಲಿ ಭಕ್ತಿನಿಂದಕನಾದ ದೂರ್ವಾಸನು ಮಹಾದುಃಖಕ್ಕೆ ಸಿಕ್ಕಿಬಿದ್ದನು. ಎಷ್ಟೇ ವ್ರತಗಳನ್ನು ನಡೆಸಿದರೂ, ಎಷ್ಟೇತೀರ್ಥಯಾತ್ರೆಗಳನ್ನು ನಡೆಸಿದರೂ, ಎಷ್ಟೇ ತಪಸ್ಸುಗಳನ್ನಾಚರಿಸಿದರೂ, ಎಷ್ಟೇಯಾಗಗಳನ್ನು ನಡೆಸಿದರೂ, ಇಷ್ಟೊಂದು ಫಲವು ಲಭಿಸಲಾರದು. ಈಕಾಲದಲ್ಲಿ ಭಕ್ತಿಯೊಂದೇ ಮುಕ್ತಿಪ್ರದವು'' ಎಂದನು. ಹೀಗೆ ಭಕ್ತಿಯು ನಾರದನ ಮುಖದಿಂದ ತನ್ನ ಮಹಿಮೆಯನ್ನು ಕೇಳಿದಮೇಲೆ ಅವಳಿಗೆ ಸಂತೋಷದಿಂದ ಮೈಯೆಲ್ಲವೂ ಉಬ್ಬಿತು. ಸಂತೋಷಪರವಶಳಾದ ಆಕೆಯು ತಿರುಗಿ ನಾರದನನ್ನು ಕುರಿತು, ಆಹಾ! ನಾರದ! ನೀನಲ್ಲವೇ ಪರಮಭಾಗ್ಯ ಶಾಲಿಯು! ನಿನಗೊಬ್ಬನಿಗೇ ನನ್ನಲ್ಲಿ ನಿಶ್ಚಲವಾದ ಪ್ರೀತಿಯು! ನಾನೂ ನಿನ್ನನ್ನು ಎಂದೆಂದಿಗೂ ಬಿಟ್ಟಗಲದೆ ನಿನ್ನ ಮನಸ್ಸಿನಲ್ಲಿಯೇ ಸ್ಥಿರವಾಗಿ ನಿಲ್ಲುವೆನು. ಪರಮ ಕೃಪಾಳುವಾದ ನಿನ್ನಿಂದಲ್ಲವೇ ನನ್ನಮನೋವ್ಯಥೆಯೆಲ್ಲವೂ ಕ್ಷಣಮಾತ್ರದಲ್ಲಿ ನೀಗಿ ಸಲ್ಪಟ್ಟಿತು. ಆದರೇನು? ಈ ನನ್ನಮಕ್ಕಳು ಪ್ರಜ್ಞೆಯಿಲ್ಲದೆ ಬಿದ್ದಿರುವರು. ಹೇಗಾ ದರೂ ಮಾಡಿ ನೀನು ಇವರನ್ನೆಚ್ಚರಿಸಬೇಕು'' ಎಂದಳು. ಈಮಾತನ್ನು ಕೇಳಿ ನಾರದನು ದಯಾರ್ದ್ರಹೃದಯನಾಗಿ, ಆ ವೃದ್ಧರ ದೇಹಗಳನ್ನು ಕೈಗಳಿಂದ ಸವ ರುತ್ತ ಅವರ ಕಿವಿಯಲ್ಲಿ ಮುಖವನ್ನಿಟ್ಟು, ''ಎಲೈ ಜ್ಞಾನವೈರಾಗ್ಯಗಳಿರಾ! ಚೇತರಿಸಿಕೊಳ್ಳಿರಿ'' ಎಂದು ಉಚ್ಚಧ್ವನಿಯಿಂದ ಕೂಗಿದನು. ಬಾರಿಬಾರಿಗೂ ಅವರ ಕಿವಿಯಲ್ಲಿ ವೇದವೇದಾಂತವಾಕ್ಯಗಳನ್ನೂ ಗೀತೆಗಳನ್ನೂ ಬೋಧಿಸಿದನು. ನಾರದನು ಎಷ್ಟಾವರ್ತಿ ಅವರ ಕಿವಿಗಳಲ್ಲಿ ಮಂತ್ರಗಳನ್ನು ಉಪದೇಶಿಸಿದರೂ, ಅವರು ಕಣ್ಣುಗಳನ್ನು ತೆರೆಯಲಾರದೆ ಮರದ ತುಂಡುಗಳಂತೆ ನಿಶ್ಚೇಷ್ಟರಾಗಿಯೇ ಬಿದ್ದಿ ದ್ದರು. ಅದನ್ನು ನೋಡಿ ನಾರದನು ಮುಂದೇನು ಮಾಡಬೇಕೆಂದು ತೋರದೆ ಚಿಂತಾಕುಲನಾಗಿ ಹರಿಧ್ಯಾನವನ್ನು ಮಾಡುತ್ತ ನಿಂತಿದ್ದನು. ಇಷ್ಟರಲ್ಲಿ ಆಕಾಶ ದಲ್ಲಿ ಅಶರೀರವಾಕ್ಯೊಂದು ನುಡಿಯಿತು. ''ಎಲೈ ಮಹರ್ಷಿಯೆ! ಚಿಂತಿಸಬೇಡ! ನಿನ್ನ ಪ್ರಯತ್ನವು ಕೈಗೂಡುವುದರಲ್ಲಿ ಸಂದೇಹವಿಲ್ಲ. ಇದಕ್ಕಾಗಿ ನೀನೊಂದು ಸತ್ಕರ್ಮವನ್ನು ನಡೆಸಬೇಕಾಗಿರುವುದು. ಆ ಕರ್ಮವಾವುದೆಂಬುದನ್ನು ಸಾಧು ಶಿರೋಮಣಿಗಳಾದ ಕೆಲವು ಮಹಾತ್ಮರು ನಿನಗೆ ಉಪದೇಶಿಸುವರು. ಆ ಕರ್ಮ ವನ್ನು ನೀನು ನಡೆಸಿದೆಯಾದರೆ ಇವರ ವಾರ್ಧಕವೂ, ಇವರ ನಿದ್ರೆಯೂ ಒಡನೆಯೇ

ನೀಗುತ್ತದು. ಈ ಭಕ್ತಿಗೂ ಲೋಕದಲ್ಲಿ ಸರ್ವತೋಮುಖವಾದ ಪ್ರಸಾರವುಂಟಾಗುವುದು" ಹೀಗೆಂದು ಅಲ್ಲಿದ್ದವರೆಲ್ಲರಿಗೂ ಕೇಳುವಂತೆ ಆಕಾಶವಾಣಿಯು ನುಡಿಯಿತು. ಅದನ್ನು ಕೇಳಿ ನಾರದನಿಗೂ ಆಶ್ಚರ್ಯವುಂಟಾಯಿತು. ಆದರೆ ಆಗ ನಾರದನಿಗೆ ಯಾರಿಂದ ತಾನೇ ಉಪದೇಶಹೊಂದಬೇಕೆಂಬ ವಿಷಯವು ಮಾತ್ರ ಸ್ಪಷ್ಟವಾಗಿ ತಿಳಿಯಲಿಲ್ಲ. ಹೀಗೆ ಗೂಢವಾಗಿ ಆಕಾಶವಾಣಿಯು ಸೂಚಿಸಿದ ಮಾರ್ಗವು ತನಗೆ ಹೇಗೆ ಕೈಗೂಡುವುದೆಂದು ತಿಳಿಯದೆ ಚಿಂತಿಸುತ್ತಿದ್ದನು. ಕೊನೆಗೆ ನಾರದನು ಅವರೆಲ್ಲರನ್ನೂ ಅಲ್ಲಿಯೇ ಬಿಟ್ಟು, ಒಂದೊಂದು ಪುಣ್ಯತೀರ್ಥಕ್ಕೂ ಹೋಗಿ ಆ ಮಹಾತ್ಮರಾರೆಂಬುದನ್ನು ಹುಡುಕುತ್ತ ಬಂದನು. ದಾರಿಯಲ್ಲಿ ಕಂಡಕಂಡ ಮಹರ್ಷಿಗಳೆಲ್ಲರನ್ನೂ ಪ್ರಶ್ನೆಮಾಡುತ್ತಿದ್ದನು. ಯಾರೂ ಅದರ ನಿಶ್ಚಯವನ್ನು ತಿಳಿಸಲಾರದೆ ಹೋದರು. ಕೆಲವರು ಅಸಾಧ್ಯಕಾರ್ಯವೆಂದು ನಿರಾಕರಿಸಿದರು. ಮತ್ತೆ ಕೆಲವರು ಈ ಮಾತನ್ನು ಕೇಳಿದೊಡನೆ ಮೌನದಿಂದ ಪರಾಙ್ಮುಖರಾಗಿ ಹೋಗುತ್ತಿದ್ದರು. ಇದೆಲ್ಲವನ್ನೂ ನೋಡಿ ನಾರದನಿಗೆ ಮನಸ್ಸಿನಲ್ಲಿದ್ದ ಕಳವಳವು ಇನ್ನೂ ಹೆಚ್ಚಿತು. ಕೊನೆಗೆ ಕಠಿನವಾದ ತಪಸ್ಸಿನಿಂದಲಾದರೂ ತನ್ನ ಕಾರ್ಯವನ್ನು ಸಾಧಿಸಬೇಕೆಂದು ನಿಶ್ಚಯಿಸಿ ನಾರದನು ಬದರಿಕಾಶ್ರಮಕ್ಕೆ ಬಂದನು. ಇಷ್ಟರಲ್ಲಿ ಕೋಟಿಸೂರ್ಯಸಮಾನವಾದ ತೇಜಸ್ಸುಳ್ಳ ಸನಕಾದಿಮಹರ್ಷಿಗಳು ಮುಂದೆ ಬರುತ್ತಿರುವುದನ್ನು ಕಂಡನು. ಒಡನೆಯೇ ನಾರದನು ಪರಮಸಂತೋಷದಿಂದ ಅವರನ್ನು ಕುರಿತು, "ಎಲೈ ಮಹಿತಕುಮಾರರೇ! ಭಾಗ್ಯವಶದಿಂದ ನಿಮ್ಮ ದರ್ಶನವು ನನಗೆ ಲಭಿಸಿತು. ಕೃಪೆಯಿಟ್ಟು ನನ್ನ ಕೋರಿಕೆಯನ್ನು ನಡೆಸಿಕೊಡಬೇಕು. ನೀವಾದರೋ ಮಹಾಯೋಗಿಗಳು. ಅನೇಕಶಾಸ್ತ್ರಗಳನ್ನು ಕೇಳಿಬಲ್ಲವರು. ಯಾವಾಗಲೂ ಹರಿಕೀರ್ತನೆಯಲ್ಲಿಯೇ ನಿರತರಾಗಿ ವೈಕುಂಠದಲ್ಲಿ ವಾಸಮಾಡತಕ್ಕವರು. ಹಿರಿಯರಿಗಿಂತಲೂ ಹಿರಿಯರೆನಿಸಿಕೊಂಡರೂ ವಾರ್ಧಕಬಾಧೆಯಿಲ್ಲದೆ ಯಾವಾಗಲೂ ಐದುವರುಷದ ಕುಮಾರರಂತೆ ಕಾಣುತ್ತಿರುವಿರಿ! ಹರಿಕೀರ್ತನೆಯೊಂದೇ ನಿಮ್ಮ ಜೀವನವು. ಹರಿಯೊಬ್ಬನೇ ರಕ್ಷಕನೆಂದು ನಂಬಿರುವವರು. ಎಲೈ ಮಹಾತ್ಮರೇ! ಪೂರ್ವದಲ್ಲಿ ಜಯವಿಜಯರೆಂಬ ವೈಕುಂಠದ್ವಾರಪಾಲಕರು ಕೋಪಸೂಚಕವಾದ ನಿಮ್ಮ ಭ್ರೂಭಂಗವನ್ನು ನೋಡಿದಮಾತ್ರದಿಂದಲೇ ಭೂಮಿಗೆ ಬಿದ್ದು, ಒಡನೆಯೇ ನಿಮ್ಮ ಕೃಪಾಬಲದಿಂದ ತಿರುಗಿ ಪೂರ್ವಸ್ಥಾನವನ್ನು ಸೇರಿರುವರು. ದಯಾಳುಗಳಾದ ನೀವು ನನ್ನಲ್ಲಿ ಅನುಗ್ರಹವನ್ನು ಮಾಡಿ ನನ್ನ ಕೋರಿಕೆಯನ್ನು ಈಡೇರಿಸಿ ಕೊಡಬೇಕು. ಅಶರೀರವಾಣಿಯು ಸೂಚಿಸಿದ ಉಪಾಯವನ್ನು ನಿಮ್ಮಿಂದಲೇ ನಾನು ತಿಳಿಯಬೇಕಾಗಿರುವುದು.

ಭಕ್ತಿ, ಜ್ಞಾನ, ವೈರಾಗ್ಯಗಳಿಗೆ ಕ್ಷೇಮವನ್ನುಂಟುಮಾಡುವುದಕ್ಕೆ ನಾನು ನಡೆಸ ಬೇಕಾದ ಕರ್ಮವೇನೆಂಬುದನ್ನು ನೀವೇ ನನಗೆ ಉಪದೇಶಿಸಬೇಕು." ಎಂದನು. ಆದಕ್ಕಾ ಕುಮಾರರು ನಾರದನನ್ನು ಕುರಿತು "ಎಲೈ ಋಷಿಸತ್ತಮನೆ! ಚಿಂತಿಸ ಬೇಡ. ಇದಕ್ಕೆ ಸುಲಭಸಾಧ್ಯವಾದ ಒಂದುಪಾಯವಿರುವುದು. ಯಾವಾಗಲೂ ಹರಿಧ್ಯಾನಸನಿರತನಾಗಿ ವಿರಕ್ತರಿಗೆ ಶಿರೋರತ್ನಪ್ರಾಯನಾಗಿರುವ ನಿನ್ನಂತೆ ಲೋಕ ದಲ್ಲಿ ಧನ್ಯನಾರುಂಟು? ಲೋಕದಲ್ಲಿ ವಿಷ್ಣುಭಕ್ತಿಯನ್ನು ನೆಲೆಗೊಳಿಸುವುದಕ್ಕೆ ನೀನಲ್ಲದೆ ಬೇರೆ ಯಾರು ಸಮರ್ಥರು? ಪುರಾತನ ಮಹರ್ಷಿಗಳು ಪುಣ್ಯಸಂಪಾದನೆ ಗಾಗಿ ಎಷ್ಟೆಷ್ಟೋ ಮಾರ್ಗಗಳನ್ನು ಹೇಳಿರುವರು. ಅವೆಲ್ಲವೂ ಕೇವಲಶ್ರಮಸಾಧ್ಯ ಗಳು! ಶ್ರಮಪಟ್ಟು ಆ ಕರ್ಮಗಳನ್ನು ನಡೆಸಿದರೂ ಅವು ಅಶಾಶ್ವತಗಳಾದ ಸ್ವರ್ಗಾದಿಫಲಗಳನ್ನು ಮಾತ್ರವೇ ಕೊಡತಕ್ಕುವು. ಎಲೈ ತಾಪಸೋತ್ತಮನೆ! ಮೋಕ್ಷಸಾಧಕವಾದ ಮಾರ್ಗವೇ ಬೇರೆ! ಅದು ಕೇವಲಗೋಪ್ಯವಾಗಿರುವುದು. ಅದನ್ನುಪದೇಶಿಸತಕ್ಕ ಮಹಾತ್ಮನನ್ನೂ ಕೂಡ ಭಾಗ್ಯದಿಂದಲ್ಲದೆ ಲಭಿಸಲಾರನು. ಮೊದಲು ಆಕಾಶವಾಣಿಯು ನಿನಗೆ ಯಾವ ಸತ್ಕರ್ಮವನ್ನು ಸಾಧಿಸಬೇಕೆಂದು ಸೂಚಿಸಿತೋ ಅದನ್ನು ಈಗ ನಾವು ಪ್ರಕಟವಾಗಿ ತಿಳಿಸುವೆವು ಕೇಳು. ಲೋಕ ದಲ್ಲಿ ದ್ರವ್ಯಯಜ್ಞಗಳಿಂದಲೂ, ತಪೋಯಜ್ಞಗಳಿಂದಲೂ, ಯೋಗಯಜ್ಞಗಳಿಂದಲೂ, ವೇದಾಧ್ಯಯನಗಳಿಂದಲೂ ಅನೇಕಸತ್ಕರ್ಮಗಳುಂಟು. ಇವೆಲ್ಲಕ್ಕಿಂತಲೂ ಜ್ಞಾನಯ ಜ್ಞವೆಂಬುದೇ ಸರ್ವೋತ್ತಮವು. ಪೂರ್ವದಲ್ಲಿ ಶುಕಾದಿಮಹರ್ಷಿಗಳಿಂದ ಹೇಳ ಲ್ಪಟ್ಟ ಭಾಗವತಕಥಾಪ್ರಸಂಗವೇ ಈ ಜ್ಞಾನಯಜ್ಞಗಳಲ್ಲಿ ಅತ್ಯುತ್ತಮವೆನಿಸಿ ಕೊಳ್ಳುವುದು. ಅದರಿಂದ ಭಕ್ತಿ ಜ್ಞಾನವೈರಾಗ್ಯಗಳಿಗೂ ಪೂರ್ಣಬಲವುಂಟಾ ಗುವುದು. ಈ ಭಾಗವತಪ್ರಸಂಗವನ್ನು ಕೇಳಿದೊಡನೆ ಸಿಂಹಗರ್ಜನೆಯನ್ನು ಕೇಳಿದ ನರಿಗಳಂತೆ ಈ ನ ಕಲಿದೋಷಗಳೆಲ್ಲವೂ ಓಡಿಹೋಗುವುವು. ಈ ಕಥಾಪ್ರಸಂಗ ವೆಂಬ ಜ್ಞಾನಯಜ್ಞವನ್ನು ಸಾಧಿಸಿದೊಡನೆ ಪ್ರತಿಯೊಂದು ಮನೆಯಲ್ಲಿಯೂ, ಪ್ರತಿಯೊಬ್ಬ ಮನುಷ್ಯನಲ್ಲಿಯೂ ಭಕ್ತಿಯೆಂಬುದು ನಲಿದಾಡುತ್ತಿರುವುದು" ಎಂದರು. ಇದನ್ನು ಕೇಳಿ ನಾರದನು ತಿರುಗಿ ಋಷಿಕುಮಾರರನ್ನು ಕುರಿತು "ಎಲೈ ಮಹಾತ್ಮರೆ! ನಾನು ಹಿಂದೆ ಎಷ್ಟೆಷ್ಟೋವಿಧದಿಂದ ವೇದವೇದಾಂತಗಳನ್ನೂ, ಗೀತಾವಾಕ್ಯಗಳನ್ನೂ ಉಪದೇಶಿಸಿ ಆ ಜ್ಞಾನವೈರಾಗ್ಯಗಳನ್ನು ಎಚ್ಚರಿಸುವುದಕ್ಕೆ ಪ್ರಯತ್ನಿಸಿದೆನು. ಆ ನನ್ನಪ್ರಯತ್ನವೊಂದೂ ಕೈಗೂಡಲಿಲ್ಲ. ಹೀಗಿರುವಾಗ ಈ ಭಾಗವತಕಥಾಪ್ರಸಂಗದಿಂದ ಮಾತ್ರ ಅವರಿಗೆ ಪ್ರಜ್ಞೆಯುಂಟಾಗುವುದು ಹೇಗೆ? ಆ ಭಾಗವತಕಥೆಯಲ್ಲಿಯಾದರೂ ಪ್ರತಿಶ್ಲೋಕದಲ್ಲಿಯೂ, ಪ್ರತಿಪದ

ದಲ್ಲಿಯೂ ವೇದಾರ್ಥಗಳಲ್ಲಿ ಬೇರೆಯಿಲ್ಲ! ಹೀಗಿರುವಾಗ ವೇದಾಂತಗಳಿಗಿಂತಲೂ ಗೀತಾವಾಕ್ಯಗಳಿಗಿಂತಲೂ ಭಾಗವತಕಥೆಯಲ್ಲಿ ವಿಶೇಷವೇನೆಂದು ನನಗೆ ಸಂದೇಹವು ಹುಟ್ಟುವುದು. ಈ ಸಂದೇಹವನ್ನು ಪರಿಹರಿಸಬೇಕು" ಎಂದನು. ಅದಕ್ಕೆ ಋಷಿಕುಮಾರರು "ಎಲೈ ಮಹರ್ಷಿಯೇ! ಕೇಳು! ವೇದೋಪನಿಷತ್ತುಗಳ ಮುಖ್ಯಸಾರವೇ ಈ ಭಾಗವತಕಥಾರೂಪವಾಗಿ ಹುಟ್ಟಿರುವುದು. ಆದರಿಂದಲೇ ಈ ಕಥೆಯು ಅವಕ್ಕಿಂತಲೂ ಅತ್ಯುತ್ತಮವೆನಿಸಿಕೊಂಡಿರುವುದು. ಇದರಿಂದುಂಟಾಗ ತಕ್ಕ ಫಲವೂ ನಿಸ್ಸಂಶಯವಾಗಿರುವುದು. ಹಾಲಿನಲ್ಲಿರುವ ಬೆಣ್ಣೆಯನ್ನೂ ಕಬ್ಬಿನಲ್ಲಿರುವ ಸಕ್ಕರೆಯನ್ನೂ ಪ್ರತ್ಯೇಕಿಸಿ ತೆಗೆದಮೇಲೆ, ಅವುಗಳಲ್ಲಿರುವ ರುಚಿಯೇ ಬೇರೆಯಾಗಿರುವಂತೆ, ವೇದವೇದಾಂತಗಳಿಂದ ಪ್ರತ್ಯೇಕಿಸಿ ತೆಗೆದ ಈ ಭಾಗವತಕಥಾಮೃತವು ಅವಕ್ಕಿಂತಲೂ ವಿಶೇಷಫಲಪ್ರದವೆಂಬುದನ್ನು ಹೇಳತಕ್ಕುದೇನು? ಮಹಾಮಂತ್ರಸ್ವರೂಪವಾದ ಈ ಭಾಗವತವೆಂಬ ಪುರಾಣವು ಈ ಲೋಕದಲ್ಲಿ ಭಕ್ತಿಜ್ಞಾನವೈರಾಗ್ಯಗಳನ್ನು ನೆಲೆಗೊಳಿಸುವುದಕ್ಕಾಗಿಯೇ ಪ್ರಚಾರಪಡಿಸಲ್ಪಟ್ಟಿರುವುದು. ಎಲೈ ಮಹರ್ಷಿಶ್ರೇಷ್ಠನೇ! ಇದೂ ಹಾಗಿರಲಿ! ಪೂರ್ವದಲ್ಲಿ ವ್ಯಾಸಮಹರ್ಷಿಯು ಲೋಕೋಜ್ಜೀವನಾರ್ಥವಾಗಿ ವೇದವೇದಾಂತಾರ್ಥಗಳನ್ನೂ, ಗೀತೆಯನ್ನೂ ಪ್ರಚಾರಗೊಳಿಸಿದಮೇಲೆಯೂ ಕೂಡ, ಮನಸ್ಸಿಗೆ ನೆಮ್ಮದಿಯಿಲ್ಲದೆ ಚಿಂತಾಕುಲನಾಗಿರುವುದನ್ನು ನೋಡಿ ನೀನೇ ಆತನಿಗೆ ಚತುಃಶ್ಲೋಕರೂಪವಾಗಿ ಭಾಗವತವನ್ನು ಉಪದೇಶಿಸಿದೆಯಲ್ಲವೇ? ಅದನ್ನು ಕೇಳಿದೊಡನೆ ಆತನು ನಿಶ್ಚಿಂತನಾದನಲ್ಲವೇ? ಹೀಗಿರುವಾಗ ನೀನೇ ಹೀಗೆ ಆಶ್ಚರ್ಯದಿಂದ ಪ್ರಶ್ನೆಮಾಡುವುದೆಂದರೇನು? ಈ ವಿಷಯದಲ್ಲಿ ನಿನ್ನ ಸಂದೇಹಕ್ಕೆ ಕಾರಣವೇನಿರುವುದು? ಇದರಿಂದ ಎಂತಹ ವಿಪತ್ತಿದ್ದರೂ, ದುಃಖವಾದರೂ ನೀಗಿ ಹೋಗುವುದರಲ್ಲಿ ಸಂದೇಹವಿಲ್ಲ" ಎಂದರು.

ಈ ವಾಕ್ಯವನ್ನು ಕೇಳಿ ನಾರದನಿಗೆ ಮಹತ್ತಾದ ಸಂತೋಷವುಂಟಾಯಿತು. ಭಕ್ತಿಜ್ಞಾನ ವೈರಾಗ್ಯಗಳನ್ನುದ್ಧರಿಸುವುದಕ್ಕಾಗಿ ಭಾಗವತಕಥಾಶ್ರವಣವೆಂಬ ಜ್ಞಾನಯಜ್ಞವನ್ನೇ ತಾನೂ ಸಾಧಿಸಬೇಕೆಂದು ನಿಶ್ಚಯಿಸಿಕೊಂಡನು. ಈ ಯಜ್ಞವನ್ನು ಸಾಧಿಸುವುದಕ್ಕೆ ಉತ್ತಮವಾದ ಸ್ಥಳವಾವುದೆಂದು ಆತನ ಮನಸ್ಸಿನಲ್ಲಿ ತಿರುಗಿ ಮತ್ತೊಂದು ಚಿಂತೆಯು ಹುಟ್ಟಿತು. ಈ ಸಂದೇಹಪರಿಹಾರಕ್ಕಾಗಿ ನಾರದನು ತಿರುಗಿ ಆ ಋಷಿಕುಮಾರರನ್ನು ಕುರಿತು "ಎಲೈ ಮಹಾತ್ಮರೆ! ಈ ಯಜ್ಞವನ್ನು ನಡೆಸುವುದಕ್ಕೆ ತಕ್ಕ ಸ್ಥಳವಾವುದು? ಈ ಪುಣ್ಯಕಥೆಗಳನ್ನು ಎಷ್ಟುದಿನಗಳ ವರೆಗೆ ಕೇಳುತ್ತಿರಬೇಕು? ಈ ಕಥಾಶ್ರವಣಕಾಲದಲ್ಲಿ ಅನುಸರಿಸಬೇಕಾದ ವಿಧಿನಿಯಮಗಳೇನು?" ಎಂದನು. ಅದಕ್ಕೆ ಋಷಿಕುಮಾರರು "ನಾರದಾ!

ಕೇಳು! ಗಂಗಾದ್ವಾರದ ಸಮೀಪದಲ್ಲಿ ಆನಂದವೆಂಬ ಒಂದು ಘಟ್ಟವಿರುವುದು. ಅದು ಅನೇಕಋಷಿಗಳಿಂದಲೂ ದೇವಗಂಧರ್ವಾದಿ ಗಳಿಂದಲೂ ಸೇವಿತವಾಗಿ, ಏಕಾಂತವಾಗಿಯೂ, ಅತಿಪವಿತ್ರವಾಗಿಯೂ, ಮನೋಹರವಾಗಿಯೂ ಇರುವುದು. ನೀನು ಈ ಜ್ಞಾನಯಜ್ಞವನ್ನು ನಡೆಸುವುದಕ್ಕೆ ಅದೇ ಸರ್ವೋತ್ತಮವಾದ ಸ್ಥಳವು. ಅಲ್ಲಿ ಶ್ರವಣಮಾಡುವುದರಿಂದ ಈ ಕಥೆಗೂ ಅಪೂರ್ವವಾದ ಒಂದು ರುಚಿಯುಂಟಾಗುವುದು. ಭಾಗವತಕಥಾಪ್ರಸಂಗವು ಎಲ್ಲಿ ನಡೆಯುತ್ತಿರುವುದೋ ಅಲ್ಲಿಗೆ ಭಕ್ತಿಯು ತಪ್ಪದೆ ಬಂದು ಸೇರುವಳು. ಅಲ್ಲಿ ಕಥಾರಂಭವನ್ನು ಮಾಡಿದೊಡನೆ ಭಕ್ತಿಯು ಜೀರ್ಣದೇಹವುಳ್ಳ ತನ್ನ ಮಕ್ಕಳೊಡನೆ ತಾನಾಗಿಯೇ ಬಂದು ಸೇರುವುದರಲ್ಲಿ ಸಂದೇಹವಿಲ್ಲ. ಅಲ್ಲಿಗೆ ಬಂದು ಸೇರಿದೊಡನೆ ಆ ಮೂವರಿಗೂ ಹೊಸ ಯೌವನವುಂಟಾಗುವುದು" ಎಂದರು.

ಈ ಮಾತನ್ನು ಹೇಳಿ ಆ ಋಷಿಕುಮಾರರೆಲ್ಲರೂ ನಾರದನೊಡಗೂಡಿ ಗಂಗಾತೀರಕ್ಕೆ ಬಂದು ಸೇರಿದರು. ಅವರೆಲ್ಲರೂ ಅಲ್ಲಿಗೆ ಬಂದ ವೃತ್ತಾಂತವು ಸಮಸ್ತಲೋಕಗಳಿಗೂ ವ್ಯಾಪಿಸಿತು. ಭಾಗವತಕಥಾಮೃತವನ್ನು ಪಾನಮಾಡಬೇಕೆಂಬ ಆತುರದಿಂದ ಅನೇಕವೈಷ್ಣವರೂ, ಮಹರ್ಷಿಗಳೂ, ವೇದಾಂತಿಗಳೂ, ಮಂತ್ರದೇವತೆಗಳೂ, ಪಟ್ಶಾಸ್ತ್ರಗಳೂ, ಇತರ ಪುರಾಣಗಳೂ, ಸಮಸ್ತಪುಣ್ಯತೀರ್ಥಗಳೂ ಆತುರದಿಂದ ಬಂದುಸೇರಿದುವು. ಆಗ ನಾರದನು ಆ ಋಷಿಕುಮಾರರಿಗೆ ಉತ್ತಮವಾದ ಆಸನಗಳನ್ನು ಹಾಕಿ, ಅವರನ್ನು ಕುಳ್ಳಿರಿಸಿದಮೇಲೆ, ಅಲ್ಲಿ ನೆರೆದಿದ್ದವರೆಲ್ಲರೂ ಕ್ರಮವಾಗಿ ಆ ಋಷಿಕುಮಾರರಿಗೆ ವಂದಿಸಿ ಭಾಗವತಕಥಾಮೃತವನ್ನು ಕೇಳಬೇಕೆಂಬ ಉತ್ಸಾಹದಿಂದ ಕೆಲವರು ಜಯಶಬ್ದಗಳನ್ನೂ, ಕೆಲವರು ನಮಃಶಬ್ದಗಳನ್ನೂ ಹೇಳುತ್ತಿದ್ದರು. ಶಂಖ, ಭೇರಿ, ಮೊದಲಾದ ಮಂಗಳವಾದ್ಯಗಳೆಲ್ಲವೂ ನುಡಿಸಲ್ಪಡುತ್ತಿದ್ದುವು. ನಾನಾಕಡೆಗಳಿಂದ ಪುಷ್ಪಾಂಜಲಿಗಳು ಎರಚಲ್ಪಡುತ್ತಿದ್ದುವು. ದೇವತೆಗಳು ಅಂತರಿಕ್ಷದಲ್ಲಿ ವಿಮಾನವನ್ನೇರಿಬಂದು ಕಲ್ಪವೃಕ್ಷದಹೂಗಳನ್ನು ವರ್ಷಿಸುತ್ತಿದ್ದರು. ಹೀಗೆ ಎಲ್ಲರೂ ತಮ್ಮ ತಮ್ಮ ಉತ್ಸಾಹಗಳನ್ನು ತೋರಿಸಿ ಏಕಾಗ್ರಚಿತ್ತರಾಗಿ ಕುಳಿತಮೇಲೆ, ಋಷಿಕುಮಾರರು ನಾರದನಿಗೆ ಭಾಗವತಮಹಿಮೆಯನ್ನು ತಿಳಿಸುವುದಕ್ಕೆ ತೊಡಗಿದರು. "ಎಲೈ ಭಕ್ತಾಗ್ರಣಿ! ಕೇಳು! ಮೊದಲು ಶುಕಶಾಸ್ತ್ರರೂಪವಾದ ಈ ಭಾಗವತದ ಮಹಿಮೆಯನ್ನು ಹೇಳುವೆವು. ಭಾಗವತದ ಕಥೆಯನ್ನು ಕಿವಿಯಿಂದ ಕೇಳಿದ ಮಾತ್ರದಿಂದಲೇ ಮುಕ್ತಿಯು ಕರಗತವಾಗುವುದು. ಶ್ರೀಮಹಾವಿಷ್ಣುವು ಯಾವಾಗಲೂ ಅಂತವರ ಮನಸ್ಸಿನಲ್ಲಿ ನೆಲೆಗೊಳ್ಳುವನು. ಭಾಗವತವೆಂಬುದು ಹದಿನೆಂಟುಸಹಸ್ರ

ಗ್ರಂಥಗಳುಳ್ಳದಾಗಿ, ಹನ್ನೆರಡುಸ್ಕಂಧಗಳಾಗಿ ವಿಭಾಗಿಸಲ್ಪಟ್ಟು, ಪರೀಕ್ಷಿದ್ರಾಜನಿಗೂ, ಶುಕಮಹರ್ಷಿಗೂ ನಡೆದ ಸಂವಾದರೂಪವಾಗಿರುವುದು. ಭಾಗವತಕಥೆಯು ಶಿವ...ಲ್ಲ ಬೇಕಾದವರಿಗೆ ಮಾತ್ರವೇ. ಮನುಷ್ಯನು ಅಜ್ಞಾನವಶನಾಗಿ ಸಂಸಾರದಲ್ಲಿ ನರಳುತ್ತಿರುವನು. ಅನೇಕಶಾಸ್ತ್ರಗಳನ್ನು ಕೇಳಿದರೂ, ಪರಸ್ಪರವಿರೋಧದಿಂದ ಕೇವಲ ಭ್ರಾಂತಿಜನಕಗಳಾದ ಪುರಾಣಗಳನ್ನು ಕೇಳಿದರೂ ಅಷ್ಟೊಂದು ಫಲವು ಲಭಿಸಲಾರದು. ಮೋಕ್ಷಪ್ರಾಪ್ತಿಗೆ ಈ ಭಾಗವತಕಥೆಯೊಂದೇ ಮುಖ್ಯಕಾರಣವು. ಸಾವಿರಾರು ಅಶ್ವಮೇಧಗಳನ್ನು ನಡೆಸಿದರೂ, ನೂರಾರು ವಾಜಪೇಯಗಳನ್ನು ನಡೆಸಿದರೂ ಈ ಪುಣ್ಯಕಥೆಯ ಕಲಾಮಾತ್ರಕ್ಕೂ ಎಣೆಯಾಗಲಾರದು. ಗಂಗೆ, ಕಾಶಿ, ಪುಷ್ಕರ, ಪ್ರಯಾಗ, ಮುಂತಾದ ಅನೇಕಪುಣ್ಯತೀರ್ಥಗಳನ್ನು ಸುತ್ತಿಬಂದರೂ ಈ ಕಥಾಶ್ರವಣದಿಂದುಂಟಾಗುವ ಫಲಕ್ಕೆ ಸಮನಾಗಲಾರದು. ನಾರದಾ! ನೀನು ಉತ್ತಮಗತಿಯನ್ನಪೇಕ್ಷಿಸುವವನಾದರೆ ಅದರಲ್ಲಿ ಅರ್ಧಶ್ಲೋಕವನ್ನಾಗಲೀ ಒಂದು ಶ್ಲೋಕಪಾದವನ್ನಾಗಲೀ ನಿನ್ನ ಬಾಯಿಂದುಚ್ಚರಿಸಿದರೆ ಸಾಕು! ವೇದಗಳಾಗಲಿ, ಪುರುಷಸೂಕ್ತವಾಗಲಿ, ದ್ವಾದಶಾಕ್ಷರಮಂತ್ರವಾಗಲಿ, ಶ್ರೀಮಹಾವಿಷ್ಣುವಾಗಲಿ, ಈ ಭಾಗವತಕಥೆಗೆ ಬೇರೆಯಾದುದಲ್ಲ. ಈ ಭಾಗವತಕಥೆಯನ್ನು ಅರ್ಥಜ್ಞಾನಪೂರ್ವಕವಾಗಿ ಯಾವನು ಓದುವನೋ ಅವನಿಗೆ ಕೋಟಿಜನ್ಮಗಳಿಂದ ಸಂಚಿತವಾದ ಪಾಪವೂ ಕೂಡ ನಿವೃತ್ತವಾಗುವುದರಲ್ಲಿ ಸಂದೇಹವಿಲ್ಲ. ಈ ಪುಣ್ಯಕಥೆಯಲ್ಲಿ ಒಂದು ವಾಕ್ಯವನ್ನು ಪಠಿಸಿದರೂ ಕೂಡ ಅನೇಕರಾಜಸೂಯಾಶ್ವಮೇಧಗಳ ಫಲವುಂಟಾಗುವುದು. ಅಂತ್ಯಕಾಲದಲ್ಲಿ ಈ ಕಥಾಶ್ರವಣವನ್ನು ಮಾಡಿದವರಿಗೆ ಶ್ರೀಮನ್ನಾರಾಯಣನು ತಾನಾಗಿಯೇ ಮುಕ್ತಿಯನ್ನು ಕೈಗೂಡಿಸುವನು. ಈ ಕಥೆಯನ್ನು ಒಂದಾವರ್ತಿಯಾದರೂ ಕಿವಿಯಿಂದ ಕೇಳದವನ ಜನ್ಮವು ಕೇವಲನಿರರ್ಥಕವು. ಈ ಭಾಗವತಕಥೆಯನ್ನು ಕೇಳತಕ್ಕ ಭಾಗ್ಯವೂ ಕೂಡ ಪೂರ್ವಾರ್ಜಿತವಾದ ಪುಣ್ಯದಿಂದಲ್ಲದೆ ಲಭಿಸಲಾರದು. ಆದುದರಿಂದ ಎಲೈ ಋಷಿಶ್ರೇಷ್ಠನೇ! ನೀನು ಈ ಕಥೆಯನ್ನು ಬಹಳಶ್ರದ್ಧೆಯಿಂದ ಕೇಳಬೇಕು. ಇದಕ್ಕೆ ದಿನನಿಯಮಗಳೇನೂ ಇಲ್ಲ! ಅನವರತವೂ ಈ ಕಥೆಯನ್ನು ಕೇಳುತ್ತಿರಬಹುದು. ಸತ್ಯವ್ರತದಿಂದಲೂ ಬ್ರಹ್ಮಚರ್ಯದಿಂದಲೂ ನಿಷ್ಠನಾಗಿ, ಇದನ್ನು ಅನವರತವೂ ಶ್ರವಣಮಾಡುತ್ತಿರಬೇಕು. ಆದರೆ ಈ ಕಲಿಕಾಲದಲ್ಲಿ ಅಷ್ಟೊಂದು ದೃಢವ್ರತವನ್ನು ನಡೆಸುವುದು ಸಾಧ್ಯವಿಲ್ಲದುದರಿಂದಲೂ, ಅಷ್ಟು ದೀರ್ಘಕಾಲದವರೆಗೆ ದೀಕ್ಷೆಯನ್ನು ವಹಿಸಿ ಮನಸ್ಸನ್ನು ತಡೆದು ನಿಯಮದಲ್ಲಿರುವುದು ಕಷ್ಟವಾದುದರಿಂದಲೂ, ಇದಕ್ಕೆ ಸಪ್ತಾಹಶ್ರವಣ

ವೆಂಬ ಸುಲಭೋಪಾಯವೊಂದು ಆ ಶುಕಮಹರ್ಷಿಯ ಆಜ್ಞೆಯಿಂದಲೇ ಏರ್ಪಟ್ಟಿರುವುದು. ಶ್ರಾವಣಮಾಘಮಾಸಗಳಲ್ಲಿ ಶ್ರದ್ಧೆಯಿಂದ ಕೇಳುವವರಿಗೆ ಯಾವಫಲವುಂಟೋ ಆ ಫಲವು ಸಪ್ತಾಹಶ್ರವಣದಿಂದಲೇ ಲಭಿಸುವುದು. ಈ ಕಲಿಕಾಲವೆಂಬುದು ಕೇವಲ ದೋಷ ಪ್ರಚುರವಾದುದರಿಂದಲೂ, ಈ ಕಾಲದಲ್ಲಿ ಮನಸ್ಸನ್ನು ತಡೆದಿಡುವುದು ಅಸಾಧ್ಯವಾದುದರಿಂದಲೂ, ಮನುಷ್ಯನ ಆಯುಃಪರಿಮಾಣವೂ ಬಹಳ ಸ್ವಲ್ಪವಾಗಿರುವುದರಿಂದಲೂ, ರೋಗಬಾಧೆಯು ಹೆಚ್ಚಿರುವುದರಿಂದಲೂ, ಈ ಕಾಲದಲ್ಲಿ ಸಪ್ತಾಹಶ್ರವಣವೆಂಬ ನಿಯಮವು ಏರ್ಪಟ್ಟಿರುವುದು. ತಪಸ್ಸು, ಯೋಗ, ಸಮಾಧಿ, ಮುಂತಾದುವುಗಳಿಂದ ಶ್ರಮಪಟ್ಟು ಸಾಧಿಸಬೇಕಾದ ಫಲಗಳೆಲ್ಲವೂ ಅನಾಯಾಸವಾಗಿಯೇ ಈ ಸಪ್ತಾಹಶ್ರವಣದಿಂದ ಲಭಿಸುವುವು" ಎಂದು ಸನಕಾದಿಋಷಿಕುಮಾರರು ನಾರದನಿಗೆ ಭಾಗವತ ಕಥಾಮಾಹಾತ್ಮ್ಯವನ್ನು ವಿವರಿಸಿ ಹೇಳಿದರು" ಎಂದು ಸೂತಪೌರಾಣಿಕನು ಹೇಳಿದುದನ್ನು ಕೇಳಿ, ಶೌನಕಮಹಾಮುನಿಯು ತಿರುಗಿ "ಎಲೈ ಸೂತನೆ! ಈ ಭಾಗವತಕ್ಕೆ ಅಷ್ಟೊಂದು ಮಹಾಮಹಿಮೆಯುಂಟಾಗುವುದಕ್ಕೆ ಕಾರಣವೇನು?" ಎಂದು ಕೇಳಿದನು. ಅದಕ್ಕಾ ಸೂತನು, "ಶೌನಕಾ! ಕೇಳು! ಹಿಂದೆ ಶ್ರೀಕೃಷ್ಣನು ತನ್ನ ಅವತಾರ ಪ್ರಯೋಜನವನ್ನು ಮುಗಿಸಿಕೊಂಡು ತನ್ನ ನಿವಾಸಸ್ಥಾನವಾದ ವೈಕುಂಠಕ್ಕೆ ಹೊರಡುವುದಕ್ಕೆ ಸಿದ್ಧನಾಗಿದ್ದಾಗ, ಪರಮಭಕ್ತನಾದ ಉದ್ಧವನು ಆತನನ್ನು ಕುರಿತು "ಎಲೈ ಪರಮಾತ್ಮನೆ! ಈಗ ಲೋಕದಲ್ಲಿ ಭಯಂಕರವಾದ ಕಲಿಯು ತಲೆದೋರಿರುವುದು. ಜನರೆಲ್ಲರೂ ಕ್ರೂರಸ್ವಭಾವವನ್ನವಲಂಬಿಸುತ್ತಿರುವರು. ದುಷ್ಟರ ಸಹವಾಸದಿಂದ ಸತ್ಪುರುಷರ ಸ್ವಭಾವವೂ ಕೆಟ್ಟಿರುವುದು. ಹೀಗೆ ಖಳಭಾರದಿಂದ ಕುಗ್ಗುತ್ತಿರುವ ಭೂಮಿಗೆ ಇನ್ನು ರಕ್ಷಕರಾರು? ಗೋರೂಪಿಣಿಯಾದ ಈ ಭೂದೇವಿಯು ಇನ್ನು ಮೇಲೆ ಯಾರನ್ನಾಶ್ರಯಿಸಬೇಕು? ದೇವಾ! ನೀನು ಹೊರತು ಇವಳ ಕಷ್ಟವನ್ನು ನೀಗಿಸುವುದಕ್ಕೆ ಬೇರೆ ಯಾರೂ ಸಮರ್ಥರೆಂದು ನನಗೆ ತೋರಲಿಲ್ಲ. ಆದುದರಿಂದ ಭಕ್ತವತ್ಸಲನಾದ ನೀನು ಸಜ್ಜನರನ್ನುದ್ಧರಿಸುವುದಕ್ಕಾಗಿ, ಈ ಲೋಕದಲ್ಲಿಯೇ ಸ್ಥಿರವಾಗಿ ನಿಂತಿರಬೇಕು. ನೀನು ಅಪ್ರಾಕೃತನಾಗಿದ್ದರೂ ಭಕ್ತೋದ್ಧರಣಾರ್ಥವಾಗಿಯೇ ಹೀಗೆ ಪ್ರಾಕೃತ ದೇಹವನ್ನು ಹೊಂದಿ ಬಂದವನಲ್ಲವೇ? ನೀನು ಈ ಲೋಕವನ್ನು ಬಿಟ್ಟುಹೋದರೆ ನಿನ್ನ ಭಕ್ತರೆಲ್ಲರೂ ಇಲ್ಲಿ ನಿನ್ನನ್ನಗಲಿರುವುದು ಹೇಗೆ? ಆದುದರಿಂದ ನೀನು ಇಲ್ಲಿಯೇ ನಿಲ್ಲಬಾರದೇ?" ಎಂದು ಪ್ರಾರ್ಥಿಸಿದನು.

ಉದ್ಧವನ ಈ ಮಾತನ್ನು ಕೇಳಿ ಶ್ರೀಕೃಷ್ಣನು, ತನ್ನ ಭಕ್ತೋದ್ಧರಣಾರ್ಥವಾಗಿ ತಾನು ಮುಂದೆ ಮಾಡಬೇಕಾದುದೇನೆಂದು ತನ್ನಲ್ಲಿಯೇ ತಾನು

ಆಲೋಚಿಸಿ, ಕೊನೆಗೆ ತನ್ನ ಚರಿತ್ರರೂಪವಾದ ಶ್ರೀಭಾಗವತವನ್ನು ತನಗೆ ಪ್ರತಿನಿಧಿಯನ್ನಾಗಿ ಮಾಡಿ, ಅದರಲ್ಲಿ ತನ್ನ ತೇಜಸ್ಸನ್ನು ನೆಲೆಗೊಳಿಸಿದನು. ಆದುದರಿಂದ ಈ ಭಾಗವತಕಥೆಯೆಂಬುದು ಸಾಕ್ಷಾತ್ಪರಮಾತ್ಮನ ವಾಙ್ಮಯವಾದ ಶರೀರದಂತೆ ಲೋಕದಲ್ಲಿ ಬೆಳಗುತ್ತಿರುವುದು. ಶ್ರವಣಪಠನಾದಿಗಳಿಂದ ಸಮಸ್ತ ವಿಧದಲ್ಲಿಯೂ ಇದು ಪಾಪವಿನಾಶಕವಾಗಿರುವುದು. ಅದರಲ್ಲಿಯೂ ಸಪ್ತಾಹ ಶ್ರವಣವೆಂಬುದು ಎಲ್ಲಕ್ಕಿಂತಲೂ ಉತ್ತಮವಾದ ಧರ್ಮವು. ಕಲಿಕಾಲದಲ್ಲಿ ಬೇರೆ ಧರ್ಮಗಳೆಲ್ಲಕ್ಕೂ ಪ್ರತಿನಿಧಿಯಾಗಿಯೇ ಈ ಧರ್ಮವೊಂದು ಏರ್ಪಟ್ಟಿರುವುದು. ದುಃಖದಾರಿದ್ರ್ಯಾದಿ ಕಷ್ಟಗಳನ್ನು ನೀಗಿಸುವುದಕ್ಕೂ, ಪಾಪನಿವಾರಣೆಗೂ, ಕಾಮ ಕ್ರೋಧಾದಿಗಳನ್ನು ಜಯಿಸುವುದಕ್ಕೂ ಈ ಕಲಿಕಾಲದಲ್ಲಿ ಇದೊಂದೇ ಸಾಧನವು. ಈ ಭೂಲೋಕದಲ್ಲಿ ಕಲಿಯೆಂಬ ವೈಷ್ಣವಮಾಯೆಯನ್ನು ತಪ್ಪಿಸಿಕೊಳ್ಳಬೇಕೆಂದರೆ ದೇವತೆಗಳಿಗೂ ಸಾಧ್ಯವಲ್ಲ. ಇನ್ನು ಮನುಷ್ಯರ ಪಾಡೇನು? ಇದರ ಪರಿಹಾರಕ್ಕಾಗಿಯೇ ಸಪ್ತಾಹಶ್ರವಣವೆಂಬ ವಿಧಿಯು ಏರ್ಪಟ್ಟಿರುವುದು'' ಎಂದನು.

ಹೀಗೆ ಸನಕಾದಿಮುನಿಗಳು ನಾರದನಿಗೆ ಭಾಗವತಮಹಿಮೆಯನ್ನು ತಿಳಿಸುತ್ತಿದ್ದು ದಾಗಲೇ ಆ ಸಭಾಮಧ್ಯದಲ್ಲಿ ಎಲ್ಲರಿಗೂ ಆಶ್ಚರ್ಯವುಂಟಾಗುವಂತೆ ಒಂದು ವೈಚಿತ್ರ್ಯವು ನಡೆಯಿತು. ಭಕ್ತಿಯು ಕೇವಲತರುಣವಯಸ್ಕಳು, ತನ್ನ ಇಬ್ಬರು ಮಕ್ಕಳನ್ನೂ ಕರೆದುಕೊಂಡು ಪರಮಸಂತೋಷಭರಿತಳಾಗಿ, ಗೋವಿಂದನಾಮೋಚ್ಚಾರಣವನ್ನು ಮಾಡುತ್ತ ಸಭಾಮಧ್ಯದಲ್ಲಿ ಬಂದು ನಿಂತಳು. ಎಲ್ಲರೂ ಆ ಮೂವರ ರೂಪಯೌವನಾದಿಗಳನ್ನು ನೋಡಿ ಆಶ್ಚರ್ಯಭರಿತರಾದರು. ಅಷ್ಟೊಂದು ಜೀರ್ಣದಶೆಯಲ್ಲಿದ್ದ ಭಕ್ತಿಜ್ಞಾನವೈರಾಗ್ಯಗಳಿಗೆ ಹೀಗೆ ಯೌವನೋದಯವುಂಟಾಗುವುದಕ್ಕೆ ಕಾರಣವೇನೆಂದು ಮನಸ್ಸಿನಲ್ಲಿ ಚಿಂತಿಸುತ್ತಿದ್ದರು. ಆಗ ಋಷಿಕುಮಾರರು '' ಭಾಗವತಕಥಾಮಹಿಮೆಯೇ ಇದಕ್ಕೆ ಕಾರಣ'' ವೆಂದು ಹೇಳಿ, ಅವರೆಲ್ಲರಿಗೂ ಸಂದೇಹನಿವೃತ್ತಿಯನ್ನುಂಟುಮಾಡಿದರು. ಆ ಮೇಲೆ ಭಕ್ತಿಯು ಋಷಿಕುಮಾರರಿಗೆ ನಮಸ್ಕರಿಸಿ '' ಎಲೈ ಮಹಾತ್ಮರೆ! ಕಲಿದೋಷದಿಂದ ಜೀರ್ಣಳಾದ ನಾನು ನಿಮ್ಮ ಅನುಗ್ರಹಬಲದಿಂದ ತಿರುಗಿ ಈ ವಿಧವಾದ ದೇಹಪುಷ್ಟಿಯನ್ನು ಹೊಂದಿದೆನು. ಇನ್ನು ಮುಂದೆ ನನಗೆ ಸುಖವಾದ ನಿವಾಸಸ್ಥಾನವಾವುದು? ಈ ಕಲಿಕಾಲದಲ್ಲಿ ನನ್ನನ್ನು ಪುರಸ್ಕರಿಸುವವರಾರು?'' ಎಂದಳು. ಅದಕ್ಕಾ ಋಷಿಕುಮಾರರು '' ಎಲೆ ದೇವಿ! ನೀನು ಯಾವಾಗಲೂ ವಿಷ್ಣುಭಕ್ತರ ಮನಸ್ಸಿನಲ್ಲಿ ಸುಖವಾಗಿರಬಹುದು. ಅಲ್ಲಿ ನಿನ್ನನ್ನು ಕಲಿದೋಷಗಳು ಕಣ್ಣೆತ್ತಿಯೂ ನೋಡಲಾರವು.'' ಎಂದರು. '' ಅದುಮೊದಲು ಈ ಕಲಿಕಾಲದಲ್ಲಿ ಭಕ್ತಿಗೆ ವಿಷ್ಣುಭಕ್ತರ ಮನಸ್ಸೇ

ನಿರಪಾಯವಾದ ಸ್ಥಾನವು." ಎಂದು ಹೇಳಿ ಸನಕಾದಿಗಳು ತಿರುಗಿ ನಾರದನನ್ನು ಕುರಿತು, "ಎಲೈ ನಾರದಮುನೀಂದ್ರನೆ! ಇದೇ ಭಾಗವತದ ಮಹಿಮೆಯು. ಈ ಭಾಗವತವೆಂಬುದು ಸಾಕ್ಷಾತ್ಪರಬ್ರಹ್ಮಸ್ವರೂಪವಾದುದು. ಇದನ್ನು ಪಠನ ಮಾಡಿದವರೂ, ಕೇಳಿದವರೂ ಸಾಕ್ಷಾತ್ ಶ್ರೀಕೃಷ್ಣನ ಸಾಮ್ಯವನ್ನೇ ಹೊಂದುವರು. ಲೋಕದಲ್ಲಿ ಇದಕ್ಕೆ ಸಮಾನವಾದ ಧರ್ಮವು ಬೇರೊಂದೂ ಇಲ್ಲವು. ಎಲೈ ಮಹರ್ಷಿಯೆ! ಈ ಸಪ್ತಾಹಶ್ರವಣದಿಂದ ಎಂತಹ ಮಹಾಪಾತಕಗಳಾದರೂ ನಿವಾರಣಹೊಂದುವುವು. ಬ್ರಹ್ಮಸ್ವಾಪಹಾರವ್ಯಭಿಚಾರಗಳೇ ಮೊದಲಾದ ಪಾಪಕಾರ್ಯಗಳಿಂದುಂಟಾದ ಬ್ರಹ್ಮರಾಕ್ಷಸ ಪಿಶಾಚಾದಿ ಜನ್ಮಗಳೂ ಕೂಡ ಇದರಿಂದ ವಿಮೋಚನೆಹೊಂದುವುವು. ಈ ವಿಷಯದಲ್ಲಿ ನಿನಗೊಂದು ಇತಿಹಾಸವನ್ನು ಹೇಳುವೆನು ಕೇಳು.

---

## ದುಂಧುಕಾರಿವೃತ್ತಾಂತವು.

ಪೂರ್ವದಲ್ಲಿ ತುಂಗಭದ್ರಾತೀರದಲ್ಲಿ ಉತ್ತಮವಾದ ಒಂದು ಪಟ್ಟಣವಿದ್ದಿತು. ಅಲ್ಲಿನ ನಿವಾಸಿಗಳೆಲ್ಲರೂ ವರ್ಣಾಶ್ರಮಧರ್ಮನಿರತರಾಗಿದ್ದರು. ಅದರಲ್ಲಿ ಆತ್ಮದೇವನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ನಾಲ್ಕುವೇದಗಳನ್ನೂ ತಿಳಿದವನು. ಶ್ರೌತ ಸ್ಮಾರ್ತ ಕರ್ಮಗಳಲ್ಲಿ ನಿರತನಾದವನು. ಎರಡನೆಯ ಸೂರ್ಯನಂತೆ ತೇಜಸ್ವಿಯು. ಆತನು ಭಿಕ್ಷಾವೃತ್ತಿಯಿಂದಲೇ ಬಹುಧನವನ್ನು ಸಂಪಾದಿಸುತ್ತಿದ್ದನು. ಅವನ ಪತ್ನಿಗೆ ದುಂಧುಲಿಯೆಂದು ಹೆಸರು. ಆಕೆಯು ಬಹುರೂಪವತಿ! ಸತ್ಕುಲದಲ್ಲಿ ಹುಟ್ಟಿದವಳು. ಆದರೆ ತಾನು ಹಿಡಿದ ಹಟವನ್ನುಮಾತ್ರ ಎಂದಿಗೂ ಬಿಡದೆ, ತನ್ನಮಾತನ್ನೇ ಸಾಧಿಸುವ ಸ್ವಭಾವವುಳ್ಳವಳು. ಊರುಮಾತುಗಳನ್ನಾಡುವುದರಲ್ಲಿ ವಿಶೇಷವಾಗಿ ಕಾಲವನ್ನು ಕಳೆಯುತ್ತ 'ಬಹಳಬಾಯಾಳಿ'ಯೆನಿಸಿ ಕೊಂಡಿದ್ದಳು. ಅವಳ ಮನಸ್ಸಿನಲ್ಲಿ ದಯೆಯೆಂಬುದು ಸ್ವಲ್ಪಮಾತ್ರವೂ ಇರಲಿಲ್ಲ. ಮಾತಿಗೆ ಮೊದಲೇ ಕಲಹವನ್ನು ತೆಗೆಯುವಳು. ಗೃಹಕೃತ್ಯವನ್ನು ಬಹಳ ಒಪ್ಪದಿಂದ ನಡೆಸುತ್ತ, ಬಹಳ ಜಿಪುಣತನದಿಂದಲೇ ಕಾಲವನ್ನು ಕಳೆಯುತ್ತಿದ್ದಳು. ಹೀಗೆ ಆ ದಂಪತಿಗಳಿಬ್ಬರೂ ಪರಸ್ಪರ ಪ್ರೀತಿಯಿಂದಿದ್ದರೂ, ಅವರಲ್ಲಿದ್ದ ಹಣವಾಗಲೀ, ಅವರಲ್ಲಿದ್ದ ಭೋಗಸಾಮಗ್ರಿಗಳಾಗಲೀ, ಯಾವುದೂ ಅವರ ಸುಖಕ್ಕೆ ಒದಗಲಿಲ್ಲ. ಅಷ್ಟು ಹಣವಿದ್ದರೂ ಕಷ್ಟದಿಂದಲೇ ಕಾಲವನ್ನು ಕಳೆಯುತ್ತಿದ್ದರು.

ಬಹುಕಾಲದವರೆಗೆ ಅವರಿಗೆ ಸಂತಾನವೂ ಉಂಟಾಗಲಿಲ್ಲ. ಆ ಸಂತಾನಪ್ರಾಪ್ತಿಗಾಗಿ ಅವರಿಗೆ ಕೊನೆಕೊನೆಗೆ ಧರ್ಮಕಾರ್ಯಗಳನ್ನು ನಡೆಸಬೇಕೆಂಬ ಬುದ್ಧಿ ಹುಟ್ಟಿತು. ಬಡಬಗ್ಗರಿಗೂ, ಬ್ರಾಹ್ಮಣರಿಗೂ ಗೋದಾನಗಳನ್ನೂ, ಭೂದಾನಗಳನ್ನೂ, ಸುವರ್ಣದಾನಗಳನ್ನೂ ಮಾಡುತ್ತ ಬಂದರು. ಈ ನೆವದಿಂದ ಅವರಲ್ಲಿದ್ದ ಹಣದಲ್ಲಿ ಅರ್ಧ ಭಾಗವು ಕಳೆದುಹೋಯಿತು. ಇಷ್ಟಾದರೂ ಆ ದಂಪತಿಗಳಿಗೆ ಒಂದು ಗಂಡುಕೂಸಾಗಲಿ, ಹೆಣ್ಣುಕೂಸಾಗಲಿ ಯಾವುದೂ ಹುಟ್ಟಲಿಲ್ಲ. ಇದರಿಂದ ಆ ಬ್ರಾಹ್ಮಣನಿಗೆ ಮೇಲೆಮೇಲೆ ಚಿಂತೆಯು ಹೆಚ್ಚಿತು. ಹೀಗೆ ಚಿಂತಾಕುಲನಾದ ಬ್ರಾಹ್ಮಣನು, ಜಿಹಾಸೆಯಿಂದ ದೇಶಭ್ರಷ್ಟನಾಗಿ, ಅರಣ್ಯಕ್ಕೆ ಹೋಗಿ, ಅಲ್ಲಲ್ಲಿ ಸುತ್ತುತ್ತಾ ಬಹಳ ದಾಹದಿಂದ ಪೀಡಿತನಾಗಿ ಒಂದು ಕೆರೆಯ ಬಳಿಗೆ ಬಂದನು. ಅಲ್ಲಿ ನೀರನ್ನು ಕುಡಿದು ಸಂತಾನಚಿಂತೆಯಿಂದಲೇ ಕೊರಗುತ್ತ ಕುಳಿತನು. ಇಷ್ಟರಲ್ಲಿ ಆ ಕಡೆಗೆ ಒಬ್ಬ ಸನ್ಯಾಸಿಯು ಬಂದು ಸೇರಿದನು. ಆ ಸನ್ಯಾಸಿಯನ್ನು ಕಂಡೊಡನೆ ಈ ಬ್ರಾಹ್ಮಣನು ಅವನ ಬಳಿಗೆ ಹೋಗಿ, ಅವನ ಪಾದಗಳನ್ನು ಹಿಡಿದು ನಮಸ್ಕರಿಸಿ, ದುಃಖದಿಂದ ನಿಟ್ಟುಸಿರನ್ನು ಬಿಡುತ್ತ ಅವನ ಮುಂದೆ ನಿಂತನು. ಆಗ ಆ ಯತಿಯು ಬ್ರಾಹ್ಮಣನನ್ನು ಕುರಿತು ದುಃಖಕಾರಣವನ್ನು ವಿಚಾರಿಸಲು ಆ ಬ್ರಾಹ್ಮಣನು "ಎಲೈ ಯತೀಶ್ವರನೆ! ನಾನೇನು ಹೇಳಲಿ? ಇದು ನನ್ನ ಪಾಪಶೇಷವು. ಸಂತಾನವಿಲ್ಲವೆಂಬ ದುಃಖಕ್ಕಾಗಿ ನಾನು ಪ್ರಾಣತ್ಯಾಗವನ್ನು ಮಾಡಬೇಕೆಂದು ನಿಶ್ಚಯಿಸಿ ಇಲ್ಲಿಗೆ ಹೊರಟುಬಂದೆನು. ಸಂತಾನವಿಲ್ಲದ ಮನುಷ್ಯನು ಬದುಕಿದರೇನು? ಸತ್ತರೇನು? ಮಕ್ಕಳಿಲ್ಲದ ಮನೆಯೂ, ಸಂತತಿಯಿಲ್ಲದ ಕುಲವೂ ಕೇವಲಶೂನ್ಯಪ್ರಾಯವಲ್ಲದೆ ಬೇರೆಯಲ್ಲ. ಎಲೈ ಮಹಾತ್ಮನೆ! ಪಾಪಿಯಾದ ನಾನು ಮನೆಗೆ ತಂದು ಸಾಕಿದ ಹಸುವೂ ಬಂಜೆಯಾಯಿತು. ನಟ್ಟಗಿಡವೂ ಫಲಿಸದೆಹೋಯಿತು. ನಾನು ಮನೆಯಲ್ಲಿ ತಂದಿಟ್ಟ ಹಣ್ಣುಕಾಯಿಗಳೂ ಆಗಲೇ ಒಣಗಿಹೋಗುವುವು. ಸಂತಾನವಿಲ್ಲದ ನಾನು ಎಷ್ಟೋ ಪ್ರೀತಿಯಿಂದಕೊಟ್ಟ ಹವ್ಯಕವ್ಯಗಳನ್ನು ಕೂಡ ದೇವತೆಗಳಾಗಲಿ, ಬ್ರಾಹ್ಮಣರಾಗಲಿ ಆದರದಿಂದ ಗ್ರಹಿಸಲಾರರು. ಇಂತಹ ನಾನು ಲೋಕದಲ್ಲಿ ಬದುಕಿ ಫಲವೇನು" ಎಂದು ಗಟ್ಟಿಯಾಗಿ ಅಳುವುದಕ್ಕೆ ತೊಡಗಿದನು. ಇದನ್ನು ನೋಡಿ ಯತಿಗೆ ಈ ಬ್ರಾಹ್ಮಣನಲ್ಲಿ ಕರುಣೆ ಹುಟ್ಟಿತು. ತನ್ನ ಧ್ಯಾನದೃಷ್ಟಿಯಿಂದ ಆ ಬ್ರಾಹ್ಮಣನ ಅದೃಷ್ಟವು ಬೇಗರಬಹುದೆಂಬುದನ್ನು ಕಂಡುಕೊಂಡು, ಅವನನ್ನು ಕುರಿತು 'ಬ್ರಾಹ್ಮಣಾ! ಇನ್ನು ಮೇಲೆ ನೀನು ಈ ಸಂತಾನಚಿಂತೆಯೆಂಬ ಅಜ್ಞಾನವನ್ನು ತೊರೆದು ಬಿಡು! ಅವರವರ ಕರ್ಮಗತಿಯನ್ನು ಮೀರಿ ಹೋಗುವುದು ಯಾರಿಗೂ ಸಾಧ್ಯವಲ್ಲ ಕು ಸ:

ಸಾರವಾಸನೆಯನ್ನು ಬಿಟ್ಟು ಮನಸ್ಸಿನಲ್ಲಿ ವಿವೇಕವನ್ನು ತಂದುಕೊಳ್ಳುವವ ನಾಗು. ನಿನ್ನ ಹಣೆಯ ಬರಹವೇನೆಂಬುದನ್ನು ನಾನು ಈಗಲೇ ಓದಿ ತಿಳಿದುಕೊಂಡೆನು! ಇನ್ನೇಳುಜನ್ಮಗಳವರೆಗೂ ನಿನಗೆ ಸಂತಾನವು ಲಭಿಸದು. ಇದಕ್ಕಾಗಿ ನೀನು ಚಿಂತಿಸಬೇಡ! ಈ ಸಂತಾನದಿಂದ ಮನುಷ್ಯನಿಗೆ ಕಷ್ಟವೇ ಹೊರತು ಸುಖವಿಲ್ಲವು. ಪೂರ್ವದಲ್ಲಿ ಸಗರಚಕ್ರವರ್ತಿಯು ಅರುವತ್ತುಸಾವಿರ ಮಂದಿ ಮಕ್ಕಳನ್ನು ಪಡೆದು ಯಾವ ಸುಖವನ್ನು ಹೊಂದಿದನು? ಎಲೆ ಬ್ರಾಹ್ಮಣನೆ! ಈ ಕುಟುಂಬ ದಾಸೆಯನ್ನು ಬಿಟ್ಟುಬಿಡು! ಸನ್ಯಾಸದಲ್ಲಿ ಸರ್ವವಿಧದಲ್ಲಿಯೂ ಸುಖವುಂಟು" ಎಂದನು ಅದಕ್ಕಾ ಬ್ರಾಹ್ಮಣನು "ಎಲೈ ಯತೀಶ್ವರನೆ! ಈಗ ನನಗೆ ಈ ನಿನ್ನ ವಿವೇಕಬೋಧನೆಯೊಂದೂ ಮನಸ್ಸಿಗೆ ಹಿಡಿಯುವು. ನಿನ್ನ ತಪೋಬಲದಿಂದ ನನಗೆ ಸಂತಾನವನ್ನು ಕೊಡುವುದಾದರೆ ಕೊಡು, ಇಲ್ಲವಾದರೆ ನಿನ್ನ ಮುಂದೆಯೇ ನಾನು ಪ್ರಾಣವನ್ನು ಬಿಡುವೆನು. ಸಂತಾನಸುಖವನ್ನು ತೊರೆದು, ಕೇವಲಶುಷ್ಕವಾದ ಸನ್ಯಾಸವನ್ನು ಪರಿಗ್ರಹಿಸುವುದರಿಂದ ಫಲವೇನು? ಪುತ್ರಪೌತ್ರರೊಡಗೂಡಿ ಸಂಸಾರಸುಖವನ್ನು ಅನುಭವಿಸುವ ಗೃಹಸ್ಥಾಶ್ರಮವೇ ಸರ್ವೋತ್ತಮವಲ್ಲದೆ ಬೇರೆಯಲ್ಲ" ಎಂದನು. ಹೀಗೆ ಆ ಬ್ರಾಹ್ಮಣನು ಹಟವಾದದಿಂದ ಹೇಳುವ ಮಾತನ್ನು ಕೇಳಿ ಆಗ ಆ ಸನ್ಯಾಸಿಯು "ಬ್ರಾಹ್ಮಣಾ! ನೋಡ! ಈ ಹಟದಿಂದ ನೀನು ಬಹಳ ಕಷ್ಟಕ್ಕೆ ಗುರಿಯಾಗುವೆಯಲ್ಲದೆ ಬೇರೆಯಲ್ಲ. ನೀನು ನಿನ್ನ ಕರ್ಮಬಲವನ್ನು ಮೀರಿ ಸಂತಾನವನ್ನು ಪಡೆದರೂ, ಅದರಿಂದ ನೀನು ಬಹಳ ಅನರ್ಥಗಳಿಗೆ ಗುರಿಯಾಗುವೆಯೇ ಹೊರತು ಲೇಶಮಾತ್ರವೂ ಸುಖಪಡೆಯದು. ಇನ್ನು ನಿನ್ನ ಹಣೆಯ ಬರಹವಿದ್ದಂತಾಗಲಿ" ಎಂದು ಹೇಳಿ, ಅವನ ಕೈಗೆ ಒಂದು ಫಲವನ್ನು ಮಂತ್ರಿಸಿ ಕೊಟ್ಟು, "ಎಲೋ! ಈ ಫಲವನ್ನು ನಿನ್ನ ಪತ್ನಿಗೆ ಕೊಟ್ಟು ಇದನ್ನು ಭಕ್ಷಿಸುವಂತೆ ಹೇಳು! ನೀವಿಬ್ಬರೂ ಒಂದು ವರುಷದವರೆಗೆ ಬಹಳ ನಿಯಮದಿಂದಿರಬೇಕು. ದರಿಂದಾಚೆಗೆ ಉತ್ತಮನಾದ ಪುತ್ರನೊಬ್ಬನು ಹುಟ್ಟುವನು" ಎಂದು ಹೇಳಿ ತನ್ನ ಮಾರ್ಗವನ್ನು ಹಿಡಿದು ಹೊರಟುಹೋದನು. ಬ್ರಾಹ್ಮಣನೂ ಇತ್ತಲಾಗಿ ತನ್ನ ಮನೆಗೆ ಬಂದು ಹಣ್ಣನ್ನು ತನ್ನ ಪತ್ನಿಯಾದ ದುಂಧುಲಿಯ ಕೈಗೆ ಕೊಟ್ಟು, ಬಳಿಕ ವೈರಾಗ್ಯಾತುರದಿಂದ ತಾನು ಹೊರಕ್ಕೆ ಹೋದನು.

ದುಂಧುಲಿಯು ಕೇವಲವಕ್ರಬುದ್ಧಿಯುಳ್ಳವಳಾದುದರಿಂದ, ಆ ಹಣ್ಣನ್ನು ಕೈಗೆ ತೆಗೆದುಕೊಂಡ ಕೂಡಲೆ, ಅವಳಿಗೆ ಮನಸ್ಸಿನಲ್ಲಿ ವಿಚಿತ್ರವಾದ ಒಂದು ಚಿಂತೆಯು ಹುಟ್ಟಿತು. ಆ ಹಣ್ಣನ್ನು ಕೈಯಲ್ಲಿಟ್ಟುಕೊಂಡು ತನ್ನ ಸಖಿಯ ಮುಂದೆ ಕುಳಿತು ಅಳುವುದಕ್ಕಾರಂಭಿಸಿದಳು. "ಅಯ್ಯೋ! ಇದೇನು? ಈ

ಹಣ್ಣನ್ನು ತಿಂದರೆ ನನ್ನ ಗತಿಯೇನು ? ಛಿ ! ನಾನೆಂದಿಗೂ ಇದನ್ನು ತಿನ್ನುವವಳಲ್ಲ. ಇದನ್ನು ತಿಂದೊಡನೆ ಗರ್ಭವು ಬೆಳೆಯುವುದರಲ್ಲಿ ಸಂದೇಹವಿಲ್ಲ. ಗರ್ಭವು ಬೆಳೆಯುತ್ತ ಬಂದಹಾಗೆಲ್ಲಾ ಹೊಟ್ಟೆಯು ಉಬ್ಬಿಕೊಳ್ಳುವುದು. ಸರಿಯಾಗಿ ಅನ್ನವೂ ಸೇರುವುದಿಲ್ಲ. ಮೈಯಲ್ಲಿ ಶಕ್ತಿಯೂ ತಗ್ಗುವುದು. ಆ ಸ್ಥಿತಿಯಲ್ಲಿ ಮನೆಯ ಕೆಲಸಗಳು ಹೇಗೆ ನಡೆಯಬೇಕು ? ಒಂದುವೇಳೆ ಕಳ್ಳಕಾಕರಾಗಲಿ, ಕೊಳ್ಳೆಹೊಡೆಯುವವರಾಗಲಿ, ಈ ಗ್ರಾಮಕ್ಕೆ ನುಗ್ಗಿಬಿಟ್ಟರೆ ನಾನು ಹೊರಲಾರದ ಆ ಹೊಟ್ಟೆಯನ್ನು ಹೊತ್ತುಕೊಂಡು, ಹಣಕಾಸುಗಳನ್ನೂ ಸಾಗಿಸಿಕೊಂಡು ಓಡುವುದು ಹೇಗೆ ? ಒಂದುವೇಳೆ ಗರ್ಭವು ಬೆಳೆದು ಹೊಟ್ಟೆಯಲ್ಲಿಯೇ ಸಿಕ್ಕಿಬಿಟ್ಟರೆ, ಅದನ್ನು ಹೊರಕ್ಕೆ ತೆಗೆಯುವುದು ಹೇಗೆ ? ಒಂದುವೇಳೆ ಶಿಶುವು ಗರ್ಭಕೋಶದಲ್ಲಿ ಅಡ್ಡಲಾಗಿ ನಿಂತುಹೋದರೆ ಆಗ ನನಗೆ ಮರಣವಲ್ಲದೆ ಬೇರೆ ಗತಿಯೇನು ? ಅಥವಾ ಕ್ರಮಪ್ರಸವವಾದರೂ, ಇಷ್ಟು ಸುಕುಮಾರವಾದ ಮೈಯುಳ್ಳ ನಾನು ಆ ಪ್ರಸವ ವೇದನೆಯನ್ನು ಹೇಗೆ ಸಹಿಸಲಿ ! ಗರ್ಭಶ್ರಮದಿಂದ ಮನೆಯ ಕೆಲಸಗಳಲ್ಲಿ ನಾನು ಎಚ್ಚರತಪ್ಪಿ ಇರುವುದನ್ನು ನೋಡಿದ ಮಾತ್ರದಲ್ಲಿಯೇ, ನನ್ನ ನಾದಿನಿಯು ಮನೆಯ ಸರ್ವಸ್ವವನ್ನೂ ಸಾಗಿಸಿಬಿಡುವಳು. ಅಷ್ಟು ದೂರವೇಕೆ? ಈ ಹಣ್ಣನ್ನು ತಿಂದಮೇಲೆ ಆ ಸನ್ಯಾಸಿಯು ಹೇಳಿದಂತೆ ಅಷ್ಟು ನಿಯಮಗಳನ್ನನುಸರಿಸುವಷ್ಟಕ್ಕಾದರೂ ನನ್ನಿಂದ ಹೇಗೆ ಸಾಧ್ಯವು ? ಇಷ್ಟು ಶ್ರಮಪಟ್ಟು ಒಂದು ಮಗುವನ್ನು ಹಡೆದರೂ ಅದನ್ನು ಪೋಷಿಸುವುದಕ್ಕಾಗಿ ಎಷ್ಟೋ ಕಷ್ಟಪಡಬೇಕಾಗುವುದು. ಇದೆಲ್ಲವನ್ನೂ ಯೋಚಿಸಿದರೆ, ಹೆಂಗಸಾಗಿ ಹುಟ್ಟಿದವಳು ಬಂಜೆಯಾಗಿರುವುದೇ ಮೇಲೆಂದು ತೋರುವುದು ! ಅಥವಾ ವಿಧವೆಯಾಗಿದ್ದರೂ ಉತ್ತಮವೇ !" ಎಂದು ತನ್ನ ಮನಸ್ಸಿನಲ್ಲಿಯೇ ಕುತರ್ಕಗಳನ್ನು ಮಾಡಿಕೊಂಡು ಆ ಹಣ್ಣನ್ನು ಭಕ್ಷಿಸದೆ ಹಾಗೆಯೇ ಇಟ್ಟುಬಿಟ್ಟಳು ! ಗಂಡನು ಮನೆಗೆ ಬಂದು ಕೇಳಿದಾಗ ತಾನು ಆ ಹಣ್ಣನ್ನು ಭಕ್ಷಿಸಿದುದಾಗಿಯೂ ಹೇಳಿಬಿಟ್ಟಳು.

ಅದರ ಮೇಲೆ ಇವಳಿಗೆ ಆ ಸುಳ್ಳನ್ನು ಮುಚ್ಚಿಕೊಳ್ಳುವುದಕ್ಕೆ ಉಪಾಯವೇನೆಂಬ ಚಿಂತೆಯು ಹುಟ್ಟಿತು. ಒಮ್ಮೆ ಇವಳ ತಂಗಿಯು ಅಕಸ್ಮಾತ್ತಾಗಿ ಮನೆಗೆ ಬಂದಾಗ ಅವಳೊಡನೆ ಈ ರಹಸ್ಯಗಳೆಲ್ಲವನ್ನೂ ಹೇಳಿಕೊಂಡು "ಅಯ್ಯಮ್ಮಾ ! ತಂಗಿ ನಾನೇನು ಮಾಡಲಿ ? ನನ್ನ ಪತಿಯು ಸನ್ಯಾಸಿಯಿಂದ ನನಗೆ ತಂದುಕೊಟ್ಟ ಹಣ್ಣನ್ನು ನಾನು ಭಕ್ಷಿಸಿಬಿಟ್ಟಿರುವುದಾಗಿ ಸುಳ್ಳಾಡಿರುವೆನು. ನಾನು ಗರ್ಭಿಣಿಯಾಗದಿದ್ದರೆ ನನ್ನ ವಂಚನೆಯು ಹೊರಗೆಬೀಳುವುದು ಮುಂದೇನು ಮಾಡಬೇಕೆಂದು ತೋರಲಿಲ್ಲ. ಇದಕ್ಕಾಗಿ ಅಹೋರಾತ್ರವೂ ಕೊರಗಿ ಸಾಯುತ್ತಿರುವೆನು. ಇದಕ್ಕೇ

ನಾದರೂ ಉಪಾಯವನ್ನು ಹೇಳಬಲ್ಲೆಯಾ ?" ಎಂದಳು. ಅದಕ್ಕಾ ತಂಗಿಯು "ಅಕ್ಕಾ ! ಚಿಂತಿಸಬೇಡ ! ಇದೋ ನಾನು ಗರ್ಭಿಣಿಯಾಗಿರುವೆನು. ಪ್ರಸವವಾದ ಮೇಲೆ ಈ ಮಗುವನ್ನೇ ಕೊಡುವೆನು! ಅದುವರೆಗೆ ನೀನೂ ಗರ್ಭಿಣಿಯಂತೆನಟಿಸುತ್ತ ಹೊರಗೆಬಾರದೆ ಸುಖವಾಗಿ ಮನೆಯಲ್ಲಿರುವುದು. ಆದರೆ ನನ್ನ ಗಂಡನು ಇದಕ್ಕೊಪ್ಪುವನೋ ಇಲ್ಲವೋ ಎಂಬ ಸಂದೇಹವು ನಿನಗಿರಬಹುದು ! ನೀನು ಸ್ವಲ್ಪ ಹಣವನ್ನು ಕೊಡುವುದಾದರೆ ಅವನನ್ನು ಒಪ್ಪಿಸಿಬಿಡಬಹುದು. ನನ್ನ ಗರ್ಭವೇನಾಯಿತೆಂದು ಜನರು ಕೇಳುವ ಪಕ್ಷದಲ್ಲಿ ಗರ್ಭವು ಚೆನ್ನಾಗಿ ಬೆಳೆಯುವುದಕ್ಕೆ ಮೊದಲು ಆರುತಿಂಗಳಲ್ಲಿಯೇ ಪ್ರಸವವಾದುದರಿಂದ ಹುಟ್ಟಿದಾಗಲೇ ಆ ಶಿಶುವು ಸತ್ತುಹೋಯಿತೆಂದು ನಾನು ಪ್ರವಾದವನ್ನು ಹುಟ್ಟಿಸುವೆನು. ಪ್ರತಿದಿನವೂ ನಿನ್ನ ಮನೆಗೆ ಬಂದು ಆ ಮಗುವನ್ನು ಪೋಷಿಸುತ್ತಿರುವೆನು. ಈಗ ನೀನು ಬಚ್ಚಿಟ್ಟಿರುವ ಹಣ್ಣನ್ನು ನಿನ್ನ ಮನೆಯ ಹಸುವಿಗೆ ತಿನ್ನಿಸಿಬಿಡು. ಗರ್ಭವುಂಟಾಗುವುದೋ ಇಲ್ಲವೋ ಎಂದು ಪರೀಕ್ಷಿಸುವೆವು" ಎಂದಳು. ಸ್ತ್ರೀಯರ ಕ್ರೂರಸ್ವಭಾವಕ್ಕೆ ತಕ್ಕಂತೆ ಆ ಕಾರ್ಯಗಳೆಲ್ಲವೂ ಹಾಗೆಯೇ ನಡೆಸಲ್ಪಟ್ಟುವು. ಕೆಲವು ಕಾಲದಮೇಲೆ ಧುಂಧುಲಿಯ ತಂಗಿಯು ಒಂದು ಗಂಡು ಮಗುವನ್ನು ಪ್ರಸವಿಸಿದಳು. ದ್ರವ್ಯಾಶೆಯಿಂದ ಆಕೆಯ ಪತಿಯೇ ಆ ಮಗುವನ್ನು ತಂದು ರಹಸ್ಯವಾಗಿ ಧುಂಧುಲಿಗೆ ಒಪ್ಪಿಸಿಬಿಟ್ಟನು. ಆ ಧುಂಧುಲಿಯೂ ಕೂಡ ತನಗೆ ಗಂಡುಮಗುವು ಹುಟ್ಟಿದುದಾಗಿ ಪತಿಗೆ ತಿಳಿಸಿದಳು. ಆತ್ಮದೇವನೆಂಬ ಬ್ರಾಹ್ಮಣನು ಪರಮಸಂತೋಷದಿಂದ ಬ್ರಾಹ್ಮಣರಿಗೆ ಬೇಕಾದ ದಾನಗಳನ್ನು ಕೊಟ್ಟು, ಜಾತಕರ್ಮಾದಿಸಂಸ್ಕಾರಗಳನ್ನು ನಡೆಸಿದನು. ಗೀತವಾದ್ಯಾದಿಮಂಗಳಧ್ವನಿಗಳೊಡನೆ ಬಹಳ ವೈಭವದಿಂದ ಶುಭಕಾರ್ಯಗಳೆಲ್ಲವೂ ನಡೆಸಲ್ಪಟ್ಟುವು. ಆಮೇಲೆ ಧುಂಧುಲಿಯು ತನ್ನ ಪತಿಯನ್ನು ಕುರಿತು "ನಾಥಾ ! ನನ್ನ ಎದೆಯಲ್ಲಿ ಸ್ತನ್ಯವಿಲ್ಲ. ನಾನು ಈ ಮಗುವನ್ನು ಹೇಗೆ ಪೋಷಿಸಲಿ ? ಈಗಲೇ ನನ್ನ ತಂಗಿಯು ಪ್ರಸವಿಸಿ ಆ ಶಿಶುವು ಮೃತವಾಯಿತು ! ಅವಳಲ್ಲಿ ಬೇಕಾದಷ್ಟು ಸ್ತನ್ಯವಿರುವುದು. ಅವಳನ್ನು ಕರೆತಂದು ನಮ್ಮ ಮನೆಯಲ್ಲಿಟ್ಟುಕೊಂಡರೆ ಅವಳೇ ನಮ್ಮ ಮಗುವನ್ನು ಪೋಷಿಸುವಳು" ಎಂದಳು. ಆ ಬ್ರಾಹ್ಮಣನು ಅದನ್ನು ನಂಬಿ ಅದರಂತೆಯೇ ಒಪ್ಪಿಕೊಂಡನು. ಆಮೇಲೆ ಆ ಶಿಶುವಿಗೆ ಧುಂಧುಕಾರಿಯೆಂದು ನಾಮಕರಣವನ್ನೂ ಮಾಡಿದನು. ಇದು ಹೀಗಿರಲು, ಮೂರುತಿಂಗಳಾದಮೇಲೆ ಅತ್ತಲಾಗಿ ಆ ಹಣ್ಣನ್ನು ತಿನ್ನಿಸಿದ ಹಸುವಿನ ಗರ್ಭದಿಂದ ಅತ್ಯದ್ಭುತವಾದ ದಿವ್ಯರೂಪವುಳ್ಳ ಒಂದು ಗಂಡು ಮಗುವು ಜನಿಸಿತು. ಆ ಬ್ರಾಹ್ಮಣನಿಗೆ ಕೊನೆಮೊದಲಿಲ್ಲದ ಅಪಾರವೂ ಸಂತೋಷವೂ ಹುಟ್ಟಿತು. ಆ ಶಿಶುವಿಗೂ ತಾನೇ ಜಾತಕರ್ಮಾದಿಸಂಸ್ಕಾರಗಳೆಲ್ಲವನ್ನೂ

ನಡೆಸಿದನು. ಈ ಆಶ್ಚರ್ಯವನ್ನು ನೋಡುವುದಕ್ಕಾಗಿ ಊರಿನ ಜನರೆಲ್ಲರೂ ಬಂದು ನೆರೆದರು. ಅವರೆಲ್ಲರೂ ಆ ಮಗುವನ್ನು ನೋಡಿ ಒಬ್ಬರಿಗೊಬ್ಬರು. "ಅಹಾ! ಈ ಬ್ರಾಹ್ಮಣನ ಭಾಗ್ಯವೇ ಭಾಗ್ಯವು! ಬಹುಕಾಲದಿಂದ ಸಂತಾನವಿಲ್ಲದೆ ಕೊರಗುತ್ತಿದ್ದ ಈ ಬ್ರಾಹ್ಮಣನಿಗೆ, ಹೆಂಡತಿಯಲ್ಲಿಯೂ ಪುತ್ರಸಂತಾನವಾದುದಲ್ಲದೆ ಮನೆಯಲ್ಲಿ ಸಾಕಿದ ಧೇನುವೂ ಕೂಡ ದಿವ್ಯರೂಪವುಳ್ಳ ಪುತ್ರನನ್ನು ಪ್ರಸವಿಸಿಕೊಟ್ಟಿತಲ್ಲವೆ!" ಎಂದು ಒಬ್ಬೊಬ್ಬರೂ ಕೊಂಡಾಡುತಿದ್ದರು. ಇಷ್ಟಾದರೂ ಅದರ ರಹಸ್ಯವುಮಾತ್ರ ಯಾರಿಗೂ ತಿಳಿಯಲಿಲ್ಲ. ಆಮೇಲೆ ಬ್ರಾಹ್ಮಣನು ಆ ಶಿಶುವಿಗೆ ಗೋವಿನ ಕಿವಿಯಂತೆ ಕಿವಿಗಳಿರುವುದನ್ನು ನೋಡಿ, ಅದಕ್ಕೆ ಗೋಕರ್ಣನೆಂದೇ ಹೆಸರಿಟ್ಟನು. ಆ ಶಿಶುಗಳಿಬ್ಬರೂ ಕ್ರಮಕ್ರಮವಾಗಿ ವೃದ್ಧಿಹೊಂದುತ್ತ ಬಂದರು. ಸಮವಯಸ್ಸುಳ್ಳವರಾಗಿ ಇಬ್ಬರೂ ಯೌವನವನ್ನು ಹೊಂದಿದರು. ಆದರೆ ಗೋಕರ್ಣನೆಂಬವನು ಕ್ರಮಕ್ರಮವಾಗಿ ಪಂಡಿತನೂ ಜ್ಞಾನಿಯೂ ಆಗುತ್ತ ಬಂದನು. ದುಂಧುಕಾರಿಯಾದರೋ ಕೇವಲ ಮೂಢನಾಗಿದ್ದು ಸ್ನಾನಶೌಚಾಚಾರಗಳೆಲ್ಲವನ್ನೂ ಬಿಟ್ಟನು. ಕಾಮಕ್ರೋಧಾದಿದುರ್ಗುಣಗಳೆಲ್ಲವೂ ಇವನಲ್ಲಿ ನೆಲೆಗೊಂಡುವು. ಕದಿಯುವುದು, ಇತರರ ಮನೆಗೆ ಬೆಂಕಿಯಿಡುವುದು, ಆರಿಯದ ಮಕ್ಕಳನ್ನು ಬಾವಿಗೆ ತಳ್ಳುವುದು, ಕಂಡಕಂಡವರೆಲ್ಲರನ್ನೂ ಹಿಂಸಿಸುವುದು, ಅಂಗಹೀನರಾದ ಬಡಬಗ್ಗರನ್ನು ಹಾಸ್ಯಮಾಡುವುದು, ಇವೇಮೊದಲಾದ ಕ್ರೂರಕೃತ್ಯಗಳೆಲ್ಲವನ್ನೂ ನಡೆಸುತ್ತ ಬಂದನು. ಜಾರಕೃತ್ಯದಲ್ಲಿ ಬಿದ್ದು ಪಿತ್ರಾರ್ಜಿತವಾದ ಧನವೆಲ್ಲವನ್ನೂ ನಾಶಮಾಡಿಬಿಟ್ಟನು. ದುರ್ಬಲರಾದ ತಂದೆತಾಯಿಗಳನ್ನು ಹೊಡೆದು ಬಡಿದು ಹಿಂಸಿಸಿ, ಮನೆಯಲ್ಲಿದ್ದ ಪಾತ್ರಪದಾರ್ಥಗಳೆಲ್ಲವನ್ನೂ ಮಾರುತ್ತಿದ್ದನು. ಕೊನೆಗೆ ಆತ್ಮದೇವನು ಈ ಹಿಂಸೆಯನ್ನು ತಡೆಯಲಾರದೆ ಬೀದಿಬೀದಿಯಲ್ಲಿ ಅಳುವುದಕ್ಕೆ ತೊಡಗಿದನು. "ಅಯ್ಯೋ! ಇಂತಹ ದುಷ್ಪುತ್ರನು ಹುಟ್ಟುವುದಕ್ಕಿಂತಲೂ, ನನ್ನ ಪತ್ನಿಯು ಮೊದಲಿನಂತೆ ಬಂಜೆಯಾಗಿದ್ದರೆ ಎಷ್ಟೋ ಮೇಲಾಗಿತ್ತು! ಅಹಾ! ನನಗಿನ್ನೇನು ಗತಿ! ನಾನೆಲ್ಲಿಗೆ ಹೋಗಲಿ? ನನ್ನ ದುಃಖವನ್ನು ನೀಗಿಸುವವರಾರು? ಈ ಕಷ್ಟದಲ್ಲಿ ಬದುಕಿರುವುದಕ್ಕಿಂತಲೂ ಪ್ರಾಣವನ್ನಾದರೂ ಬಿಡಬಹುದು!" ಎಂದು ಕೂಗಿಕೊಳ್ಳುತ್ತಿದ್ದನು. ಆ ಸಮಯದಲ್ಲಿ ಮಹಾಜ್ಞಾನಿಯಾದ ಗೋಕರ್ಣನೆಂಬ ಪುತ್ರನು ತಂದೆಯ ಬಳಿಗೆ ಬಂದು ಅವನನ್ನು ಸಮಾಧಾನಪಡಿಸುತ್ತ ವಿರಕ್ತಿಮಾರ್ಗಗಳನ್ನು ಉಪದೇಶಿಸಿ, "ಜನಕಾ! ಈ ಸಂಸಾರವೆಂಬುದು ಕೇವಲ ದುಃಖರೂಪವಾಗಿ ಸುಖಭ್ರಾಂತಿಯನ್ನುಂಟುಮಾಡುವುದೇ ಹೊರತು ಇದರಲ್ಲಿ ಏನೇನೂ ಸಾರವಿಲ್ಲವು. ನಿಸ್ಸಾರವಾದ ಈ ಸಂಸಾರದಲ್ಲಿ ಮಕ್ಕಳಾರಿಗೆ? ಧನವಾರಿಗೆ? ಒಬ್ಬರಿಗೊಬ್ಬ

ರಿಗೆ ಏನೇನೂ ಸಂಬಂಧವಿಲ್ಲ. ದೀಪದಲ್ಲಿ ಸ್ನೇಹ (ಎಣ್ಣೆ) ಇರುವವರೆಗೂ ಅದು ಜ್ವಲಿಸುವಂತೆ ಮನುಷ್ಯನುಕೂಡ ಇತರವಸ್ತುಗಳಲ್ಲಿ ಸ್ನೇಹವನ್ನು ತೋರಿಸಿದಷ್ಟೂ ದುಃಖಾಗ್ನಿಯಿಂದ ಬೇಯಬೇಕಾಗಿರುವುದು. ಅಯ್ಯಾ! ಮುಖ್ಯವಾಗಿ ಒಂದು ವಿಷಯವನ್ನು ಹೇಳುವೆನು ಕೇಳು? ಮಹೇಂದ್ರನಿಗಾಗಲಿ, ಚಕ್ರವರ್ತಿಗಾಗಲಿ ದುಃಖವೆಂಬುದು ತಪ್ಪದು ಏಕಾಂತವಾಸಿಯಾದ ವಿರಕ್ತನೊಬ್ಬನೇ ಲೋಕದಲ್ಲಿ ಪರಮಸುಖಿಯು! ಇನ್ನುಮೇಲಾದರೂ ಈ ಅಜ್ಞಾನವನ್ನು ಬಿಟ್ಟುಬಿಡು! ಈ ಮೋಹಸಂಬಂಧದಿಂದ ನರಕಪ್ರಾಪ್ತಿಯಲ್ಲದೆ ಬೇರೆಯಲ್ಲ! ಈ ದೇಹವೆಂಬುದು ಹೇಗಿದ್ದರೂ ಯಾವಾಗಲೋ ಒಮ್ಮೆ ಬಿದ್ದುಹೋಗುವುದು. ಆದುದರಿಂದ ನೀನು ಇವೆಲ್ಲವನ್ನೂ ಬಿಟ್ಟು ವೈರಾಗ್ಯವನ್ನು ವಹಿಸಿ ಕಾಡಿನಲ್ಲಿರು" ಎಂದನು. ಈ ಮಾತನ್ನು ಕೇಳಿದೊಡನೆ ಬ್ರಾಹ್ಮಣನಿಗೆ ತನ್ನಮಗನಲ್ಲಿ ಒಂದುವಿಧವಾದ ಗುರುಭಾವವು ಹುಟ್ಟಿತು. ಆದರಿಂದ ಆ ಬ್ರಾಹ್ಮಣನು ತಿರುಗಿ ಗೋಕರ್ಣನನ್ನು ದೈನ್ಯದಿಂದ "ವತ್ಸ ಗೋಕರ್ಣಾ! ನಾನು ಕಾಡಿನಲ್ಲಿ ಹೋಗಿ ನಡೆಸಬೇಕಾದ ಕಾರ್ಯವೇನು? ಅದನ್ನಾದರೂ ವಿಸ್ತರಿಸಿ ನನಗೆ ತಿಳಿಸು! ಅಜ್ಞಾನಾಂಧಕಾರದಲ್ಲಿ ಮುಳುಗಿ ಹೋಗಿರುವ ನನ್ನನ್ನುದ್ಧರಿಸುವ ಭಾರವು ನಿನ್ನದು" ಎಂದು ಪ್ರಾರ್ಥಿಸುವನು. ಅದಕ್ಕೆ ಗೋಕರ್ಣನು "ಜನಕಾ ಕೇಳು? ರಕ್ತಮಾಂಸಗಳಿಂದ ಕೇವಲಹೇಯವಾದ ಈ ದೇಹದಲ್ಲಿ ಅಭಿಮಾನವನ್ನು ಬಿಟ್ಟುಬಿಡು? ಹೆಂಡತಿ ಮಕ್ಕಳಲ್ಲಿಯೂ ಮಮತೆಯನ್ನು ಬಿಡು? ಈಜಗತ್ತೆಲ್ಲವೂ ಕೇವಲನಶ್ವರವೆಂದು ದೃಢವಾಗಿ ನಂಬು! ಆದುದರಿಂದ ಭಕ್ತಿನಿಷ್ಠನಾಗಿ ವೈರಾಗ್ಯವನ್ನನುಸರಿಸು! ಸದ್ಧರ್ಮವನ್ನಾಶ್ರಯಿಸಿ, ಲೌಕಿಕ ಧರ್ಮಗಳನ್ನು ತ್ಯಜಿಸು! ಸಾಧುಗಳನ್ನುಸೇವಿಸು! ಭೋಗದಾಸೆಯನ್ನುಬಿಡು! ಬೇರೊಬ್ಬರ ದೋಷಗುಣಗಳನ್ನು ವಿಚಾರಿಸುವುದರಲ್ಲಿ ದೃಷ್ಟಿಯಿಡದಿರು! ಯಾವಾಗಲೂ ಭಾಗವತಕಥಾಮೃತವನ್ನು ಪಾನಮಾಡುವುದರಲ್ಲಿ ನಿರತನಾಗು!" ಎಂದನು. ಆತ್ಮದೇವನೆಂಬ ಬ್ರಾಹ್ಮಣನು ಅರವತ್ತುವರ್ಷದ ಮುದುಕನಾಗಿದ್ದರೂ, ತನ್ನ ಮಗನ ಬಾಯಿಂದ ಆ ಮಾತನ್ನು ಕೇಳಿದೊಡನೆ ಮನಸ್ಸನ್ನು ದೃಢಪಡಿಸಿಕೊಂಡು ವಿರಕ್ತನಾಗಿ ಕಾಡಿಗೆ ಹೊರಟನು. ಅಲ್ಲಿ ಅನವರತವೂ ಹರಿಸೇವಾಪರನಾಗಿ, ಶ್ರೀಭಾಗವತದಶಮಸ್ಕಂಧವನ್ನು ಅನುದಿನವೂ ಪಠಿಸುತ್ತಿದ್ದು, ಶ್ರೀಕೃಷ್ಣಸಾಯುಜ್ಯರೂಪವಾದ ಮೋಕ್ಷವನ್ನು ಹೊಂದಿದನು.

ಇತ್ತಲಾಗಿ ತಂದೆಯು ವನಕ್ಕೆ ಹೊರಟಕೂಡಲೆ, ದುಂಧುಕಾರಿಯು ತನ್ನ ತಾಯಿಯನ್ನು ಹೊಡೆದು ಬಡಿದು ಹಿಂಸಿಸುತ್ತ "ಹಣವನ್ನೆಲ್ಲಿ ಬಚ್ಚಿಟ್ಟಿರುವೆ ಹೇಳು! ಇಲ್ಲದಿದ್ದರೆ ಕೊಲ್ಲುವೆನು." ಎಂದು ಹೆದರಿಸುತ್ತಿದ್ದನು ಈ ಭಯಕ್ಕಾಗಿ

ಧುಂಧುಲಿಯು ಆದೇರಾತ್ರಿಯಲ್ಲಿ ಯಾರೂ ಕಾಣದಹಾಗೆ ಬಾವಿಯಲ್ಲಿ ಬಿದ್ದು ಸತ್ತಳು. ಅತ್ತಲಾಗಿ ಗೋಕರ್ಣನೆಂಬವನು ಯೋಗನಿಷ್ಠನಾಗಿ ತೀರ್ಥಯಾತ್ರೆಗೆ ಹೊರಟು, ಪುಣ್ಯಕ್ಷೇತ್ರಗಳನ್ನು ಸುತ್ತುತ್ತಿದ್ದನು. ಅವನಿಗೆ ಸುಖದುಃಖಗಳಾಗಲಿ, ಶತ್ರುಮಿತ್ರರಾಗಲಿ, ಬಂಧುಬಳಗವಾಗಲಿ, ಈ ಯಾವ ವಿಧವಾದ ಸಂಬಂಧವೂ ಇಲ್ಲದುದರಿಂದ ಇವನು ನಿಶ್ಚಿಂತನಾಗಿದ್ದನು. ಧುಂಧುಕಾರಿಯಾದರೋ ಮನೆಯಲ್ಲಿಯೇ ಕುಳಿತು ಐದುಮಂದಿ ಸೂಳೆಯರನ್ನು ಕಟ್ಟಿಕೊಂಡು, ಅವರನ್ನು ಪೋಷಿಸುವುದಕ್ಕಾಗಿ ಕೈಲಾಗದೆ ಕಳವಳಿಸುತ್ತ, ಅಕೃತ್ಯಗಳನ್ನು ನಡೆಸುವುದಕ್ಕೆ ತೊಡಗಿದನು. ಈ ವೇಶ್ಯೆಯರಾದರೋ ಇವನನ್ನು ಮೇಲೆಮೇಲೆ ಒಡವೆಗಳಿಗಾಗಿ ನಿರ್ಬಂಧಿಸುತ್ತಿದ್ದರು. ಕೇವಲಕಾಮಾಂಧನಾದ ಆ ಧುಂಧುಕಾರಿಯು ಅವರ ಪ್ರೀತಿಗೆ ಮರುಳಾಗಿ, ಜೀವದ ಮೇಲೆಯೂ ಆಸೆಯಿಡದೆ, ಮನೆಯಿಂದ ಹೊರಟು, ದಾರಿಗಳ್ಳನಾಗಿ ಪ್ರಯಾಣಿಕರ ತಲೆಯನ್ನೊಡೆದು, ಸಿಕ್ಕಿದ ಹಣವನ್ನೂ, ಒಡವೆಗಳನ್ನೂ, ವಸ್ತ್ರಗಳನ್ನೂ ಕದ್ದು ತಂದುಕೊಡುತ್ತಿದ್ದನು. ಹೀಗೆ ಕಳ್ಳತನದಿಂದಲೇ ಬಹಳದ್ರವ್ಯವನ್ನು ತಂದು ಸೇರಿಸಿಬಿಟ್ಟನು. ಇಷ್ಟೊಂದು ದ್ರವ್ಯರಾಶಿಯನ್ನು ನೋಡಿದ ಮೇಲೆ ಆ ವೇಶ್ಯೆಯರಿಗೆ ಒಂದು ದುರಾಲೋಚನೆಯು ಹುಟ್ಟಿತು. ಅವರೆಲ್ಲರೂ ಒಂದಾನೊಂದು ರಾತ್ರಿ ಏಕಾಂತದಲ್ಲಿ ಒಂದಾಗಿ ಕಲೆತು, ತಮ್ಮೊಳಗೆ ಒಬ್ಬರಿಗೊಬ್ಬರು ಮಂತ್ರಾಲೋಚನೆಯನ್ನು ನಡೆಸಿಕೊಂಡರು. "ಆಹಾ! ಈ ನೀಚನೇನೋ ಪ್ರತಿದಿನವೂ ಚೌರ್ಯದಿಂದಲೇ ಹಣವನ್ನು ತಂದು ಸೇರಿಸುತ್ತಿರುವನು! ಹೀಗಿರುವಾಗ ಇವನು ಎಂದಾದರೂ ಒಮ್ಮೆ ರಾಜಭಟರ ಕೈಗೆ ಸಿಕ್ಕಿ ಬೀಳುವುದರಲ್ಲಿ ಸಂದೇಹವಿಲ್ಲ. ರಾಜಭಟರ ಕೈಗೆ ಸಿಕ್ಕಿದಮೇಲೆ ಇವನಿಗೆ ಮರಣದಂಡನೆಯಲ್ಲದೆ ಬೇರೆಯಿಲ್ಲ. ಇವನು ಇದುವರೆಗೆ ಸೇರಿಸಿರುವ ದ್ರವ್ಯವನ್ನೂ ಅವರೇ ಕೈಸೇರಿಸಿಕೊಂಡು ಬಿಡುವುದರಲ್ಲಿ ಸಂದೇಹವಿಲ್ಲ. ಆಗ ನಮಗೆ ಈ ಹಣವು ಕೈತಪ್ಪಿ ಹೋಗುವುದು. ನಿರ್ಗತಿಕರಾಗಿ ಅಲೆಯಬೇಕಾಗುವುದು. ಆದುದರಿಂದ ಆ ಅನರ್ಥಗಳೆಲ್ಲವೂ ಉಂಟಾಗುವುದಕ್ಕೆ ಮೊದಲು, ನಾವೇ ಅವನನ್ನೇಕೆ ಕೊಂದುಬಿಡಬಾರದು? ಏನಾದರೂ ಉಪಾಯದಿಂದ ನಾವೆಲ್ಲರೂಸೇರಿ ಇವನನ್ನು ಕೊಂದುಬಿಟ್ಟರೆ, ನಮ್ಮಲ್ಲಿರುವ ಹಣವನ್ನು ಸಂಗ್ರಹಿಸಿಕೊಂಡು ನಾವು ಬೇರೆಲ್ಲಿಯಾದರೂ ಕಣ್ಮರೆಯಾಗಿ ಹೊರಟುಹೋಗಬಹುದು. ಆಗ ಹಣವಾದರೂ ನಮಗೆ ದಕ್ಕಬಹುದಲ್ಲವೆ?" ಎಂದು ಒಬ್ಬರಿಗೊಬ್ಬರು ಮಾತಾಡಿಕೊಂಡು ಅದರಂತೆಯೇ ನಿಶ್ಚಯಿಸಿಬಿಟ್ಟರು. ರಾತ್ರಿಯಲ್ಲಿ ಧುಂಧುಕಾರಿಯು ಮನೆಗೆ ಬಂದ ಮೇಲೆ ಅವನಿಗೆ ಬೇಕಾದ ಉಪಚಾರಗಳೆಲ್ಲವನ್ನೂ ನಡೆಸಿ ಸುಖವಾಗಿ ಮಲಗ

ಸಿಟ್ಟರು. ಅವನು ಗಾಢನಿದ್ರೆಯಲ್ಲಿರುವ ಸಮಯದಲ್ಲಿ ಆ ಐದು ಮಂದಿ ವೇಶ್ಯೆಯರೂ ಏಕಕಾಲದಲ್ಲಿ ಅವನಮೇಲೆ ಬಿದ್ದು, ಅವನ ಬಾಯಿಗೆ ಬಟ್ಟೆಯನ್ನು ತುರುಕಿ, ಕೈಕಾಲುಗಳನ್ನು ಹಗ್ಗಗಳಿಂದ ಬಿಗಿದು, ಅವನ ಕೊರಲಿಗೆ ನೇಣನ್ನು ಬಿಗಿ ಎಳೆಯುವುದಕ್ಕೆ ತೊಡಗಿದರು. ಇಷ್ಟಾದರೂ ಅವನು ಸಾಯಲಿಲ್ಲ. ಈ ಪ್ರಯತ್ನವು ವಿಫಲವಾದುದರಿಂದ ಅವರೆಲ್ಲರಿಗೂ ಭಯವು ಹುಟ್ಟಿತು. ಹೇಗಾದರೂ ಅವನನ್ನು ಕೊಂದುಬಿಡಬೇಕೆಂದೇ ನಿಶ್ಚಯಿಸಿ, ಅವರಲ್ಲಿ ಕೆಲವರು ಉರಿಯುವ ಕೊಳ್ಳಿಯನ್ನು ತಂದು ಅವನ ಬಾಯಿಗೆ ತುರುಕಿದರು. ಕೊನೆಗೆ ಅವನು ಆ ಹಿಂಸೆಯನ್ನು ತಡೆಯಲಾರದೆ ಸತ್ತನು. ಸಾಹಸಿಕೆಯರಾದ ಆ ಐದುಮಂದಿ ಸೂಳೆಯರೂ ಸೇರಿ, ಆ ನಿವೇಶನದಲ್ಲಿಯೇ ಒಂದು ಹಳ್ಳವನ್ನು ತೋಡಿ, ಆ ರಾತ್ರಿಯೇ ಅದರಲ್ಲಿ ಆ ಹೆಣವನ್ನು ಹೂಳಿಬಿಟ್ಟರು. ಇಷ್ಟಾದರೂ ಈ ರಹಸ್ಯವು ಆ ಊರಿನಲ್ಲಿ ಬೇರೆ ಯಾರಿಗೂ ತಿಳಿಯಲಿಲ್ಲ. ಯಾರಾದರೂ ಬಂದು ಧುಂಧುಕಾರಿಯೆಲ್ಲಿರುವನೆಂದು ಕೇಳಿದಾಗ, ಆ ವೇಶ್ಯೆಯರು ದ್ರವ್ಯಾರ್ಜನೆಗಾಗಿ ಎಲ್ಲಿಯೋ ದೇಶಾಂತರಕ್ಕೆ ಹೋಗಿರುವನೆಂದೂ, ಕೆಲವುದಿನಗಳಲ್ಲಿಯೇ ಹಿಂತಿರುಗಿ ಬರುವನೆಂದೂ ತಿಳಿಸುತ್ತ ಬಂದರು. ನಾರದಾ! ವೇಶ್ಯಾಸ್ತ್ರೀಯರ ಕ್ರೂರಸ್ವಭಾವವನ್ನೂ, ಅವರ ಸಾಹಸವನ್ನೂ ನೋಡಿದೆಯಾ? ಮುಖ್ಯವಾಗಿ ಲೋಕದಲ್ಲಿ ಮನುಷ್ಯನು ಬುದ್ಧಿಶಾಲಿಯಾಗಿದ್ದರೆ ಸ್ತ್ರೀಯರನ್ನು ಮಾತ್ರ ಎಂದಿಗೂ ನಂಬಬಾರದು. ಅವರನ್ನು ನಂಬಿದವನು ಅಪಾರವಾದ ದುಃಖಕ್ಕೆ ಗುರಿಯಾಗದಿರಲಾರನು! ಸ್ತ್ರೀಯರು ಕಾಮುಕರನ್ನು ಕಂಡರೆ ಅವರನ್ನು ಮತ್ತಷ್ಟು ಮರುಳುಮಾಡುವುದಕ್ಕಾಗಿ ಮೇಲೆಮೇಲೆ ಪ್ರಿಯವಾಕ್ಯಗಳನ್ನು ನುಡಿಯುತ್ತ ಮಾತಿನಲ್ಲಿ ಅಮೃತವನ್ನೇ ಸುರಿಸುತ್ತಿರುವರು. ಅವರ ಹೃದಯವನ್ನು ಪರೀಕ್ಷಿಸಿದ ಪಕ್ಷದಲ್ಲಿ ಅದು ಅತಿತೀಕ್ಷ್ಣವಾದ ಕತ್ತಿಯ ಮೊನೆಯಲ್ಲದೆ ಬೇರೆಯಲ್ಲ! ಹೆಂಗಸರ ಪ್ರೇಮವೆಂಬುದು ಯಾರಲ್ಲಿಯೂ ನಿಜವಾದುದಲ್ಲ! ಈ ವಿಷಯವು ಹಾಗಿರಲಿ! ಮುಂದಿನ ವೃತ್ತಾಂತವನ್ನು ಹೇಳುವೆನು ಕೇಳು! ಆಮೇಲೆ ಆ ಐದುಮಂದಿವೇಶ್ಯೆಯರೂ ತಮ್ಮಲ್ಲಿದ್ದ ಹಣವನ್ನು ಹಂಚಿಕೊಂಡು, ಯಾರಿಗೂ ತಿಳಿಯದಂತೆ ದೇಶಭ್ರಷ್ಟರಾಗಿ ಹೊರಟು ಹೋದರು. ಇತ್ತಲಾಗಿ ಧುಂಧುಕಾರಿಗೆ ಅವನ ಕ್ರೂರಕೃತ್ಯಗಳಿಗೆ ಫಲರೂಪವಾಗಿ ಪಿಶಾಚಜನ್ಮವುಂಟಾಯಿತು. ಇವನು ಗಾಳಿಯಂತೆ ಅದೃಶ್ಯನಾಗಿ ಕಾಡುಕಾಡಾಗಿ ತಿರುಗುತ್ತ, ಮಳೆಗಾಳಿಗೆ ಸಿಕ್ಕಿ, ಬಿಸಿಲಿನಲ್ಲಿ ಬೆಂದು, ಹಸಿವುಬಾಯಾರಿಕೆಗಳಿಂದ ಬಹಳವಾಗಿ ಬಳಲಿ, ಅಹೋರಾತ್ರವೂ ಸಂಕಟದಿಂದ ಕೊರಗುತ್ತಿದ್ದನು. ಕಾಪಾಡುವವರು ಯಾರೂ ದಿಕ್ಕಿಲ್ಲದೆ, ಆಗಾಗ "ಹಾ ದೈವವೇ!" ಎಂದು ಕೂಗಿಕೂಗಿ

ಮೊರೆಯಿಡುತ್ತಿದ್ದನು. ಕೆಲವು ಕಾಲದಮೇಲೆ ಅತ್ತಲಾಗಿ ತೀರ್ಥಯಾತ್ರೆಯಲ್ಲಿದ್ದ ಗೋಕರ್ಣನಿಗೆ ಈ ಧುಂಧುಕಾರಿಯು ಮೃತನಾದನೆಂಬ ವೃತ್ತಾಂತವು ಕರ್ಣಾಕರ್ಣಿಕೆಯಾಗಿ ಕಿವಿಗೆ ಬಿದ್ದಿತು. ಬೇರೆ ಯಾರೂ ದಿಕ್ಕಿಲ್ಲದುದರಿಂದ ಅವನು ಅನಾಥಪ್ರೇತವಾಗಿ ಸತ್ತಿರುವನೆಂದೆಣಿಸಿ ಗೋಕರ್ಣನು, ಅವನಿಗೆ ತಾನೇ ತನ್ನ ಕೈಯಿಂದ ಗಯಾಶ್ರಾದ್ಧವನ್ನು ನಡೆಸಿದನು. ಇದಲ್ಲದೆ ತಾನು ಹೋದ ಪುಣ್ಯತೀರ್ಥಗಳೊಳಗೆಲ್ಲಾ ಅವನಿಗೆ ಶ್ರಾದ್ಧಕಾರ್ಯವನ್ನು ನಡೆಸುತ್ತ ಬಂದನು. ಹೀಗೆ ಗೋಕರ್ಣನು ತೀರ್ಥಯಾತ್ರೆಯನ್ನು ಮುಗಿಸಿಕೊಂಡು, ಕೊನೆಗೆ ತನ್ನ ಪಟ್ಟಣಕ್ಕೆ ಹಿಂತಿರುಗಿದನು. ಬೀದಿಯಲ್ಲಿ ಯಾರಕಣ್ಣಿಗೂ ಕಾಣಿಸದಂತೆ ರಾತ್ರಿಯಲ್ಲಿ ತನ್ನ ಗ್ರಾಮದೊಳಗೆ ಪ್ರವೇಶಿಸಿ, ಮೊದಲು ಧುಂಧುಕಾರಿಯು ವಾಸಮಾಡುತ್ತಿದ್ದ ಮನೆಗೆ ಬಂದು ಅಂಗಳದಲ್ಲಿ ಮಲಗಿಬಿಟ್ಟನು. ಹೀಗೆ ಮಲಗಿರುವಾಗ ಇವನಿಗೆ ಅರ್ಧರಾತ್ರಿಯಲ್ಲಿ ಮಹಾಭಯಂಕರವಾದ ಒಂದು ಪಿಶಾಚಸ್ವರೂಪವು ಕಣ್ಣಿಗೆ ಗೋಚರಿಸಿತು. ಆ ಭೂತವಾದರೋ ಇದ್ದಕ್ಕಿದ್ದಹಾಗೆಯೇ ಒಮ್ಮೆ ಟಗರಿನಂತೆಯೂ, ಒಮ್ಮೆ ಆನೆಯಂತೆಯೂ, ಮತ್ತೊಮ್ಮೆ ಎಮ್ಮೆಯಂತೆಯೂ ಕಾಣಿಸಿಕೊಳ್ಳುವುದು! ಇನ್ನೊಮ್ಮೆ ನೋಡಿದಾಗ ಇಂದ್ರಾಗ್ನಿದೇವತೆಗಳಂತೆ ತೋರುವುದು! ನೋಡುತ್ತಿರುವಾಗಲೇ ತಿರುಗಿ ಪುರುಷಸ್ವರೂಪದಿಂದ ನಿಲ್ಲುವುದು! ಈ ಭಯಂಕರಸ್ವರೂಪವನ್ನು ನೋಡಿಯೂ ಕೂಡ ಗೋಕರ್ಣನು ಧೈರ್ಯಗುಂದದೆ ಮನಸ್ಸಿನಲ್ಲಿ “ಅಹಾ! ಯಾವನೋ ತನ್ನ ಪಾಪಕರ್ಮದಿಂದ ಈ ದುರ್ಗತಿಯನ್ನು ಹೊಂದಿರುವನು. ಇರಲಿ! ವಿಚಾರಿಸಿ ನೋಡುವೆನು” ಎಂದು ನಿಶ್ಚಯಿಸಿ, ಆ ಭೂತವನ್ನು ನೋಡಿ “ಎಲೆ! ನೀನು ಯಾರು? ನಿನಗೆ ಇಂತಹ ಘೋರಸ್ವರೂಪವುಂಟಾಗುವುದಕ್ಕೆ ಕಾರಣವೇನು? ನೀನು ಪ್ರೇತವೆ! ಪಿಶಾಚವೆ? ಬ್ರಹ್ಮರಾಕ್ಷಸನೆ? ನಿಜವನ್ನು ಹೇಳು” ಎಂದನು. ಈ ಮಾತನ್ನು ಕೇಳಿದೊಡನೆ ಆ ವ್ಯಕ್ತಿಯು ಗಟ್ಟಿಯಾಗಿ ರೋದಿಸುವುದಕ್ಕೆ ತೊಡಗಿತು. ಬಾಯಿಂದ ಮಾತುಗಳನ್ನಾಡಲಾರದೆ ಕೆಲವು ಸನ್ನೆಗಳನ್ನು ಮಾಡಿತು. ಇದನ್ನು ನೋಡಿ ಗೋಕರ್ಣನು ಕೈಗೆ ಸ್ವಲ್ಪನೀರನ್ನು ತೆಗೆದುಕೊಂಡು, ಅದನ್ನು ಮಂತ್ರಿಸಿ ಆ ಭೂತದಮೇಲೆ ಪ್ರೋಕ್ಷಿಸಿದನು. ಇದರ ಪ್ರಭಾವದಿಂದ ಆ ಭೂತಕ್ಕೆ ಮಾತಾಡುವ ಶಕ್ತಿಯುಂಟಾಯಿತು. ಒಡನೆಯೇ ಆ ಭೂತವು ತನ್ನ ಪೂರ್ವವೃತ್ತಾಂತವನ್ನು ಹೇಳತೊಡಗಿತು. “ಗೋಕರ್ಣಾ! ನಾನು ನಿನ್ನಣ್ಣನಾದ ಧುಂಧುಕಾರಿಯು! ನನ್ನ ದುಷ್ಕರ್ಮದಿಂದಲೇ ನನಗೆ ಈ ದುರವಸ್ಥೆಯುಂಟಾಯಿತು. ನಾನು ನಡೆಸಿದ ಪಾಪಕೃತ್ಯಗಳನ್ನು ಅಷ್ಟಿಷ್ಟೆಂದು ಹೇಳಲಾರೆನು. ಜನರೆಲ್ಲರಿಗೂ ಕಂಟಕಪ್ರಾಯನಾಗಿದ್ದೆನು. ಕೊನೆಗೆ ನಾನು

ನಂಬಿದ್ದ ಸ್ತ್ರೀಯರಿಂದಲೇ ನನಗೆ ಈ ಮರಣವುಂಟಾಯಿತು. ಈ ಪ್ರೇತರೂಪದಿಂದ ಗಾಳಿಯನ್ನು ಕುಡಿದು ಜೀವಿಸುತ್ತಿರುವೆನು. ಎಲೈ ಕೃಪಾಸಮುದ್ರನೇ! ನೀನು ಈ ಸೆರೆಯಿಂದ ನನ್ನನ್ನು ಬಿಡಿಸಿ ಉದ್ಧರಿಸಬೇಕು" ಎಂದಿತು. ಇದನ್ನು ಕೇಳಿ ಗೋಕರ್ಣನು "ಆಹಾ! ಇದೇನಾಶ್ಚರ್ಯವು? ನಿನಗಾಗಿ ನಾನು ಶಾಸ್ತ್ರೋಕ್ತವಾಗಿ ಗಯಾಶ್ರಾದ್ಧವನ್ನು ನಡೆಸಿಬಂದೆನು. ಅದರಿಂದಲೂ ನಿನಗೆ ವಿಮೋಚನವಾಗಲಿಲ್ಲವೇ? ಗಯಾಶ್ರಾದ್ಧದಿಂದಲೇ ಮುಕ್ತಿಯಿಲ್ಲದಮೇಲೆ ನನಗೆ ಬೇರೆ ಯಾವ ಉಪಾಯವೂ ತೋರಲಿಲ್ಲವು. ಎಲೈ ಪ್ರೇತವೇ! ಮುಂದೆ ಇದಕ್ಕಾಗಿ ಮಾಡಬೇಕಾದ ಕಾರ್ಯವನ್ನು ನೀನೇ ತಿಳಿಸಬೇಕು" ಎಂದನು. ಅದಕ್ಕಾ ಪ್ರೇತವು "ಗೋಕರ್ಣಾ! ಇಂತಹ ಗಯಾಶ್ರಾದ್ಧವು ಒಂದು ಮಾತ್ರವಲ್ಲ. ಅಂತಹ ನೂರುಶ್ರಾದ್ಧಗಳನ್ನು ಮಾಡಿದರೂ ನನ್ನ ಶಾಪವು ವಿಮೋಚನಹೊಂದುವಹಾಗಿಲ್ಲ! ನನ್ನ ಜನ್ಮಾವಧಿ ನಾನು ಅಷ್ಟೊಂದು ಕ್ರೂರಕರ್ಮಗಳನ್ನು ನಡೆಸಿರುವೆನು! ಇದಕ್ಕಾಗಿ ನೀನೇ ಯಾವುದಾದರೂ ಬೇರೆ ಉಪಾಯವನ್ನು ಯೋಚಿಸಬೇಕು" ಎಂದಿತು ಈ ಮಾತನ್ನು ಕೇಳಿ ಗೋಕರ್ಣನು ವಿಸ್ಮಿತನಾಗಿ "ಎಲೆ ಭೂತವೆ! ಹಾಗಿದ್ದಮೇಲೆ ಆ ಕಾರ್ಯವು ಈಗ ನನ್ನಿಂದ ಸಾಧ್ಯವಲ್ಲ! ಆದರೂ ಚಿಂತೆಯಿಲ್ಲ! ನೀನು ಭಯಪಡಬೇಡ! ಇದುವರೆಗಿದ್ದಂತೆಯೇ ನೀನು ಇನ್ನೂ ಸ್ವಲ್ಪಕಾಲದವರೆಗೆ ಸಹಿಸಿಕೊಂಡಿರು! ನಿನ್ನ ಮುಕ್ತಿಗೆ ಸಾಧಕವಾದ ಮಾರ್ಗವನ್ನು ನಾನು ಬೇರೆ ಯಾರಿಂದಾದರೂ ವಿಚಾರಿಸಿ ಆದರಂತೆ ಪ್ರಯತ್ನಿಸುವೆನು. ಇನ್ನು ನಿನ್ನ ನಿಜಸ್ಥಾನಕ್ಕೆ ನೀನು ಹೋಗು!" ಎಂದನು ಈ ಮಾತನ್ನು ಕೇಳಿ ದುಂಧುಕಾರಿಯು ಕಣ್ಮರೆಯಾಗಿ ತನ್ನ ಸ್ಥಾನಕ್ಕೆ ಹೊರಟುಹೋದನು. ಇತ್ತಲಾಗಿ ಗೋಕರ್ಣನು ಹಾಸಿಗೆಯಲ್ಲಿ ಮಲಗಿದ್ದಂತೆಯೇ, ಮುಂದೆ ಮಾಡಬೇಕಾದ ಉಪಾಯವೇನೆಂದು ಆ ರಾತ್ರಿಯೆಲ್ಲವೂ ಚಿಂತಿಸುತ್ತಿದನು. ಯಾವುದೊಂದು ಮಾರ್ಗವೂ ಅವನ ಮನಸ್ಸಿಗೆ ತೋರಲಿಲ್ಲ! ಬೆಳಗಾದಮೇಲೆ ಆ ಗ್ರಾಮಸ್ಥರನೇಕರು ಗೋಕರ್ಣನ ಬಳಿಗೆ ಬಂದು ಪ್ರೀತಿಯಿಂದ ಅವನ ಯೋಗಕ್ಷೇಮಗಳನ್ನು ವಿಚಾರಿಸುತ್ತಿದ್ದರು. ಗೋಕರ್ಣನು ಅವರೆಲ್ಲರಿಗೂ ರಾತ್ರಿಯಲ್ಲಿ ನಡೆದ ವೃತ್ತಾಂತಗಳನ್ನು ತಿಳಿಸುತ್ತ, ಮುಂದೆ ದುಂಧುಕಾರಿಗೆ ಪಿಶಾಚಜನ್ಮವನ್ನು ಬಿಡಿಸುವುದಕ್ಕೆ ಯಾರಾದರೂ ತಕ್ಕ ಉಪಾಯವನ್ನು ಹೇಳಬೇಕೆಂದು ಕೇಳುತ್ತಿದ್ದನು. ಎಷ್ಟೋ ಮಂದಿ ವಿದ್ವಾಂಸರೂ, ಜ್ಞಾನಿಗಳೂ, ಯೋಗಿಗಳೂ, ಬ್ರಹ್ಮವಾದಿಗಳೂ ಈ ವಿಚಾರವನ್ನು ಕುರಿತು ಅನೇಕಶಾಸ್ತ್ರಗಳನ್ನು ಪರಿಶೀಲಿಸಿ ನೋಡುತ್ತಿದ್ದರು. ಯಾರಿಗೂ ಯಾವುದೊಂದು ಮಾರ್ಗವೂ ತೋರಲಿಲ್ಲ ಅವರಲ್ಲಿ ಕೆಲವರು ಈ ಪಿಶಾಚಜನ್ಮ

ವಿಮೋಚನಕ್ಕೆ ಸೂರ್ಯಾನುಗ್ರಹವನ್ನು ಸಂಪಾದಿಸಿ, ಆ ಸೂರ್ಯದೇವನ ಆಜ್ಞೆಯಂತೆ ನಡೆಸಬೇಕಲ್ಲದೆ ಬೇರೆಮಾರ್ಗವಿಲ್ಲವೆಂದು ನಿಶ್ಚಯಿಸಿ ತಿಳಿಸಿದರು. ಆಗ ಗೋಕರ್ಣನು ತನ್ನ ಯೋಗಬಲದಿಂದ ಸೂರ್ಯನ ಗತಿಯನ್ನು ತಡೆದು "ಓ ಸರ್ವಜಗತ್ಸಾಕ್ಷಿಯಾದ ಸೂರ್ಯದೇವನೆ! ನಿನಗೆ ನಮಸ್ಕಾರವು! ನೀನು ನನ್ನಲ್ಲಿ ಅನುಗ್ರಹವಿಟ್ಟು ಧುಂಧುಕಾರಿಗೆ ಮುಕ್ತಿಹೇತುವಾದ ಮಾರ್ಗವನ್ನು ತಿಳಿಸಬೇಕು" ಎಂದು ಬಾರಿಬಾರಿಗೂ ಪ್ರಾರ್ಥಿಸಿದನು. ಆಗ ಸೂರ್ಯನು, ದೂರದಿಂದಲೇ ಗೋಕರ್ಣನನ್ನು ನೋಡಿ "ಗೋಕರ್ಣಾ! ಸಪ್ತಾಹಶ್ರವಣವೆಂಬ ವಿಧಿಯಿಂದ ಶ್ರೀಭಾಗವತವನ್ನು ಕೇಳುವುದು ಹೊರತು ಈ ಪಿಶಾಚಜನ್ಮವಿಮೋಚನಕ್ಕೆ ಬೇರೆ ಮಾರ್ಗವಿಲ್ಲ" ಎಂದು ತಿಳಿಸಿದನು. ಅಲ್ಲಿದ್ದವರೆಲ್ಲರೂ ಧರ್ಮರೂಪವಾದ ಈ ಸೂರ್ಯನ ವಾಕ್ಯವನ್ನು ಕೇಳಿ ಗೋಕರ್ಣನನ್ನು ಕುರಿತು "ಗೋಕರ್ಣಾ. ಇದು ಬಹಳ ಸುಲಭವಾದ ಕಾರ್ಯವು. ಹೇಗಾದರೂ ಪ್ರಯತ್ನಿಸಿ ನೀನು ಈ ಕಾರ್ಯವನ್ನು ಸಾಧಿಸಬೇಕು" ಎಂದರು. ಗೋಕರ್ಣನೂ ಅದರಂತೆಯೇ ನಡೆಸುವುದಾಗಿ ನಿಶ್ಚಯಿಸಿಕೊಂಡು ಸಪ್ತಾಹಶ್ರವಣ ವಿಧಿಯಿಂದ ಶ್ರೀಭಾಗವತವನ್ನು ಪಠನಮಾಡುವುದಕ್ಕೆ ತೊಡಗಿದನು. ಈ ವೃತ್ತಾಂತವನ್ನು ಕೇಳಿದೊಡನೆ, ದೇಶದೇಶಗಳಿಂದಲೂ, ಗ್ರಾಮಗ್ರಾಮಗಳಿಂದಲೂ, ಅನೇಕಜನರು ಬಂದು ಸೇರಿದರು. ಕುಂಟರು ಕುರುಡರು, ಮುಂತಾದ ಅಂಗಹೀನರೆಲ್ಲರೂ ಬಂದು ತಮ್ಮತಮ್ಮ ಪೂರ್ವಾರ್ಜಿತಪಾಪವಿಮೋಚನೆಗಾಗಿ ಕೇಳುವುದಕ್ಕೆ ಕುಳಿತರು. ಬಹಳವಾದ ಜನಸಮುದಾಯವು ಸೇರಿತು. ಈ ಗೋಕರ್ಣನು ಶಾಸ್ತ್ರೋಕ್ತವಿಧಿಯಿಂದ ಭಾಗವತಕಥಾನುಸಂಧಾನ ಮಾಡುವುದಕ್ಕಾಗಿ ಶುದ್ಧವಾದ ಆಸನದಮೇಲೆ ಕುಳಿತನು. ಇವನು ಕಥಾರಂಭವನ್ನು ಮಾಡುವಷ್ಟರಲ್ಲಿಯೇ ಪ್ರೇತರೂಪಿಯಾದ ಆ ಧುಂಧುಕಾರಿಯೂ ಕೂಡ ಅಲ್ಲಲ್ಲಿ ಸುತ್ತಿಬಂದು ಅಕಸ್ಮಾತ್ತಾಗಿ ಇದೇಸ್ಥಳಕ್ಕೆ ಬಂದು ಸೇರಿದನು. ಅಲ್ಲಿ ಕಣ್ಮರೆಯಲ್ಲಿ ಕುಳಿತು ತಾನೂ ಆ ಕಥೆಯನ್ನು ಕೇಳುವುದಕ್ಕೆ ಅನುಕೂಲವಾದ ಸ್ಥಳವಾವುದೆಂದು ಸುತ್ತಲೂ ಹುಡುಕುತ್ತ ಬಂದು, ಒಂದು ಕಡೆಯಲ್ಲಿ ಒಂದು ದೊಡ್ಡ ಬಿದಿರುಮೆಳೆಯನ್ನು ಕಂಡನು. ಅದರ ನಡುವೆ ಏಳುಗಿಣ್ಣುಗಳಿಂದ ಕೂಡಿದ ಒಂದು ದೊಡ್ಡ ಬಿದಿರಿನ ಬುಡದಲ್ಲಿ ಒಂದಾನೊಂದು ರಂಧ್ರವು ಕಾಣಿಸಿತು. ಅದು ಬಹಳ ರಹಸ್ಯವಾದ ಸ್ಥಳವಾಗಿದ್ದುದರಿಂದ, ಈ ಪ್ರೇತವು ಸೂಕ್ಷ್ಮರೂಪವನ್ನು ಹೊಂದಿ, ಆ ರಂಧ್ರದಲ್ಲಿ ಪ್ರವೇಶಿಸಿ ಕಥಾಶ್ರವಣಕ್ಕಾಗಿ ಕುಳಿತಿತು. ಯಾವಾಗಲೂ ಸಂಚಾರಸ್ವಭಾವವುಳ್ಳ ಗಾಳಿಯ ಸ್ವರೂಪದಿಂದಿದ್ದ ಈ ಪ್ರೇತಕ್ಕೆ ನಿಶ್ಚಲವಾಗಿ ಕುಳಿತು ಕೇಳುವುದಕ್ಕೆ ಅದು ಅನುಕೂಲವಾದ ಸ್ಥಳವಾಯಿತು. ಇಷ್ಟರಲ್ಲಿ

ಇತ್ತಲಾಗಿ ಗೋಕರ್ಣನು ತಾನು ಕಥಾರಂಭವನ್ನು ಮಾಡುವುದಕ್ಕೆ ಮೊದಲು ವಿಷ್ಣುಭಕ್ತನಾಗಿಯೂ, ಶುದ್ಧನಾಗಿಯೂ ಇರುವ ಬ್ರಾಹ್ಮಣನೊಬ್ಬನನ್ನು ತನ್ನ ಮುಂದೆ ಮುಖ್ಯಶ್ರಾವಕನನ್ನಾಗಿಟ್ಟುಕೊಂಡು, ಶ್ರೀಭಾಗವತದ ಕಥೆಯನ್ನು ಪ್ರಥಮಸ್ಕಂಧದಿಂದಾರಂಭಿಸಿ ಹೇಳತೊಡಗಿದನು. ಹಗಲೆಲ್ಲವೂ ಕಥಾಶ್ರವಣವನ್ನು ಮಾಡಿ ಆ ದಿನದ ಕಥಾಭಾಗವನ್ನು ಮುಗಿಸುವಷ್ಟರಲ್ಲಿ, ಅಕಸ್ಮಾತ್ತಾಗಿ ಸಮೀಪದಲ್ಲಿದ್ದ ಆದೊಡ್ಡಬಿದಿರುಮೆಳೆಯಿಂದ ಮಹಾಧ್ವನಿಯೊಂದು ಹೊರಟಿತು! ಜನರೆಲ್ಲರೂ ಆಶ್ಚರ್ಯದಿಂದ ನೋಡುತ್ತಿದ್ದಹಾಗೆಯೇ ಆ ಮೆಳೆಯ ನಡುವೆ ಏಳುಗಿಣ್ಣುಗಳುಳ್ಳ ಒಂದು ಬಿದಿರಿನಲ್ಲಿ ಕೆಳಗಿನ ಗಿಣ್ಣು ತಟ್ಟನೆ ಸೀಳಿಹೋಯಿತು. ನಿಜಸ್ಥಿತಿಯೇನೆಂದು ಯಾರಿಗೂ ತಿಳಿಯಲಿಲ್ಲ. ಹಾಗೆಯೇ ಮರುದಿನವೂ ಗೋಕರ್ಣನು ಮುಂದಿನ ಕಥೆಯನ್ನಾರಂಭಿಸಿದನು. ಸಾಯಂಕಾಲದಲ್ಲಿ ಆ ದಿನದ ಕಥೆಯನ್ನು ಮುಗಿಸುತ್ತಿರುವಾಗಲೇ ಮತ್ತೊಂದು ಗಿಣ್ಣು ಛಿನ್ನವಾಯಿತು. ಮೂರನೆಯ ದಿನದಲ್ಲಿ ಹಾಗೆಯೇ ಮೂರನೆಯ ಗ್ರಂಥಿಯು ಭೇದಿಸಿತು. ಹೀಗೆ ಏಳು ದಿನಗಳೊಳಗಾಗಿ ಆ ಬಿದಿರಿನಲ್ಲಿದ್ದ ಏಳು ಗಿಣ್ಣುಗಳೂ ಒಂದೊಂದಾಗಿ ಒಡೆಯುತ್ತ ಬಂದುವು. ಈ ಏಳುದಿನಗಳೊಳಗಾಗಿ ಗೋಕರ್ಣನು ಶ್ರೀಭಾಗವತದ ಹನ್ನೆರಡುಸ್ಕಂಧಗಳನ್ನೂ ಮುಗಿಸಿದನು. ಈ ಕಥೆಯು ಮುಗಿಯುವಷ್ಟರಲ್ಲಿ ಆ ಬಿದಿರಿನಲ್ಲಿ ಗಾಳಿಯ ರೂಪದಿಂದ ಸೇರಿಕೊಂಡಿದ್ದ ದುಂಧುಕಾರಿಗೆ ಪಿಶಾಚಜನ್ಮವು ಬಿಟ್ಟುಹೋಗಿ, ಒಡನೆಯೇ ಅವನಿಗೆ ಒಂದು ದಿವ್ಯವಾದ ರೂಪವುಂಟಾಯಿತು. ಕೊರಳಿನಲ್ಲಿ ತುಲಸೀಮಾಲಿಕೆಯನ್ನೂ, ನಡುವಿನಲ್ಲಿ ಪೀತಾಂಬರವನ್ನೂ ಧರಿಸಿ, ಮೇಘದಂತೆ ಶ್ಯಾಮಲವಾದ ದೇಹಕಾಂತಿಯಿಂದಲೂ, ಕಿರೀಟಕುಂಡಲಾದಿಗಳಿಂದಲೂ ಅಲಂಕೃತವಾದ ಒಂದು ದಿವ್ಯಾಕೃತಿಯು ಆ ಬಿದಿರುಮೆಳೆಯಿಂದ ಹೊರಗೆ ಬಂದು, ಗೋಕರ್ಣನಿಗೆ, "ಎಲೈ ಮಹಾತ್ಮನೇ! ನಿನ್ನ ಕೃಪಾಬಲದಿಂದ ನನಗೆ ಪಿಶಾಚಜನ್ಮವು ನಿವೃತ್ತವಾಯಿತು! ಆಹಾ! ಲೋಕದಲ್ಲಿ ಭಾಗವತವೊಂದೇ ಪರಮಧನ್ಯವಾದುದು. ಸಮಸ್ತಪಾಪಗಳನ್ನೂ ನೀಗಿಸತಕ್ಕುದು. ಪಿಶಾಚಾದಿಕ್ರೂರಜನ್ಮಗಳನ್ನೂ ವಿಮೋಚನಮಾಡುವುದು. ಅದರಲ್ಲಿಯೂ ಸಪ್ತಾಹಶ್ರವಣವೆಂಬ ವಿಧಿಗೆ ಸಮಾನವಾದ ಧರ್ಮವು ಬೇರೊಂದಿಲ್ಲವು! ಇದೇ ಮುಕ್ತಿಗೆ ಸರ್ವೋತ್ತಮವಾದ ಸಾಧನವು. ಇದಕ್ಕೆ ಸಮಸ್ತಪಾಪಗಳೂ ನಡುಗುವುವು! ಎಂತಹ ಕ್ರೂರಪಾತಕವಾದರೂ ಅಗ್ನಿಯಲ್ಲಿ ಹಾಕಿದ ಸಮಿತ್ತುಗಳಂತೆ ಇದರಿಂದ ಕ್ಷಣಮಾತ್ರದಲ್ಲಿ ದಗ್ಧವಾಗುವುವು. ಈ ಕಾಲದಲ್ಲಿ, ಈ ಲೋಕದಲ್ಲಿ, ಒಂದಾವರ್ತಿಯಾದರೂ ಈ ಭಾಗವತಕಥೆಯನ್ನು ಕೇಳದ

ವರ ಜನ್ಮವೇ ನಿರರ್ಥಕವು. ಕೇವಲನಶ್ವರವಾದ ಈ ಮನುಷ್ಯದೇಹವು ಈ ಲೋಕದಲ್ಲಿರುವುದರೊಳಗಾಗಿ ಶುಕಶಾಸ್ತ್ರರೂಪವಾದ ಈ ಭಗವತ್ಕಥೆಯನ್ನು ಕೇಳದ ಮೇಲೆ ಆ ದೇಹವನ್ನು ಹೊತ್ತು ಫಲವೇನು ? ಈ ದೇಹವೆಂಬುದು ಮಲಮೂತ್ರಗಳೆಂಬ ದುರ್ಗಂಧವಸ್ತುಗಳನ್ನು ತುಂಬುವುದಕ್ಕಾಗಿ, ಎಲುಬುಗಳೆಂಬ ಸ್ತಂಭಗಳನ್ನು ನಿಲ್ಲಿಸಿ, ನರಗಳೆಂಬ ಹಗ್ಗಗಳಿಂದ ಬಿಗಿದು, ರಕ್ತಮಾಂಸಗಳಿಂದ ಮೆತ್ತನೆಯನ್ನು ಹಾಕಿ, ಚರ್ಮದಿಂದ ಮುಚ್ಚಿಮಾಡಿದ ಒಂದು ಸಣ್ಣಮನೆಯೇ ಹೊರತು ಬೇರೆಯಲ್ಲ ! ಜರಾರೋಗಗಳೇ ಮುಂತಾದ ಸಮಸ್ತದುಃಖಗಳಿಗೂ ಈಡಾಗಿ, ಎಷ್ಟೆಷ್ಟು ತುಂಬಿದರೂ ತುಂಬದೇ ಕ್ಷಣಕ್ಷಣಕ್ಕೂ ಕೊಳೆಯಿಂದ ಮೂತ್ರ ತುಂಬುತ್ತಿರುವ ಈ ಶರೀರವೆಂಬುದು, ಈಗಲೋ, ನಾಳೆಯೋ ಬಿದ್ದುಹೋಗತಕ್ಕುದಲ್ಲದೆ ಸ್ಥಿರವಲ್ಲ. ತತ್ವಜ್ಞಾನಿಗಳು ಈ ದೇಹವೆಂಬುದಕ್ಕೆ ಕ್ರಿಮಿಗಳೆಂದೂ, ಕಶ್ಮಲವೆಂದೂ, ನಿಸ್ಸಾರವಾದ ಬೂದಿಯೆಂದೂ ನಾಮಾಂತರವನ್ನಿಟ್ಟಿರುವರು. ಹಗಲಲ್ಲಿ ಚೆನ್ನಾಗಿಸಂಸ್ಕರಿಸಿ ಪಕ್ವಮಾಡಿದ ಅನ್ನವು ರಾತ್ರಿಯಹೊತ್ತಿಗೆ ಹಳಸಿಹೋಗುವುದಲ್ಲವೆ ? ಅಂತಹ ಅನ್ನರಸದಿಂದ ಪೋಷಿತವಾದ ಈ ದೇಹವು ಎಷ್ಟುದಿನಗಳವರೆಗೆ ನಿಲ್ಲಬಹುದು ? ಎಲೈಮಹಾತ್ಮನೇ! ಸಪ್ತಾಹಶ್ರವಣದಿಂದ ಶ್ರೀಕೃಷ್ಣನನ್ನು ಕರೆತಂದು ಕಣ್ಣಮುಂದೆ ನಿಲ್ಲಿಸಬಹುದು. ಈ ಕಾಲದಲ್ಲಿ ದೋಷನಿವೃತ್ತಿಗೆ ಇದೊಂದೇ ಮಾರ್ಗವು. ನೀರಿನಲ್ಲಿ ಗುಳ್ಳೆಗಳಂತೆಯೂ, ಕಶ್ಮಲದಲ್ಲಿ ಕ್ರಿಮಿಗಳಂತೆಯೂ, ಮನುಷ್ಯರು ಸಾಯುವುದಕ್ಕಾಗಿಯೇ ಹುಟ್ಟುವರು. ಇಂತಹ ಸ್ಥಿತಿಯಲ್ಲಿಯೂ ಈ ಕಥಾಶ್ರವಣವನ್ನು ಮಾಡದಿದ್ದರೆ ಫಲವೇನು ? ಈ ಕಥಾಶ್ರವಣದಿಂದ ಕೇವಲಜಡವಾಗಿ ಒಣಗಿದ ಕಟ್ಟಿಗೆಯೂ ಕೂಡ ಭಿನ್ನವಾಗಿ ಅದರ ಗ್ರಂಥಿಯು ಭೇದಿಸಿತಲ್ಲವೆ? ಇನ್ನು ಅದರಿಂದ ಅತಿಸೂಕ್ಷ್ಮವಾದ ಮನಸ್ಸಿನ ಗ್ರಂಥಿಯು ಬಿಟ್ಟುಹೋಗುವುದರಲ್ಲಿ ಸಂದೇಹವೇನಿದೆ ? ಸಪ್ತಾಹಶ್ರವಣವನ್ನು ಮಾಡಿದ ಪಕ್ಷದಲ್ಲಿ ಮನಸ್ಸಿನಲ್ಲಿರುವ ಅಜ್ಞಾನವೆಂಬ ಗ್ರಂಥಿಯು ಭಿನ್ನವಾಗುವುದರೊಡನೆ, ಸಮಸ್ತಸಂದೇಹಗಳೂ ನೀಗಿಹೋಗುವುವು. ಕರ್ಮಗಳೆಲ್ಲವೂ ನಾಶಹೊಂದುವುವು. ಮುಕ್ತಿಯು ಕರಗತವಾಗುವುದು" ಎಂದನು. ಇಷ್ಟರಲ್ಲಿಯೇ ಅತ್ಯಂತತೇಜೋವಿಶಿಷ್ಟವಾದ ಒಂದುದಿವ್ಯವಿಮಾನವು ಅನೇಕ ವಿಷ್ಣುದೂತರೊಡನೆ ಆಕಾಶದಿಂದಿಳಿಯಿತು. ಅಲ್ಲಿದ್ದವರೆಲ್ಲರೂ ನೋಡುತ್ತಿದ್ದಹಾಗೆಯೇ ಆ ವಿಷ್ಣುದೂತರು ಧುಂಧುಲೀಪುತ್ರನನ್ನು ಕೈಹಿಡಿದು ವಿಮಾನದಲ್ಲಿ ಕುಳ್ಳಿರಿಸಿಕೊಂಡರು. ಆ ವಿಮಾನವು ಒಡನೆಯೇ ಮೇಲೆಹಾರಿತು ! ಇಷ್ಟರಲ್ಲಿ ಗೋಕರ್ಣನು, ಆಶ್ಚರ್ಯಪರವಶನಾಗಿ ಆ ಹರಿದಾಸರನ್ನು ನೋಡುತ್ತ, "ಎಲೈವಿಷ್ಣುದೂತರೆ! ಇದೇನು ? ಈ ಸಭಾಜನರೆಲ್ಲರೂ ಸತ್ಕಥಾಶ್ರವಣವೆಂಬ

ಪುಣ್ಯಕ್ಕೆ ಸಮಭಾಗಿಗಳಾಗಿರುವಾಗ, ಇವರೆಲ್ಲರನ್ನೂ ಬಿಟ್ಟು, ಆದುಂಧುಕಾರಿಯೊಬ್ಬನನ್ನು ಮಾತ್ರ ನೀವು ಕರೆದುಕೊಂಡು ಹೋಗುವುದಕ್ಕೆ ಕಾರಣವೇನು? ಹೀಗೆ ಫಲಭೇದವುಂಟಾದುದೇಕೆ?'' ಎಂದನು. ಆದಕ್ಕಾ ವಿಷ್ಣುದೂತರು, ''ಗೋಕರ್ಣಾ! ಇವರೆಲ್ಲರೂ ಒಂದಾಗಿ ಕಥಾಶ್ರವಣ ಮಾಡಿದುದೇನೋ ನಿಜವು! ಆದರೆ ಶ್ರವಣಕ್ರಮದಲ್ಲಿ ಈ ದುಂಧುಕಾರಿಗೂ ಇವರಿಗೂ ಬಹಳ ಭೇದವುಂಟು. ಆದುದರಿಂದಲೇ ಈ ವಿಷಮವಾದ ಫಲಭೇದವುಂಟಾಯಿತು. ಇವರೆಲ್ಲರೂ ಒಂದಾಗಿ ಶ್ರವಣಮಾಡಿದವರಾದರೂ, ಇವನಂತೆ ಮನನ ಮಾಡಿದವರಲ್ಲ. ಪ್ರೇತಸ್ವರೂಪನಾದ ಈ ದುಂಧುಕಾರಿಯು, ಏಳುರಾತ್ರಿಗಳವರೆಗೂ ಉಪವಾಸದಿಂದಿದ್ದು, ಕಥಾಶ್ರವಣಮಾಡಿ, ಬಹಳ ದೃಢಮನಸ್ಸಿನಿಂದ ಅದನ್ನು ಮನನಮಾಡಿರುವನು. ದೃಢವಲ್ಲದ ಜ್ಞಾನವೂ, ಏತರವಿಲ್ಲದ ಶಾಸ್ತ್ರಾಭ್ಯಾಸವೂ, ನಂಬಿಕೆಯಿಲ್ಲದ ಮಂತ್ರವೂ, ಸ್ಥಿರಮನಸ್ಸಿಲ್ಲದ ಜಪವೂ, ವಿಷ್ಣುಭಕ್ತಿಯಿಲ್ಲದ ದೇಶವೂ, ಅಪಾತ್ರದಲ್ಲಿ ಮಾಡಿದ ದಾನವೂ, ಆಚಾರವಿಲ್ಲದ ಕುಲವೂ ಕೇವಲ ಕಣ್ಣ ಪ್ರಾಯವಲ್ಲದೆ ಬೇರೆಯಲ್ಲ! ಮುಖ್ಯವಾಗಿ ಕಥಾಶ್ರವಣಮಾಡತಕ್ಕವರಿಗೆ ಗುರುವಿನಲ್ಲಿ ವಿಶ್ವಾಸವೂ ತನ್ನಲ್ಲಿ ದೈನ್ಯಬುದ್ಧಿಯೂ, ಮನೋಜಯವೂ, ದೃಢಮನಸ್ಸೂ ಪೂರ್ಣವಾಗಿರಬೇಕು! ಇವೆಲ್ಲವೂ ಕ್ರಮವಾಗಿದ್ದ ಹೊರತು ಪುರಾಣಶ್ರವಣಕ್ಕೆ ತಕ್ಕ ಫಲವು ಲಭಿಸದು! ಆದುದರಿಂದ ಇವರೆಲ್ಲರೂ ಮತ್ತೊಮ್ಮೆ ನಿಯಮದಿಂದ ಕಥಾಶ್ರವಣವನ್ನು ಮಾಡುವ ಪಕ್ಷದಲ್ಲಿ ಇವರಿಗೂ ಮುಕ್ತಿಯು ಲಭಿಸುವುದರಲ್ಲಿ ಸಂದೇಹವಿಲ್ಲ! ಗೋಕರ್ಣಾ! ನೀನು ಮತ್ತೊಮ್ಮೆ ಇವರಿಗೆ ಆದೇ ಕಥೆಯನ್ನು ಪಠಿಸು! ನಿನ್ನೊಡನೆ ಆವರಿಗೂ ಉತ್ತಮಲೋಕಪ್ರಾಪ್ತಿಯಾಗುವುದು.'' ಎಂದು ಹೇಳಿ ಆ ವಿಷ್ಣುದೂತರೆಲ್ಲರೂ ವಿಮಾನಾರೂಢರಾಗಿ ಹರಿಕೀರ್ತನವನ್ನು ಮಾಡುತ್ತ ದುಂಧುಕಾರಿಯೊಡನೆ ವೈಕುಂಠಕ್ಕೆ ತೆರಳಿದರು.

ಇತ್ತಲಾಗಿ ಗೋಕರ್ಣನು ತಿರುಗಿ ಶ್ರಾವಣಮಾಸದಲ್ಲಿ ಸಪ್ತಾಹವಿಧಿಯಿಂದ ಕಥೆಯನ್ನಾರಂಭಿಸಿದನು. ಆದನ್ನು ಸಮಾಪ್ತಿಸಿದ ಕ್ಷಣದಲ್ಲಿ ಹಿಂದಿಗಿಂತಲೂ ಅತಿಶಯವಾದ ಮತ್ತೊಂದಾಶ್ಚರ್ಯವು ನಡೆಯಿತು! ಸಾಕ್ಷಾನ್ಮಹಾವಿಷ್ಣುವೇ ತನ್ನ ಭಕ್ತರೊಡನೆ ವಿಮಾನಾರೂಢನಾಗಿ ಕೆಳಗಿಳಿದು ಬಂದು ಸಭಾಮಧ್ಯದಲ್ಲಿ ನಿಂತನು. ಈ ದಿವ್ಯಸ್ವರೂಪವನ್ನು ಕಂಡೊಡನೆ ಅಲ್ಲಿದ್ದವರೆಲ್ಲರೂ ಸಂಭ್ರಮದಿಂದ ಮೇಲೆದ್ದು ನಿಂತು, ಆತ್ಯಾನಂದಪರವಶರಾಗಿ ಸ್ತೋತ್ರ ಮಾಡತೊಡಗಿದರು. ನಾನಾಕಡೆಗಳಿಂದಲೂ ಜಯಶಬ್ದಗಳೂ ನಮಶ್ಶಬ್ದಗಳೂ ಹೊರಡುತ್ತಿದ್ದುವು. ಇವರ ಮಹೋತ್ಸಾಹವನ್ನು ನೋಡಿ ಭಗವಂತನು ತಾನಾಗಿಯೇ ತನ್ನ ಪಾಂಚಜನ್ಯದಿಂದ ಶಂಖ

ಧ್ವನಿಯನ್ನು ಮಾಡುತ್ತ, ಗೋಕರ್ಣನ ಬಳಿಗೆ ಬಂದು ತನ್ನ ನಾಲ್ಕು ತೋಳುಗಳಿಂದಲೂ ಅವನನ್ನು ಬಿಗಿದಪ್ಪಿ, ತನ್ನೊಡನೆ ಸಮಾನಭಾವವನ್ನು ತೋರಿಸಿದನು. ಅಲ್ಲಿ ಕಥಾಶ್ರವಣಮಾಡುತ್ತಿದ್ದವರೆಲ್ಲರಿಗೂ ತನ್ನ ಸಂಕಲ್ಪದಿಂದ ಸಾರೂಪ್ಯವನ್ನು ಕೊಟ್ಟನು. ಆ ಗ್ರಾಮದಲ್ಲಿದ್ದ ಸಮಸ್ತಪ್ರಾಣಿಗಳನ್ನೂ ಕರೆತಂದು ವಿಮಾನದಲ್ಲಿರಿಸಿ ಪರಮಯೋಗಿಗಳಿಗೂ ದುರ್ಲಭವಾದ ವಿಷ್ಣುಲೋಕಕ್ಕೆ ಕಳುಹಿಸಿಬಿಟ್ಟನು. ಪರಮಭಕ್ತನಾದ ಆ ಗೋಕರ್ಣನನ್ನು ಮಾತ್ರ ತನ್ನೊಡನೆಯೇ ಕರೆದುಕೊಂಡು ಸಂತೋಷದಿಂದ ತನ್ನ ಗೋಲೋಕಕ್ಕೆ ಬಂದು ಸೇರಿದನು. ಪೂರ್ವದಲ್ಲಿ ರಾಮನಿಂದ ಅಯೋಧ್ಯಾವಾಸಿಗಳೆಲ್ಲರಿಗೂ ಯೋಗಿದುರ್ಲಭವಾದ ಉತ್ತಮಲೋಕವು ಲಭಿಸಿದಂತೆ, ಈಗಲೂ ಶ್ರೀಕೃಷ್ಣಕೃಪೆಯಿಂದ ಹಳ್ಳಿಯ ನಿವಾಸಿಗಳೆಲ್ಲರಿಗೂ, ಸೂರ್ಯಚಂದ್ರರಿಗೂ, ಸಿದ್ಧರಿಗೂ ಪ್ರವೇಶಿಸಲಸಾಧ್ಯವಾದ ಉತ್ತಮಲೋಕವು ಲಭಿಸಿತು. ನಾರದಾ! ಇದೀಗ ಶ್ರೀಭಾಗವತಕಥಾಮಹಿಮೆಗೆ ನಿದರ್ಶನವಾದ ಇತಿಹಾಸವು. ಚಿತ್ರಕೂಟದಲ್ಲಿರುವ ಶಾಂಡಿಲ್ಯಮಹಾಮುನಿಯೂ ಕೂಡ ಅತಿಪವಿತ್ರವಾದ ಈ ಇತಿಹಾಸವನ್ನು ಆಗಾಗ ಅನುಸಂಧಾನಮಾಡುತ್ತಿರುವನು. ಈ ಇತಿಹಾಸವನ್ನು ಒಂದಾವರ್ತಿ ಕೇಳಿದ ಮಾತ್ರಕ್ಕೆ, ಅನೇಕಪಾಪಗಳೆಲ್ಲವೂ ನೀಗುವುವು. ಶ್ರಾದ್ಧಕಾಲದಲ್ಲಿ ಇದನ್ನು ಪಠಿಸುವುದರಿಂದ ಪಿತೃದೇವತೆಗಳು ತೃಪ್ತಿಹೊಂದುವರು. ಪ್ರತಿದಿನವೂ ಪಾರಾಯಣಮಾಡುವುದರಿಂದ ಪುನರ್ಜನ್ಮವನ್ನು ನೀಗಿಸಿ ಮುಕ್ತಿಯನ್ನು ಕೈಗೂಡಿಸುವುದು" ಎಂದನು. ಹೀಗೆ ಸನಕಾದಿಗಳು ನಾರದನಿಗೆ ಭಾಗವತಮಹಿಮೆಯನ್ನೂ, ಅದಕ್ಕೆ ನಿದರ್ಶಕವಾದ ಇತಿಹಾಸವನ್ನೂ ಹೇಳಿದಮೇಲೆ, ಸಪ್ತಾಹಶ್ರವಣವನ್ನು ನಡೆಸತಕ್ಕ ಕ್ರಮಗಳನ್ನೂ, ಅದಕ್ಕೆ ಬೇಕಾದ ಸಹಾಯದ್ರವ್ಯಸಾಮಗ್ರಿಗಳನ್ನೂ, ಆ ಧರ್ಮವನ್ನು ನಡೆಸತಕ್ಕ ಕಾಲದಲ್ಲಿ ಅನುಸರಿಸಬೇಕಾದ ವ್ರತೋಪವಾಸಾದಿನಿಯಮಗಳನ್ನೂ ಕ್ರಮವಾಗಿ ವಿವರಿಸಿದರು. ಭಾಗವತಪಾರಾಯಣವನ್ನು ಮುಗಿಸಿದಮೇಲೆ ಶಾಂತ್ಯರ್ಥವಾಗಿ ನಡೆಸಬೇಕಾದ ಬ್ರಾಹ್ಮಣಭೋಜನದಾನಾದಿಧರ್ಮಗಳನ್ನೂ ವಿವರಿಸಿದರು. ಅದರಿಂದಾಚೆಗೆ ತಾವೂ ಸಪ್ತಾಹಕ್ರಮದಿಂದಲೇ ನಾರದನಿಗೂ ಅಲ್ಲಿದ್ದ ಇತರಜನರಿಗೂ ಭಾಗವತಕಥೆಯನ್ನು ಅನುಕ್ರಮವಾಗಿ ವಿಸ್ತರಿಸಿ ಹೇಳಿದರು. ಏಳುದಿನಗಳವರೆಗೆ ಎಲ್ಲರೂ ನಿಯಮವನ್ನು ಹಿಡಿದು ಭಾಗವತಕಥೆಯನ್ನು ಕೇಳಿ ಮುಗಿಸಿದಮೇಲೆ, ಶಾಸ್ತ್ರೋಕ್ತವಾಗಿ ಭಗವಂತನನ್ನು ಸ್ತೋತ್ರಮಾಡುತ್ತಿದ್ದರು. ಭಕ್ತಿಜ್ಞಾನವೈರಾಗ್ಯಗಳಿಗೆ ಹೊಸಯೌವನವುಂಟಾಯಿತು. ನಾರದನೂ ಬಹುಕಾಲದಿಂದ ತಾನು ಬಯಸುತ್ತಿದ್ದ ಕಾರ್ಯವು ಕೈಗೂಡಿದುದರಿಂದ

ಕೃತಾರ್ಥನಾದನು. ಆತನ ಸರ್ವಾಂಗಗಳೂ ಸಂತೋಷದಿಂದ ಪುಳಕಿತವಾದುವು. ಹೀಗೆ ಪರಮಾನಂದಭರಿತನಾದ ನಾರದನು, ಸನಕಾದಿಗಳ ಮುಂದೆ ಕೈ ಮುಗಿದು ನಿಂತು, ಸಂತೋಷದಿಂದ ಕುಗ್ಗಿದ ಕಂಠಸ್ವರವುಳ್ಳವನಾಗಿ ವಿಜ್ಞಾಪಿಸುವನು "ಎಲೈಮಹಾತ್ಮರೆ! ಪರಮದಯಾಳುಗಳಾದ ನಿಮ್ಮ ಅನುಗ್ರಹದಿಂದ ನಾನು ಧನ್ಯನಾದೆನು! ನಿಮ್ಮಕೃಪಾಬಲದಿಂದ ಈಗ ನಾನು ಆ ಶ್ರೀಮನ್ನಾರಾಯಣ ನನ್ನೇ ನನ್ನಲ್ಲಿ ಕರೆದಿಟ್ಟುಕೊಂಡಂತಾಯಿತು. ವೈಕುಂಠವಾಸಿಯಾದ ಮಹಾ ವಿಷ್ಣುವು ಈ ಕಥಾಶ್ರವಣಮಾತ್ರದಿಂದ ತಾನಾಗಿಯೇ ಬಂದು ಕಣ್ಣ ಮುಂದೆ ನಿಲ್ಲು ವಾಗ ಇದಕ್ಕಿಂತಲೂ ಬೇರೆ ಧರ್ಮವಾವುದುಂಟು?" ಎಂದು ಬದ್ಧಾಂಜಲಿಯಾಗಿ ಸ್ತುತಿಸುತ್ತಿದ್ದನು. ಇಷ್ಟರಲ್ಲಿಯೇ ಮಹಾಜ್ಞಾನಿಯಾಗಿಯೂ, ವ್ಯಾಸಪುತ್ರ ನಾಗಿಯೂ ಇದ್ದ ಶುಕಮಹಾಮುನಿಯು ಗಂಭೀರಧ್ವನಿಯಿಂದ ಭಾಗವತ ಶ್ಲೋಕಗಳನ್ನೇ ಪಠಿಸುತ್ತಮೆಲ್ಲಗೆ ಬಂದು ಸಭಾಮಧ್ಯದಲ್ಲಿ ನಿಂತನು. ದಿವ್ಯತೇಜಸ್ಸಿ ನಿಂದ ಬೆಳಗುವ ಹದಿನಾರುವಯಸ್ಸಿನ ಕುಮಾರನಾದ ಈ ಶುಕಮುನಿಯನ್ನು ಕಂಡೊಡನೆ, ಎಲ್ಲರೂ ಥಟ್ಟನೆ ಪ್ರತ್ಯುತ್ಥಾನಮಾಡಿ ಅವನಿಗೆ ಪೀಠವನ್ನು ಕೊಟ್ಟು ಕುಳ್ಳಿರಿಸಿದರು. ನಾರದನೂ ಮುಂದೆ ಬಂದು ಯಥಾವಿಧಿಯಾಗಿ ಅವನನ್ನು ಪೂಜಿಸಿದನು. ಹೀಗೆ ಸುಖಾಸೀನನಾದ ಶುಕನು ಮುಂದಿದ್ದವರೆಲ್ಲರನ್ನೂ ನೋಡಿ "ಎಲೈರಸಜ್ಞರೆ! ವಿಷ್ಣುಭಕ್ತರಾದ ನೀವೆಲ್ಲರೂ, ವೇದಗಳೆಂಬ ಕಲ್ಪವೃಕ್ಷಗಳಿಂದ, ಗಿಳಿಕಚ್ಚಿ ಬಿದ್ದಹಣ್ಣಿನಂತೆ, ಶುಕಮುಖದಿಂದ ಹೊರಟು, ರಸಪೂರ್ಣವಾಗಿರುವ ಈ ಭಾಗವತವೆಂಬ ಪುರಾಣವನ್ನು ಮರಣಕಾಲದವರೆಗೂ ಬಿಡದೆ ಅನುಸಂಧಾನ ಮಾಡುತ್ತ, ಅದರ ರಸವನ್ನು ಪಾನಮಾಡಿರಿ! ಈ ಗ್ರಂಥದಲ್ಲಿ ನಿರ್ದಿಷ್ಟವಾದ ಈಶ್ವರಾರಾಧನರೂಪಧರ್ಮವು ಉಪದೇಶಿಸಲ್ಪಡುವುದು. ಕರ್ಮಕಾಂಡದಲ್ಲಿ ಸ್ತುತಿಸಲ್ಪಟ್ಟ ಅಗ್ನೀಂದ್ರಾದಿದೇವತೆಗಳಂತಲ್ಲದೆ, ನಿತ್ಯವಾಗಿಯೂ ಅಪರಿಮಿತ ಫಲದಾಯಕವಾಗಿಯೂ ಇರುವ ವಿಷಯವೇ ಇದರಿಂದ ಬೋಧಿಸಲ್ಪಡುವುದು! ಇತರ ಧರ್ಮಗಳಿಂದೇನೂ ಫಲವಿಲ್ಲವು. ಈ ಭಾಗವತವನ್ನು ಕೇಳತಕ್ಕವರ ಹೃದಯದಲ್ಲಿ ಶ್ರೀಮನ್ನಾರಾಯಣನು ನಿತ್ಯವಾಸವನ್ನು ಮಾಡುವನು. ಸಮಸ್ತ ಪುರಾಣಗಳಿಗೂ ತಿಲಕಪ್ರಾಯವಾಗಿ ವಿಷ್ಣುಭಕ್ತರಿಗೆ ಧನರೂಪವಾಗಿ, ಉತ್ತಮ ಜ್ಞಾನಬೋಧಕವಾದ ಈ ಗ್ರಂಥಪಠನದಿಂದ ಜೀವನ್ಮುಕ್ತಿಯು ಕರಗತ ವಾಗುತ್ತಿದು. ಸ್ವರ್ಗದಲ್ಲಿಯಾಗಲಿ, ಸತ್ಯಲೋಕದಲ್ಲಿಯಾಗಲಿ, ಕೈಲಾಸದಲ್ಲಿ ಯಾಗಲಿ, ವೈಕುಂಠದಲ್ಲಿಯಾಗಲಿ, ಈ ಕಥಾಮೃತವೆಂಬ ರಸವು ಲಭಿಸಲಾರದು. ಆದುದರಿಂದ ಎಂದೆಂದಿಗೂ ನೀವು ಇದನ್ನೇ ಅನುಸಂಧಾನಮಾಡುತ್ತಿರಬೇಕು"

ಎಂದನು. ಶುಕಮುನಿಯು ಈ ಮಾತನ್ನು ಹೇಳುತ್ತಿರುವಾಗಲೇ ಶ್ರೀಮನ್ನಾರಾಯಣನು ಪ್ರಹ್ಲಾದ, ಬಲಿ, ಉದ್ಧವ, ಅರ್ಜುನನೇ ಮೊದಲಾದ ತನ್ನ ಭಕ್ತರಿಂದ ಪರಿವೃತನಾಗಿ ಸಭಾಮಧ್ಯದಲ್ಲಿ ಬಂದು ನಿಂತನು. ನಾರದನು ಯಥೋಚಿತವಾಗಿ ಆ ಭಗವಂತನನ್ನು ಪೂಜಿಸಿ, ದಿವ್ಯಾಸನವನ್ನು ಕೊಟ್ಟು ಕುಳ್ಳಿರಿಸಿದನು. ಒಡನೆಯೇ ಎಲ್ಲರೂ ಸೇರಿ ಹರಿಕೀರ್ತನವನ್ನಾರಂಭಿಸಿದರು. ಈ ಕೀರ್ತನವನ್ನು ಕೇಳುವುದಕ್ಕಾಗಿ ಬ್ರಹ್ಮರುದ್ರರಿಬ್ಬರೂ ತಮ್ಮ ಪತ್ನಿಯರೊಡನೆ ಬಂದು ಸೇರಿದರು. ಪ್ರಹ್ಲಾದನು ಕೈತಾಳವನ್ನು ಹಾಕುವುದಕ್ಕೆ ತೊಡಗಿದನು. ಉದ್ಧವನ್ನು ಕಂಚಿನ ತಾಳವನ್ನು ನುಡಿಸುತ್ತಿದ್ದನು. ನಾರದನು ವೀಣಾಗಾನವನ್ನು ಮಾಡಿದನು. ಅರ್ಜುನನು ರಾಗಗಳನ್ನಾಲಾಪಿಸುವುದಕ್ಕೆ ತೊಡಗಿದನು. ದೇವೇಂದ್ರನು ಮೃದಂಗವನ್ನು ಹಿಡಿದನು. ಸನಕಾದಿಗಳು ನಡುನಡುವೆ ಜಯಶಬ್ದಗಳನ್ನು ಹೇಳುತ್ತಿದ್ದರು. ವ್ಯಾಸಪುತ್ರನಾದ ಶುಕನು, ಸೂತ್ರಧಾರಿಯಂತೆ ರಸಭಾವಗಳನ್ನು ತೋರಿಸುತ್ತಿದ್ದನು. ಇವರೆಲ್ಲರ ನಡುವೆ ಭಕ್ತಿಜ್ಞಾನವೈರಾಗ್ಯಗಳೆಂಬ ಆ ಮೂವರೂ ನರ್ತನವನ್ನು ಮಾಡತೊಡಗಿದರು. ಈ ಕೀರ್ತನೆಯು ಮುಗಿದಮೇಲೆ ಭಕ್ತವತ್ಸಲನಾದ ಶ್ರೀಮನ್ನಾರಾಯಣನು ಎಲ್ಲರನ್ನೂ ಪ್ರಸನ್ನದೃಷ್ಟಿಯಿಂದ ನೋಡುತ್ತ, "ಎಲೆಭಕ್ತಾಗ್ರಣಿಗಳೇ ! ನಿಮ್ಮ ಕೀರ್ತನಗಳಿಂದ ನಾನು ಪ್ರೀತನಾದೆನು ! ಬೇಕಾದ ವರಗಳನ್ನು ಕೇಳಿರಿ ! ನಿಮ್ಮ ಕೋರಿಕೆಯನ್ನು ನಡೆಸಿಕೊಡುವೆನು" ಎಂದನು. ಆಗ ಅವರೆಲ್ಲರೂ ಬದ್ಧಾಂಜಲಿಗಳಾಗಿ ನಿಂತು, "ಮಹಾಪ್ರಭೂ ! ಈಗ ನಾವು ನಿನ್ನಿಂದಪೇಕ್ಷಿಸಬೇಕಾದ ಅನುಗ್ರಹವು ಬೇರೆ ಯಾವುದೂ ಇಲ್ಲವು. ಈ ಕಲಿಕಾಲದಲ್ಲಿ ಸಪ್ತಾಹಶ್ರವಣವನ್ನು ಮಾಡತಕ್ಕವರ ಹೃದಯದಲ್ಲಿ ನೀನು ನಿತ್ಯಸಾನ್ನಿಧ್ಯವನ್ನು ಮಾಡಬೇಕು, ಈ ಮನೋರಥವನ್ನು ಮಾತ್ರ ಈಡೇರಿಸಿಕೊಟ್ಟರೆ ಸಾಕು" ಎಂದರು. ಆಗ ಭಗವಂತನು "ತಥಾಸ್ತು" ಎಂದು ಹೇಳಿ ಅಂತರ್ಧಾನವನ್ನು ಹೊಂದಿದನು. ಆಮೇಲೆ ನಾರದನು ಸನಕಸನಂದನಾದಿ ಋಷಿಕುಮಾರರನ್ನೂ, ಶುಕಾದಿಮುನಿಗಳನ್ನೂ ನಮಸ್ಕರಿಸಿ ಯಥೋಚಿತವಾಗಿ ಸತ್ಕರಿಸಿ ಕಳುಹಿಸಿಕೊಟ್ಟನು.

ಸೂತಪೌರಾಣಿಕನು ಶೌನಕಮುನಿಗೆ ಈ ಚರಿತ್ರವನ್ನು ತಿಳಿಸಿದ ಮೇಲೆ, ತಿರುಗಿ ಶೌನಕನು, "ಎಲೈ ಸೂತನೆ ! ಮೊದಲು ಈ ಭಾಗವತವನ್ನು ಶುಕಮುನಿಯು ಪರೀಕ್ಷಿದ್ರಾಜನಿಗೆ ಉಪದೇಶಿಸಿದ ಕಾಲವಾವುದು ? ಆಮೇಲೆ ಗೋಕರ್ಣನು ಯಾವಾಗ ಇದನ್ನು ಅನುಸಂಧಾನಮಾಡಿದನು? ಅದರಿಂದಾಚೆಗೆ ಸನಕಾದಿಗಳು ಇದನ್ನು ನಾರದನಿಗೆ ಉಪದೇಶಿಸಿದ ಕಾಲವಾವುದು ? ಈ ಸಂದೇಹವನ್ನು

ಪರಿಹರಿಸಬೇಕು." ಎಂದು ಕೇಳಿದನು. ಅದಕ್ಕೆ ಸೂತಪೌರಾಣಿಕನು "ಶೌನಕಾ ಕೇಳು! ಕೃಷ್ಣನಿರ್ಯಾಣವಾಗಿ ಈಕಲಿಯುಗದಲ್ಲಿ ಮೂವತ್ತುವರುಷಗಳು ಕಳೆದ ಮೇಲೆ, ಭಾದ್ರಪದಮಾಸದ ನವಮೀತಿಥಿಯಲ್ಲಿ ಶುಕನು ಈಕಥೆಯನ್ನು ಪರೀಕ್ಷಿದ್ರಾಜನಿಗೆ ಉಪದೇಶಿಸಿದನು. ಅದರಿಂದಾಚೆಗೆ ಇನ್ನೂರುವರುಷಗಳ ಮೇಲೆ ಆಷಾಢ ಶುದ್ಧನವಮಿಯಲ್ಲಿ, ಗೋಕರ್ಣನು ಈ ಕಥೆಯನ್ನುಪದೇಶಿಸಿದನು. ಅದರಿಂದಾಚೆಗೆ ಮೂರುಸಾವಿರವರುಷಗಳ ಮೇಲೆ ಕಾರ್ತಿಕಶುದ್ಧನವಮಿಯಲ್ಲಿ ಬ್ರಹ್ಮಪುತ್ರರಾದ ಸನಕಾದಿಗಳು ಇದನ್ನು ನಾರದನಿಗೆ ಉಪದೇಶಿಸಿದರು. ಇದೇ ಇದರ ಕಾಲ ಕ್ರಮವು. ಶೌನಕಾ! ಮುಖ್ಯವಾಗಿ ಕಲಿಯುಗದಲ್ಲಿ ಈ ಭಾಗವತವೊಂದೇ ಸರ್ವಪಾಪನಿವಾರಕವು. ಅದೊಂದೇ ಮುಕ್ತಿಗೆ ಮುಖ್ಯಸಾಧನವು.! ಇದೊಂದೇ ಭಗವಂತನಿಗೆ ಪ್ರಿಯವಾದುದು! ಸಮಸ್ತಧರ್ಮಗಳಿಗಿಂತಲೂ ಇದೊಂದೇ ಮೇಲಾದುದು! ವಿಷ್ಣುಭಕ್ತಿಯುಳ್ಳವರಿಗೆ ಯಾವವಿಧದಿಂದಲೂ ಕೊರತೆಯಿಲ್ಲವು. ಲೋಕಸಂಹಾರಕನಾದ ಯಮನೂ ಕೂಡ ಜೀವರಾಶಿಯನ್ನೆಳೆಯುವುದಕ್ಕಾಗಿ ಪಾಶವನ್ನು ಕೈಯಲ್ಲಿ ಹಿಡಿದು ನಿಂತಿರುವ ತನ್ನದೂತರನ್ನು ನೋಡಿ, ಅವರ ಕಿವಿಯಲ್ಲಿ ''ಎಲೈ ದೂತರೆ! ನೀವು ಭಗವತ್ಕಥಾಶ್ರವಣಪರರಾದವರಲ್ಲಿ ಮಾತ್ರ ಕೈಯಿಡಬೇಡಿರಿ! ಇತರ ಜೀವರಾಶಿಗಳಮೇಲೆ ನಮ್ಮ ಅಧಿಕಾರವೇ ಹೊರತು ವಿಷ್ಣುಭಕ್ತರ ಮೇಲಿಲ್ಲವು." ಎಂದು ಹೇಳಿರುವನು. ಮುಖ್ಯವಾಗಿ ಯಾವನು ಈ ಭಾಗವತಕಥೆಯನ್ನು ಪಠಿಸುವನೋ, ಯಾವನು ಅದನ್ನು ಭಕ್ತಿಯಿಂದ ಕೇಳುವನೋ, ಅವನಿಗೆ ಯಾವ ಮನೋರಥವೂ ದುರ್ಲಭವಲ್ಲವು" ಎಂದು ಶೌನಕನಿಗೆ ಹೇಳಿದನು.*



* ಈ ಭಾಗವತಮಾಹಾತ್ಮ್ಯವು ಪಾದ್ಮಪುರಾಣದ ಉತ್ತರಖಂಡದಲ್ಲಿರುವ ಆರಧ್ಯಾಯಗಳಿಂದ ಸಂಗ್ರಹಿಸಲ್ಪಟ್ಟಿದೆ.

ಶ್ರೀರಸ್ತು.

ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ




ಪರಮಕಾರುಣಿಕನಾಗಿಯೂ, ಸಮಸ್ತಕಲ್ಯಾಣಗುಣವಿಶಿಷ್ಟನಾಗಿಯೂ ಆಗಿರುವ ಶ್ರೀಮನ್ನಾರಾಯಣನು, ಮೊದಲು ಲೋಕೋಜ್ಜೀವನಾರ್ಥವಾಗಿ ಚೇತನರಿಗೆ ಧರ್ಮಸ್ವರೂಪವನ್ನೂ, ಬ್ರಹ್ಮಸ್ವರೂಪವನ್ನೂ ಬೋಧಿಸತಕ್ಕ ಭಾಗದ್ವಯಾತ್ಮಕವಾದ ವೇದವನ್ನು ಚತುರ್ಮುಖಬ್ರಹ್ಮನಿಗುಪದೇಶಿಸಿದನು. ದುರವಗಾಹವಾದ ಆ ವೇದಾರ್ಥವನ್ನು ತಿಳಿಯಲಾರದೆ ಜನರು ಭ್ರಾಂತರಾಗಿ ಸಂಸಾರಪಾಶದಲ್ಲಿ ಸಿಕ್ಕಿ ನರಳುತ್ತಿರುವುದನ್ನು ನೋಡಿ, ಸತ್ಯವತೀದೇವಿಯಲ್ಲಿ ಭಗವದಂಶದಿಂದವತರಿಸಿದ ಪರಾಶರಪುತ್ರನಾದ ವ್ಯಾಸಮಹಾಮುನಿಯು, ಅವರಲ್ಲಿ ಮರುಕಗೊಂಡು ಆ ವೇದಾರ್ಥಗಳನ್ನು ಜನರಿಗೆ ಸುಲಭಗ್ರಾಹ್ಯವಾಗುವಂತೆ ಸೂತ್ರರೂಪದಿಂದ ಸಂಗ್ರಹಿಸಿ ಪ್ರಚಾರಗೊಳಿಸಬೇಕೆಂದೆಣಿಸಿ, ತನ್ನ ಶಿಷ್ಯನಾದ ಜೈಮಿನಿಯಿಂದ ಧರ್ಮಸ್ವರೂಪಬೋಧಕವಾದ ಪೂರ್ವಭಾಗಾರ್ಥವನ್ನು ಅದೇರೀತಿಯಲ್ಲಿ ಪ್ರಚಾರಗೊಳಿಸಿದನು. ಬ್ರಹ್ಮಜ್ಞಾನಜನಕವಾದ ಉತ್ತರಭಾಗವನ್ನು ಬ್ರಹ್ಮಸೂತ್ರಗಳಿಂದ ತಾನೇ ವಿವರಿಸಿದನು. ಇಷ್ಟರಲ್ಲಿಯೂ ತೃಪ್ತಿಯಿಲ್ಲದೆ ಅದೇ ವೇದಾರ್ಥಗಳನ್ನು ಮಿತ್ರವಾಕ್ಯದಂತೆ ಇನ್ನೂ ಸುಲಭವಾಗಿ ತಿಳಿಸಬೇಕೆಂದೆಣಿಸಿ, ಪಂಚಮವೇದವೆಂದು ಪ್ರಸಿದ್ಧಿಗೊಂಡ ಶ್ರೀಮಹಾಭಾರತವೆಂಬ ಇತಿಹಾಸವನ್ನು ರಚಿಸಿ, ಅದರಲ್ಲಿ ಪ್ರಾಯಕವಾಗಿ ಪೂರ್ವಭಾಗಾರ್ಥಗಳನ್ನೇ ವಿಶೇಷವಾಗಿ ವಿವರಿಸಿದನು. ಅದರಂತೆಯೇ ಉತ್ತರಭಾಗಾರ್ಥವನ್ನು ವಿಶೇಷಿಸಿ ತೋರಿಸುವುದಕ್ಕಾಗಿ ವೇದಾಂ

ತೋಪಬೃಂಹಣವಾದ ಈ ಭಾಗವತವೆಂಬ ಪುರಾಣವನ್ನು ರಚಿಸಲಾರಂಭಿಸಿ, ಗ್ರಂಥಾದಿಯಲ್ಲಿ ಪರಮಾತ್ಮಧ್ಯಾನರೂಪವಾದ ಇಷ್ಟದೇವತಾಪ್ರಾರ್ಥನೆಯನ್ನು ಮಾಡುವನು.

ಕೆಲವರು ಇದನ್ನು ಶುಕಕರ್ತೃಕವೆಂದು ಹೇಳುವರು. ಈ ಗ್ರಂಥವು ಶುಕ ಕರ್ತೃಕವೆಂದು ಹೇಳುವುದರಿಂದ ಈ ಭಾಗವತದಲ್ಲಿಯೇ ಮುಂದೆ ಅನೇಕವಚನ ಗಳಿಗೆ ವಿರೋಧವುಂಟಾಗುವುದು. ಇದನ್ನು ವ್ಯಾಸಪ್ರಣೀತ ಎಂದು ಹೇಳಬೇಕೇ ಹೊರತು ಶುಕಪ್ರಣೀತವೆಂದು ಹೇಳುವುದಕ್ಕೆ ಅವಕಾಶವಿಲ್ಲ. ಮೊದಲು ವ್ಯಾಸ ಮಹಾಮುನಿಯು ನಾರದಾಜ್ಞೆಯಿಂದ ಈ ಗ್ರಂಥವನ್ನು ರಚಿಸಿ, ಅದನ್ನು ತನ್ನ ಪುತ್ರನಾದ ಶುಕನಿಗೆ ಹೇಳಿದ ಮೇಲೆ, ಶುಕಮುನಿಯು ಇದನ್ನು ತನ್ನ ಭಕ್ತನಾದ ಪರೀಕ್ಷಿದ್ರಾಜನಿಗೆ ಉಪದೇಶಿಸಿ, ಆ ಮೂಲಕವಾಗಿ ಲೋಕದಲ್ಲಿ ಪ್ರಚಾರಕ್ಕೆ ತಂ ದಿರುವನು. ಆದುದರಿಂದ ಪುರಾಣಾಂತರಗಳಲ್ಲಿರುವ ಶುಕಪ್ರೋಕ್ತವೆಂಬ ವಾಕ್ಯಕ್ಕೆ ಶುಕಮುನಿಯಿಂದ ಪ್ರಚಾರಗೊಳಿಸಲ್ಪಟ್ಟುದೆಂದೇ ಅರ್ಥವನ್ನು ಗ್ರಹಿಸಬೇಕು.

ಇದೇ ಭಾಗವತವೆಂಬ ಹೆಸರಿನಿಂದ ದೇವೀಭಾಗವತವೇ ಮೊದಲಾದ ಗ್ರಂಥಾಂತರಗಳಿದ್ದರೂ, ಪುರಾಣಾಂತರಗಳಲ್ಲಿ ಹೇಳಿರುವ ಲಕ್ಷಣಗಳನ್ನನು ಸರಿಸಿ, ವ್ಯಾಸಪ್ರೋಕ್ತವಾದ ಈ ಭಾಗವತಕ್ಕೇ ವಿಶೇಷಪ್ರಾಮಾಣ್ಯವೂ, ಪ್ರಾಶಸ್ತ್ಯವೂ, ಉಪಾದೇಯತ್ವವೂ ಏರ್ಪಡುವುದು. ಸ್ಕಾಂದಪುರಾಣದ ಉತ್ತರ ಖಂಡದಲ್ಲಿ ಈ ಗ್ರಂಥಲಕ್ಷಣವು ವ್ಯಕ್ತವಾಗಿ ಹೇಳಲ್ಪಟ್ಟಿರುವುದು.

"ಗ್ರಂಥೋಽಷ್ಟಾದಶಸಾಹಸ್ರೋ ದ್ವಾದಶಸ್ಕಂಧಸಮ್ಮಿತಃ |
ಹಯಗ್ರೀವಬ್ರಹ್ಮವಿದ್ಯಾ ಯತ್ರ ವೃತ್ರವಧಸ್ತಥಾ |
ಗಾಯತ್ರ್ಯಾಶ್ಚ ಸಮಾರಂಭೋ ಯತ್ರ ಭಾಗವತಂ ವಿದುಃ ||"

ಎಂದರೆ, ಗಾಯತ್ರೀಮಂತ್ರದಿಂದಾರಂಭಿಸಿ, ಹದಿನೆಂಟುಸಾವಿರಗ್ರಂಥಗಳ ನ್ನೊಳಕೊಂಡು, ಹನ್ನೆರಡುಸ್ಕಂಧಗಳುಳ್ಳದಾಗಿ, ವೃತ್ರಕಥಾವೃತ್ತಾಂತವನ್ನೂ, ಹಯಗ್ರೀವಬ್ರಹ್ಮವಿದ್ಯೆ (ಮಂತ್ರ)ಯನ್ನೂ ಪ್ರತಿಪಾದಿಸತಕ್ಕ ಗ್ರಂಥವು ಭಾಗ ವತವೆನಿಸುವುದೆಂದು ಇದರ ಲಕ್ಷಣವು. ಇದರಂತೆಯೇ ಮತ್ಸ್ಯಪುರಾಣದಲ್ಲಿಯೂ ಕೂಡ,

"ಆರಭ್ಯ ಯತ್ರ ಗಾಯತ್ರೀಂ ವರ್ಣ್ಯತೇ ಧರ್ಮವಿಸ್ತರಃ ।
ವೃತ್ರಾಸುರವಧಶ್ಚಾಪಿ ಯತ್ರ ಭಾಗವತಂ ವಿದುಃ ॥"

ಎಂಬ ಲಕ್ಷಣವು ಪ್ರತಿಪಾದಿತವಾಗಿದೆ. ಈ ಲಕ್ಷಣವನ್ನನುಸರಿಸಿ, ಗ್ರಂಥಾದಿಯಲ್ಲಿರುವ ಮಂಗಳಶ್ಲೋಕದಲ್ಲಿ ಶಬ್ದಾರ್ಥಗಳೆರಡರಿಂದಲೂ ಗಾಯತ್ರೀಮಂತ್ರಾರ್ಥವು ಹೇಳಲ್ಪಡುವುದು. ಅದರಂತೆಯೇ ಮುಂದೆ ಕ್ರಮವಾಗಿ ವೃತ್ರವಧ ವೃತ್ತಾಂತವೂ, ಹಯಗ್ರೀವಮಂತ್ರವೂ ಪ್ರತಿಪಾದಿತವಾಗುವುವು. ಈ ವಿಸ್ತರಗಳೆಲ್ಲವೂ ಅಲ್ಲಲ್ಲಿನ ವ್ಯಾಖ್ಯಾನಗಳಿಂದ ವ್ಯಕ್ತವಾಗುವುವು.





ಶ್ರೀಕೃಷ್ಣಾಯ ನಮಃ

# ಶ್ರೀಮದ್ಭಾಗವತವು

## ಪ್ರಥಮಸ್ಕಂಧವು

---

ಶ್ಲೋ॥ ಜನ್ಮಾದ್ಯಸ್ಯ ಯತೋಽನ್ವಯಾದಿತರತಶ್ಚಾರ್ಥೇಷ್ವಭಿಜ್ಞಃ ಸ್ವರಾಟ್
ತೇನೇ ಬ್ರಹ್ಮ ಹೃದಾ ಯ ಆದಿಕವಯೇ ಮುಹ್ಯಂತಿ ಯತ್ಸೂರಯಃ ।
ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋ (ಅ) ಮೃಷಾ
ಧಾಮ್ನಾ ಸ್ವೇನ ಸದಾನಿರಸ್ತಕುಹಕಂ ಸತ್ಯಂ ಪರಂ ಧೀಮಹಿ ॥೧॥

**ಯಾವ ಶ್ರೀಮನ್ನಾರಾಯಣನು ಸಕಲಜಗತ್ಕಾರಣನಾಗಿ, ಸರ್ವಾಂತರ್ಯಾಮಿಯಾಗಿ, ಸರ್ವಜ್ಞನಾಗಿ, ಸರ್ವಶಕ್ತನಾಗಿ ಸರ್ವಸ್ವತಂತ್ರನಾಗಿ**

---

ವ್ಯಾಖ್ಯಾನವು:— ಪೂಜ್ಯರಾದ ವ್ಯಾಸಮಹರ್ಷಿಗಳಿಂದ ಗ್ರಂಥಾದಿಯಲ್ಲಿ ಇಷ್ಟದೇವತಾಪ್ರಾರ್ಥನರೂಪವಾಗಿ ರಚಿತವಾದ ಈ ಮಂಗಳಶ್ಲೋಕವು ಪರಬ್ರಹ್ಮಸ್ವರೂಪನಿರೂಪಕವಾದುದರಿಂದ, ಇದಕ್ಕೆ ದ್ವೈತಾದ್ವೈತ ವಿಶಿಷ್ಟಾದ್ವೈತಗಳೆಂಬ ಮತತ್ರಯಕ್ಕೂ ಅನುಸಾರವಾಗಿ ಪೂರ್ವಾಚಾರ್ಯರಿಂದ ಬೇರೆಬೇರೆ ಅರ್ಥಭೇದಗಳು ವಿವರಿಸಲ್ಪಟ್ಟಿರುವುವು. ಈ ಶ್ಲೋಕದಲ್ಲಿ ಆಪಾತದಿಂದ ತೋರುವ ಮುಖ್ಯಾರ್ಥವುಮಾತ್ರ ಮೇಲೆ ಸಂಗ್ರಹವಾಗಿ ಕಾಣಿಸಲ್ಪಟ್ಟಿರುವುದು. ಇತರ ವಿಶೇಷಾರ್ಥಗಳನ್ನೂ ಮತಾಂತರವ್ಯಾಖ್ಯಾನಗಳನ್ನೂ ಈ ಕೆಳಗೆ ಕ್ರಮವಾಗಿ ನೋಡಬಹುದು.

(ಅರ್ಥೇಷು) ಚಿದಚಿದ್ವಸ್ತುಗಳಲ್ಲಿ (ಅನ್ವಯಾತ್) ಅನುಪ್ರವೇಶಮಾಡಿರುವದರಿಂದಲೂ, (ಇತರತಶ್ಚ) ಬೇರೆಯಾಗಿ ಕರ್ತೃಸ್ವರೂಪದಲ್ಲಿರುವುದರಿಂದಲೂ (ಯತಃ) ಯಾವ ಪರಮಾತ್ಮನಿಂದ (ಅಸ್ಯ) ಈ ಪ್ರಪಂಚದ, (ಜನ್ಮಾದಿ) ಸೃಷ್ಟಿಸ್ಥಿತಿಲಯಗಳೆಲ್ಲವೂ ಉಂಟಾಗುವುವೋ, ಅಂತಹ ಸತ್ಯಸ್ವರೂಪನಾದ ಶ್ರೀಮನ್ನಾರಾಯಣನನ್ನು ವಂದಿಸುವೆವು'' ಎಂಬುದಾಗಿ ಒಂದೊಂದು ವಾಕ್ಯಕ್ಕೂ ಕೊನೆಯವಾಕ್ಯದೊಡನೆ ಅನ್ವಯವು. ಲೋಕದಲ್ಲಿ ಒಂದೊಂದು ಕಾರ್ಯಕ್ಕೂ ನಿಮಿತ್ತಕಾರಣವೆಂದೂ, ಉಪಾದಾನ

**ಬೆಳಗುವನೋ, ಯಾವನ ದಿವ್ಯಮಂಗಳವಿಗ್ರಹವನ್ನು ನೋಡಿ ನಿತ್ಯಸೂರಿಗ**

---

ಕಾರಣವೆಂದೂ ಎರಡು ವಿಧವಾದ ಕಾರಣಗಳುಂಟು. ಒಂದು ಗಡಿಗೆಯನ್ನು ನಿರ್ಮಿಸಬೇಕಾದರೆ ಕುಂಬಾರನು ಅದಕ್ಕೆ ನಿಮಿತ್ತಕಾರಣವೆನಿಸುವನು. ಮಣ್ಣು ಉಪಾದಾನ ಕಾರಣವಾಗುವುದು. ಇದರಂತೆಯೇ ಪರಮಾತ್ಮನು ಪ್ರಕೃತಿಪುರುಷವ್ಯಲಕ್ಷಣ್ಯದಿಂದ ಅವುಗಳಿಗೆ ನಿಯಾಮಕನಾಗಿ ಸ್ಥೂಲರೂಪವಾದ ಈ ಪ್ರಪಂಚವನ್ನು ಸೃಷ್ಟಿಸತಕ್ಕವನಾಗಿಯೂ, ತಾನೇ ಆ ಪ್ರಪಂಚವೆಂಬ ಕಾರ್ಯರೂಪದಲ್ಲಿ ಸೇರಿರತಕ್ಕವನಾಗಿಯೂ ಇರುವುದರಿಂದ, ಆ ಪರಮಾತ್ಮನೇ ಈ ಪ್ರಪಂಚಕ್ಕೆ ನಿಮಿತ್ತೋಪಾದಾನಗಳೆಂಬ ಎರಡು ವಿಧದಿಂದಲೂ ಕಾರಣನಾಗಿರುವನೆಂದು ಭಾವವು. "ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯಭಿಸಂವಿಶಂತಿ" ಇತ್ಯಾದಿ ಶ್ರುತ್ಯರ್ಥಗಳೂ ಇದರಿಂದ ನಿರೂಪಿಸಲ್ಪಡುವುವು. ಆದರೆ ಲೋಕದಲ್ಲಿ ಒಂದೇ ವಸ್ತುವಿಗೆ ಉಭಯವಿಧ ಕಾರಣತ್ವವೂ ಅಸಂಭಾವಿತವಲ್ಲವೆ? ಎಂದರೆ (ಅಭಿಜ್ಞ!) ಸರ್ವಜ್ಞನು. ಸರ್ವಶಕ್ತನೆಂಬುದಕ್ಕೂ ಇದೇ ಸೂಚಕವು. ಆದುದರಿಂದ ಸರ್ವಜ್ಞನಾಗಿಯೂ, ಸರ್ವಶಕ್ತನಾಗಿಯೂ ಇರುವ ಪರಮಾತ್ಮನಿಗೆ ಈ ಉಭಯವಿಧಕಾರಣತ್ವವೂ ಒಪ್ಪುವುದೆಂದು ಭಾವವು. ಈ ಜ್ಞಾನಶಕ್ತಿಗಳೆರಡೂ, ಅವನಿಗೂ ಪುಣ್ಯಲಬ್ಧವಾಗಿ, ಅವನೂ ಕರ್ಮವಶ್ಯನಾಗಿರಬಹುದು. ಹಾಗಿದ್ದಮೇಲೆ ಅವನಲ್ಲಿ ಅತಿಶಯವೇನು? ಎಂದರೆ (ಸ್ವರಾಟ್) ಅವನು ತನಗೆ ತಾನೇ ಸರ್ವಸ್ವತಂತ್ರನಾಗಿದ್ದು. ಕರ್ಮವಶರಾದ ಬೇರೆಯವರಿಗೆ ಪ್ರೇರಕನೇ ಹೊರತು ತಾನು ಕರ್ಮವಶ್ಯನಲ್ಲವೆಂದು ಭಾವವು. ಹೀಗೆ ಪರಮಾತ್ಮನು ಈ ಪ್ರಪಂಚದ ಸೃಷ್ಟ್ಯಾದಿಗಳಿಗೆ ಉಭಯವಿಧದಿಂದಲೂ ಕಾರಣನೆಂಬುದು ಬೇರೆಬೇರೆ ಶ್ರುತಿಪ್ರಮಾಣಗಳಿಂದ ಸಿದ್ಧವಾಗುವುದು. 'ಸರ್ವಂ ಖಲ್ವಿದಂ ಬ್ರಹ್ಮ, ಐತದಾತ್ಮ್ಯಮಿದಂ ಸರ್ವಂ, ಅಯಮಾತ್ಮಾ ಬ್ರಹ್ಮ. ತತ್ತ್ವಮಸಿ,' ಇತ್ಯಾದಿ ಶ್ರುತಿವಾಕ್ಯಗಳು ಅನ್ವಯಪ್ರತಿಪಾದಕಗಳಾಗಿ ಉಪಾದಾನಕಾರಣತ್ವವನ್ನು ನಿರೂಪಿಸುವುವು. "ತದೈಕ್ಷತ, ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೋಯಮಯತಿ ಯ ಆತ್ಮನಿ ತಿಷ್ಠನ್ನಾತ್ಮನೋಂತರೋಯಮಾತ್ಮಾ ನ ವೇದ ಯಸ್ಯಾತ್ಮಾ ಶರೀರಂ ಯ ಆತ್ಮಾನಮಂತರೋಯಮಯತಿ" ಇತ್ಯಾದಿ ಶ್ರುತಿವಾಕ್ಯಗಳು ವ್ಯತಿರೇಕಪ್ರತಿಪಾದಕಗಳಾಗಿ ನಿಮಿತ್ತಕಾರಣತ್ವವನ್ನು ತೋರಿಸುವುವು. ಆದರೆ ಸರ್ವಶಕ್ತನಾದ ಈಶ್ವರನು ಜಗತ್ಸೃಷ್ಟಿಯನ್ನು ಮಾಡುವ ವಿಷಯದಲ್ಲಿ ಸಮರ್ಥನಾಗಿದ್ದರೂ ಇರಬಹುದು. ಆದರೂ ಜಗತ್ಸೃಷ್ಟಿಗೆ ಏನಾದರೂ ಒಂದು ಫಲೋದ್ದೇಶವಿರಬೇಕಲ್ಲವೆ? ಬುದ್ಧಿಪೂರ್ವಕವಾಗಿ ಯಾವನು ಯಾವ ಕಾರ್ಯವನ್ನಾರಂಭಿಸಬೇಕಾದರೂ, ಅದರಿಂದುಂಟಾಗುವ ಪ್ರಯೋಜನವು ಸ್ವಾರ್ಥವಾಗಿಯಾಗಲಿ, ಪರಾರ್ಥವಾಗಿಯಾಗಲಿ ಇರಬೇಕು. ಅವಾಪ್ತಸಮಸ್ತಕಾಮನಾದ ಪರಬ್ರಹ್ಮನಿಗೆ, ಈ ಜಗತ್ಸೃಷ್ಟಿಯಿಂದ ಹೊಂದಬೇಕಾದ ಫಲವೇನೂ ಇರುವುದಿಲ್ಲ. ಅಥವಾ ಕರುಣಾಳುವಾದ ಭಗವಂತನು ಈ ಸೃಷ್ಟಿಕಾರ್ಯವನ್ನು ಪರಾನುಗ್ರಹಾರ್ಥವಾಗಿಯೇ ನಡೆಸುವ ಪಕ್ಷದಲ್ಲಿ, ಇದನ್ನು ಯಾವಾಗಲೂ ಸುಖಪೂರ್ಣವನ್ನಾಗಿಯೇ ಇಡುತ್ತಿದ್ದನೇ ಹೊರತು ಗರ್ಭ ಜನ್ಮ ಜರಾ ಮರಣ ನರಕಾದಿಗಳಾದ ನಾನಾದುಃಖ

**ಳೂ ಕೂಡ ಮೋಹಪರವಶರಾಗುವರೋ, ಯಾವನು ಚೇತನೋಜ್ಜೀವನಾ**

---

ಗಳಿಗೆಲ್ಲಕ್ಕೂ ಈ ಜೀವರಾಶಿಯನ್ನು ಗುರಿಮಾಡುತ್ತಿರಲಿಲ್ಲ. ಹೀಗೆ ನಿಷ್ಪ್ರಯೋಜನವಾದ ಈ ಸೃಷ್ಟಿಕಾರ್ಯಕ್ಕೆ ಆ ಬ್ರಹ್ಮನನ್ನು ಕಾರಣವಾಗಿ ಹೇಳುವುದು ಹೇಗೆ? ಎಂಬ ಶಂಕೆಯನ್ನು ನಿವಾರಿಸುವುದಕ್ಕಾಗಿ ಮುಂದಿನ ವಾಕ್ಯದಲ್ಲಿ ಇದರ ಪ್ರಯೋಜನವನ್ನು ತಿಳಿಸುವರು. (ಯಃ) ಯಾವ ಪರಮಾತ್ಮನು (ಹೃದಾ) ಸಂಕಲ್ಪದಿಂದಲೇ (ಆದಿಕವಯೇ) ಚತುರ್ಮುಖಬ್ರಹ್ಮನಿಗಾಗಿ, (ಬ್ರಹ್ಮ) ಧರ್ಮಬ್ರಹ್ಮಸ್ವರೂಪಗಳನ್ನು ತಿಳಿಸತಕ್ಕ ವೇದವನ್ನು (ತೇನೇ) ವಿಸ್ತರಿಸಿದನೋ, "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ" ಇತ್ಯಾದಿಶ್ರುತ್ಯರ್ಥವು ಇದರಿಂದ ನಿರೂಪಿತವಾಗುವುದು. ಲೋಕೋಜ್ಜೀವನಕ್ಕಾಗಿ ಈ ಶಾಸ್ತ್ರಪ್ರವರ್ತನವನ್ನು ಹೇಗೆ ಮಾಡಿದನೋ, ಅದರಂತೆಯೇ ಜಗತ್ಸೃಷ್ಟಿಯೂ ಲೋಕಹಿತಾರ್ಥವಲ್ಲದೆ ಬೇರೆಯಲ್ಲವೆಂದು ಸೂಚಿತವಾಗುವುದು. ಆದುದರಿಂದ ದಯಾಸಾಗರನಾದ ಭಗವಂತನು, ಚೇತನರಿಗೆ ಮೋಕ್ಷೋಪಯೋಗಿಯಾದ ಜ್ಞಾನಪ್ರವೃತ್ತಿಯನ್ನುಂಟುಮಾಡತಕ್ಕ ಕರಣಕಳೇಬರಗಳನ್ನು ಕೊಡುವುದಕ್ಕಾಗಿಯೇ ಈ ಜಗತ್ಸೃಷ್ಟಿಯನ್ನು ಮಾಡಿದನೆಂದು ಗ್ರಾಹ್ಯವು. ಹೀಗಿರುವಾಗಲೂ ಚೇತನರಿಗೆ ಗರ್ಭದುಃಖಾದ್ಯನುಭವಗಳು ಅವರವರ ಕರ್ಮಮೂಲಕವಾದುದರಿಂದ ಈ ದೋಷಕ್ಕೆ ಈಶ್ವರನು ಭಾಗಿಯಾಗಲಾರನೆಂದೂ ಭಾವವು. ವೇದೋಪದೇಶವಿಲ್ಲದುದರಿಂದುಂಟಾಗುತಿದ್ದ ಅನರ್ಥವೇನು?" ಎಂದರೆ, ಅದನ್ನು ತೋರಿಸುವರು...."ಮುಹ್ಯನ್ತಿ ಯಂ ಸೂರಯಃ" (ಸೂರಯಃ) ಜ್ಞಾನವಂತರೂ ಕೂಡ (ಯಂ) ಯಾವ ಪರಮಾತ್ಮನನ್ನು ಕುರಿತು, (ಮುಹ್ಯಂತಿ) ಮೋಹಗೊಳ್ಳುವರೋ, ಎಂದರೆ, ತಾನು ಮಹಾಜ್ಞಾನಿಗಳಿಗೆ ಅಗೋಚರವಾದ ಮಹಿಮೆಯುಳ್ಳವನಾದುದರಿಂದ, ದುರ್ಜ್ಞೇಯವಾದ ತನ್ನ ಸ್ವರೂಪವನ್ನು ತಿಳಿಸುವುದಕ್ಕಾಗಿಯೇ ವೇದಗಳನ್ನುಪದೇಶಿಸಿದನೆಂದರ್ಥವು. ಅಥವಾ "ಮುಹ್ಯಂತಿ ಯಂ ಸೂರಯಃ" ನಿತ್ಯಸೂರಿಗಳಿಗೂ ಮೋಹವನ್ನುಂಟುಮಾಡತಕ್ಕ ದಿವ್ಯಮಂಗಳವಿಗ್ರಹವುಳ್ಳವನೆಂದೂ ಹೇಳಬಹುದು. ಮತ್ತು "ತೇಜೋವಾರಿಮೃದಾಂ ಯತೋ ವಿನಿಮಯಃ" (ತೇಜೋವಾರಿಮೃದಾಂ) ಪೃಥಿವ್ಯಪ್ತೇಜಸ್ಸುಗಳ, (ವಿನಿಮಯಃ) ಪರಸ್ಪರಮಿಶ್ರೀಕರಣವು, (ಯತಃ) ಯಾವ ಪರಬ್ರಹ್ಮನಿಂದ ನಡೆಯಿತೋ, ಎಂದರೆ, ಅಂಡಸೃಷ್ಟಿಗೆ ಮೊದಲು ಬೇರೆಬೇರೆಯಾಗಿದ್ದ ಪೃಥಿವ್ಯಾದಿಭೂತಗಳನ್ನು ಸೃಷ್ಟಿಕಾರ್ಯಕ್ಕುಪಯೋಗವಾಗುವಂತೆ ಒಂದಾಗಿ ಸೇರಿಸುವುದೇ ತ್ರಿವೃತ್ಕರಣವೆನಿಸುವುದು. ಇದನ್ನೇ ಪಂಚೀಕರಣವೆಂದೂ ಹೇಳುವರು. ಪೃಥಿವಿ ಮೊದಲಾದ ಪಂಚಭೂತಗಳನ್ನು ಯಥಾಯೋಗ್ಯವಾಗಿ ಮಿಶ್ರಮಾಡುವುದಕ್ಕೆ ಪಂಚೀಕರಣವೆಂದು ಹೆಸರು. ಹೀಗೆ ತ್ರಿವೃತ್ಕರಣದಿಂದ ಅಂಡಸೃಷ್ಟಿಯೆಂದೂ ಅಂಡಸೃಷ್ಟಿಯಾದಮೇಲೆ ಚತುರ್ಮುಖೋತ್ಪತ್ತಿಯೆಂದೂ "ತದಂಡಮಭವದ್ಧೈಮಂ" "ತಸ್ಮಿನ್ ಜಜ್ಞೇ ಸ್ವಯಂ ಬ್ರಹ್ಮಾ" ಎಂಬ ಪ್ರಮಾಣಗಳಿಂದ ಸಿದ್ಧವಾಗುವುದು. ಆದುದರಿಂದ ಅಂಡೋತ್ಪತ್ತಿಗೆ ಮೊದಲೇ ನಡೆಯಬೇಕಾದ ಈ ತ್ರಿವೃತ್ಕರಣವು ಪರಮಾತ್ಮಕರ್ತೃಕವಲ್ಲದೆ ಬೇರೆಯಲ್ಲವೆಂಬುದು ಸಿದ್ಧವು.

ರ್ಥವಾಗಿ ಚತುರ್ಮುಖಬ್ರಹ್ಮನಿಗೆ ವೇದಗಳನ್ನುಪದೇಶಿಸಿದನೋ, ಯಾವನು

---

ಅದರೆ "ಹಂತಾಹಮಿಮಾಸ್ತಿಸ್ರೋದೇವತಾ ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ, ತಾಸಾಂ ತ್ರಿವೃತಂ, ತ್ರಿವೃತಮೇಕೈಕಾಂ ಕರವಾಣಿ" ಎಂದು ಪರಮಾತ್ಮನು ತಾನೇ ತ್ರಿಮೂರ್ತಿಗಳಾಗಿಯೂ, ತಾನೇ ಜೀವಾತ್ಮಸ್ವರೂಪದಿಂದ ಸಮಸ್ತಶರೀರಗಳಲ್ಲಿಯೂ ಅನುಪ್ರವೇಶಮಾಡಿ ನಾಮರೂಪಭೇದಗಳನ್ನುಂಟುಮಾಡುವವದಾಗಿಯೂ, ತ್ರಿವೃತ್ಕರಣಕ್ಕೂ ತಾನೇ ಕರ್ತನಾಗಿಯೂ ಇರುವಂತೆ ಮೇಲಿನ ಶ್ರುತಿವಾಕ್ಯದಿಂದ ವ್ಯಕ್ತವಾಗುವುದಲ್ಲವೆ? ಹೀಗೆ ಭಗವಂತನೂ ಸೃಷ್ಟಿಗೆ ಒಳಪಟ್ಟಿದ್ದಮೇಲೆ ಅವನಿಗೂ ಅನಿತ್ಯತ್ವಾದಿದೋಷಗಳೇ ಸಂಬಂಧಿಸಿರಬೇಕಲ್ಲವೆ? ಎಂದರೆ (ಯತ್ರ ತ್ರಿಸರ್ಗೋ ಮೃಷಾ) ಯಾವ ಪರಮಾತ್ಮನಲ್ಲಿ ಮಾತ್ರ (ತ್ರಿಸರ್ಗಃ) ತ್ರಿವೃತ್ಕರಣಪೂರ್ವಕವಾದ ಸೃಷ್ಟಿಯು (ಮೃಷಾ) ಮಿಥ್ಯೆಯಾಗುವುದೋ, ಎಂದರೆ ಆ ಸೃಷ್ಟಿದೋಷವು ಭಗವಂತನನ್ನುಮಾತ್ರ ಸ್ಪರ್ಶಿಸದೆಂದು ಭಾವವು. ಇವನಿಗೆಮಾತ್ರ ಆ ದೋಷವು ಅಂಟದಿರುವುದು ಹೇಗೆ? ಎಂದರೆ "ಧಾಮ್ನಾ ಸ್ವೇನ ನಿರಸ್ತಸರ್ವಕುಹಕಂ" ತನ್ನತೇಜಸ್ಸಿನಿಂದಲೇ ಸಮಸ್ತದೋಷಗಳನ್ನೂ ನಾಶಹೊಂದಿಸಬಲ್ಲವನು. (ತಂ) ಅಂತಹ ಮಹಾಮಹಿಮೆಯುಳ್ಳವನಾಗಿಯೂ, (ಸತ್ಯಂ) ನಿತ್ಯನಾಗಿಯೂ, (ಪರಂ) ಬ್ರಹ್ಮರುದ್ರಾದಿಗಳಿಗಿಂತಲೂ ಮೇಲೆನಿಸಿಕೊಂಡವನಾಗಿಯೂ ಇರುವ ಶ್ರೀಮನ್ನಾರಾಯಣನನ್ನು (ಧೀಮಹಿ) ಧ್ಯಾನಿಸುವೆವು" ಎಂದನ್ವಯವು.

ಇದರಿಂದ ಶುದ್ಧಸ್ವರೂಪದಲ್ಲಿ ಸೂಕ್ಷ್ಮಚಿದಚಿದ್ವಿಶಿಷ್ಟನಾದ ಪರಮಾತ್ಮನು ಚೇತನೋಜ್ಜೀವನಾರ್ಥವಾಗಿ ಸೃಷ್ಟಿಕಾರ್ಯಕ್ಕನುಕೂಲಿಸುವಂತೆ ಪಂಚಭೂತಸಂಯೋಗವನ್ನೂ, ವೇದೋಪದೇಶವನ್ನೂ ಮಾಡುವುದರಿಂದ ನಿಮಿತ್ತಕಾರಣವೆನಿಸಿಕೊಂಡು ಕಾರ್ಯರೂಪವಾದ ಸ್ಥೂಲಚಿದಚಿತ್ತುಗಳಲ್ಲಿಯೂ ತಾನೇ ಅನುಪ್ರವೇಶಮಾಡುವುದರಿಂದ ಉಪಾದಾನಕಾರಣವೆನಿಸುವನು. ಹೀಗೆ ಸ್ಥೂಲಸೂಕ್ಷ್ಮಚಿದಚಿದ್ವಿಶಿಷ್ಟನಾದ ಪರಮಾತ್ಮನಿಗೆ ಅಭೇದವನ್ನು ಹೇಳುವುದೇ ವಿಶಿಷ್ಟಾದ್ವೈತಮತಾಭಿಪ್ರಾಯವು.

## ಅದ್ವೈತಮತಾನುಸಾರವಾದ ವ್ಯಾಖ್ಯಾನವು.

(ಯತಃ) ಯಾವ ಪರಬ್ರಹ್ಮದಿಂದ (ಅಸ್ಯ) ಈ ಪ್ರಪಂಚದ, (ಜನ್ಮಾದಿ) ಸೃಷ್ಟಿಸ್ಥಿತಿಲಯಗಳು (ಅನ್ವಯಾತ್) ಅತನ ಸ್ಥಿತಿಯಿಂದಲೂ, (ಇತರತಶ್ಚ) ಅಭಾವದಿಂದಲೂ ಉಂಟಾಗುವುವೋ ಅಂತಹ ಪರಬ್ರಹ್ಮವನ್ನು ಧ್ಯಾನಿಸುವೆವೆಂದು ಭಾವವು. ಅನ್ವಯವ್ಯತಿರೇಕಗಳೆಂದರೆ "ಯತ್ಸತ್ವೇ ಯತ್ಸತ್ತ್ವಂ ಯದಭಾವೇ ಯದಭಾವಃ" ಯಾವುದಿದ್ದಾಗ ಯಾವುದಿರುವುದೋ ಯಾವುದಿಲ್ಲದಿದ್ದಾಗ ಅದೂ ಇಲ್ಲದೆ ಹೋಗುವುನೋ ಇಂತಹ ಸಂಬಂಧಕ್ಕೆ ಅನ್ವಯವ್ಯತಿರೇಕಗಳೆಂದು ಹೆಸರು. ಈ ಸಂಬಂಧವು ಕಾರ್ಯಕಾರಣಗಳಲ್ಲಿಯೇ ಪ್ರವರ್ತಿಸುವುದು. ಹೇಗೆಂದರೆ ಮಣ್ಣಿದ್ದರೆ ಮಾತ್ರವೇ ಗಡಿಗೆಯೇ ಹೊರತು ಮಣ್ಣಿಲ್ಲದೆ ಗಡಿಗೆಯಿಲ್ಲವು. ಅದರಂತೆಯೇ ಕಾರಣರೂಪವಾದ ಪರಬ್ರಹ್ಮವಿದ್ದಾಗಲೇ ಕಾರ್ಯರೂಪ

ಜಗತ್ಸೃಷ್ಟಿಗೆ ಮೊದಲು, ಮುಂದಿನ ಸೃಷ್ಟಿಕಾರ್ಯಕ್ಕನುಕೂಲಿಸುವಂತೆ, ಸೃ

ವಾದ ಜಗತ್ತಿರುವುದೇ ಹೊರತು ಬ್ರಹ್ಮಭಿನ್ನವಾದ ಜಗತ್ತಿಲ್ಲವೆಂದು ಭಾವವು. ಅಥವಾ ಅನ್ವಯವ್ಯತಿರೇಕಗಳೆಂಬುದಕ್ಕೆ ಅನುವೃತ್ತಿವ್ಯಾವೃತ್ತಿಗಳೆಂಬ ಅರ್ಥಾಂತರವನ್ನು ಹೇಳ ಬಹುದು. ಅನುವೃತ್ತಿಯೆಂದರೆ ತನ್ನ ಸ್ವರೂಪದಿಂದಲೇ ಇರುವುದು. ವ್ಯಾವೃತ್ತಿಯೆಂದರೆ ಬೇರೆರೂಪಕ್ಕೆ ತಿರುಗುವುದು. ಮಣ್ಣು ಕಾರಣಾವಸ್ಥೆಯಲ್ಲಿ ಘಟಸ್ವರೂಪದಿಂದಿದ್ದು, ಕಾರ್ಯಾವಸ್ಥೆಯಲ್ಲಿ ಘಟರೂಪಕ್ಕೆ ತಿರುಗುವಂತೆ ಬ್ರಹ್ಮವೂ ಕೂಡ ತನ್ನಸದ್ರೂಪದಿಂದ ಕಾರಣವಾಗಿದ್ದು ಜಗದ್ರೂಪದಿಂದ ಕಾರ್ಯವಾಗಿಯೂ ತೋರುವುದರಿಂದ, ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣವೆನಿಸುವುದೆಂದು ಭಾವವು. ಮೊದಲು ಸ್ವಸ್ವರೂಪದಲ್ಲಿದ್ದ ಬಂಗಾರವು ಒಮ್ಮೆ ಕುಂಡಲಾದ್ಯಾಕಾರಕ್ಕೆ ತಿರುಗಿದ್ದು, ಪುನಃ ಸ್ವಸ್ವರೂಪದಲ್ಲಿಯೇ ನಿಲ್ಲು ವಂತೆ, ಪರಬ್ರಹ್ಮವೂಕೂಡ, ಪೃಥಿವ್ಯಾದ್ಯಾಕಾರದಿಂದ ಒಮ್ಮೊಮ್ಮೆ ಪರಿಣಮಿಸಿ, ಮತ್ತೊ ಮ್ಮೆ ಆ ಕಾರ್ಯರೂಪವನ್ನು ಬಿಟ್ಟು ಸ್ವಸ್ವರೂಪವನ್ನೇ ಹೊಂದುತ್ತಿರುವುದೆಂದು ಭಾವವು. ಉಭಯವಿಧಕಾರಣತ್ವವೂ ಒಂದಕ್ಕೇ ಸಿದ್ಧಿಸುವುದು ಲೋಕಾನುಭವವಿರುದ್ಧವಾದ ರೂ, ಪರಮಾತ್ಮನು ಸರ್ವಶಕ್ತನಾದುದರಿಂದ ಇದು ಅವನಲ್ಲಿ ಮಾತ್ರ ಸಿದ್ಧಿಸುವುದೆಂಬು ದಕ್ಕೆ ವೇದದಲ್ಲಿ ಅನೇಕಪ್ರಮಾಣಗಳುಂಟು. "ಸರ್ವಂ ಖಲ್ವಿದಂ ಬ್ರಹ್ಮ" ಈ ಲೋಕ ವೆಲ್ಲವೂ ಬ್ರಹ್ಮಸ್ವರೂಪವೇ! "ಐತದಾತ್ಮ್ಯಮಿದಂ ಸರ್ವಂ" ಇವೆಲ್ಲವೂ ಬ್ರಹ್ಮಸ್ವರೂ ಪವು" ಎಂಬಿವುಗಳಿಂದ ಉಪಾದಾನಕಾರಣತ್ವವೂ, "ಯತೋವಾ ಇಮಾನಿ ಭೂತಾನಿ ಜಾಯಂತೇ" "ಯತಸ್ಸರ್ವಾಣಿ ಭೂತಾನಿ ಭವಂತ್ಯಾದಿಯುಗಾಗಮೇ। ಯಸ್ಮಿಂಶ್ಚ ಪ್ರಲ ಯಂ ಯಾಂತಿ ಪುನರೇವ ಯುಗಕ್ಷಯೇ" ಇತ್ಯಾದಿ ಶ್ರುತಿಸ್ಮೃತಿವಾಕ್ಯಗಳಿಂದ ನಿಮಿ ತ್ತಕಾರಣತ್ವವೂ ಸಿದ್ಧವಾಗುವುದು. ಆದರೆ ಅನಾದಿಯಾದ ಮಾಯೆಯೂ ಜಗತ್ತಿಗೆ ಕಾರಣಭೂತವಾಗುವುದಲ್ಲವೆ? ಅದನ್ನೇ ಇಲ್ಲಿ ಧ್ಯಾನವಿಷಯವನ್ನಾಗಿ ಹೇಳಿರಬಾರದೆ? ಎಂದರೆ, ಅದನ್ನು ನಿಷೇಧಿಸುವರು, (ಅಭಿಜ್ಞಃ) ಸರ್ವಜ್ಞನು- (ಅರ್ಥೇಷು) ಆಕಾಶಾದಿ ಕಾರ್ಯಗಳಲ್ಲಿ (ಅಭಿಜ್ಞಃ) ಸರ್ವಜ್ಞನು, ಅಥವಾ ಜಾಗರೂಕನೆಂದರ್ಥವು. ಇದರಿಂದ ಜಡವಾದ ಪ್ರಕೃತಿಯು ಧ್ಯಾನವಿಷಯವಲ್ಲವೆಂದು ಸಿದ್ಧವಾಗುವುದು. ಮತ್ತು (ಸ್ವರಾಟ್) ಸ್ವಯಂಪ್ರಕಾಶನು ಅಥವಾ ಸ್ವತಸ್ಸಿದ್ಧವಾದ ಜ್ಞಾನದಿಂದ ಪ್ರಕಾಶಿಸುವವನು. ಆದರೆ "ಹಿರಣ್ಯಗರ್ಭಸ್ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್" ಎಂಬ ಶ್ರುತಿ ಯಂತೆ ಮೇಲೆ ಹೇಳಿದ ಗುಣಗಳೆಲ್ಲವೂ ಚತುರ್ಮುಖಬ್ರಹ್ಮನಿಗೂ ಇರುವುದರಿಂದ, ಅವನನ್ನೇ ಧ್ಯಾನವಿಷಯವಾಗಿ ಹೇಳಿರಬಾರದೆ?" ಎಂದರೆ ಆ ಶಂಕೆಯನ್ನು ನಿವಾರಿಸು ವರು. (ತೇನೇ ಬ್ರಹ್ಮ ಹೃದಾ ಯ ಆದಿಕವಯೇ) ಯಾವ ಆವೇದವನ್ನು ಕುರಿತು ಪಂಡಿ ತರೂಕೂಡ ಮರುಳಾಗುವರೋ, ಆ ಶಬ್ದಬ್ರಹ್ಮವನ್ನು ಚತುರ್ಮುಖಬ್ರಹ್ಮನಿಗೂ ಮನಸ್ಸಿ ನಿಂದ ಉಪದೇಶಿಸಿದವನು. "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ, ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ" ಎಂಬ ಶ್ರುತ್ಯರ್ಥವು ಇಲ್ಲಿ ಸೂಚಿತವಾಗುವುದು. ಮತ್ತು (ಯತ್ರ) ಯಾವ ಪರಬ್ರಹ್ಮನಲ್ಲಿ (ತ್ರಿಸರ್ಗಃ) ಮಾಯಾಗುಣಗಳಾದ ಸತ್ತ್ವರಜ ಸ್ತಮಸ್ಸುಗಳಿಂದುಂಟಾದ ಭೂತೇಂದ್ರಿಯದೇವತಾರೂಪ ಸೃಷ್ಟಿಯು (ತೇಜೋವಾರಿ

**ಕ್ಷಿತಿ, ಅಪ್ಪು, ತೇಜಸ್ಸು, ಇವುಗಳ ಪರಸ್ಪರಸಂಮೇಳನರೂಪವಾದ ತ್ರಿವೃತ್ಕರಣ**

ಮೃದಾಂ) ತೇಜಸ್ಸು, ನೀರು, ಭೂಮಿ, ಇವುಗಳ ಬದಲಾವಣೆಯಂತೆ, ಎಂದರೆ ಒಂದು ಮತ್ತೊಂದರರಹಾಗಿ ತೋರುವಂತೆ (ಮೃಷಾ) ಅಸತ್ಯವೋ, ಅಂತಹ ಪರಮಾತ್ಮನೆಂದನ್ವಯವು. ಬಿಸಿಲ ಝಳದಲ್ಲಿ ಜಲಬುದ್ಧಿಯು ಹೇಗೆ ನಿಜವಲ್ಲವೋ, ಹಾಗೆಯೇ ಪರಬ್ರಹ್ಮ ವಿಷಯದಲ್ಲಿ ಗುಣಜನ್ಯವಾದ ಸೃಷ್ಟಿಯು ಕೇವಲಭ್ರಾಂತಿಯೇ ಹೊರತು ನಿಜವಲ್ಲವೆಂದು ಭಾವವು. ಮತ್ತು, (ಧಾಮ್ನಾ ಸ್ವೇನ ಸದಾನಿರಸ್ತಕುಹಕಂ) ತನ್ನ ತೇಜಸ್ಸಿನಿಂದ ಮಾಯಾಮಯವಾದ ಈ ಪ್ರಪಂಚವನ್ನು ಯಾವಾಗಲೂ ನಾಶಹೊಂದಿಸುತ್ತಿರುವನು. (ಸತ್ಯಂ) ಸತ್ಯಸ್ವರೂಪನು (ತಂ) ಅಂತಹ (ಪರಂ) ಪರಬ್ರಹ್ಮನನ್ನು (ಧೀಮಹಿ) ಧ್ಯಾನಿಸುವೆವು.

ಇದರ ಮುಖ್ಯಾರ್ಥವೇನೆಂದರೆ, ಪರಬ್ರಹ್ಮವೊಂದೇ ಸತ್ಯವು. ಆ ಪರಬ್ರಹ್ಮವೇ ರೂಪಾಂತರದಿಂದ ಈ ಪ್ರಪಂಚರೂಪವಾಗಿ ತೋರಿ, ಆಗಾಗ ಆ ಮಾಯಾಪ್ರಪಂಚವನ್ನು ತನ್ನಲ್ಲಿಯೇ ಅಡಗಿಸಿಕೊಳ್ಳುತ್ತಿರುವುದರಿಂದ, ಜಗತ್ತಿನ ಸೃಷ್ಟಿಸ್ಥಿತಿಲಯಗಳೆಂಬ ಕಾರ್ಯಗಳು ನಡೆಯುತ್ತಿರುವುವು. ಸರ್ವಜ್ಞನಾಗಿಯೂ, ಸ್ವಯಂಪ್ರಕಾಶವುಳ್ಳವನಾಗಿಯೂ, ಇರುವ ಆ ಪರಮಾತ್ಮನು ಯೋಗಿಗಳಿಗೂ, ಮೋಹವನ್ನುಂಟುಮಾಡತಕ್ಕ ವೇದಗಳನ್ನು ಬ್ರಹ್ಮನಿಗೆ ಉಪದೇಶಿಸಿದನು. ಪೃಥಿವ್ಯಾದಿಭೂತಗಳಲ್ಲಿ ಹುಟ್ಟುವ ರೂಪಾಂತರದಂತೆ ಇವನಲ್ಲಿ ತ್ರಿಗುಣಸೃಷ್ಟಿಸಂಬಂಧವು ಸತ್ಯವಲ್ಲ. ತನ್ನ ತೇಜೋಮಂಡಲದಿಂದ ಮಾಯಾಮಯವಾದ ಈ ಪ್ರಪಂಚವನ್ನು ಯಾವಾಗಲೂ ನಿರಸನಮಾಡುತ್ತ ಸತ್ಯಸ್ವರೂಪದಿಂದಿರುವ ಆ ಪರ ಸವಿಷಯುನೆಂಬು ಮುಖ್ಯಾರ್ಥವು.

## ದ್ವೈತಾರ್ಥವು

(ಸತ್ಯಂ ಪರಂ ಧೀಮಹಿ) ನಿರತಿಶಯಾನಂದಸ್ವರೂಪನಾಗಿಯೂ. ಸರ್ವೋತ್ತಮನಾಗಿಯೂ ಇರು ಶ್ರೀಮನ್ನಾರಾಯಣನನ್ನು ಧ್ಯಾನಿಸುವೆವೆಂದರ್ಥವು. ಆದರೆ ಪ್ರತ್ಯಕ್ಷವಾಗಿ ಕಣ್ಣಿಗೆ ಕಾಣದ ನಾರಾಯಣನೊಬ್ಬನಿರುವನೆಂಬುದಕ್ಕೆ ಪ್ರಮಾಣವೇನು? ಎಂದರೆ, ಲಕ್ಷಣವನ್ನು ಹೇಳುವರು. (ಅನ್ವಯಾದಿತರತಶ್ಚ) ಅನ್ವಯವ್ಯತಿರೇಕಗಳೆಂಬ ಎರಡುವಿಧದ ಅನುಮಾನಗಳಿಂದಲೂ, (ಅಸ್ಯ) ಈ ಪ್ರಪಂಚಕ್ಕೆ (ಜನ್ಮಾದಿ) ಸೃಷ್ಟಿ, ಸ್ಥಿತಿ, ಲಯ, ಜ್ಞಾನ, ಅಜ್ಞಾನ, ಬಂಧ, ಮೊದಲಾದುವುಗಳೆಲ್ಲವೂ (ಯತಃ) ಯಾವ ನಾರಾಯಣನಿಂದಲೇ ಆಗುವುವೋ, ಅಂತಹ ಪರಮಾತ್ಮನನ್ನು ಧ್ಯಾನಿಸುವೆವೆಂದನ್ವಯವು. ಹೀಗೆ ಜಗತ್ಸೃಷ್ಟ್ಯಾದಿಕಾರಣನೆಂಬುದು ಆ ಪರಮಾತ್ಮನೊಬ್ಬನಿಗೆ ಮಾತ್ರವೇ ಒಪ್ಪುವುದರಿಂದ "ಕಾರಣಂತುಧ್ಯೇಯಃ" ಎಂಬಂತೆ ಆತನು ಧ್ಯೇಯನೆಂದೂ ಭಾವವು. ಆದರೆ ಪರಮಾಣುಪುಂಜಕ್ಕೆ ಜಗತ್ಕಾರಣತ್ವವಿಲ್ಲವೆ? ಎಂದರೆ, ಪರಮಾಣುಗಳು ಜಡವಸ್ತುಗಳಾದುದರಿಂದ ಅದಕ್ಕೆ ಜಗತ್ಕಾರಣತ್ವವನ್ನು ಹೇಳುವುದಕ್ಕಿಲ್ಲ। ಒಂದುವೇಳೆ ಪರಮಾಣುಗಳಿಗೇ ಚೈತನ್ಯವನ್ನಂಗೀಕರಿಸಿ ಅದನ್ನು ಸಾಧಿಸುವುದಕ್ಕೂ ಅವಕಾಶವಿಲ್ಲ. ಹಾಗಿದ್ದರೆ ಪ್ರಳಯವೇ

ವೆಂಬ ಕಾರ್ಯವನ್ನು ನಡೆಸಿದನೋ, ಯಾವನ ವಿಷಯದಲ್ಲಿ ಮಾತ್ರ ಈ ಪ್ರವೃತ್ತಿ

ಇಲ್ಲದೆ ಹೋಗಬೇಕಾಗುವುದು. ಅಥವಾ ಆ ಪರಮಾಣುಗಳಲ್ಲಿಯೇ ಚೇತನಾಚೇತನಗಳೆಂಬ ಎರಡುವಿಭಾಗಗಳುಂಟೆಂದು ಗ್ರಹಿಸಿದ ಪಕ್ಷದಲ್ಲಿಯೂ, ಅವೆರಡನ್ನೂ ಸೇರಿಸುವುದಕ್ಕಾದರೂ ಬೇರೊಂದು ಕಾರಣವಿಲ್ಲದೆ ತೀರದಷ್ಟೆ? ಅದನ್ನೇ ಈಗ ನಾವು ಪರಬ್ರಹ್ಮವೆಂದು ಹೇಳುವೆವು. ಇದಕ್ಕಾಗಿಯೇ ವ್ಯಾಸಮಹರ್ಷಿಗಳು ಬ್ರಹ್ಮಸೂತ್ರದಲ್ಲಿ "ಸಮುದಾಯೋಭಯ ಹೇತುಕೇಪಿ ತದಪ್ರಾಪ್ತಿಃ" ಎಂದುಹೇಳಿ ಪರಮಾಣುವಾದವನ್ನು ನಿರಾಕರಿಸುವರು. ಹಾಗೂ ಆಗಲಿ! ಹಾಲು ಮುಂತಾದುವುಗಳು ಅಚೇತನಗಳಾಗಿದ್ದರೂ, ತಮಗೆತಾವೇ ವಿಕಾರಹೊಂದುವಂತೆ, ಪ್ರಕೃತಿಗೇ ಜಗತ್ಕಾರಣತ್ವವನ್ನಂಗೀಕರಿಸಬಾರದೆ? ಎಂದರೆ (ಅರ್ಥೇಷ್ವಭಿಜ್ಞಃ) ಜಡವಾದ ಮಾಯೆಗೆ ಸರ್ವಜ್ಞತ್ವವು ಅಸಂಭಾವಿತವಾದುದರಿಂದ ಆಶಂಕೆಯೂ ನಿರಸ್ತವಾಗುವುದು. ಇದಲ್ಲದೆ ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನನ್ನು ಕುರಿತು "ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ" ಅರ್ಜುನಾ! ನಿನಗೂ ನನಗೂ ಲೆಕ್ಕವಿಲ್ಲದಷ್ಟು ಜನ್ಮಗಳು ಕಳೆದು ಹೋದುವು. ಆದರೆ ಅವೆಲ್ಲವನ್ನೂ ನಾನು ಬಲ್ಲೆನು! ನೀನು ಕಾಣೆ?" ಎಂದು ಹೇಳುವುದರಿಂದ ಸರ್ವಜ್ಞತ್ವವೆಂಬ ಗುಣವು ಆ ನಾರಾಯಣನಿಗೊಬ್ಬನಿಗಲ್ಲದೆ ಬೇರೆಯವರಿಗಿಲ್ಲವೆಂದೂ ಸಿದ್ಧವಾಗುವುದು. ಇವನಿಗೆ ಮೇಲೆ ರುದ್ರಾದಿದೇವತೆಗಳಿಗೆ ಆಗುಣ ವಿರಬಾರದೆ? ಎಂದರೆ (ಸ್ವರಾಟ್) ತನಗೆ ತಾನೇ ಪ್ರಭುವೇಹೊರತು ಇವನಿಗೆಮೇಲೆ ಬೇರೊಬ್ಬರಿಲ್ಲವೆಂದು ತಾತ್ಪರ್ಯವು. "ಯಂ ಕಾಮಯೇ ತಂ ತಮುಗ್ರಂ ಕೃಣೋಮಿ" ನನಗೆ ಇಷ್ಟಬಂದವರನ್ನು ಈಶ್ವರನನ್ನಾಗಿ ಮಾಡುವೆನು, ಎಂಬೀ ಶ್ರುತ್ಯರ್ಥವನ್ನು ಆಲೋಚಿಸಿದಪಕ್ಷದಲ್ಲಿ ರುದ್ರಾದಿಗಳಿಗೂ ಕೂಡ, ನಾರಾಯಣಾನುಗ್ರಹದಿಂದಲೇ ಜ್ಞಾನಾದಿಗುಣಗಳುಂಟಾಗುವಂತೆ ಸ್ಪಷ್ಟಪಡುವುದು. ಆದರೆ ಅಪಾರವಾದ ವೇದದಲ್ಲಿ ಕೆಲವುಶ್ರುತಿಗಳುಮಾತ್ರ ಹರಿಸರ್ವೋತ್ತಮತ್ವವನ್ನು ಹೇಳಿದಮಾತ್ರಕ್ಕೆ ಅದರಲ್ಲಿ ನಿಶ್ಚಯವೇನು? ಎಂದರೆ, ಮುಂದಿನವಾಕ್ಯದಿಂದ ಅದನ್ನು ಪರಿಹರಿಸುವರು (ತೇನೇ ಬ್ರಹ್ಮ ಹೃದಾಯ ಆದಿಕವಯೇ) ಬ್ರಹ್ಮನಿಗೂ ವೇದಗಳನ್ನು ವಿಸ್ತರಿಸಿದನನಾದುದರಿಂದ, ಆ ನಾರಾಯಣನೇ ಸರ್ವೋತ್ತಮನೆಂದು ಭಾವವು. ಚತುರ್ಮುಖಬ್ರಹ್ಮನೊಬ್ಬನಿಗೆ ವೇದಗಳನ್ನುಪದೇಶಿಸಿದ ಮಾತ್ರಕ್ಕೆ, ಇತರರೆಲ್ಲರ ಮೇಲೂ ಅವನಿಗೆ ಸರ್ವಾಧಿಪತ್ಯವು ಹೇಗೆ ಸಿದ್ಧಿಸುವುದು?" ಎಂದರೆ, "ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾಜಾತಾನಿ ಪರಿತಾ ಬಭೂವ" ಎಲೈ ಬ್ರಹ್ಮನೇ! ನಿನ್ನಿಂದ ಈ ಸಮಸ್ತಭೂತಗಳೂ ಹುಟ್ಟಿ ನಿನ್ನ ಸುತ್ತಲೂ ಆವರಿಸಿರುವುವು. ನಿನಗೆ ಮೇಲೆ ಬೇರೊಬ್ಬ ನಿಲ್ಲವು ಎಂದು ಭಗವಂತನೇ ಹೇಳಿರುವುದರಿಂದ ಆ ಚತುರ್ಮುಖನು ನಿರತಿಶಯಪ್ರಭಾವವುಳ್ಳವನೆಂದು ಸ್ಪಷ್ಟವಾಗುವುದು. ಅಂತಹ ಬ್ರಹ್ಮನಿಗೂ ವೇದೋಪದೇಶವನ್ನು ಮಾಡಿದ ನಾರಾಯಣನು ಸರ್ವಾಧಿಪತಿಯೆಂದು ಹೇಳುವುದಕ್ಕೆ ಸಂದೇಹವೇನು? ಹಾಗಿದ್ದರೆ ಅಂತಹ ಬ್ರಹ್ಮನಿಗೆ ಈ ಉಪದೇಶವೇಕೆ? ಎಂದರೆ (ಮುಹ್ಯಂತಿ ಯತ್ಸೂರಯಃ) ಬ್ರಹ್ಮಾದಿಗಳೂ ಅದರರ್ಥವನ್ನು ಉಪದೇಶವಿಲ್ಲದೆ ಗ್ರಹಿಸಲಾರರೆಂದು ತಾತ್ಪರ್ಯವು.

ಆದರೆ ಸೃಷ್ಟಿಗೆ ಮೊದಲೇ ಇದ್ದ ಭಗವಂತನು ಈ ಜಗತ್ಸೃಷ್ಟಿಕಾರ್ಯವನ್ನು ದ್ದೇಶಿಸಿದುದೇಕೆ? ಯಾವುದಾದರೂ ಪ್ರಯೋಜನವನ್ನುದ್ದೇಶಿಸಿ ಸೃಷ್ಟಿಸಿದನೆಂದು

ರಣಜನಿತವಾದ, ಗುಣತ್ರಯಾತ್ಮಕವಾದ ಸೃಷ್ಟಿಲಯವಿಕಾರಗಳು ಅಂಟಲಾರ

---

ಹೇಳಿದ ಪಕ್ಷದಲ್ಲಿ, ಅದಕ್ಕೆ ಮೊದಲು ಅಪೂರ್ಣಕಾಮನಾಗಿದ್ದವನಿಗೆ ಸೃಷ್ಟಿಸಾಮರ್ಥ್ಯವೂ ಇರಲಾರದೆಂದೇ ಹೇಳಬೇಕಲ್ಲವೆ? ಎಂದರೆ (ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋಽಮೃಷಾ) ಪೃಥಿವ್ಯಪ್ತೇಜಸ್ಸುಗಳ ಕಾರ್ಯದಂತೆ ಮಾಯಾಗುಣಸೃಷ್ಟಿಯು ಆತನ ವಿಷಯದಲ್ಲಿ ಮಾತ್ರ ವಿಫಲವು ಎಂದರೆ ಆತನಿಗೆ ಮೊದಲಿಲ್ಲದ ಫಲವನ್ನು ಕೈಗೂಡಿಸುವುದಕ್ಕೋಸ್ಕರವಲ್ಲವೆಂದು ತಾತ್ಪರ್ಯವು. ಹಾಗಿದ್ದರೆ ನಿಷ್ಪ್ರಯೋಜನವಾಗಿ ಪ್ರವೃತ್ತಿಯು ಹೇಗೆ ಸಂಭವಿಸುವುದು, ಎಂದರೆ "ದೇವಸ್ಯೈಷ ಸ್ವಭಾವೋಽಯಮಾಪ್ತಕಾಮಸ್ಯ ಕಾ ಸ್ಪೃಹಾ" ಭಗವಂತನಿಗೆ ಈ ಸೃಷ್ಟಿಕಾರ್ಯವು ಸ್ವಭಾವವೇ ಹೊರತು ಪೂರ್ಣಕಾಮನಾದ ಆತನಿಗೆ ಬೇರೆ ಯಾವ ಕೋರಿಕೆಯೂ ಇಲ್ಲವೆಂದೂ, "ಲೋಕವತ್ತು ಲೀಲಾಕೈವಲ್ಯಂ" ಭಗವಂತನಿಗೆ ಈ ಲೋಕವು ಲೀಲಾಕೈವಲ್ಯವೆಂದೂ ಹೇಳಲ್ಪಟ್ಟಿರುವುದು ಆದುದರಿಂದ ಪೂರ್ಣಕಾಮನಾದ ಪರಮಾತ್ಮನಿಗೆ ಸೃಷ್ಟಿಯಲ್ಲಿ ಪ್ರವೃತ್ತಿಯು ಕೇವಲ ಲೀಲಾರ್ಥವೆಂದು ಸಿದ್ಧವು. ಒಂದೇವಾಕ್ಯದಲ್ಲಿ (ಅಮೃಷಾ) ಎಂಬ ಪದವಿಭಾಗವನ್ನುಮಾಡಿ ಅರ್ಥಾಂತರವನ್ನೂ ಹೇಳಬಹುದು. (ಯಥಾ) ಯಾವಪ್ರಕಾರವಾಗಿ (ತೇಜೋವಾರಿಮೃದಾಂ) ಪೃಥಿವ್ಯಪ್ ತೇಜಸ್ಸುಗಳ (ವಿನಿಮಯಃ) ಕಾರ್ಯವುಂಟಾಗುವುದೋ, ಅದೇರೀತಿಯಲ್ಲಿ ಈಶ್ವರನಲ್ಲಿಯೂ ಕೂಡ (ತ್ರಿಸರ್ಗಃ) ಜೀವೇಶ್ವರಜಡಸೃಷ್ಟಿಯು (ಅಮೃಷಾ) ಸತ್ಯವೆಂದು ಭಾವವು. ಜೀವೇಶ್ವರಜಡಸೃಷ್ಟಿಗಳ ಕ್ರಮವೇನೆಂದರೆ:— ಒಂದೇ ತೇಜಸ್ಸು ಪಾರ್ಥಿವಾದಿಪದಾರ್ಥಗಳಲ್ಲಿ ಅಂತರ್ಗತವಾಗಿದ್ದು, ಅವುಗಳನ್ನು ಮಥಿಸಿದಾಗ ಹೊರಗೆ ಬರುವಂತೆ, ಈಶ್ವರನು ಜಗತ್ತನ್ನು ಸೃಷ್ಟಿಸಿ, ನಾನಾರೂಪದಿಂದ ಅವುಗಳಲ್ಲಿ ಅಂತರ್ಯಾಮಿಯಾಗಿ ಪ್ರವೇಶಿಸಿ, ಭಕ್ತಾನುಗ್ರಹಾರ್ಥವಾಗಿ ವಾಸುದೇವಾದ್ಯವತಾರಗಳನ್ನು ಧರಿಸಿ, ಆಗಾಗ್ಗೆ ತನ್ನ ತೇಜಸ್ಸನ್ನು ಪ್ರಕಾಶಪಡಿಸುವನು. ಇದೇ ಈಶ್ವರಸೃಷ್ಟಿಯು. ಸೂರ್ಯನು ಪ್ರಕಾಶಿಸುವಾಗ ಸಮಸ್ತಜಲೋಪಾಧಿಗಳಲ್ಲಿಯೂ ಅವನ ಪ್ರತಿಬಿಂಬವುಂಟಾಗುವಂತೆ ಸೂಕ್ಷ್ಮಸ್ಥೂಲೋಪಾಧಿಗಳಲ್ಲಿ ಪ್ರತಿಬಿಂಬಭೂತಗಳಾದ ಜೀವಗಳು ಪರಬ್ರಹ್ಮನಿಂದಲೇ ಉಂಟಾಗುವುವು, ಇದೇ ಜೀವಸೃಷ್ಟಿಯು. ಕುಂಬಾರನು ಮಣ್ಣನು ತೆಗೆದು ಘಟಾದಿಗಳನ್ನು ಸೃಷ್ಟಿಸುವಂತೆ, ಜಡಪ್ರಕೃತಿಯನ್ನು ಗ್ರಹಿಸಿ ಅಹಂಕಾರಾದಿಜಡಗಳನ್ನೇ ಸೃಷ್ಟಿಸುವನು. ಇದೇ ಜಡಸೃಷ್ಟಿಯು. ಅವನಲ್ಲಿ ಈ ವಿಧವಾದ ಜೀವೇಶ್ವರ ಜಡಸೃಷ್ಟಿಗಳು ಸತ್ಯವೆಂದು ಭಾವವು, ಆದರೆ ತೇಜಸ್ಸುಮೊದಲಾದುವುಗಳಿಂದ ಹುಟ್ಟುವ ಕಿಡಿ, ನೊರೆ ಮೊದಲಾದುವುಗಳು ಮಿಥ್ಯೆಯಾಗುವಂತೆ ಭಗವಂತನ ಈ ಸೃಷ್ಟಿಯೂ ಮಿಥ್ಯಾಭೂತವಾಗುವುದೆಂಬ ಅರ್ಥವು ತೋರುವುದಲ್ಲವೇ? ಎಂದರೆ (ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ) ಸ್ವಸ್ವರೂಪಜ್ಞಾನದಿಂದ ಯಾವಾಗಲೂ, ನಿರಸಿಸಲ್ಪಟ್ಟ ಇಂದ್ರಜಾಲಾದಿಮಾಯೆಗಳುಳ್ಳವನು; ಎಂದರೆ ಮಾಯಾಮಯವಾದ ಸೃಷ್ಟಿಯನ್ನು ಮಾಡತಕ್ಕವನಲ್ಲವೆಂದು ಭಾವವು. ಇಂತಹ (ಸತ್ಯಂ) ನಿರತಿಶಯಾನಂದಾನುಭವರೂಪನಾದ (ಪರಂ) ಪರಮಾತ್ಮಸ್ವರೂಪನಾದ ನಾರಾಯಣನನ್ನು (ಧೀಮಹಿ) ಧ್ಯಾನಿಸುವೆವೆಂದರ್ಥವು.

ವೋ (ಮಿಥ್ಯಾಭೂತವಾಗುವುದೋ) ಯಾವನು ತನ್ನ ತೇಜಸ್ಸಿನಿಂದಲೇ ಆ ಬಗೆಯ ಅಜ್ಞಾನಗಳೆಲ್ಲವನ್ನೂ ಅಡಗಿಸಬಲ್ಲನೋ, ಯಾವನು ಯಾವ ಬಗೆಯ ವಿಕಾರಕ್ಕೂ ಒಳಗಾಗದ ಸತ್ಯಸ್ವರೂಪನೋ, ಅಂತಹ ನಿರತಿಶಯಾನಂದಕಲ್ಯಾಣ ಗುಣಗಣವಿಶಿಷ್ಟನಾದ ಪರಮಾತ್ಮನನ್ನು ಧ್ಯಾನಿಸುವೆವು.

ಶ್ಲೋ॥ ಧರ್ಮಃ ಪ್ರೋಜ್ಝಿತಕೈತವೋಽತ್ರ ಪರಮೋ ನಿರ್ಮತ್ಸರಾಣಾಂ ಸತಾಂ
ವೇದ್ಯಂ ವಾಸ್ತವಮತ್ರ ವಸ್ತು ಶಿವದಂ ತಾಪತ್ರಯೋನ್ಮೂಲನಂ ।
ಶ್ರೀಮದ್ಭಾಗವತೇ ಮಹಾಮುನಿಕೃತೇ ಕಿಂ ವಾ ಪರೈರೀಶ್ವರ ।
ಸ್ಸದ್ಯೋ ಹೃದ್ಯವರುಧ್ಯತೇಽತ್ರ ಕೃತಿಭಿಶ್ಶುಶ್ರೂಷುಭಿಸ್ತತ್‌ಕ್ಷಣಾತ್॥

ಈ ಗ್ರಂಥದಲ್ಲಿ ನಿಷ್ಕಪಟವಾಗಿಯೂ, ಸರ್ವೋತ್ತಮಫಲಪ್ರದವಾಗಿಯೂ, ನಿರ್ಮತ್ಸರರಾದ ಸತ್ಪುರುಷರಿಗೆ ಸೇವ್ಯವಾಗಿಯೂ ಇರುವ ಭಕ್ತಿರೂಪವಾದ ಧರ್ಮವು ಪ್ರತಿಪಾದಿಸಲ್ಪಡುವುದು. ಮತ್ತು ಇದರಲ್ಲಿ ಆಧ್ಯಾತ್ಮಿಕಾದಿ ತಾಪತ್ರಯಗಳನ್ನು ನೀಗಿಸಿ, ಸರ್ವೋತ್ತಮವಾದ ಶ್ರೇಯಸ್ಸನ್ನು ಕೈಗೂಡಿಸತಕ್ಕುದಾಗಿ, ಅಪ್ರಾಕೃತ ಸಹಜಗುಣವಿಶಿಷ್ಟವಾಗಿರುವ ಪರಾತ್ಪರವಸ್ತುವಿನ ಸ್ವರೂಪವು

---

ಇದರಿಂದ ಭಗವಂತನೇ ಈ ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣಭೂತನು, ಸರ್ವಜ್ಞನು, ಸರ್ವಾಧಿಪತಿಯು. ಚತುರ್ಮುಖಬ್ರಹ್ಮನಿಗೂ ಜ್ಞಾನೋಪದೇಶಮಾಡಿದವನು. ಲೀಲಾರ್ಥವಾಗಿ ಜೀವೇಶ್ವರ ಜಡಸೃಷ್ಟಿಗಳೆಂಬ ತ್ರಿಸರ್ಗದಲ್ಲಿ ಪ್ರವೃತ್ತಿಯುಳ್ಳವನು, ನಿರತಿಶಯಾನಂದಾನುಭವಸ್ವರೂಪನು. ಇಂತಹ ನಾರಾಯಣನೊಬ್ಬನೇ, ಸರ್ವಗುಣಸಂಪೂರ್ಣನಾಗಿಯೂ, ಸರ್ವೋತ್ತಮನಾಗಿಯೂ ಈ ಜೀವಜಡ ಪ್ರಪಂಚಗಳಿಂದ ಭಿನ್ನನಾಗಿಯೂ ಇರುವನೆಂದು ದ್ವೈತಾರ್ಥವು.

## ಗಾಯತ್ರೀ ಮಂತ್ರಾರ್ಥ ಸೂಚನವು.

"ಗಾಯತ್ರ್ಯುಪಕ್ರಮೋ ಯತ್ರ ತತ್ರ ಭಾಗವತಂ ವಿದುಃ" ಎಂಬ ಪುರಾಣೋಕ್ತ ಲಕ್ಷಣವನ್ನನುಸರಿಸಿ ಈ ಪ್ರಥಮಶ್ಲೋಕದಲ್ಲಿ ಗಾಯತ್ರೀಮಂತ್ರಾರ್ಥವು ಸೂಚಿತವಾಗುವುದು. ಗಾಯತ್ರೀಮಂತ್ರಾರ್ಥವೇನೆಂದರೆ;— (ಯಃ ನಃ ಧಿಯಃ ಪ್ರಚೋದಯಾತ್) ಯಾವ ಪರಮಾತ್ಮನು ನಮ್ಮ ಬುದ್ಧಿಗೆ ಪ್ರೇರಕನೋ, (ಸವಿತುಃ, ದೇವಸ್ಯ,) ಸೃಷ್ಟಿಕರ್ತನಾಗಿಯೂ, ಸ್ವಯಂಪ್ರಕಾಶವುಳ್ಳವನಾಗಿಯೂ ಇರುವ ಆ ಸರ್ವೇಶ್ವರನ (ವರೇಣ್ಯಂ) ಅತ್ಯುತ್ತಮವಾದ (ಭರ್ಗಃ) ತೇಜಸ್ಸನ್ನು (ಧೀಮಹಿ) ಧ್ಯಾನಿಸುವೆವು ಎಂಬುದು ಗಾಯತ್ರೀಮಂತ್ರಾರ್ಥವು. ಇದರಂತೆಯೇ ಈಮಂಗಳಶ್ಲೋಕದಲ್ಲಿಯೂ ಕೂಡ (ಜನ್ಮಾದ್ಯಸ್ಯ ಯತಃ) ಎಂಬುದಾಗಿ ಜಗತ್ಕಾರಣತ್ವವನ್ನು ಹೇಳುವುದರಿಂದ ಸವಿತೃಪದಾರ್ಥವು ಸೂಚಿತವಾಗುವುದು. (ಸ್ವರಾಟ್) ಎಂಬುದರಿಂದ ದೇವಶಬ್ದಾರ್ಥವು ಸೂಚಿತವಾಗುವುದು. (ಪರಂ) ಎಂಬ ಶಬ್ದದಿಂದ ವರೇಣ್ಯಶಬ್ದಾರ್ಥವು ಸೂಚಿತವಾಗುವುದು. ವೇದೋಪದೇಶಕನೆಂಬುದರಿಂದ (ಧಿಯೋ ಯೋ ನಃ ಪ್ರಚೋದಯಾತ್)ಎಂಬ ವ್ಯಾಕ್ಯಾರ್ಥವು ಬೋಧಿತವಾಗುವುದು. (ಧಾಮ್ನಾ ಸ್ವೇನ) ಎಂಬುದರಿಂದ ಭರ್ಗ ಶಬ್ದಾರ್ಥವು ಸೂಚಿತವಾಗುವುದು. (ಧೀಮಹಿ) ಎಂಬ ಪದವು ಶಬ್ದಾರ್ಥಗಳೆರಡರಿಂದಲೂ, ಗಾಯತ್ರೀಮಂತ್ರವನ್ನು ಹೋಲುವುದು.

ವೇದ್ಯವಾಗುವುದು. ಮಹರ್ಷಿಪ್ರೋಕ್ತವಾಗಿ, ಕೇವಲ ಭಕ್ತಿಪ್ರಧಾನವಾದ ಈ ಭಾಗವತವೆಂಬ ಗ್ರಂಥವಿರುವಾಗ, ಬೇರೆ ಯಾವ ಶಾಸ್ತ್ರಗಳಿಂದೇನು? ಲೋಕದಲ್ಲಿ ಯಾವ ಧನ್ಯರು ಈ ಸದ್ಗ್ರಂಥವನ್ನು ಕೇಳಬೇಕೆಂದಪೇಕ್ಷಿಸುವರೋ, ಅಂತವರ ಹೃದಯದಲ್ಲಿ ಆಕ್ಷಣವೇ ಸರ್ವೇಶ್ವರನು ತಾನೇ ಬಂದು ಸಿಕ್ಕಿಬೀಳುವನು.

ಶ್ಲೋ॥ ನಿಗಮಕಲ್ಪತರೋರ್ಗಲಿತಂ ಫಲಂ
ಶುಕಮುಖಾದಮೃತದ್ರವಸಂಯುತಂ ।
ಪಿಬತ ಭಾಗವತಂ ರಸಮಾಲಯಂ
ಮುಹುರಹೋ ರಸಿಕಾ ಭುವಿ ಭಾವುಕಾಃ ॥

ಎಲೈ ರಸಜ್ಞರಾದ ಸಜ್ಜನರೆ! ವೇದಗಳೆಂಬ ಕಲ್ಪವೃಕ್ಷದಿಂದ ಗಿಳಿಕಚ್ಚಿಬಿದ್ದ ಹಣ್ಣಿನಂತೆ, ಸರ್ವವೇದಸಾರಭೂತವಾಗಿ, ಶುಕಮುನಿಯ ಮುಖದಿಂದ ಹೊರಟಿರುವ ಈ ಭಾಗವತವು ಅಮೃತಸಮಾನವಾದ ರಸವನ್ನು ಸ್ರವಿಸುವಂತಿರುವುದು. ಆದುದರಿಂದ ನೀವೆಲ್ಲರೂ ಇದರ ರಸವನ್ನು ನಿಮ್ಮ ಮರಣಾವಧಿಯಾಗಿ ಬಾರಿಬಾರಿಗೂ ಆಸ್ವಾದಿಸುತ್ತಿರಬೇಕು!"

ಮೊದಲು ಒಂದಾನೊಂದು ಕಾಲದಲ್ಲಿ ಶೌನಕಾದಿಮಹಾಮುನಿಗಳು ಅನೇಕ ದೇವತೆಗಳಿಗೆ ನಿತ್ಯನಿವಾಸವಾದ *ನೈಮಿಶಾರಣ್ಯದಲ್ಲಿ † ಪರಮಪದಪ್ರಾಪ್ತಿಗಾಗಿ ಸಹಸ್ರವರುಷಗಳವರೆಗೆ ನಡೆಸಬೇಕಾದ ಸತ್ರಯಾಗವನ್ನು ನಡೆಸುತ್ತಿದ್ದರು. ಈ ನಡುವೆ ಒಂದಾನೊಂದುದಿನದಲ್ಲಿ ಈ ಮಹರ್ಷಿಗಳೆಲ್ಲರೂ ಉಷಃಕಾಲದಲ್ಲಿಯೇ ಎದ್ದು ಸ್ನಾನಮಾಡಿ, ಅರ್ಘ್ಯವನ್ನು ಕೊಟ್ಟು, ಅಗ್ನಿಕಾರ್ಯಗಳನ್ನೂ ತೀರಿಸಿಕೊಂಡು, ಸೂತಪೌರಾಣಿಕನ ಬಳಿಗೆ ಬಂದರು. ಅವನನ್ನು ಯಥೋಚಿತವಾಗಿ ಸತ್ಕರಿಸಿ, ಸುಖಾಸೀನನಾಗಿದ್ದ ಆತನನ್ನು ಅತ್ಯಾದರದೊಡನೆ ಪ್ರಶ್ನೆಮಾಡುವರು. ‡ "ಎಲೈ ದೋಷರಹಿತನಾದ ಸೂತನೆ! ನೀನು ಅನೇಕಪುರಾಣಗಳನ್ನೂ, ಚೆನ್ನಾಗಿ ತಿಳಿದ

---

*ಪೂರ್ವದಲ್ಲಿ ಮಹರ್ಷಿಗಳು ತಮಗೆ ತಪೋಯೋಗ್ಯವಾದ ಪುಣ್ಯಸ್ಥಳವಾವುದೆಂದು ಬ್ರಹ್ಮನನ್ನು ಪ್ರಾರ್ಥಿಸಲು, ಬ್ರಹ್ಮನು ಮನೋಮಯವಾದ ಒಂದು ಚಕ್ರವನ್ನು, ನಿರ್ಮಿಸಿ, ಅದನ್ನು ಭೂಲೋಕದಕಡೆಗೆ ಪ್ರಯೋಗಿಸಿ, ಅದರ ನೇಮಿಯು (ಬಳೆಯು) ಯಾವಸ್ಥಳದಲ್ಲಿ ಮುರಿದು, ಚಕ್ರವು ನಿಂತುಬಿಡುವುದೋ ಅದೇ ಉತ್ತಮಕ್ಷೇತ್ರವೆಂದು ತಿಳಿಸಿದನು. ಅದರಂತೆ ಋಷಿಗಳು ಆ ಚಕ್ರವನ್ನು ಹಿಂಬಾಲಿಸಿದಾಗ ಆ ಚಕ್ರವು ಈ ಸ್ಥಳದಲ್ಲಿ ನಿಂತು ಹೋಯಿತು (ನೇಮಿಶ್ಶೀರ್ಯತ ಇತಿ ನೇಮಿಶಂ. ನೇಮಿಶಮೇವ ನೈಮಿಶಂ ಎಂಬ ವ್ಯುತ್ಪತ್ತಿಯನ್ನನುಸರಿಸಿ ಬ್ರಹ್ಮನ ರಥಚಕ್ರದ ನೇಮಿಯು ಮುರಿದುಬಿದ್ದ ಈ ಸ್ಥಳಕ್ಕೆ ನೈಮಿಶಕ್ಷೇತ್ರವೆಂದು ಹೆಸರಾಯಿತು.

ವನು! ಎಷ್ಟೋ ಧರ್ಮಶಾಸ್ತ್ರಗಳನ್ನೋದಿದವನು. ಈಗಲೂ ನೀನು ಅವುಗಳನ್ನು ಆಗಾಗ ಇತರರಿಗೆ ತಿಳಿಸುತ್ತಲೂ ಇರುವೆಯಷ್ಟೆ? ಮತ್ತು ವೇದವಿತ್ತುಗಳಲ್ಲಿ ಮೇಲೆನಿಸಿಕೊಂಡ ಪೂಜ್ಯನಾದ ಬಾದರಾಯಣನೂ, (ವ್ಯಾಸನೂ) ಪರತತ್ತ್ವವನ್ನೂ, ಪ್ರಕೃತಿಪುರುಷಸ್ವರೂಪವನ್ನೂ ತಿಳಿದ ಇನ್ನೂ ಅನೇಕಮಹರ್ಷಿಗಳೂ, ಯಾವಯಾವ ಪುರಾಣೇತಿಹಾಸಗಳನ್ನು ರಚಿಸಿರುವರೋ, ಯಾವಯಾವ ಶಾಸ್ತ್ರಗಳನ್ನು ವಿಧಿಸಿರುವರೋ ಅವೆಲ್ಲವೂ ನಿನಗೆ ತಿಳಿದಂತೆ ಮತ್ತೊಬ್ಬರಿಗೆ ತಿಳಿಯವು! ಎಲೈ ಸೌಮ್ಯನೆ! *ವ್ಯಾಸಾನುಗ್ರಹದಿಂದ ನೀನು ಅದರ ರಹಸ್ಯವೆಲ್ಲವನ್ನೂ ಚೆನ್ನಾಗಿ ತಿಳಿದವನು? ಗುರುಗಳು ನಿನ್ನಂತೆ ಭಕ್ತಿಯುಕ್ತನಾದ ಶಿಷ್ಯನಿಗೆ ಎಷ್ಟೇ ರಹಸ್ಯಾರ್ಥವನ್ನಾದರೂ ಮರೆಸದೆ ಹೇಳುವರು. ಎಲೈ ಆಯುಷ್ಮಂತನೆ! ಲೋಕದಲ್ಲಿ ಮನುಷ್ಯನಿಗೆ ವಿಶೇಷಶ್ರೇಯಸ್ಕರವಾವುದೋ ಆ ವಿಷಯವನ್ನು ನೀನು

---

† ಇಲ್ಲಿ "ಸ್ವರ್ಗಾಯ ಲೋಕಾಯ" ಎಂದು ಮೂಲವು. "ಸ್ವರ್ಗೇ ಲೋಕೇ ಅಮೃತತ್ವಂ ಭಜನ್ತೇ" ಇತ್ಯಾದಿ ಶ್ರುತಿಗಳನ್ನನುಸರಿಸಿ ಇಲ್ಲಿ ಸ್ವರ್ಗವೆಂಬುದಕ್ಕೆ ಪರಮಪದವೆಂದೇ ಅರ್ಥವನ್ನು ಗ್ರಹಿಸಬೇಕು. ಹಾಗಲ್ಲದೆ ಇಂದ್ರಲೋಕವೆಂದು ಹೇಳಿದ ಪಕ್ಷದಲ್ಲಿ ಕೇವಲಮೋಕ್ಷಾಪೇಕ್ಷೆಯಲ್ಲಿರುವ ಶೌನಕಾದಿಮಹರ್ಷಿಗಳ ಸ್ವಭಾವಕ್ಕೂ ಉದ್ದೇಶಕ್ಕೂ ವಿರುದ್ಧವಾಗಿ, ಸ್ವಲ್ಪಸುಖವುಳ್ಳ ಸ್ವರ್ಗಪ್ರಾಪ್ತಿಗಾಗಿ ಅವರು ಅಷ್ಟೊಂದು ದೊಡ್ಡ ಯಾಗವನ್ನು ಪ್ರಕ್ರಮಿಸಿದಂತಾಗುವುದು.

‡ ವ್ಯಾಸರು ಈ ಗ್ರಂಥವನ್ನು ರಚಿಸಿದ ಬಹುಕಾಲದಮೇಲೆ ಸೂತನು ಶೌನಕಾದಿಗಳಿಗೆ ಇದನ್ನು ಹೇಳುವನಾದುದರಿಂದ, ಸೂತಶೌನಕರ ಪ್ರಶ್ನೋತ್ತರರೂಪವಾದ ಈ ಮೊದಲಿನ ಕೆಲವು ಭಾಗಗಳುಮಾತ್ರ ವ್ಯಾಸಪ್ರೋಕ್ತವಲ್ಲವೆಂದು ಕೆಲವರ ಅಭಿಪ್ರಾಯವುಂಟು. ಇದು ತಪ್ಪು! ಮೊದಲಿನಿಂದ ಕೊನೆಯವರೆಗೂ ಈ ಗ್ರಂಥವು ಇದೇವಿಧವಾದ ಪ್ರಶ್ನೋತ್ತರರೂಪದಲ್ಲಿರುವುದರಿಂದ, ಮುಂದೆ ಮುಂದೆಯೂ ಇದೇ ಆಕ್ಷೇಪಣೆಗೆ ಅವಕಾಶವಾಗುವುದು. ಆದುದರಿಂದ ತ್ರಿಕಾಲಜ್ಞನಾದ ವ್ಯಾಸಮುನಿಯು ಮುಂದೆ ನಡೆಯಬಹುದಾದ ಸಂಗತಿಯನ್ನು ಮೊದಲು ತಾನೇ ಅನುವಾದಮಾಡಿ ತೋರಿಸುತ್ತ, ಈ ಗ್ರಂಥರಚನೆಯನ್ನು ಮಾಡಿರುವನೆಂದು ಗ್ರಾಹ್ಯವು.

* ಜೀವಾತ್ಮ ಪರಮಾತ್ಮತತ್ತ್ವವನ್ನು ತಿಳಿಸುವ ಶಾರೀರಕಮೀಮಾಂಸಾಶಾಸ್ತ್ರದಲ್ಲಿ ಬ್ರಾಹ್ಮಣಾದಿಮೂರುವರ್ಗದವರಿಗೆ ಹೊರತು ಇತರಜಾತಿಯವರಿಗೆ ಅಧಿಕಾರವಿಲ್ಲವೆಂದು ಶಾಸ್ತ್ರಸಿದ್ಧವು. ಇದರಂತೆ ಸೂತಪೌರಾಣಿಕರಿಗೆ ಆ ಶಾಸ್ತ್ರವನ್ನೋದುವ ಅಧಿಕಾರವಿಲ್ಲದಿದ್ದರೂ, ಪುರಾಣೇತಿಹಾಸಗಳನ್ನೋದುವುದರಿಂದಲೇ ಅವರಿಗೆ ವ್ಯಾಸಾನುಗ್ರಹದಿಂದ ತತ್ತ್ವಜ್ಞಾನವುಂಟಾಗಿ, ಬ್ರಹ್ಮವೇದಿಗಳಾದ ಋಷಿಗಳಿಗೂ ತತ್ತ್ವೋಪದೇಶಕರಾದರೆಂದು ತಿಳಿಯಬೇಕು.

ಅಲ್ಲಲ್ಲಿ ಪುರಾಣಾದಿಗಳಿಂದ ನಿಶ್ಚಯಿಸಿ ತಿಳಿದಿರುವೆಯಷ್ಟೇ! ಸಾಮಾನ್ಯವಾಗಿ ಈ ಕಲಿಯುಗದಲ್ಲಿ ಮುಂದೆ ಹುಟ್ಟುವ ಜನರೆಲ್ಲರೂ ಅಲ್ಪಾಯುಷ್ಯವುಳ್ಳವರು! ಮತ್ತು ಜಡಸ್ವಭಾವವುಳ್ಳವರು! ಮಂದಬುದ್ಧಿಯುಳ್ಳವರು! ಯಾವಾಗಲೂ ತಾಪತ್ರಯದಲ್ಲಿ ಸಿಕ್ಕಿ ನರಳುತ್ತಿರುವರು. ಆದುದರಿಂದ ಎಂದಾದರೂ ಇವರು ಒಮ್ಮೆ ಶ್ರೇಯಸ್ಸಾಧನೆಗಾಗಿ ಪ್ರಯತ್ನಿಸಿದರೂ, ನಡುನಡುವೆ ಅನೇಕವಿಘ್ನಗಳಿಂದ ಪ್ರತಿಹತರಾಗಿ ಆಶಾಭಂಗವನ್ನು ಹೊಂದುವರು, ಈ ಕಾರಣಗಳಿಂದ ಕಲಿಯುಗದಲ್ಲಿ ಹುಟ್ಟುವ ಮನುಷ್ಯರು ಕೇವಲ ಭಾಗ್ಯಹೀನರೆಂದು ಹೇಳುವುದಕ್ಕೆ ಏನೇನೂ ಸಂದೇಹವಿಲ್ಲ. ಇದಲ್ಲದೆ ಕಲಿಯುಗದ ಜನರು ತಮಗೆ ತೋರಿದ ಧರ್ಮಾದಿಗಳನ್ನು ಸಾಧಿಸಬೇಕಾದರೂ ಕೂಡ, ಅದರ ಸಾಧನಗಳು ನಾನಾವಿಧಗಳಾಗಿರುವುದರಿಂದ ಎಷ್ಟೋ ವಿಷಯಗಳನ್ನು ಕೇಳಬೇಕಾಗುವುದು. ನಡೆಸತಕ್ಕ ಕರ್ಮಗಳೂ ಅಪರಿಮಿತವಾಗಿರುವುವು. ಆದುದರಿಂದ ಎಲೈ ಸೂತನೆ! ನೀನು ಪುರಾಣಾದಿಗಳ ಸಾರವೆಲ್ಲವನ್ನೂ ಸಂಗ್ರಹಿಸಿ ಅವುಗಳಲ್ಲಿ ಯಾವುದು ನಿನ್ನ ಬುದ್ಧಿಗೆ ಸಾರವೆಂದು ತೋರಿರುವುದೋ, ಅದನ್ನು ನಮಗೂ ಅನುಗ್ರಹಿಸಿ ತಿಳಿಸಬೇಕು! ಸುಲಭವಾಗಿ ಪರಮಪದವನ್ನು ಸಾಧಿಸುವುದಕ್ಕೆ ನಿನಗೆ ತಿಳಿದಮಟ್ಟಿಗೆ ಉತ್ತಮವಾದ ಉಪಾಯವೇನೆಂಬುದನ್ನು ನಮಗೆ ತಿಳಿಸು! ಎಲೈ ಸಾಧುಶಿರೋಮಣಿ! ಆ ಉಪಾಯವನ್ನು ಕೇಳಿದಮಾತ್ರದಿಂದಲೇ ನಮ್ಮ ಮನಸ್ಸಿನ ಕಲ್ಮಷಗಳೆಲ್ಲವೂ ನೀಗಿ ಪ್ರಸನ್ನವಾಗಬೇಕು. ಅಂತಹ ಸುಲಭೋಪಾಯವನ್ನು ನೀನೋದಿರುವ ಸದ್ಗ್ರಂಥಗಳಿಂದ ಸಂಗ್ರಹಿಸಿಯಾಗಲಿ, ನಿನ್ನ ಬುದ್ಧಿಯಿಂದೂಹಿಸಿಯಾಗಲಿ ತಿಳಿಸಬೇಕು! ಎಲೈಮಹಾತ್ಮನೆ! ನಿನಗೆ ಮಂಗಳವಾಗಲಿ! ಭಕ್ತರಕ್ಷಕನಾದ ಭಗವಂತನು ಈ ಭೂಮಿಯಲ್ಲಿ ಯಾವ ಕಾರ್ಯವನ್ನು ನಡೆಸುವುದಕ್ಕಾಗಿ ದೇವಕೀದೇವಿಯಲ್ಲಿ ವಸುದೇವಪುತ್ರನಾಗಿ ಅವತರಿಸಿದನೋ, ಅದರ ರಹಸ್ಯಗಳೆಲ್ಲವನ್ನೂ ನೀನು ಚೆನ್ನಾಗಿ ಬಲ್ಲೆಯಷ್ಟೆ? ಅದನ್ನು ನಾವೂ ಕೇಳಬೇಕೆಂದಿರುವೆವು. ಕೃಷ್ಣಾವತಾರವು ಲೋಕದಲ್ಲಿ ಶತ್ರುಮಿತ್ರರೆಂಬ ಭೇದವಿಲ್ಲದೆ ಸಮಸ್ತ ಪ್ರಾಣಿಗಳಿಗೂ ಕ್ಷೇಮವನ್ನೂ ಮೇಲ್ಮೆಯನ್ನೂ ಕೈಗೂಡಿಸಿರುವುದು. ಆ ಶ್ರೀಕೃಷ್ಣ ನಾಮವನ್ನು ಅಜ್ಞಾನದಿಂದೊಮ್ಮೆ ಸ್ಮರಿಸಿದಮಾತ್ರದಲ್ಲಿಯೂಕೂಡ ಭಯಂಕರವಾದ ಸಂಸಾರವೆಂಬ ಪಾಶವು ಬಿಟ್ಟು ಹೋಗುವುದು. ಅವನ ನಾಮಸ್ಮರಣಕ್ಕೆ ಮಹಾಭಯವೂ ಕೂಡ ಭಯಪಡುವುದು. ಅಷ್ಟೇಕೆ? ಆತನ ಪಾದಸಂಬಂಧದಿಂದ ಪವಿತ್ರರಾಗಿ, ಶಮದಮಾದಿಗುಣವಿಶಿಷ್ಟರಾದ ಮಹರ್ಷಿಗಳ ಪಾದವನ್ನು ಮುಟ್ಟಿದಮಾತ್ರದಿಂದಲೇ ಚೇತನರ ಜನ್ಮವು ಪವಿತ್ರವಾಗುವುದಲ್ಲವೆ? ಆತನ ಪಾದತೀರ್ಥರೂಪವಾದ ಗಂಗೆಯೂ

ಕೂಡ ಸ್ನಾನಪಾನಾದಿಗಳಿಂದ ತನ್ನನ್ನು ಸೇವಿಸುವವರನ್ನು ಪುನೀತರನ್ನಾಗಿ ಮಾಡುವುದಲ್ಲವೆ? ಪುಣ್ಯಶ್ಲೋಕನಾಗಿಯೂ, ದೇವಾದಿದೇವತೆಗಳಿಂದ ಸ್ತುತಿ ಸಲ್ಪಟ್ಟವನಾಗಿಯೂ ಇರುವ ಆ ಭಗವಂತನ ಕೀರ್ತಿಯು ಕಲಿಕಲ್ಮಷಗಳೆಲ್ಲವನ್ನೂ ನೀಗಿಸುವಾಗ, ಮನಶ್ಶುದ್ಧಿಯನ್ನಪೇಕ್ಷಿಸತಕ್ಕ ಯಾವ ಮನುಷ್ಯನು ತಾನೇ ಅವನ ಚರಿತ್ರೆಗಳನ್ನು ಕೇಳದೆ ಬಿಡುವನು? ಎಲೈ ಸೂತನೆ! ಅತಿವಿಸ್ತಾರಗಳಾದ ಆ ಭಗವಲ್ಲೀಲೆಗಳು, ನಾರದಾದಿ ಮಹರ್ಷಿಗಳಿಂದಲೂ ಸ್ತುತಿಸಲ್ಪಡುವುವು. ಆದುದರಿಂದ ಆತನ ಚರಿತ್ರವನ್ನು ಕೇಳಬೇಕೆಂಬ ಅಭಿರುಚಿಯು ನಮಗೂ ಬಹಳವಾಗಿರುವುದು. ತನ್ನ ಮಾಯೆಯಿಂದ ಸೃಷ್ಟ್ಯಾದಿಲೀಲೆಗಳನ್ನು ನಡೆಸುತ್ತಿರುವ ಆ ಭಗವಂತನ ಅವತಾರಚರಿತ್ರೆಗಳೆಲ್ಲವನ್ನೂ ವಿಸ್ತರಿಸು! ಆ ಮಹಾತ್ಮನ ಚರಿತ್ರೆಗಳನ್ನು ಕೇಳುವುದರಲ್ಲಿ ನಮಗೆ ಎಷ್ಟಾದರೂ ತೃಪ್ತಿಯುಂಟಾಗುವುದಿಲ್ಲ. ಕೇಳುತ್ತಿದ್ದಷ್ಟೂ ಮೇಲೆ ಮೇಲೆ ಹೊಸರುಚಿಯನ್ನು ಹುಟ್ಟಿಸುತ್ತಿರುವುವು. ಪೂರ್ವದಲ್ಲಿ ಲೀಲಾಮಾನುಷ ವಿಗ್ರಹವನ್ನು ಧರಿಸಿದ ಶ್ರೀಕೃಷ್ಣನು ಬಲರಾಮ ಸಮೇತನಾಗಿ ಈ ಲೋಕದಲ್ಲಿ ಅತಿಮಾನುಷಕೃತ್ಯಗಳನ್ನು ನಡೆಸಿದನಲ್ಲವೆ? ಮನೋಹರಗಳಾಗಿಯೂ, ಮುಕ್ತಿದಾಯಕಗಳಾಗಿಯೂ ಇರುವ ಆ ಶ್ರೀಕೃಷ್ಣನ ಚರಿತ್ರೆಗಳು ಕೇವಲ ಮೂಢರಿಗೂ ಕೂಡ ಮನಸ್ಸನ್ನು ಕರಗಿಸುವುವು. ಹೀಗಿರುವಾಗ ಜ್ಞಾನಿಗಳಾಗಿಯೂ, ರಸಜ್ಞರಾಗಿಯೂ ಇರುವವರ ಮನಸ್ಸಿಗೆ ರುಚಿಯನ್ನು ಹುಟ್ಟಿಸುವುದರಲ್ಲಿ ಸಂದೇಹವೇನಿದೆ? ಆದುದರಿಂದ ಎಲೈ ಮಹಾತ್ಮನೆ! ನೀನು ಆ ಕೃಷ್ಣಾವತಾರಕಥೆಗಳನ್ನು ನಮಗೆ ತಪ್ಪದೆ ತಿಳಿಸಬೇಕು. ಈಗಲಾದರೋ ನಮ್ಮ ತಪಸ್ಸಿಗೆ ವಿಘ್ನಕರವಾದ ಕಲಿಕಾಲವು ಪ್ರಾಪ್ತವಾಯಿತು. ಯಾವುದಾದರೂ ಉಪಾಯದಿಂದ ಆ ಕಲಿಯನ್ನು ಜಯಿಸಬೇಕೆಂದುದ್ದೇಶಿಸಿ ನಾವು ಎಷ್ಟೆಷ್ಟೋ ಪ್ರಯತ್ನಗಳನ್ನು ಮಾಡಿದೆವು. ಯಾವುದರಿಂದಲೂ ಅದು ಸಾಧ್ಯವಾಗುವಂತೆ ತೋರಲಿಲ್ಲ! ಅದರಿಂದ ಈಗ ನಾವು ಈ ವಿಷ್ಣುಕ್ಷೇತ್ರದಲ್ಲಿ ಮಹಾವಿಷ್ಣುಪ್ರೀತಿಗಾಗಿ, ಸಹಸ್ರಸಂವತ್ಸರಗಳವರೆಗೆ ನಡೆಸಬೇಕಾದ ದೀರ್ಘಸತ್ರವೆಂಬ ಯಾಗವನ್ನು ನಡೆಸುತ್ತಿರುವೆವು. ನಡುನಡುವೆ ಭಗವಚ್ಚರಿತ್ರವನ್ನು ಕೇಳುವುದಕ್ಕೂ ನಮಗೆ ಬೇಕಾದಷ್ಟು ಅವಕಾಶವಿರುವುದು. ಬೇರೆ ಯಾವ ಉಪಾಯದಿಂದಲೂ ಈ ಕಲಿಯನ್ನು ದಾಟುವುದು ನಮ್ಮಿಂದ ಸಾಧ್ಯವಿಲ್ಲ. ಹೀಗೆ ನಾವು ಈ ಕಲಿಬಾಧೆಯನ್ನು ತಪ್ಪಿಸಿಕೊಳ್ಳಲಾರದೆ ಕಳವಳಿಸುತ್ತಿರುವಾಗ, ಸಮುದ್ರಪ್ರವಾಹದಲ್ಲಿ ಸಿಕ್ಕಿಬಿದ್ದವರಿಗೆ ನಾವಿಕರ ಸಹಾಯವು ಸಿಕ್ಕಿದಂತೆ ಭಗವಂತನೇ ನಿನ್ನನ್ನು ನಮಗೆ ತೋರಿಸಿಕೊಟ್ಟಂತಾಯಿತು. ಆದುದರಿಂದ ಈ ಕಲಿಯೆಂಬ ಮಹಾಸಮುದ್ರವನ್ನು ದಾಟುವುದಕ್ಕೆ ನೀನು ನಮಗೆ ನಾವಿಕನಾಗ್ಗಿ

ಆ ಕೃಷ್ಣಚರಿತ್ರವನ್ನೇ ಹಡಗನಂತೆ ಸಾಧನವನ್ನಾಗಿಟ್ಟುಕೊಂಡು, ನಮ್ಮನ್ನು ದ್ಧರಿಸಬೇಕು. ಭಕ್ತಿಯೋಗಾರಾಧ್ಯನಾಗಿಯೂ ಸಮಸ್ತಧರ್ಮಗಳಿಗೂ ಪರಿಪಾಲಕನಾಗಿಯೂ, ಬ್ರಹ್ಮಕುಲಕ್ಕೆ ಹಿತನಾಗಿಯೂ ಇರುವ ಆ ಶ್ರೀಕೃಷ್ಣನು, ನಿಜಲೋಕವನ್ನು ಸೇರಿದ ಮೇಲೆ, ಇಲ್ಲಿನ ವರ್ಣಾಶ್ರಮಧರ್ಮಗಳೆಲ್ಲಕ್ಕೂ ರಕ್ಷಕರಾರು? ಕಲಿದೋಷದಿಂದ ಈ ಕಾಲದಲ್ಲಿ ಧರ್ಮವು ಕೇವಲ ನಿಸ್ಸಾರವಾಗಿರುವುದು. ಆ ಭಗವಚ್ಚರಿತ್ರವೊಂದೇ ಈ ಕಲಿದೋಷವನ್ನು ನೀಗಿಸಬೇಕಲ್ಲದೆ ಬೇರೆಯಲ್ಲ! ಆದುದರಿಂದ ನೀನು ನಮ್ಮಲ್ಲಿ ಪೂರ್ಣಾನುಗ್ರಹವನ್ನು ತೋರಿಸಿ, ಆ ಶ್ರೀಕೃಷ್ಣನ ಅವತಾರಚರಿತ್ರಗಳನ್ನು ತಿಳಿಸಬೇಕು" ಎಂದರು. ಇದು ಪ್ರಥಮಾಧ್ಯಾಯವು.

---

### ಸೂತನು ಶೌನಕಾದಿಗಳಿಗೆ ಪರಮಪುರುಷಾರ್ಥಸ್ವರೂಪವನ್ನು ತಿಳಿಸಿದುದು.

ಹೀಗೆ ಶೌನಕಾದಿಗಳು ಶ್ರೀಕೃಷ್ಣಚರಿತ್ರವಿಷಯವಾಗಿ ಪ್ರಶ್ನೆಮಾಡಿದುದನ್ನು ಕೇಳಿದೊಡನೆ, ಸೂತಪೌರಾಣಿಕನು ಬಹಳ ಸಂತೋಷಗೊಂಡವನಾಗಿ, ಅವರ ಪ್ರಾರ್ಥನೆಯನ್ನಭಿನಂದಿಸುತ್ತ, ಅವರ ಕೋರಿಕೆಯಂತೆ ಭಗವಚ್ಚರಿತ್ರವನ್ನು ಹೇಳತೊಡಗಿ ಕಥಾರಂಭಕ್ಕೆ ಮೊದಲು, ಈ ಪುರಾಣಕ್ಕೆ ಪ್ರಥಮಪ್ರವರ್ತಕನಾದ ಶುಕಮುನಿಯನ್ನು ಧ್ಯಾನಿಸುವನು. "ಯೋಗೀಶ್ವರನೆನಿಸಿಕೊಂಡ ಯಾವ ಮಹಾತ್ಮನು ಬ್ರಹ್ಮೋಪಾಸನದಲ್ಲಿ ಸಿದ್ಧಿಯನ್ನು ಪಡೆದು, ಕೃತಕೃತ್ಯನಾದಮೇಲೆ, ಲೌಕಿಕಸಂಬಂಧಗಳೆಲ್ಲವನ್ನೂ ಪರಿತ್ಯಾಗಮಾಡಿ, ತಂದೆತಾಯಿಗಳನ್ನೂ ಬಿಟ್ಟು, ಸನ್ಯಾಸವನ್ನು ವಹಿಸಿ ಏಕಾಕಿಯಾಗಿ ಹೊರಟನೋ, ಅಂತಹ ಮಹಾಜ್ಞಾನಿಯಾದ ಯಾವ ಪುತ್ರನ ವಿರಹವನ್ನು ಸಹಿಸಲಾರದೆ ವ್ಯಾಸಮುನಿಯು ತಾನೂ ಅವನನ್ನು ಹಿಂಬಾಲಿಸಿ "ಪುತ್ರಾ!" ಎಂದು ಕೂಗುತ್ತಿರಲು, ಆ ಶುಕನ ಜ್ಞಾನಸಂಬಂಧದಿಂದ ಆ ಕಾಡಿನಲ್ಲಿದ್ದ ಮರಗಿಡುಗಳೆಲ್ಲವೂ ತಾವೇ ಶುಕಸ್ವರೂಪಗಳಾದಂತೆ "ಇದೋ! ಇಲ್ಲಿರುವನು" ಎಂದು ಪ್ರತಿಧ್ವನಿಯನ್ನು ಕೊಟ್ಟುವೋ, ಹೀಗೆ ಜ್ಞಾನವ್ಯಾಪ್ತಿಯಿಂದ ಸಮಸ್ತಭೂತಗಳ ಹೃದಯದಲ್ಲಿಯೂ ಪ್ರಕಾಶಿಸುತ್ತಿರುವ ಆ ಮಹರ್ಷಿಯನ್ನು ನಮಸ್ಕರಿಸುವೆನು. ಯಾವ ಮುನಿಶ್ರೇಷ್ಠನು ಸಮಸ್ತವೇದಗಳ ಸಾರಭೂತವಾಗಿಯೂ, ಪುರಾಣಗಳಲ್ಲಿ ಅದ್ವಿತೀಯವಾಗಿಯೂ, ಸ್ವಾತ್ಮಪರಮಾತ್ಮತತ್ತ್ವವನ್ನು ಪ್ರಕಾಶಪಡಿಸುವ ವಿಷಯದಲ್ಲಿ ದೀಪಪ್ರಾಯವಾಗಿಯೂ, ಸಂಸಾರನಿವೃತ್ತಿಯಲ್ಲಿ ಅಪೇಕ್ಷೆಯಿಲ್ಲದವರಿಗೂ ಕೂಡ, ಆ ವಿಧವಾದ ಅಜ್ಞಾನವನ್ನು ನೀಗಿಸಿ, ಮೋಕ್ಷಾಪೇಕ್ಷೆಯನ್ನು ಹುಟ್ಟಿಸತಕ್ಕುದಾಗಿಯೂ ಇರುವ ಶ್ರೀಭಾಗವತವೆಂಬ

ಪುರಾಣದ ರಹಸ್ಯವನ್ನು ಮೊದಲು ತನ್ನ ನಿಜಾನುಭವಕ್ಕೆ ತಂದುಕೊಂಡು, ಆ ಮೇಲೆ ಲೋಕೋಜ್ಜೀವನಾರ್ಥವಾಗಿ ಅದನ್ನು ದಯೆಯಿಂದ ಪ್ರಕಾಶಗೊಳಿಸಿದನೋ, ಅಂತಹ ವ್ಯಾಸಪುತ್ರನಾದ ಶುಕಮುನಿಯನ್ನು ಮರೆಹೋಗುವೆನು. *ಭಗವದಂಶದಿಂದವತರಿಸಿ ಬದರಿಕಾಶ್ರಮದಲ್ಲಿ ಲೋಕಕ್ಷೇಮಾರ್ಥವಾಗೀ ತಪೋನಿಷ್ಠರಾಗಿರುವ ನರನಾರಾಯಣರನ್ನೂ, ಬ್ರಹ್ಮಪತ್ನಿಯಾದ ವಾಗ್ದೇವತೆಯನ್ನೂ, ವ್ಯಾಸಮಹಾಮುನಿಯನ್ನೂ ಮೊದಲು ನಮಸ್ಕರಿಸಿ, ಆ ಮೇಲೆ ದುರಿತಜಯರೂಪವಾದ ಈ ಪುರಾಣವನ್ನು ವಚಿಸಬೇಕಾಗಿರುವುದು" ಎಂದು ಗ್ರಂಥಪ್ರವರ್ತಕರಾದ ಆಚಾರ್ಯರ ಪರಂಪರೆಯನ್ನು ಧ್ಯಾನಿಸಿ, ಶೌನಕಾದಿಗಳನ್ನು ಕುರಿತು ಹೇಳುವನು "ಎಲೈ ಮುನಿಶ್ರೇಷ್ಠರೆ! ನೀವು ಕೇಳಿದ ಕೃಷ್ಣಸಂಬಂಧವಾದ ಈ ಪ್ರಶ್ನವು ಅತ್ಯಂತಶ್ಲಾಘ್ಯವಾದುದು. ಈ ನಿಮ್ಮ ಪ್ರಶ್ನವು ನಿಮಗೆ ಮಾತ್ರವಲ್ಲದೆ ಸಮಸ್ತಜಗತ್ತಿಗೂ ಕ್ಷೇಮಕರವಾದುದು. ಆ ಶ್ರೀ ಕೃಷ್ಣನ ನಾಮಸ್ಮರಣಮಾತ್ರದಿಂದಲೇ ಮನಸ್ಸು ಪ್ರಸನ್ನವಾಗುವುದು. ಎಲೈಮಹರ್ಷಿಗಳೆ! ಲೋಕದಲ್ಲಿ ಮನುಷ್ಯರಿಗೆ ನಿರತಿಶಯವಾದ ಶ್ರೇಯಸ್ಸೂ, ಅದಕ್ಕೆಸಾಧನವಾದ ಉತ್ತಮಧರ್ಮ

---

ಇಲ್ಲಿ "ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಂ। ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್." ಎಂದುಮೂಲವು. ಈ ಶ್ಲೋಕಾರ್ಥವನ್ನು ಚೆನ್ನಾಗಿ ಪರ್ಯಾಲೋಚಿಸಿದರೆ ಇದರಲ್ಲಿ ವಾಚ್ಯವಾಗಿ ಹೇಳಿರುವಂತೆ ನರನಾರಾಯಣರು, ಸರಸ್ವತಿ, ವ್ಯಾಸರು; ಇವರು ಮಾತ್ರವೇ ಅಲ್ಲದೆ, ಈ ಭಾಗವತಗ್ರಂಥಕ್ಕೆ ಪ್ರವರ್ತಕರಾದ ಇನ್ನೂ ಕೆಲವುಮಂದಿ ಆಚಾರ್ಯರನ್ನು ನಮಸ್ಕರಿಸಬೇಕೆಂಬ ಅರ್ಥವು ಸೂಚಿತವಾಗುವುದು. ಇಲ್ಲಿನ ಗುರುಪರಂಪರಾಕ್ರಮವೇನೆಂದರೆ, ಮೊದಲು ವಿಷ್ಣುವಿನ ನಾಲ್ಕನೆಯ ವ್ಯೂಹನಾದ ಅನಿರುದ್ಧನು, ತನ್ನನಾಭಿಕಮಲದಲ್ಲಿ ಹುಟ್ಟಿದ ಚತುರ್ಮುಖಬ್ರಹ್ಮನಿ ಭಾಗವತಚತುಶ್ಶ್ಲೋಕಿಯನ್ನುಪದೇಶಿಸಿದನು. ಆ ಚತುರ್ಮುಖನಿಂದ ನಾರದನಿಗೂ, ನಾರದನಿಂದ ವ್ಯಾಸನಿಗೂ ಇದೇ ಚತುಃಶ್ಲೋಕಿಯು ಕ್ರಮಪ್ರಾಪ್ತವಾಗಿ ಬಂದಿತು. ಆ ಮೇಲೆ ವ್ಯಾಸನು ಅದರ ಆಧಾರದಮೇಲೆ ಈ ಗ್ರಂಥವನ್ನು ರಚಿಸಿ, ತನ್ನ ಪುತ್ರನಾದ ಶುಕಮುನಿಗೆ ಉಪದೇಶಿಸಿದನು, ಶುಕಮುನಿಯಿಂದ ಸೂತಾದಿಗಳಿಗೆ ಉಪದೇಶವಾಯಿತು. ಆದುದರಿಂದ ಇಲ್ಲಿ ಸೂತನು ತನಗೆ ಈ ಗ್ರಂಥವನ್ನುಪದೇಶಿಸಿದ ಶುಕಮುನಿಯನ್ನು ನಮಸ್ಕರಿಸಿ, ಅದರಿಂದಾಚೆಗೆ ಕ್ರಮವಾಗಿ ವ್ಯಾಸನಾರದಾದಿಗಳನ್ನು ಸ್ತುತಿಸಬೇಕಾಗಿರುವುದು. ನರನಾರಾಯಣರಿಬ್ಬರೂ ಅನಿರುದ್ಧನಿಗೆ ಕಾರಣಭೂತನಾದ ವಿಷ್ಣುವಿನ ಅವತಾರವಾದುದರಿಂದ ಅವರೂ ಇಲ್ಲಿನ ಗುರುಪರಂಪರೆಯಲ್ಲಿ ಸೇರಿರುವರು. ಈ ಶ್ಲೋಕದಲ್ಲಿ (ದೇವೀಂ) ಎಂಬ ಪದಪ್ರಯೋಗದಿಂದ (ದೇವಸ್ಯ ಚತುರ್ಮುಖಸ್ಯ ಪತ್ನೀ ದೇವೀ) ಎಂಬ ವ್ಯುತ್ಪತ್ತಿಯನ್ನನುಸರಿಸಿ, ಬ್ರಹ್ಮನಾರದರ ಹೆಸರೂ ಸೂಚಿತವಾಗುವುದು. ಹೀಗೆಯೇ ಪರಂಪರಾಸಂಬಂಧದಿಂದ ಅನಿರುದ್ಧ ಚತುರ್ಮುಖ ನಾರದರೂ ಇಲ್ಲಿ ನಮಸ್ಕಾರ್ಯರೆಂಬುದು ಅರ್ಥಸಿದ್ಧವು.

ವೂ ಯಾವುದೆಂದು ಕೇಳಿದಿರಲ್ಲವೆ? ಹೇಳುವೆನು ಕೇಳಿರಿ! ಸಂಸಾರನಿವೃತ್ತಿಪೂರ್ವಕವಾಗಿ, ಬ್ರಹ್ಮಾನಂದಾನುಭವಾತ್ಮಕವಾದ ಮೋಕ್ಷವೊಂದೇ ಮನುಷ್ಯನಿಗೆ ನಿರತಿಶಯವಾದ ಶ್ರೇಯಸ್ಸಲ್ಲದೆ ಬೇರೆಯಲ್ಲ! ಫಲಾಪೇಕ್ಷೆಯೆಂಬ ವಿಘ್ನಗಳಿಗೊಳಗಾಗದೆ ಮನಃಶುದ್ಧಿಯನ್ನುಂಟುಮಾಡಿ, ಭಗವಂತನಲ್ಲಿ ಭಕ್ತಿಯನ್ನು ಹುಟ್ಟಿಸುವುದಕ್ಕೆ ಸಹಕಾರಿಯಾದ ಧರ್ಮವಾವುದುಂಟೋ, ಅದೇ ಲೋಕದಲ್ಲಿ ಉತ್ತಮಧರ್ಮವೆನಿಸುವುದು. ಷಾಡ್ಗುಣ್ಯಪರಿಪೂರ್ಣನಾದ ಆ ವಾಸುದೇವನ ವಿಷಯದಲ್ಲಿ ಹುಟ್ಟಿದ ಭಕ್ತಿಯು, ತಾನಾಗಿಯೇ ಮನಸ್ಸನ್ನು ಶುದ್ಧಮಾಡಿ, ವೈರಾಗ್ಯವನ್ನೂ ಹುಟ್ಟಿಸಿ, ಬೇರೆಯಾವವಿಧದಿಂದಲೂ ಲಭಿಸಲಾರದ ಭಗವತ್ಸಾಕ್ಷಾತ್ಕಾರರೂಪವಾದ ಜ್ಞಾನವನ್ನೂ ಉಂಟುಮಾಡುವುದು. ಲೋಕದಲ್ಲಿ ಮನುಷ್ಯರು ತಮ್ಮ ತಮ್ಮ ವರ್ಣಾಶ್ರಮೋಚಿತವಾದ ಧರ್ಮವನ್ನು ಲೋಪವಿಲ್ಲದೆ ಎಷ್ಟೇಚೆನ್ನಾಗಿ ನಡೆಸುತ್ತಬಂದರೂ, ಅದು ಭಗವದ್ಗುಣಾನುಸಂಧಾನದಲ್ಲಿ ರುಚಿರೂಪವಾದ ಭಕ್ತಿಯನ್ನು ಹುಟ್ಟಿಸುವುದಕ್ಕೆ ಸಹಕಾರಿಯಾಗದೆ, ಇತರಫಲೋದ್ದೇಶದಿಂದ ಕೂಡಿದುದಾಗಿದ್ದರೆ, ಅಂತಹ ಧರ್ಮಾಚರಣವೆಲ್ಲವೂ ವೃಥಾ ಶ್ರಮಕಾರಣವೇ ಹೊರತು ಬೇರೆಯಲ್ಲ. ಪುರುಷಾರ್ಥಗಳಲ್ಲಿ ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕು ವಿಭಾಗಗಳಿದ್ದರೂ ಕೂಡ, ಮೋಕ್ಷವೊಂದೇ ನಿರತಿಶಯವಾದ ಪುರುಷಾರ್ಥವೆನಿಸುವುದು. ಧರ್ಮಾರ್ಥಕಾಮಗಳೆಂಬಿವು ಮೂರೂ ತಾನಾಗಿ ಪುರುಷಾರ್ಥಗಳೆನಿಸಿಕೊಳ್ಳುವುದೇ ಇಲ್ಲ. ಇವು ಮುಕ್ತಿಸಾಧನವಾದ ಭಕ್ತಿಗೆ ಕಾರಣಗಳಾಗುವುವೇ ಹೊರತು ನೇರವಾಗಿ ಮುಕ್ತಿಗೆ ಸಾಧನಗಳೂ ಅಲ್ಲ! ಧರ್ಮಕ್ಕೆ ಅರ್ಥವೇ ಫಲವೆಂದೂ, ಅರ್ಥಕ್ಕೆ ಕಾಮವೇ ಫಲವೆಂದೂ, ಕಾಮಕ್ಕೆ ಇಂದ್ರಿಯತೃಪ್ತಿಯೇ ಪ್ರಯೋಜನವೆಂದೂ, ಆ ಇಂದ್ರಿಯತೃಪ್ತಿಗೆ ಜೀವನವೇ ಫಲವೆಂದೂ, ಆ ಜೀವನಕ್ಕೆ ತಿರುಗಿ ಧರ್ಮಸಾಧನವೇ ಫಲವೆಂದೂ ಲೌಕಿಕರಾದ ಕೆಲವರು ಹೇಳುವುದುಂಟು! ಇದು ವಿವೇಚನೆಯಿಲ್ಲದೆ ಹೇಳುವವರ ಮಾತಲ್ಲದೆ ಬೇರೆಯಲ್ಲ! ಫಲಾಭಿಸಂಧಿಯಿಲ್ಲದೆ ನಡೆಸತಕ್ಕ ಧರ್ಮವೇ ಉತ್ತಮಧರ್ಮವೆನಿಸುವುದು. ಇಂತಹ ಧರ್ಮವೇ ಭಕ್ತಿಯನ್ನು ಹುಟ್ಟಿಸಿ, ಆ ಮೂಲಕವಾಗಿ ಮೋಕ್ಷಸಾಧಕವಾಗುವುದು! ಇಂತಹ ಧರ್ಮಕ್ಕೆ, ಅರ್ಥವನ್ನು (ಧನವನ್ನು) ಫಲವೆಂದು ಹೇಳಲಾಗದು! ಇದರಂತೆಯೇ ಅರ್ಥಕ್ಕೆ ಧರ್ಮವೊಂದೇ ಪ್ರಯೋಜನವಲ್ಲದೆ ಕಾಮವು ಫಲವೆನಿಸಲಾರದು. ಅನ್ನಪಾನಾದಿರೂಪವಾಗಿರುವ ಕಾಮವೆಂಬುದನ್ನೂ ಕೂಡ ತನ್ನ ಜೀವಧಾರಣೆಗೆ ಬೇಕಾದಷ್ಟನ್ನು ಮಾತ್ರವೇ ಅನುಭವಿಸುವುದಕ್ಕೆ ಸಾಧ್ಯವು. ಹೀಗೆ ಕಾಮಕ್ಕೆ ಜೀವಧಾರಣೆಯೇ ಮುಖ್ಯ ಪ್ರಯೋಜನವಾಗಿರುವಾಗ, ಅದಕ್ಕೆ ಇಂದ್ರಿಯತೃಪ್ತಿಯನ್ನು ಫಲವೆಂದು ಹೇಳುವುದು ಹೇಗೆ? ಇದರಂತೆಯೇ ಲೋಕ

ದಲ್ಲಿ ಜೀವನಕ್ಕೆ ಕರ್ಮಗಳಿಂದ ಸಾಧ್ಯವಾದ ಧರ್ಮವು ಫಲವೆನಿಸಿಕೊಳ್ಳುವುದಿಲ್ಲ. ಅಂತಹ ಜೀವನಕ್ಕೆ ತತ್ವಜಿಜ್ಞಾಸೆಯೊಂದೇ ಫಲವು. ಈ ಕಾರಣಗಳಿಂದಲೇ ತತ್ವಜ್ಞರು ಧನವಿದ್ದ ಪಕ್ಷದಲ್ಲಿ ಫಲಾಭಿಸಂಧಿಯಿಲ್ಲದ ಧರ್ಮವನ್ನು ಸಂಪಾದಿಸಿ, ಆ ಧರ್ಮವನ್ನು ಮೋಕ್ಷಸಾಧಕವಾದ ಭಕ್ತಿಯೋಗಕ್ಕೆ ಸಹಕಾರಿಯನ್ನಾಗಿ ಮಾಡಬೇಕಲ್ಲದೆ, ಆ ಧನವನ್ನು ಕಾಮನಿಮಿತ್ತವಾಗಿ ವ್ಯಯಮಾಡಕೂಡದೆನ್ನುವರು. ಅದರಂತೆಯೇ ಅನ್ನ, ಸ್ನಾನಾದಿರೂಪವಾದ ಕಾಮಸಮೃದ್ಧಿಯಿದ್ದವರೂ ಕೂಡ, ಅದರಿಂದ ದೇಹಧಾರಣವನ್ನು ಮಾಡಿಕೊಂಡು, ಆ ಜೀವನಕ್ಕೆ ತತ್ವಜಿಜ್ಞಾಸೆಯನ್ನೇ ಮುಖ್ಯಫಲವನ್ನಾಗಿ ಮಾಡಬೇಕು. ಇಷ್ಟೇಹೊರತು ಆ ಕಾಮವನ್ನು ಇಂದ್ರಿಯ ಪ್ರೀತಿಗಾಗಿ ಉಪಯೋಗಿಸಲಾಗದು. “ಜೀವನಕ್ಕೆ ತತ್ವಜಿಜ್ಞಾಸೆಯೇ ಫಲವೆನಿಸಿದ ಪಕ್ಷದಲ್ಲಿ, ಆ ತತ್ವವೆಂಬುದಾವುದು ?!! ಎಂದರೆ, ಕೇವಲಜ್ಞಾನಸ್ವರೂಪವಾಗಿ, ಪರಬ್ರಹ್ಮವೆಂದೂ, ಪರಮಾತ್ಮನೆಂದೂ, ಭಗವಂತನೆಂದೂ ಹೇಳಲ್ಪಡುವ ಪರಾತ್ಪರವಸ್ತುವನ್ನೇ ತತ್ವಜ್ಞರು ತತ್ವವೆಂದು ಹೇಳುವರು. ಎಲೈ ಮಹರ್ಷಿಗಳೆ! ಲೋಕದಲ್ಲಿ ಶ್ರದ್ಧಾಳುಗಳಾದ ಮುನಿಗಳು, ವೇದೋಕ್ತಗಳಾದ ಯಜ್ಞಯಾಗಾದಿಧರ್ಮಗಳಿಂದ ಪೋಷಿತವಾಗಿಯೂ, ಆತ್ಮಜ್ಞಾನವೈರಾಗ್ಯಗಳಿಂದ ಕೂಡಿದುದಾಗಿಯೂ ಇರುವ ಭಕ್ತಿಯಿಂದಲೇ ಜೀವಾತ್ಮನಲ್ಲಿ ಅಂತರಾತ್ಮನಾಗಿರುವ ಬ್ರಹ್ಮಶಬ್ದವಾಚ್ಯನಾದ ಭಗವಂತನನ್ನು ಸಾಕ್ಷಾತ್ಕರಿಸುವರು. ಆದುದರಿಂದ ಮನುಷ್ಯರು ತಮ್ಮ ತಮ್ಮ ವರ್ಣಾಶ್ರಮಭೇದವನ್ನನುಸರಿಸಿ, ವಿಧ್ಯುಕ್ತಗಳಾದ ಧರ್ಮಗಳನ್ನು ಕ್ರಮವಾಗಿ ನಡೆಸುತ್ತ ಬಂದರೆ, ಅವು ಇತರಪ್ರತಿಬಂಧಕಗಳೆಲ್ಲವನ್ನೂ ನೀಗಿಸಿ, ಭಗವತ್ಪ್ರೀತಿಗೆ ಕಾರಣವಾದ ಭಕ್ತಿಯನ್ನು ನೆಲೆಗೊಳಿಸುವುವು. ಆ ಧರ್ಮಗಳಿಗೂ ವಿಷ್ಣುಪ್ರೀತಿಯೇ ಫಲವಾಗುವುದು. ಹೀಗೆ ಧರ್ಮಾನುಷ್ಠಾನವನ್ನು ಕ್ರಮವಾಗಿ ನಡೆಸುವುದು ಮಾತ್ರವೇ ಅಲ್ಲ! ಭಗವತ್ಕಥಾಶ್ರವಣಾದಿಗಳೂ ಕೂಡ ಭಕ್ತಿಯೋಗಕ್ಕೆ ಸಹಕಾರಿಗಳಾಗುವುವು. ಆದುದರಿಂದ ನಾವೆಲ್ಲರೂ ನಿಶ್ಚಲವಾದ ಮನಸ್ಸಿನಿಂದ ಭಕ್ತಪರಿಪಾಲಕನಾಗಿಯೂ ಷಾಡ್ಗುಣ್ಯಪರಿಪೂರ್ಣನಾಗಿಯೂ ಇರುವ ಆ ಶ್ರೀಹರಿಯ ಪುಣ್ಯಕಥೆಗಳನ್ನು ಪ್ರತಿದಿನವೂ ಕೇಳುತ್ತಿರಬೇಕು! ಪ್ರತಿದಿನವೂ ಅವನಗುಣಗಳನ್ನು ಕೀರ್ತಿಸುತ್ತಿರಬೇಕು! ಯಾವಾಗಲೂ ಅತನನ್ನೇ ಸ್ಮರಿಸುತ್ತಿರಬೇಕು. ಅಹರ್ನಿಶವೂ ಅವನನ್ನೇ ಪೂಜಿಸಬೇಕು. ಬುದ್ಧಿಶಾಲಿಗಳಾದವರು ಭಗವದ್ಧ್ಯಾನವೆಂಬ ಖಡ್ಗದಿಂದಲೇ ತಮ್ಮ ಕರ್ಮಬಂಧವನ್ನು ಛೇದಿಸುವರು. ಅಂತಹ ಭಗವತ್ಕಥೆಯಲ್ಲಿ ಯಾವನಿಗೆತಾನೇ ಅಭಿರುಚಿಯುಂಟಾಗದು? ಕೇವಲ ಧರ್ಮಾಚರಣಮಾತ್ರದಿಂದಲೇ ಭಗವದ್ಭಕ್ತಿಯು ಹುಟ್ಟುವುದೆಂದು ಹೇಳುವುದಕ್ಕಿಲ್ಲ.

ಭಗವತ್ಕಥೆಯಲ್ಲಿ ಅಭಿರುಚಿಯನ್ನು ಹುಟ್ಟಿಸುವುದಕ್ಕೆ ಮಹಾತ್ಮರ ಸಹವಾಸವೂ ಗಂಗಾದಿಪುಣ್ಯತೀರ್ಥಗಳ ಸೇವನವೂ ಸಹಕಾರಿಗಳಾಗಿರುವುವು. ಆದುದರಿಂದ ಮನುಷ್ಯರು ತಮ್ಮತಮ್ಮ ವರ್ಣಾಶ್ರಮಧರ್ಮಗಳ ಬಲದಿಂದ ಪ್ರತಿಬಂಧಕಸಾಮಗ್ರಿಗಳೆಲ್ಲವನ್ನೂ ನೀಗಿಸಿಕೊಂಡು, ಶ್ರದ್ಧಾಳುಗಳಾಗಿದ್ದರೆ, ಅಂತವರಿಗೆ ಮೇಲೆ ಹೇಳಿದ ಸತ್ಸಹವಾಸಾದಿಗಳಿಂದ ವಾಸುದೇವಕಥಾಶ್ರವಣಾದಿಗಳಲ್ಲಿ ರುಚಿಯು ಹುಟ್ಟುವುದು. ನಿಜಕಥಾಶ್ರವಣಕೀರ್ತನಗಳಿಂದಲೇ ಚೇತನರನ್ನು ಪವಿತ್ರರನ್ನಾಗಿ ಮಾಡತಕ್ಕ ಆ ಶ್ರೀಕೃಷ್ಣನು, ತನ್ನ ಕಥೆಯನ್ನು ಕೇಳತಕ್ಕವರ ಮನಸ್ಸಿನಲ್ಲಿ ಅಂತರ್ಯಾಮಿಯಾಗಿ ನೆಲೆಗೊಂಡು, ಅವರ ಹೃದಯದಲ್ಲಿ ಭಕ್ತಿಗೆ ವಿರೋಧಿಗಳಾದ ಪಾಪಗಳೆಲ್ಲವನ್ನೂ ತಾನಾಗಿಯೇ ನೀಗಿಸುವುದರಿಂದ ಸರ್ವಸುಹೃತ್ತೆನಿಸಿಕೊಂಡಿರುವನು. ಹೀಗೆ ನಿತ್ಯವೂ ಭಾಗವತಸೇವಾಪೂರ್ವಕವಾದ ಭಗವದ್ಗುಣಶ್ರವಣದಿಂದ, ಮನಸ್ಸಿನ ಕಲ್ಮಷಗಳೆಲ್ಲವೂ* ಪ್ರಾಯಕವಾಗಿ ನೀಗಿ, ದೃಢವಾದ ಭಕ್ತಿಯು ಹುಟ್ಟುವುದು! ಅದರಿಂದಾಚೆಗೆ ಮನಸ್ಸನ್ನು ಕೆಡಿಸತಕ್ಕ ರಜಸ್ತಮೋಗುಣಜನ್ಯಗಳಾದ ಕಾಮಲೋಭಾದಿಗಳೊಂದೂ ಅದರ ಸಮೀಪಕ್ಕೆ ಹೋಗಲಾರವು. ಆ ಮನಸ್ಸು ಸತ್ವಗುಣವೊಂದರಲ್ಲಿಯೇ ನೆಲಸಿ ಪ್ರಸನ್ನವಾಗುವುದು. ಹೀಗೆ ಪ್ರಸನ್ನಮನಸ್ಸುಳ್ಳವನಾಗಿ, ಸಂಗಗಳನ್ನು ತೊರೆದು, ವಿರಕ್ತನಾಗಿರುವ ಪುರುಷನಿಗೆ, ಭಗವಂತನ ಗುಣಸ್ವರೂಪಾದಿಗಳನ್ನು ಯಥಾಸ್ಥಿತವಾಗಿ ಸಾಕ್ಷಾತ್ಕರಿಸತಕ್ಕ ಜ್ಞಾನವೂ ಹುಟ್ಟುವುದು. ಭಕ್ತಿಯ ಫಲವೇ ಜ್ಞಾನವು. ಪರಮಾತ್ಮಸಾಕ್ಷಾತ್ಕಾರರೂಪವಾದ ಈ ಜ್ಞಾನವು ಹುಟ್ಟಿದ ಕ್ಷಣವೇ ಭಗವತ್ಪ್ರಾಪ್ತಿಗೆ ಪ್ರತಿಬಂಧಕಗಳಾದ ಹಿಂದು ಮುಂದಿನ ಪಾಪಕರ್ಮಗಳೂ ನಾಶಹೊಂದುವುವು. ತನ್ಮೂಲಕಗಳಾದ ಸಮಸ್ತಸಂಶಯಗಳೂ, ಅಜ್ಞಾನ ವಿಪರೀತಜ್ಞಾನಾದಿಗಳೆಲ್ಲವೂ ಬಿಟ್ಟುಹೋಗುವುವು. ಮನಸ್ಸಿನಲ್ಲಿ ನೆಲೆಗೊಂಡಿರುವ ಅಹಂಕಾರಮಮಕಾರಾದಿಗಳೆಲ್ಲವೂ ನಶಿಸುವುವು. ಇವೆಲ್ಲವೂ ನಿವೃತ್ತವಾದಮೇಲೆ ಬ್ರಹ್ಮಪ್ರಾಪ್ತಿಯೂ, ಬ್ರಹ್ಮಾನುಭವವೂ ಪ್ರಯತ್ನವಿಲ್ಲದೆ ತನಗೆತಾನೇ ಸಿದ್ಧಿಸುವುವು. ಹೀಗೆ ಮೋಕ್ಷವೇ

* ಇಲ್ಲಿ ಮನಸ್ಸಿನ ಕಲ್ಮಷಗಳೆಲ್ಲವೂ ಪ್ರಾಯಕವಾಗಿ ನಶಿಸುವುವೆಂಬುದರಿಂದ, ಆಗಲೂ ಪಾಪಗಳೆಲ್ಲವೂ ನಿಶ್ಶೇಷವಾಗಿ ಕಳೆಯಲಿಲ್ಲವೆಂದು ಸೂಚಿತವಾಗುವುದು. ಇದರಿಂದ ತತ್ಕಾಲದಲ್ಲಿ ಭಕ್ತಿಗೆ ಪ್ರತಿಬಂಧಕಗಳೆಲ್ಲವೂ ನೀಗಿದ್ದರೂ, ಭಗವತ್ಪ್ರಾಪ್ತಿಗೆ ಪ್ರತಿಬಂಧಕಗಳಾಗಿರುವ ಉತ್ತರಪೂರ್ವಾಘಗಳೆಂದಿವು, ಆ ಭಕ್ತಿಯು ಪರಿಪಕ್ವವಾದ ಹೊರತು ಬಿಟ್ಟುಹೋಗತಕ್ಕವುಗಳಲ್ಲವೆಂದು ಸಿದ್ಧವಾಗುವುದು.

ಪುರುಷಾರ್ಥವಾಗಿಯೂ, ಭಕ್ತಿಯೇ ಅದಕ್ಕೆ ಮುಖ್ಯಸಾಧನವಾಗಿಯೂ ಇರುವುದರಿಂದ, ಇದರ ತತ್ತ್ವವನ್ನು ತಿಳಿದ ಪ್ರಾಜ್ಞರು, ಪರಮಾದರಪೂರ್ವಕವಾಗಿ, ಮನಃಪ್ರಸಾದವನ್ನುಂಟುಮಾಡತಕ್ಕ ಆ ಹರಿಭಕ್ತಿಯೊಂದನ್ನೇ ದೃಢವಾಗಿ ಹಿಡಿಯುವರು. “ಜಗತ್ಸೃಷ್ಟಿ ಮೊದಲಾದ ಕಾರ್ಯಗಳಿಗೆ ಬ್ರಹ್ಮರುದ್ರಾದಿಗಳೂ ಕಾರಣಭೂತರಾಗಿರುವಾಗ, ಹರಿಭಕ್ತಿಯೊಂದೇ ಮೋಕ್ಷಸಾಧಕವೆಂದು ಹೇಳುವುದು ಹೇಗೆ?” ಎಂದರೆ, * ಸತ್ವವೆಂದೂ, ರಜಸ್ಸೆಂದೂ, ತಮಸ್ಸೆಂದೂ

---

* ಈ ತ್ರಿಮೂರ್ತಿಗಳಲ್ಲಿ ವಿಷ್ಣುವೇ ಪರಮಪುರುಷನೆಂದೂ, ಅವನೇ ಬ್ರಹ್ಮರುದ್ರಾದಿರೂಪದಲ್ಲಿ ಸೇರಿ ಸೃಷ್ಟಿಸಂಹಾರಾದಿಗಳನ್ನು ನಡೆಸುವವನೆಂದೂ ಗ್ರಾಹ್ಯವು. ಬ್ರಹ್ಮರುದ್ರರಿಬ್ಬರೂ, ಜೀವಕೋಟಿಯಲ್ಲಿ ಸೇರಿ ಹಿಂದೆ ಹೇಳಿದಂತೆ ವಿಷ್ಣುವಿಗೆ ಶರೀರಭೂತರಾದುದರಿಂದ, ಆ ಹೆಸರುಗಳೂ, ಶರೀರಿಯಾದ ವಿಷ್ಣುವಿಗೇ ಸಲ್ಲುವುವೇ ಹೊರತು ಈ ಮೂವರಿಗೂ ಸ್ವರೂಪಸಾಮ್ಯವಿಲ್ಲ. ಆದುದರಿಂದ ಪರಮಪುರುಷನಾದ ಶ್ರೀಮನ್ನಾರಾಯಣನು, ಶರೀರಾತ್ಮಭಾವದಿಂದ ಬ್ರಹ್ಮರುದ್ರರಾಗಿರುವನೆಂದೂ, ತಾನೇ ಸಾಕ್ಷಾತ್ತಾಗಿ ತನ್ನ ಸಂಕಲ್ಪದಿಂದ ಅವತಾರಗಳನ್ನೆತ್ತಿ ತ್ರಿಮೂರ್ತಿಗಳ ನಡುವೆ ವಿಷ್ಣುವೆನಿಸಿಕೊಳ್ಳುವನೆಂದೂ ಗ್ರಾಹ್ಯವು. ಆದುದರಿಂದ ತ್ರಿಮೂರ್ತಿಗಳಲ್ಲಿ ವಿಷ್ಣುನಾಮಕನೇ ಆ ಪರಮಪುರುಷನು. ಬ್ರಹ್ಮರುದ್ರರಿಬ್ಬರೂ ಆಪುರುಷನಿಗೆ ಶರೀರಭೂತರಾದ ಜೀವಾತ್ಮರೆಂದು ಸಿದ್ಧವು. ಆದರೆ ಮೇಲಿನ ಮೂಲದಲ್ಲಿ “ಆ ಪರಮಪುರುಷನೊಬ್ಬನೇ ವಿಷ್ಣುಬ್ರಹ್ಮರುದ್ರರೆಂಬ ನಾಮಭೇದದಿಂದ ಸ್ಥಿತಿ ಮೊದಲಾದ ಕಾರ್ಯಗಳನ್ನು ನಡೆಸುವನೆಂದಿರುವುದರಿಂದ, ಆ ತ್ರಿಮೂರ್ತಿಗಳಿಗೆ ಹೆಸರಿನಲ್ಲಿ ಭೇದವೇ ಹೊರತು ವಸ್ತುಭೇದವಿಲ್ಲವೆಂದು ಸೂಚಿತವಾಗುವುದಲ್ಲವೇ? ಇದಕ್ಕನುಗುಣವಾಗಿ ಶ್ರುತಿಗಳಲ್ಲಿಯೂ “ಬ್ರಹ್ಮಾ ನಾರಾಯಣಃ, ಶಿವಶ್ಚ ನಾರಾಯಣಃ” ಎಂಬುದಾಗಿ ಸ್ವರೂಪೈಕ್ಯವೇ ಹೇಳಲ್ಪಡುವುದು. ಅದರಂತೆಯೇ ಸ್ಮೃತಿವಾಕ್ಯಗಳಲ್ಲಿಯೂ “ಸರ್ಗಸ್ಥಿತ್ಯಂತಕರಣೀಂ ಬ್ರಹ್ಮವಿಷ್ಣುಶಿವಾತ್ಮಿಕಾಂ। ಸಂಜ್ಞಾಂ ಸ ಯಾತಿ ಭಗವಾನೇಕ ಏವ ಜನಾರ್ದನಃ” ಎಂದು ತ್ರಿಮೂರ್ತಿಗಳಿಗೆ ಸಂಜ್ಞಾಭೇದವುಮಾತ್ರವೇ ಹೇಳಲ್ಪಟ್ಟಿರುವುದು. ಅದಲ್ಲದೆ ಒಬ್ಬನೇ ಹರ್ಯಾದಿಸಂಜ್ಞೆಗಳನ್ನು ಹೊಂದುವನೆಂಬುದರಿಂದ ಈ ಹರ್ಯಾದಿಗಳಿಗಿಂತಲೂ ಬೇರೆಯಾದ ಪರತತ್ತ್ವವೊಂದುಂಟೆಂದೂ ಸೂಚಿತವಾಗುವುದು. ಇದರಮೇಲೆ “ಯಸ್ಮಿನ್ ಬ್ರಹ್ಮವಿಷ್ಣು ರುದ್ರಾಸ್ತೇ ಸರ್ವೇ ಸಂಪ್ರಸೂಯಂತೇ, ತೇನೇದಂ ಪೂರ್ಣಂ ಪುರುಷೇಣ ಸರ್ವಂ ತತೋ ಯದುತ್ತರತರಂ ತದರೂಪಮನಾಮಯಮ್, ಯ ಏತದ್ವಿದುರಮೃತಾಸ್ತೇ ಭವನ್ತಿ” ಎಂಬ ಶ್ರುತಿವಾಕ್ಯದಲ್ಲಿ, ಬ್ರಹ್ಮ ವಿಷ್ಣು ಪ್ರಭೃತಿಗಳೆಲ್ಲರೂ ಬೇರೊಂದು ಪರತತ್ವದಿಂದ ಹುಟ್ಟಿದುದಾಗಿಯೂ, (ತತೋ ಯದುತ್ತರತರಂ) ಎಂದು ತ್ರಿಮೂರ್ತಿಗಳಿಗಿಂತಲೂ ಆ ತತ್ತ್ವವು ಪರವೆನಿಸಿ ಬೇರೆಯಾಗಿರುವುದಾಗಿಯೂ, ಅದೇ ಮೋಕ್ಷಹೇತುವೆಂಬುದಾಗಿಯೂ ಹೇಳಲ್ಪಟ್ಟಿರುವುದು. ಇದೂ ಅಲ್ಲದೆ “ಅಮೃತಸ್ಯೈಷ ಸೇತುಃ” ಎಂಬುದಾಗಿ ವಿಷ್ಣುವು ಮೋಕ್ಷಕ್ಕೆ ಸೇತುವಾಗಿರುವನೆಂದರೆ, ಮೋಕ್ಷಪ್ರಾಪ್ತಿಗೆ ದಾರಿಯಾಗಿರುವನೆಂಬುದರಿಂದ, ತ್ರಿಮೂ

ಮೂರುಗುಣಗಳುಂಟು. ಇವು ಮೂರೂ ಕೇವಲ ಪ್ರಕೃತಿಯ ಗುಣಗಳು

---

ರ್ತಿಗಳಿಗಿಂತಲೂ ಬೇರೆಯಾದ ಪರತತ್ವವೊಂದುಂಟೆಂದೂ, ಅದೇ ಮುಮುಕ್ಷುಗಳಿಗೆ ಪ್ರಾಪ್ಯಸ್ಥಾನವೆಂದೂ, ಸಕಲಜಗತ್ಕಾರಣವೆಂದೂ ಸಿದ್ಧವಾಗುವುದು. ಹೀಗಿರಲು ನಾರಾಯಣನೇ ಪರಮಪುರುಷನೆಂದೂ, ಅವನೇ ಮುಕ್ತಿಗೆ ಸ್ಥಾನನೆಂದೂ ಹೇಳುವುದು ಹೇಗೆ?” ಎಂದು ಕೆಲವರು ಆಕ್ಷೇಪಿಸಬಹುದು. ಇವುಗಳಿಗೆ ಸಮಾಧಾನವೇನೆಂದರೆ:—ಪರಮಪುರುಷನೊಬ್ಬನೇ ತ್ರಿಮೂರ್ತಿಗಳಾದನೆಂದ ಮಾತ್ರಕ್ಕೆ ಅವನಿಗೂ ತ್ರಿಮೂರ್ತಿಗಳಿಗೂ ಐಕ್ಯವನ್ನು ಹೇಳಬೇಕೆಂಬ ನಿರ್ಬಂಧವೇನೂ ಏರ್ಪಡುವುದಿಲ್ಲ. “ಬ್ರಹ್ಮಾ ನಾರಾಯಣಃ ಶಿವಶ್ಚ ನಾರಾಯಣಃ” ಎಂಬ ವಾಕ್ಯಗಳಲ್ಲಿ ಸ್ವರೂಪೈಕ್ಯವು ತೋರಿದರೂ, “ನಾರಾಯಣಾದ್ಬ್ರಹ್ಮಾ ಜಾಯತೇ, ನಾರಾಯಣಾದ್ರುದ್ರೋ ಜಾಯತೇ” ಇತ್ಯಾದಿಗಳಾದ ಬೇರೆ ವಾಕ್ಯಗಳಿಂದ ಆ ಸಂದೇಹವು ಪರಿಹೃತವಾಗಿ, ಬ್ರಹ್ಮರುದ್ರರಿಗೆ ನಾರಾಯಣನೇ ಉತ್ಪತ್ತಿಕಾರಣನೆಂದು ವ್ಯಕ್ತವಾಗುವುದು. ಇದೇ ಅರ್ಥದಲ್ಲಿ ಇನ್ನೂ ಅನೇಕಶ್ರುತಿಸ್ಮೃತಿವಾಕ್ಯಗಳುಂಟು “ಏಕೋ ಹವೈ ನಾರಾಯಣ ಆಸೀನ್ನ ಬ್ರಹ್ಮಾ ನೇಶಾನಃ” ಆದಿಯಲ್ಲಿ ನಾರಾಯಣನೊಬ್ಬನುಹೊರತು ಬ್ರಹ್ಮರುದ್ರಾದಿಗಳಾರೂ ಇರಲಿಲ್ಲವೆಂದೂ, “ಸ ಮುನಿರ್ಭೂತ್ವಾ ಸಮಚಿಂತಯತ್” “ತತ ಏತೇ ವ್ಯಜಾಯನ್ತ ವಿಶ್ವೇ ಹಿರಣ್ಯಗರ್ಭೋಽಗ್ನಿರ್ಯಮವರುಣರುದ್ರೇನ್ದ್ರಾಃ” “ಯಸ್ನಾಭಿಪದ್ಮಾದಭವತ್ಸ ಮಹಾತ್ಮಾ ಪ್ರಜಾಪತಿಃ। ತತ್ರ ಬ್ರಹ್ಮಾ ಚತುರ್ಮುಖೋಽಜಾಯತ, ಸೋಽಗ್ರೇ ಭೂತಾನಾಂ ಮೃತ್ಯುಮಸೃಜತ್, ತ್ರ್ಯಕ್ಷಂ ತ್ರಿಶಿರಸ್ಕಂ ತ್ರಿಪಾದಂ ಖಣ್ಡಪರಶುಂ” ಇತ್ಯಾದಿ ವಾಕ್ಯಗಳಿಂದ ಶ್ರೀಮನ್ನಾರಾಯಣನ ಮನಸ್ಸಂಕಲ್ಪದಿಂದ, ಅವನ ನಾಭಿಯಲ್ಲಿ ಬ್ರಹ್ಮನು ಜನಿಸಿ, ಆಮೇಲೆ ಬ್ರಹ್ಮನೇ ರುದ್ರನನ್ನು ಸೃಷ್ಟಿಸಿದ ಹಾಗೆ ವ್ಯಕ್ತವಾಗುವುದು. “ಅದ್ಭ್ಯೋ ನಾರಾಯಣೋ ದೇವಸ್ತಸ್ಮಾದ್ಬ್ರಹ್ಮಾ ತತೋ ಭವಃ” “ಕ ಇತಿ ಬ್ರಹ್ಮಣೋ ನಾಮ, ಈಶೋಽಹಂ ಸರ್ವದೇಹಿನಾಂ, ಆವಾಂ ತ್ವದಂಗಸಂಭೂತೌ ತಸ್ಮಾತ್ಕೇಶವನಾಮಭಾಕ್” ಇತ್ಯಾದಿ ವಾಕ್ಯಗಳಿಂದಲೂ ನಾರಾಯಣನಿಂದ ಬ್ರಹ್ಮನೂ, ಇವನಿಂದ ರುದ್ರನೂ, ಜನಿಸಿದಂತೆ ಸಿದ್ಧವಾಗುವುದು. ಮತ್ತು “ವಿಭೂತಯೋ ಹರೇರೇತಾ ಜಗತಸ್ಸೃಷ್ಟಿಹೇತವಃ” ಎಂಬುದಾಗಿ ಬ್ರಹ್ಮರುದ್ರಾದಿಗಳೆಲ್ಲರೂ ನಾರಾಯಣನ ವಿಭೂತಿಗಳೆಂದೂ “ಏತೌ ದ್ವೌ ವಿಬುಧಶ್ರೇಷ್ಠೌ ಪ್ರಸಾದಕ್ರೋಧಜೌ ಸ್ಮೃತೌ। ತದಾದರ್ಶಿತಪಂಥಾನೌ ಸೃಷ್ಟಿಸಂಹಾರಕಾರಕೌ” “ಹರೋ ಹರತಿ ತದ್ವಶಃ” ಎಂಬುದಾಗಿ ಬ್ರಹ್ಮರುದ್ರಾದಿಗಳ ಪ್ರವರ್ತನಗಳೆಲ್ಲವೂ ಆ ನಾರಾಯಣನ ಅಧೀನಗಳೆಂದೂ, “ತವಾಂತರಾತ್ಮಾ ಮಮ ಚ ಯೇಚಾನ್ಯೇ ದೇಹಿಸಂಜ್ಞಿತಾಃ। ಸರ್ವೇಷಾಂ ಸಾಕ್ಷಿಭೂತೋಽಸೌ” ಎಂಬುದರಿಂದ, ನಾರಾಯಣನಿಗೂ, ಬ್ರಹ್ಮರುದ್ರಾದಿಗಳಿಗೂ ಶರೀರಾತ್ಮಭಾವರೂಪವಾದ ಸಂಬಂಧವುಂಟೆಂದೂ ವ್ಯಕ್ತವಾಗುವುದು. ಹೀಗೆ ಅನೇಕಶ್ರುತಿಗಳಿಂದ ಬ್ರಹ್ಮರುದ್ರರು ನಾರಾಯಣನಿಂದಲೇ ಸೃಷ್ಟಿಸಲ್ಪಟ್ಟು, ಆತನಿಗಧೀನರಾಗಿ, ಆತನಿಗೆ ಶರೀರಭೂತರಾಗಿಯೂ ಇರುವುದರಿಂದ, ತ್ರಿಮೂರ್ತಿಗಳನ್ನು ಏಕವಸ್ತುವಾಗಿ ಹೇಳುವುದಕ್ಕಿಲ್ಲ. ಬ್ರಹ್ಮರುದ್ರವಾಚಕಗಳಾದ ಶಬ್ದಗಳು ದೇಹಾತ್ಮಭಾವದಿಂದ ಆ ನಾರಾಯಣನಲ್ಲಿ ವರ್ತಿಸುವವೇ ಹೊರತು ಸ್ವರೂಪೈಕ್ಯದಿಂದಲ್ಲವೆಂದು ಗ್ರಾಹ್ಯವು. ಆದರೆ

ಇವು ಜೀವಾತ್ಮನಿಗಾಗಲಿ ಪರಮಾತ್ಮನಿಗಾಗಲಿ ಇರತಕ್ಕವುಗಳಲ್ಲ. ಪರಮಪುರುಷನೊಬ್ಬನೇ ಶರೀರಾತ್ಮಭಾವದಿಂದ ಆ ಮೂರುಗುಣಗಳಿಂದ ಕೂಡಿ ಈ ಜಗತ್ತಿನ ಸ್ಥಿತಿಮೊದಲಾದ ಕಾರ್ಯಗಳನ್ನು ನಡೆಸುವುದಕ್ಕಾಗಿ, ವಿಷ್ಣು ಬ್ರಹ್ಮರುದ್ರರೆಂಬ ನಾಮರೂಪಭೇದಗಳನ್ನು ಹೊಂದುವನು! ಇವರಲ್ಲಿ ಸತ್ವಮೂರ್ತಿಯಾದ ವಿಷ್ಣುವಿನಿಂದಲೇ ಮನುಷ್ಯರಿಗೆ (ಮೋಕ್ಷಪ್ರಾಪ್ತಿಯವರೆಗೆ) ಸರ್ವವಿಧಗಳಾದ ಶ್ರೇಯಸ್ಸುಗಳೂಗೂಡುವುವು. "ಮೇಲೆ ಹೇಳಿದ ಮೂರೂ ಸಮವಾಗಿ ಪ್ರಕೃತಿಯ ಗುಣಗಳಾಗಿರುವಾಗ, ಅವುಗಳಲ್ಲಿ ಸತ್ತ್ವವೊಂದೇ ಮೋಕ್ಷಹೇತುವೆಂಬುದಕ್ಕೆ ಆಧಾರವೇನು? ಎಂದರೆ, ಪೃಥಿವೀವಿಕಾರವಾದ ಒಂದು ಕಟ್ಟಿಗೆಯಲ್ಲಿ, ಮೊದಲು ಹೊಗೆಯು ಕಾಣಿಸಿಕೊಂಡು ಆ ಮೇಲೆ ಅಗ್ನಿಯು ಹುಟ್ಟುವುದಲ್ಲವೇ? ಇವೆರಡೂ ಒಂದೇ ಕಟ್ಟಿಗೆಯಿಂದ ಹೊರಟದ್ದರೂ ಹೊಗೆಯು ಪ್ರಕಾಶರಹಿತವಾಗಿ ನಿಷ್ಪ್ರಯೋಜನವಾಗುವುದು. ಅದರಿಂದಾಚೆಗೆ ಹುಟ್ಟುವ ಅಗ್ನಿಯಾದರೋ ವೇದಪ್ರತಿಪಾದ್ಯವಾಗಿ, ತೇಜೋವಿಶಿಷ್ಟವಾಗಿರುವುದು. ಸ್ವರ್ಗಪ್ರಾಪ್ತಿಗೂ ಅದೇ ಕಾರಣವೆನಿಸಿಕೊಂಡಿರುವುದು. ಇದರಂತೆಯೇ ಲೋಕದಲ್ಲಿ ಸುಸುಪ್ತನಾದ ಮನುಷ್ಯನಿಗೆ

---

ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸರ್ವೇ ಸಂಪ್ರಸೂಯಂತೇ" "ತತೋಯದುತ್ತರತರಂ" ಈ ವಾಕ್ಯಗಳಿಂದ ತ್ರಿಮೂರ್ತಿಗಳಿಗೆ ಉತ್ಪತ್ತಿಯೂ, ತ್ರಿಮೂರ್ತಿಗಳಿಗಿಂತಲೂ ಮೇಲಾದ ಬೇರೊಂದು ತತ್ವವುಂಟೆಂಬ ಭಾವವೂ ಸೂಚಿತವಾಗುವಾಗ ವಿಷ್ಣುವಿಗೆ ಪರತ್ವವು ಹೇಗೆ? ಎಂದರೆ, ಬ್ರಹ್ಮರುದ್ರರು ಕರ್ಮವಶದಿಂದ ಹುಟ್ಟತಕ್ಕವರೆಂದೂ ವಿಷ್ಣುವುಮಾತ್ರ "ಅಜಾಯಮಾನೋ ಬಹುಧಾ ವಿಜಾಯತೇ" ಎಂಬಂತೆ ತನ್ನ ಸಂಕಲ್ಪದಿಂದ ತಾನೇ ಅವತರಿಸತಕ್ಕವನೆಂದೂ ಭೇದವನ್ನು ಗ್ರಹಿಸಬೇಕು. ಹಾಗೆಯೇ (ತತೋಯದುತ್ತರತರಂ) ಎಂಬುದರಿಂದ ನಾರಾಯಣನಿಗಿಂತಲೂ ಮೇಲಾದ ಬೇರೊಂದು ತತ್ವವುಂಟೆಂದು ಗ್ರಹಿಸಕೂಡದು. ಈ ಶ್ರುತಿವಾಕ್ಯಕ್ಕೆ ಹಿಂದುಮುಂದಿನ ವಾಕ್ಯಗಳೆಲ್ಲವೂ ನಾರಾಯಣನಿಗೆ ಮಹಾಪುರುಷತ್ವವನ್ನು ಹೇಳುತ್ತಿರುವಾಗ, ನಡುವೆ ಇರುವ ಈ ವಾಕ್ಯವೂಕೂಡ ಆ ನಾರಾಯಣನ ಪರತ್ವವನ್ನೇ ಹೇಳಬೇಕೇ ಹೊರತು ಬೇರೊಬ್ಬ ಪುರುಷನನ್ನು ಹೇಳಿದಪಕ್ಷದಲ್ಲಿ. ಆ ವಾಕ್ಯಕ್ಕೆ ಪೂರ್ವೋತ್ತರಗಳೊಡನೆ ಸಂಬಂಧವಿಲ್ಲದೇ ಹೋಗುವುದರಿಂದ (ತತೋಯದುತ್ತರತರಂ) ಎಂಬಲ್ಲಿ (ತತಃ) ಮೇಲಿನಕಾರಣಗಳಿಂದ (ಯತಃ) ಪುರುಷಶಬ್ದವಾಚ್ಯವಾದ ತತ್ತ್ವವಾವುದೋ ಅದೇ (ಉತ್ತರಂ) ಮೇಲೆನಿಸಿಕೊಳ್ಳುವುದು ಎಂಬರ್ಥವನ್ನು ಗ್ರಹಿಸಬೇಕು. ಹಾಗೆಯೇ (ಅಮೃತಸ್ಯೈಷ ಸೇತುಃ) ಎಂಬಲ್ಲಿಯೂ ಕೂಡ ವಿಷ್ಣುವು ಬೇರೊಂದು ತತ್ವಕ್ಕೆ ಪ್ರಾಪಕನೆಂದು ಗ್ರಹಿಸಕೂಡದು. ವಿಷ್ಣುವು ತನಗೆತಾನೇ ಪ್ರಾಪಕನೆಂಬುದೇ ಅದರರ್ಥವು. ಹೀಗೆ ನಾರಾಯಣನೇ ಪರಮಪುರುಷನೆಂಬುದಕ್ಕೆ ಅನೇಕಶ್ರುತಿಸ್ಮೃತಿವಾಕ್ಯಗಳುಂಟು. (ವೀರರಾಘವೀಯವು.)

ಮೊದಲು ತಮಸ್ಸು ಕವಿದಿರುವುದು. ಅದರಿಂದಾಚೆಗೆ ರಜಸ್ಸು ಹುಟ್ಟುವುದು. ಅದ ನಂತರದಲ್ಲಿ ಮನಸ್ಸನ್ನು ಪ್ರಸಾದಗೊಳಿಸತಕ್ಕ ಸತ್ವ ಹುಟ್ಟುವುದು. ಇವೆಲ್ಲವೂ ಪ್ರಕೃತಿಜನ್ಯಗಳೇ ಆಗಿದ್ದರೂ, ಸತ್ವವೊಂದೇ ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನವೆನಿಸಿರುವುದು. ಹೀಗೆ ಸತ್ವವೇ ಪರಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನ ವಾಗಿಯೂ, ಅಂತಹ ಸತ್ವಕ್ಕೆ ಪ್ರವರ್ತಕನಾದ ಶ್ರೀಮನ್ನಾರಾಯಣನೇ ಶ್ರೇಯಃಪ್ರದನಾಗಿಯೂ ಇರುವುದರಿಂದ, ಪೂರ್ವಕಾಲದ ಮಹರ್ಷಿಗಳೆಲ್ಲರೂ ಸತ್ವಪ್ರವರ್ತಕನಾಗಿ, ಶುದ್ಧನಾಗಿರುವ ಆ ಭಗವಂತನನ್ನೇ ಮುಖ್ಯವಾಗಿ ಉಪಾಸನೆಮಾಡುತ್ತ ಬಂದರು. ಈಗಲೂ ಅದರಂತೆಯೇ ಸತ್ವಮೂರ್ತಿ ಯಾದ ಮಹಾವಿಷ್ಣುವನ್ನು ಭಕ್ತಿಯಿಂದ ಉಪಾಸನಮಾಡುವವರಿಗೆ ಸರ್ವ ವಿಧದಲ್ಲಿಯೂ ಕ್ಷೇಮವುಂಟು. ಇದನ್ನು ಬಿಟ್ಟು ರಜಸ್ತಮೋಗಣಪ್ರಧಾನ ರಾದ ಬ್ರಹ್ಮಾದಿಗಳನ್ನು ಭಜಿಸತಕ್ಕವರಿಗೆ ಲಭಿಸತಕ್ಕ ಫಲವು, ಕಾಲಕ್ರಮ ದಿಂದ ಕ್ಷಯಿಸಿಹೋಗುವುದೇ ಹೊರತು ಶಾಶ್ವತವಲ್ಲ ಆದರೆ ಕೆಲಕೆಲವರು ದೇವತಾಂತರಗಳನ್ನು ಭಜಿಸುವುದುಂಟಲ್ಲವೇ? ಎಲ್ಲರೂ ಸತ್ವಮೂರ್ತಿಯಾದ ಆ ವಿಷ್ಣುವೊಬ್ಬನನ್ನೇ ಏಕೆ ಭಜಿಸಬಾರದು? ಎಂದರೆ, ಜೀವಗಳಲ್ಲಿಯೂ ಶರೀರ ಸಂಬಂಧದಿಂದ ಈ ವಿಧವಾದ ಗುಣಭೇದಗಳುಂಟು. ಮೋಕ್ಷಾಪೇಕ್ಷೆಯುಳ್ಳವ ರೆಲ್ಲರೂ ಸತ್ವಪ್ರಧಾನರಾಗಿರುವುದರಿಂದ, ರಜಸ್ತಮೋಗುಣಪ್ರಧಾನರಾದ ಇತರದೇವತೆಗಳನ್ನು ಬಿಟ್ಟು ಶುದ್ಧ ಸತ್ವಮೂರ್ತಿಯಾದ ಶ್ರೀಮನ್ನಾರಾಯಣನ ಅವತಾರಗಳನ್ನೇ ಭಜಿಸುವರು. ಇಂತವರು ಯಾವಾಗಲೂ ಶಾಂತ ಸ್ವಭಾವವುಳ್ಳವರು. ಅವರಿಗೆ ದೇವತಾಂತರಗಳಲ್ಲಿಯಾಗಲಿ, ಆ ದೇವತೆಗಳನ್ನು ಉಪಾಸನೆಮಾಡುವವರಲ್ಲಿಯಾಗಲಿ ಅಸೂಯಾದಿಗಳುಂಟಾಗವು. ರಜಸ್ತ ಮಸ್ಸ್ವಭಾವವುಳ್ಳವರಾದರೋ ಶಾಶ್ವತಸುಖವಾದ ಮೋಕ್ಷದಲ್ಲಿ ದೃಷ್ಟಿ ಯಿಡದೆ, ಐಶ್ವರ್ಯವನ್ನೂ, ಅಧಿಕಾರವನ್ನೂ, ಪುತ್ರಸಂತಾನಾದಿಗಳನ್ನೂ ಅಪೇ ಕ್ಷಿಸಿ, ತಮ್ಮಂತೆಯೇ ರಜಸ್ತಮಸ್ಸ್ವಭಾವವುಳ್ಳ ಪಿತೃದೇವತೆಗಳನ್ನೂ, ಭೂತ ಪತಿಗಳನ್ನೂ, ಬ್ರಹ್ಮಾದಿಗಳನ್ನೂ ಭಜಿಸುವರು. ಆದುದರಿಂದ ಲೋಕದಲ್ಲಿ ಮನುಷ್ಯರಿಗೆ ತಮ್ಮ ತಮ್ಮ ಗುಣಕ್ಕನುಸಾರವಾಗಿಯೇ ದೇವತಾಂತರಗಳಲ್ಲಿಯೂ ಭಕ್ತಿಯು ಹುಟ್ಟುವುದು. ಎಲೈ ಮಹರ್ಷಿಗಳೇ! ಅಷ್ಟೇಕೆ? ಯಾವ ವೇದ ಗಳಾಗಲಿ, ಯಾವ ಯಜ್ಞಗಳಾಗಲಿ, ವೇದಾಂತವಿಹಿತಗಳಾದ ಯೋಗಗಳಾ ಗಲಿ, ಸ್ಮಾರ್ತಕ್ರಿಯೆಗಳಾಗಲಿ, ಆ ವಾಸುದೇವನನ್ನೇ ವಿಷಯೀಕರಿ ಸುವುವು. ಮತ್ತು ಜ್ಞಾನವಾಗಲಿ ತಪಸ್ಸಾಗಲಿ, ವೇದೋಕ್ತಧರ್ಮ



60. ಸೂತಪೌರಾಣಿಕನು ಶೌನಕಾದಿಗಳಿಗೆ ಭಗವತ್ಕಥೆಗಳನ್ನು ಹೇಳಿದುದು.

ಗಳಾಗಲಿ, ಎಲ್ಲವೂ ಅಂತರಾತ್ಮನಾದ ಆ ವಾಸುದೇವನಿಗೇ ಸಲ್ಲುವುವು. ಸ್ವರ್ಗಾದಿಫಲಗಳೂ ಕೂಡ ತದೀಯಾನಂದದ ಅಂಶಭೂತವಾಗಿಯೇ ಇರುವುದರಿಂದ, ಅವೂ ವಾಸುದೇವಪರವೆನಿಸುವುವು. ಸಮಸ್ತಕ್ಕೂ ವಾಸುದೇವನೇ ಮುಖ್ಯಾಶ್ರಯನು. ಏಕೆಂದರೆ:—ಸೃಷ್ಟಿಗೆ ಮೊದಲು ನಾಮರೂಪ ವಿಭಾಗಗಳಿಲ್ಲದ ಸೂಕ್ಷ್ಮಚಿದಚಿತ್ತುಗಳನ್ನೇ ತನ್ನ ಶರೀರವನ್ನಾಗಿ ಹೊಂದಿ, ತಾನೊಬ್ಬನೇ ತೋರುತ್ತಿದ್ದ ಪರಮಾತ್ಮನು, ತನಗೆ ಶರೀರಭೂತವಾಗಿಯೂ, ಸತ್ವಾದಿಗುಣಭೇದಗಳುಳ್ಳುದಾಗಿಯೂ, ಮಹದಾದಿಪೃಥಿವೀಪರ್ಯಂತವಾಗಿ ಕಾರ್ಯಕಾರಣರೂಪದಿಂದ ಪರಿಣಮಿಸತಕ್ಕುದಾಗಿಯೂ ಇರುವ ಆ ಪ್ರಕೃತಿಯಿಂದಲೇ ಜಗತ್ತನ್ನು ಸೃಷ್ಟಿಸಿ, ಆ ಸ್ಥೂಲವಸ್ತುಗಳೊಂದೊಂದರಲ್ಲಿಯೂ ತಾನೂ ಅಡಗಿರುವನು. ಹಾಗಿದ್ದರೂ ತಾನುಮಾತ್ರ ಆ ಗುಣಗಳ ಸಂಬಂಧವಿಲ್ಲದಿರುವನು. ಹೀಗೆ ಆ ಪರಮಾತ್ಮನು, ಪ್ರಕೃತಿರೂಪವಾದ ಸಮಸ್ತವಸ್ತುಗಳಲ್ಲಿಯೂ ವ್ಯಾಪಿಸಿರುವುದಲ್ಲದೆ, ಅದೇ ಪ್ರಕೃತಿಸಂಬಂಧವಾದ ಶರೀರದಲ್ಲಿ ಸೇರಿಕೊಂಡಿರುವ ಜೀವನನ್ನೂ ತನಗೆ ಶರೀರವನ್ನಾಗಿ ಮಾಡಿಕೊಂಡು, ಒಂದೊಂದು ಜೀವದಲ್ಲಿಯೂ ಅನುಪ್ರವೇಶಮಾಡಿರುವನು. ಹೀಗೆ ಸರ್ವಾತ್ಮಕನಾದ ಆ ಭಗವಂತನು ಮಾಯಾ(ಪ್ರಕೃತಿ) ಗುಣಕಾರ್ಯಗಳಾದ ಒಂದೊಂದು ವಸ್ತುವಿನಲ್ಲಿಯೂ ದೇವಾದಿಶರೀರಗಳಲ್ಲಿಯೂ, ಆ ಶರೀರಾಂತರ್ಗತವಾದ ಒಂದೊಂದು ಜೀವದಲ್ಲಿಯೂ ಸೇರಿರುವುದರಿಂದ, ಆಯಾಶರೀರಗಳ, ಮತ್ತು ಅವುಗಳಲ್ಲಿರುವ ಜೀವಾತ್ಮನ ಧರ್ಮಗಳೆಲ್ಲಕ್ಕೂ ತಾನೇ ಆಶ್ರಯನಾದಂತೆ ತೋರುವನೇ ಹೊರತು, ವಾಸ್ತವಕ್ಕೆ ಈ ಪ್ರಕೃತಿಗುಣಗಳೊಂದೂ ಅವನಲ್ಲಿ ಸಂಬಂಧಿಸಲಾರವು. ಹೀಗೆ ಆ ಪರಮಾತ್ಮನು ಸರ್ವಾಂತರ್ಯಾಮಿಯಾದುದರಿಂದ ಚಿದಚಿದ್ರೂಪವಾದ ಈ ಪ್ರಪಂಚದಲ್ಲಿ ಆತನಿಲ್ಲದ ವಸ್ತುವೊಂದಾದರೂ ಇರುವುದಕ್ಕವಕಾಶವಿಲ್ಲ! ಆದುದರಿಂದಲೇ ವೇದಾದಿಗಳೆಲ್ಲವೂ ಆ ವಾಸುದೇವನೊಬ್ಬನಲ್ಲಿಯೇ ವರ್ತಿಸುವುವು. ಮುಖ್ಯವಾಗಿ * ನಾವು ಯಾವುದನ್ನುದ್ದೇಶಿಸಿ ಯಾವ

---

* ಈ ಸ್ಥಳದಲ್ಲಿ ತಿಳಿಯಬೇಕಾದ ಮುಖ್ಯಾಂಶವೇನೆಂದರೆ—ಚಿತ್ತು, ಅಚಿತ್ತು, ಈಶ್ವರನೆಂದು ಮೂರುತತ್ವಗಳು. ಚಿತ್ತೆಂದರೆ ಚೇತನಸಮುದಾಯವು. ಅಚಿತ್ತೆಂದರೆ ಅಚೇತನಗಳಾದ ಘಟಪಟಾದಿವಸ್ತುಗಳಾಗಿಯೂ, ಪ್ರಾಣಿಗಳ ದೇಹರೂಪವಾಗಿಯೂ ಪರಿಣಮಿಸತಕ್ಕ ಪ್ರಕೃತಿ. ಇವು ಮೂರೂ ಸ್ವತಸ್ಸಿದ್ಧವಾಗಿ ನಿತ್ಯವೆನಿಸಿಕೊಂಡಿರುವುವು. ಶರೀರದಲ್ಲಿ ಜೀವಾತ್ಮನು ಸೇರಿಕೊಂಡಿರುವಂತೆ ಈಶ್ವರನು ಈ ಎರಡುತತ್ವಗಳಲ್ಲಿಯೂ ಅಂತರ್ಯಾಮಿಯಾಗಿದ್ದು ಇವುಗಳಿಗೆ ತಾನೇ ಧಾರಕನಾಗಿಯೂ, ಪೋಷಕನಾಗಿಯೂ ನಿಯಾಮಕನಾಗಿಯೂ

ಕಾರ್ಯವನ್ನು ಮಾಡಿದರೂ,ಅವೆಲ್ಲವೂ ಅಂತರಾತ್ಮನಾದ ಆ ವಾಸುದೇವನಲ್ಲಿಯೇ ಪರ್ಯವಸಿಸುವುವು. ಎಲ್ಲೆಲ್ಲಿಯೂ ಒಂದೇ ತೇಜಸ್ಸುಳ್ಳ ಅಗ್ನಿಯು ತನಗಾಶ್ರಯವಾದ ಹುಲ್ಲು, ಕಟ್ಟಿಗೆ, ಮೊದಲಾದ ವಸ್ತುಗಳಿಗೆ ತಕ್ಕಂತೆ, ಹೆಸರಿನಲ್ಲಿಯೂ, ಆಕೃತಿಯಲ್ಲಿಯೂ ಬೇರ್ಪಡುವಂತೆ, ಜೀವನೂ ಕೂಡ, ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಒಂದೇವಿಧವಾದ ಜ್ಞಾನಾನಂದಸ್ವರೂಪನಾಗಿದ್ದರೂ, ತಾನು ಸೇರಿದ ದೇಹಗುಣಕ್ಕೆ ತಕ್ಕಂತೆ, ದೇವನೆಂದೂ, ಮನುಷ್ಯನೆಂದೂ ತಿರ್ಯಕ್ಕೆಂದೂ. ನಾನಾಭೇದಗಳಿಂದ ತೋರುವನು. ಹಾಗೆಯೇ ಸರ್ವೇಶ್ವರನೂ ಕೂಡ ಜೀವಾತ್ಮನನ್ನೇ ತನಗೆ ಶರೀರವನ್ನಾಗಿ ಮಾಡಿಕೊಂಡು, ತನ್ಮೂಲಕವಾಗಿ ಪ್ರಕೃತಿಮಯವಾದ ದೇಹದಲ್ಲಿ ಪ್ರವೇಶಿಸಿ ರೂಪಭೇದವನ್ನು ಕಾಣಿಸುವನು. ಹೀಗೆ ಪರಮಾತ್ಮನು ಚಿದಚಿತ್ತುಗಳ ಮೂಲಕವಾಗಿ ನಾಮರೂಪಭೇದಗಳನ್ನೂ ಜೀವಾತ್ಮನ ಮೂಲಕವಾಗಿ ಸುಖದುಃಖಾದ್ಯನುಭವಗಳನ್ನೂ ಹೊಂದುವಂತೆ ತೋರಿದರೂ, ಆ ನಾಮರೂಪಭೇದಗಳೆಲ್ಲವೂ ಆಯಾಶರೀರಗಳಲ್ಲಿ ಮಾತ್ರವೇ ಪರ್ಯವಸಾನಹೊಂದುವುವು. ಸುಖದುಃಖಾದ್ಯನುಭವಗಳೂ,

---

ಇರುವನು. ಚಿದಚಿತ್ತುಗಳೆರಡೂ ಈಶ್ವರನಿಗೆ ಶರೀರಭೂತವಾಗಿ, ಆತನ ನಿಯಮನಕ್ಕೊಳಪಟ್ಟಿರುವುವು. ಪ್ರಪಂಚಸೃಷ್ಟಿಗೆ ಮೊದಲು ಈ ಚಿದಚಿತ್ತುಗಳೆರಡೂ ಈಗ ಕಾಣುವ ನಾಮರೂಪಭೇದಗಳೊಂದೂ ಇಲ್ಲದೇ ಭಗವಂತನಿಗೆ ಶರೀರವಾಗಿ ಅವನೊಡನೆ ಏಕಾಕಾರವಾಗಿಯೇ ಇದ್ದುವು. ಇದೇ ಅವುಗಳ ಸೂಕ್ಷ್ಮಾವಸ್ಥೆಯು. ಉಪ್ಪು, ಸಕ್ಕರೆ ಇವುಗಳೆರಡೂ ಹಾಲಿನಲ್ಲಿ ಕರಗಿದಾಗ ಅವು ಮೂರೂ ಒಂದಾಗಿ ಸೇರಿ, ಹಾಲೊಂದೇ ಕಣ್ಣಿಗೆ ಕಾಣುವಂತೆ ಈಶ್ವರನೊಬ್ಬನೇ ಕಾಣುತಿದ್ದನು "ಸದೇವಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ" ಎಂದುಸೃಷ್ಟಿಗೆಮೊದಲು ಎರಡನೆಯದಿಲ್ಲದ ಬ್ರಹ್ಮವೊಂದೇ ಇತ್ತೆಂಬ ಶ್ರುತಿಗೆ ಇದೇ ಅರ್ಥವು. ಅದರಿಂದಾಚೆಗೆ ಈಶ್ವರನು "ತದೈಕ್ಷತ ಬಹುಸ್ಯಾಂ ಪ್ರಜಾಯೇಯ" ಎಂದು ತಾನೇ ಅನೇಕ ವಸ್ತುಗಳಾಗಿ ಹುಟ್ಟುವಂತೆ ಸಂಕಲ್ಪಿಸಿಕೊಂಡು ಚಿದಚಿತ್ತುಗಳನ್ನು ಬೇರೆಬೇರೆ ನಾಮರೂಪವಿಭಾಗಗಳಿಂದ ಬೇರ್ಪಡುವಂತೆ, ಸ್ಥೂಲಾಕಾರಕ್ಕೆ ತಿರುಗಿಸಿದನು. ಇದೇ ಅವುಗಳ ಸ್ಥೂಲಾವಸ್ಥೆಯು. ಇದೇ ಸೃಷ್ಟಿಯೆನಿಸುವುದು. ಇವುಗಳ ಸಮುದಾಯವೇ ಈ ಜಗತ್ತು. ಈಸ್ಥೂಲಾವಸ್ಥೆಯಲ್ಲಿಯೂ ಕೂಡ ಒಂದೊಂದರಲ್ಲಿಯೂ ಈಶ್ವರನು ಅಂತರ್ಯಾಮಿಯಾಗಿರುವನು ಹೀಗೆ ಚಿದಚಿತ್ತುಗಳೆರಡೂ ಸೂಕ್ಷ್ಮಾವಸ್ಥೆಯಲ್ಲಿಯಾಗಲಿ, ಈಶ್ವರನಿಗೆ ಶರೀರವಾಗಿ ಅವನನ್ನಗಲದಿರುವುವು. ಈಶ್ವರನು ಅವುಗಳಿಗೆ ಆತ್ಮರೂಪದಿಂದಿರುವನು. ಆದುದರಿಂದ ಹುಟ್ಟಿರುವ ರಾಮನು ಸೋಮನು ಇವೇ ಮೊದಲಾದ ನಾಮಾಂತರಗಳೆಲ್ಲವೂ ಅದರೊಳಗಿನ ಜೀವಾತ್ಮನವರೆಗೂ ಸಲ್ಲುವಂತೆ, ಶರೀರಭೂತಗಳಾದ ಜೀವಗಳಿಗೂ ವಾಚಕಗಳಾದ ಶಬ್ದಗಳೆಲ್ಲವೂ ಅಂತರ್ಯಾಮಿಯಾದ ಆ ಪರಮಾತ್ಮನ ವಿಷಯವಾಗಿಯೇ ಕೊನೆಮುಟ್ಟುವುವೆಂದು ತಿಳಿಯಬೇಕು.

ಪುಣ್ಯಪಾಪಕರ್ಮಗಳೂ, ಆ ಜೀವನಲ್ಲಿ ಮಾತ್ರವೇ ಪರ್ಯವಸಿತವಾಗುವುವು. ಇಷ್ಟೇಹೊರತು ಅಂತರಾತ್ಮನಾದ ಈ ಭಗವಂತನಿಗೆ ಇವುಗಳ ಸಂಬಂಧವೇನೂ ಇರುವುದಿಲ್ಲ. ಹೀಗೆ ಭಗವಂತನು, ಸತ್ವಾದಿಗುಣಮಯಗಳೆನಿಸಿಕೊಂಡ ಪೃಥಿವ್ಯಾದಿಪಂಚಭೂತಗಳು, ಗಂಧಾದಿಸೂಕ್ಷ್ಮಗಳು, ಜ್ಞಾನೇಂದ್ರಿಯಕರ್ಮೇಂದ್ರಿಯಗಳು, ಅಂತಃಕರಣ ಇವೇ ಮೊದಲಾದ ಪದಾರ್ಥಗಳನ್ನು ಕೂಡಿಸಿ, ತನ್ನಿಂದಲೇ ನಿರ್ಮಿಸಲ್ಪಟ್ಟ ದೇವಾದಿಶರೀರಗಳಲ್ಲಿ ಜೀವಶರೀರಿಯಾಗಿ ಪ್ರವೇಶಿಸಿ, ಆ ಜೀವದ್ವಾರದಿಂದಲೇ ರೂಪರಸಗಂಧಾದಿವಿಷಯಗಳನ್ನನುಭವಿಸುವನು. ಆ ಜೀವನ ಮೂಲಕವಾಗಿಯೇ ಪಾಪಪುಣ್ಯಗಳನ್ನೂ ನಡೆಸುತ್ತಿರುವನು. ಹೀಗೆ ಸರ್ವೇಶ್ವರನು ತಾನೊಬ್ಬನಾಗಿದ್ದರೂ, ಚಿದಚಿದ್ರೂಪವಾದ ಆ ಶರೀರಸಂಬಂಧದಿಂದಲೇ ನಾಮರೂಪಭೇದಗಳನ್ನೂ, ಸುಖದುಃಖಾದಿಭೋಗಗಳನ್ನೂ, ಕರ್ತೃತ್ವವನ್ನೂ ಹೊಂದಿದಂತೆ ಕಾಣುವನೇ ಹೊರತು ವಾಸ್ತವದಲ್ಲಿ ಅವನಿಗೆ ಅವುಗಳೊಡನೆ ಯಾವ ವಿಧದಲ್ಲಿಯೂ ಸಂಬಂಧವಿಲ್ಲ. ನಾಮರೂಪಭೇದಗಳೆಲ್ಲವೂ ಪ್ರಕೃತಿಸಂಬಂಧವಾದುವು. ಕರ್ತೃತ್ವಾದಿಗಳೆಲ್ಲವೂ ಜೀವಾತ್ಮಸಂಬಂಧವಾದುವು. ಹೀಗೆ ಲೋಕಸೃಷ್ಟಿಗೆ ಕಾರಣನಾದ ಸರ್ವೇಶ್ವರನು, ಸಾಧುಜನಗಳಲ್ಲಿ ಕರುಣೆಯುಳ್ಳವನಾಗಿ, ಕರ್ಮವಶರಾದ ಚೇತನರನ್ನುದ್ಧರಿಸುವುದಕ್ಕಾಗಿಯೇ ಸತ್ವಗುಣವನ್ನವಲಂಬಿಸಿ, ದೇವತಿರ್ಯಙ್ಮನುಷ್ಯಾದಿರೂಪಗಳಾದ ಆಕಾರಭೇದಗಳನ್ನು ತನ್ನ ಲೀಲೆಯಿಂದಲೇ ಪರಿಗ್ರಹಿಸಿ ಲೋಕಗಳನ್ನು ರಕ್ಷಿಸುತ್ತಿರುವನು. ಇದು ಎರಡನೆಯ ಅಧ್ಯಾಯವು.



## ಭಗವಂತನ ಇಪ್ಪತ್ತೊಂದವತಾರಗಳು.

ಎಲೈ ಶೌನಕಾದಿಮಹರ್ಷಿಗಳಿರ! ಪರಮಾತ್ಮನು ಮೊಟ್ಟಮೊದಲು ಲೀಲಾರ್ಥವಾಗಿ ಲೋಕವನ್ನು ಸೃಷ್ಟಿಸಬೇಕೆಂದಪೇಕ್ಷಿಸಿ, ಏಕಾದಶೇಂದ್ರಿಯಗಳುಳ್ಳದಾಗಿಯೂ, ಪಂಚಭೂತಾತ್ಮಕವಾಗಿಯೂ ಹದಿನಾರು ಕಳೆಗಳುಳ್ಳದಾಗಿಯೂ, ಮಹದಾದಿ ಸಮಷ್ಟಿ ತತ್ವಸಮೂಹವಾಗಿಯೂ, ಅಂಡಕಾರಣವಾಗಿಯೂ ಇರುವ * ಪುರುಷರೂಪವನ್ನು ಮೊದಲು ತಾನೇ ಗ್ರಹಿಸಿದನು. ಆತನು ಜಲಮಧ್ಯದಲ್ಲಿ ಯೋಗನಿದ್ರೆಯಿಂದಿರುವಾಗ, ಆತನ ನಾಭಿಯೆಂಬ ಮಡುವಿನಲ್ಲಿ ಹುಟ್ಟಿದ ಕಮಲದಿಂದ, ಮರೀಚಿಮೊದಲಾದ ಪ್ರಜಾಪತಿಗಳಿಗೆ ಪತಿಯಾದ ಬ್ರಹ್ಮನು ಹುಟ್ಟಿದನು. ಆತನಿಗೆ ಶರೀರಭೂತವಾದ ಪ್ರಕೃತಿಯ ಏಕದೇಶಪರಿಣಾಮಗಳಿಂದಲೇ ಈ ಸಮಸ್ತಲೋಕಗಳೂ ಏರ್ಪಟ್ಟಿರುವುವು. ಹೀಗೆ ಬ್ರಹ್ಮನಿಗೂ,ಸಮಸ್ತಲೋಕಗಳಿಗೂ ಕಾರಣನಾದ ಭಗವಂತನ ರೂಪವೂ, ಕೇವಲ ಸತ್ವಮಯವಾಗಿಯೂ, ಶುದ್ಧವಾಗಿಯೂ, ಸರ್ವೋತ್ತಮವಾಗಿಯೂ ಇರುವುದು. ಅದನ್ನೇ ಅನಿರುದ್ಧರೂಪವೆಂದು ಹೇಳುವರು. ಆ ರೂಪವನ್ನು ಸೂಕ್ಷ್ಮದೃಷ್ಟಿಯುಳ್ಳ ಯೋಗಿಗಳುಮಾತ್ರ ಉತ್ತಮಜ್ಞಾನವಿಶಿಷ್ಟವಾದ ತಮ್ಮ ಮನಸ್ಸಿನಿಂದ ನೋಡಬಲ್ಲರು. ಅನಿರುದ್ಧನಾಮಕವಾದ ಆ ರೂಪವು ಸಾಮಾನ್ಯಪುರುಷಸ್ವರೂಪವಲ್ಲ! ಸಹಸ್ರಪಾದಗಳು! ಸಹಸ್ರಭುಜಗಳು! ಸಹಸ್ರಮುಖಗಳು! ಸಾವಿರತೊಡೆಗಳು! ಇವುಗಳಿಂದ ಮಹಾದ್ಭುತವಾಗಿ, ಸಹಸ್ರಶಿರಸ್ಸುಗಳಿಂದಲೂ, ಸಹಸ್ರನೇತ್ರಗಳಿಂದಲೂ, ಸಾವಿರಕಿವಿಗಳಿಂದಲೂ, ಸಾವಿರಮೂಗುಗಳಿಂದಲೂ, ಸಹಸ್ರಕಿರೀಟಕುಂಡಲಗಳಿಂದಲೂ ಶೋಭಿಸುತ್ತಿರುವುದು. ಈ ಅನಿರುದ್ಧಸ್ವರೂಪವೇ ಮುಂದಿನ † ಅವತಾರ

---

*ಇದರಿಂದ ಭಗವಂತನಿಗೆ, ಶುದ್ಧ ಸತ್ವಮಯವಾದ ಪರಸ್ವರೂಪವೊಂದು, ಚೇತನಮಿಶ್ರವಾಗಿ ಪ್ರಕೃತಿವಿಕಾರಗಳಾದ ಮಹದಾದಿತತ್ವ ಸಮೂಹದ ರೂಪವೊಂದು, ಹೀಗೆ ಎರಡುರೂಪಗಳುಂಟೆಂದು ತಿಳಿಯಬೇಕು.

†ಅವತಾರಗಳಲ್ಲಿ ಕೆಲವು ಭೇದಗಳುಂಟು, ಅನುಪ್ರವೇಶಾವತಾರವೆಂದೂ, ಸ್ವರೂಪಾವತಾರವೆಂದೂ ಮುಖ್ಯವಾಗಿ ಎರಡುಭೇದಗಳು. ದೇವಾದಿಶರೀರಗಳಲ್ಲಿ ಸೇರಿ ಅವತರಿಸುವುದು ಅನುಪ್ರವೇಶವೆನಿಸುವುದು. ನಿಜರೂಪದಿಂದಲೇ ಅವತರಿಸುವುದು ಸ್ವರೂಪಾವತಾರವು ಭಗವಂತನಿಗೆ ಇವರೆಡೂ ಕರ್ಮಾಧೀನಗಳಲ್ಲವಾದುದರಿಂದ ಅವತಾರವೆಂದು ಕರೆಯಲ್ಪಡುವುವು ಇದಲ್ಲದೆಪೂರ್ಣಾವತಾರವೆಂಬೂ ಅಂಶಾವತಾರವೆಂದೂ ಬೇರೆಎರಡುಬಗೆಯುಂಟು. ಪೂರ್ಣಾವತಾರವೆಂದರೆ ಭಗವಂತನುಷಾಡ್ಗುಣ್ಯಪರಿಪೂರ್ಣನಾಗಿತಾನೇ ತನ್ನ ಸ್ವರೂಪದಿಂದವತರಿಸುವುದು.



64. ಕ್ಷೀರಾಬ್ಧಿಯಲ್ಲಿ ನಾರಾಯಣನು ಯೋಗನಿದ್ರೆಯಲ್ಲಿದ್ದುದು.
ನಾಭಿಕಮಲದಿಂದ ಚತುರ್ಮುಖೋತ್ಪತ್ತಿಯು.

ಗಳೆಲ್ಲಕ್ಕೂ ಕಾರಣಭೂತವಾದುದು. ಇದೇ ಸಮಸ್ತಪ್ರಪಂಚಕ್ಕೂ ಬೀಜಭೂತವು. ಇದಕ್ಕೆ ಅಪಕ್ಷಯಾದಿವಿಕಾರಗಳೊಂದೂ ಇಲ್ಲವು. ಆದುದರಿಂದ ಇದು ಅಪ್ರಾಕೃತವೆನಿಸುವುದು. ಈ ಅನಿರುದ್ಧನಿಗೆ ಶರೀರಾಂಶವಾದ ಚಿದಚಿತ್ತತ್ವಗಳ ಒಂದುಭಾಗದಿಂದ ದೇವತಿರ್ಯಙ್ಮನುಷ್ಯಾದಿಗಳೆಲ್ಲವೂ ಉದ್ಭವಿಸಿದುವು. ಆ ದೇವನೇ ಮೊದಲು ಚತುರ್ಮುಖಶರೀರನಾಗಿ ಸನತ್ಕುಮಾರರೂಪದಿಂದವತರಿಸಿ, ನಿರ್ವಿಘ್ನವಾಗಿ ಬ್ರಹ್ಮಚರ್ಯವನ್ನು ಪಾಲಿಸಿದನು. ಇದೇ ಮೊದಲನೆಯ ಅವತಾರವು. ಯಜ್ಞೇಶ್ವರನಾದ ಆ ಭಗವಂತನೇ ಲೋಕಾಭಿವೃದ್ಧಿಗಾಗಿ ಪ್ರಯತ್ನಿಸಿ ಪಾತಾಳದಲ್ಲಿ ಹುದುಗಿಹೋಗಿದ್ದ ಭೂಮಿಯನುದ್ಧರಿಸುವುದಕ್ಕಾಗಿ ವರಾಹಶರೀರವನ್ನು ಧರಿಸಿದನು. ಇದೇ ಎರಡನೆಯ ಅವತಾರವು. ಭಗವಂತನ ಮೂರನೆಯ ಅವತಾರವು ಋಷಿಜನ್ಮವು. ಇದರಲ್ಲಿ ನಾರದರೂಪವನ್ನು ಹೊಂದಿ *ನಿವೃತ್ತಿಧರ್ಮವುಳ್ಳವರು ಪ್ರವೃತ್ತಿಧರ್ಮಗಳನ್ನು ನಡೆಸಕೂಡದೆಂಬ ವಿಧಿಯನ್ನು ತೋರಿಸುವ ಪಾಂಚರಾತ್ರಶಾಸ್ತ್ರವನ್ನು ವಿವರಿಸಿದನು. ನಾಲ್ಕನೆಯ ಅವತಾರದಲ್ಲಿ ಧರ್ಮಪುರುಷನ ಭಾರ್ಯೆಯಾದ ಮೂರ್ತಿದೇವಿಯಲ್ಲಿ, ನರನಾರಾಯಣರೂಪದಿಂದಹುಟ್ಟಿ, ಶಮದಮಾದಿ ಗುಣಗಳಿಂದ ಕೂಡಿದ ದುಶ್ಚರವಾದ ತಪಸ್ಸನ್ನು ನಡೆಸಿದನು. ಆದರಿಂದಾಚೆಗೆ ಕಪಿಲಾವತಾರವನ್ನೆತ್ತಿ, ಸಿದ್ಧರಿಗೆ ಅಧಿಪತಿಯಾಗಿ, ಕಾಲದೋಷದಿಂದ ಅಳಿಸಿಹೋಗಿದ್ದುದಾಗಿಯೂ, ಪ್ರಕೃತಿಮಹದಾದಿತತ್ವಗಳ ನಿಜವನ್ನು ನಿರ್ಣಯಿಸತಕ್ಕದಾಗಿಯೂ ಇರುವ ಸಾಂಖ್ಯಶಾಸ್ತ್ರವನ್ನು ಆಸುರಿಯೆಂಬ ಸಿದ್ಧಶ್ರೇಷ್ಠನಿಗೆ ಉಪದೇಶಿಸಿದನು. ಇದೇ †ಅಂಭಗವಂತನ ಐದನೆಯ ಅವತಾರವು. ಅದರಿಂದಾಚೆಗೆ ಅತ್ರಿ ಮಹಾಮುನಿಗೆ ಅನಸೂಯಾದೇವಿಯಲ್ಲಿ ದತ್ತಾತ್ರೇಯನೆಂಬ ಹೆಸರಿನಿಂದ ಹುಟ್ಟಿ, ಅಲರ್ಕನಿಗೂ. ಪ್ರಹ್ಲಾದನೇ ಮೊದಲಾದವರಿಗೂ ಅಧ್ಯಾತ್ಮವಿದ್ಯೆಯನ್ನು ಪದೇಶಿಸಿದನು. ಇದೇ ಆರನೆಯ ಅವತಾರವು. ಆ ಮೇಲೆ ಏಳನೆಯ ಅವತಾರದಲ್ಲಿ, ರುಚಿಯೆಂಬ ಮಹರ್ಷಿಗೆ ಆಕೂತಿಯೆಂಬ ಭಾರ್ಯೆಯಲ್ಲಿ ಯಜ್ಞನೆಂಬ ಹೆಸರಿ

---

ಅಂಶಾವತಾರವೆಂದರೆ ತತ್ತಜ್ಜೀವಾಂತರಾತ್ಮನಾದ ಭಗವಂತನು ಆಯಾ ಜೀವಾತ್ಮಮೂಲಕವಾಗಿ ನಿಜವೀರ್ಯಾದಿ ಗುಣಲೇಶವನ್ನು ಹೊರಪಡಿಸುವುದು, ಇವೆರಡರಲ್ಲಿ ವರಾಹ, ನಾರಾಯಣ, ಮತ್ಸ್ಯಕೂರ್ಮ, ಮೋಹಿನಿ, ನೃಸಿಂಹ, ವಾಮನ, ರಾಮ, ಕೃಷ್ಣಾವತಾರಗಳು ಪೂರ್ಣಾವತಾರಗಳೆಂದು ಆಯಾಪುರಾಣಗಳಿಂದತಿಳಿದು ಬರುವುದು. ಉಳಿದುವೆಲ್ಲವೂ ಅಂಶಾವತಾರಗಳು.

*ನಿವೃತ್ತಿಧರ್ಮವೆಂದರೆ ಅವರವರು ನಡೆಸತಕ್ಕ ಕರ್ಮಗಳನ್ನು ಫಲಾಭಿಲಾಷೆಯಿಲ್ಲದೆ ಕೇವಲಭಗವತ್ ಪ್ರೀತ್ಯರ್ಥವಾಗಿ ನಡೆಸುವುದು, ಇದು ಮೋಕ್ಷಸಾಧಕವು, ಪ್ರವೃತ್ತಿಧರ್ಮವೆಂದರೆ ಇತರಫಲೋದ್ದೇಶದಿಂದ ನಡೆಸುವುದು.

ನಿಂದ ಹುಟ್ಟಿ. ಯಮಾದಿದೇವತೆಗಳೊಡಗೂಡಿ ಸ್ವಾಯಂಭುವ ಮನ್ವಂತರವೆಂಬ ಕಾಲವೆಲ್ಲಾ ಆಳುತ್ತಿದ್ದನು. ಆ ಮೇಲೆ ಆಗ್ನೀದ್ರನ ಪುತ್ರನಾದ ನಾಭಿಯೆಂಬ ವನಿಗೆ ಮೇರುದೇವಿಯಲ್ಲಿ ಋಷಭನೆಂಬ ಹೆಸರಿನಿಂದ ಹುಟ್ಟಿ, ಯೋಗಿಗಳಿಗೆ ಅನುಷ್ಠೇಯವಾಗಿಯೂ, ಸಕಲಾಶ್ರಮದಲ್ಲಿರುವವರಿಂದಲೂ ಪೂಜಿತವಾಗಿಯೂ ಇರುವ ಧರ್ಮಮಾರ್ಗವನ್ನು ತೋರಿಸುತಿದ್ದನು ? ಇದೇ ಆ ಮಹಾತ್ಮನ ಎಂಟನೆಯ ಅವತಾರವು. ಅದರಿಂದಾಚೆಗೆ ಆ ಭಗವಂತನು, ತಮ್ಮ ಹುಂಕಾರದಿಂದಲೇ ವೇನನೆಂಬವನನ್ನು ಕೊಂದ ಮಹರ್ಷಿಗಳಿಂದ, ಲೋಕರಕ್ಷಣಾರ್ಥವಾಗಿ ಪ್ರಾರ್ಥಿಸಲ್ಪಟ್ಟು, ಪೃಥುಚಕ್ರವರ್ತಿಯೆಂಬ ಹೆಸರಿನಿಂದ ಹುಟ್ಟಿ, ಗೋರೂಪಧಾರಿಣಿಯಾದ ಈ ಭೂದೇವಿಯಿಂದ ಹಾಲನ್ನು ಕರೆಯುವಂತೆ ಓಷಧಿಗಳೆಲ್ಲವನ್ನೂ ಕರೆದು ಸರ್ವಲೋಕಪ್ರಿಯನೆನಿಸಿಕೊಂಡನು. ಇದೇ ಆತನ ಒಂಭತ್ತನೆಯ ಅವತಾರವು. ಅದರಿಂದಾಚೆಗೆ ಚಾಕ್ಷುಷಮನ್ವಂತರ ಕಾಲದಲ್ಲಿ ಪ್ರಳಯವುಂಟಾದಾಗ, ಮತ್ಸ್ಯರೂಪವನ್ನು ವಹಿಸಿ, ಮುಂದೆ ವೈವಸ್ವತಮನುವಾಗಿ ಹುಟ್ಟಬೇಕಾಗಿದ್ದ ಸತ್ಯವ್ರತನೆಂಬನನ್ನು ಪೃಥ್ವೀರೂಪವಾದ ಹಡಗಿನ ಮೇಲೇರಿಸಿತಂದು ಆತನನ್ನು ರಕ್ಷಿಸಿದನು. ಇದೇ ಆತನ ಹತ್ತನೆಯ ಅವತಾರವು. ಆ ಮೇಲೆ ದೇವಾಸುರರಿಬ್ಬರೂ ಅಮೃತಕ್ಕಾಗಿ ಸಮುದ್ರವನ್ನು ಮಂದರಪರ್ವತದಿಂದ ಮಥಿಸುವಾಗ, ಆ ಪರ್ವತವು ಮುಳುಗಿ ಹೋಗುತ್ತಿರುವುದನ್ನು ನೋಡಿ ಕೂರ್ಮರೂಪವನ್ನು ತಳೆದು, ಅದನ್ನು ತನ್ನ ಬೆನ್ನಮೇಲೆ ಧರಿಸಿದನು. ಇದೇ ಹನ್ನೊಂದನೆಯ ಅವತಾರವು. ಹನ್ನೆರಡನೆಯ ಅವತಾರದಲ್ಲಿ ಧನ್ವಂತರಿಯ ರೂಪದಿಂದ ಹುಟ್ಟಿದನು. ಹದಿಮೂರನೆಯ ಅವತಾರದಲ್ಲಿ ಮೋಹಿನೀರೂಪದಿಂದ ರಾಕ್ಷಸರನ್ನು ಮೋಹಗೊಳಿಸಿ, ದೇವತೆಗಳಿಗೆ ಅಮೃತವನ್ನು ಕುಡಿಸಿದನು. ಹದಿನಾಲ್ಕನೆಯ ಅವತಾರದಲ್ಲಿ ನರಸಿಂಹರೂಪವನ್ನು ಧರಿಸಿ ಚಾಪೆನೇಯುವವನು ಹೊಡಕೆಗಳನ್ನು ಸೀಳುವಂತೆ ತನ್ನ ಉಗುರುಗಳಿಂದಲೇ ಹಿರಣ್ಯಕಶಿಪುವೆಂಬ ಬಲಿಷ್ಠನಾದ ರಾಕ್ಷಸನ ಎದೆಯನ್ನು ಸೀಳಿದನು. ಹದಿನೈದನೆಯ ಅವತಾರದಲ್ಲಿ ಅದಿತಿಕಶ್ಯಪರ ಗರ್ಭದಲ್ಲಿ ವಾಮನಮೂರ್ತಿಯಾಗಿ ಜನಿಸಿ, ಬಲಿಚಕ್ರವರ್ತಿಯ ಯಾಗಶಾಲೆಗೆ ಹೋಗಿ, ಮೂರಡಿಯನೆಲವನ್ನು ಯಾಚಿಸುವ ನೆವದಿಂದ, ಆ ರಾಕ್ಷಸನಿಂದಪಹೃತವಾದ ತ್ರೈಲೋಕ್ಯವನ್ನೂ ಹಿಂತಿರುಗಿ ದೇವೇಂದ್ರನಿಗೆ ಕೊಡಿಸಿದನು. ಅದರಿಂದಾಚೆಗೆ ಹದಿನಾರನೆಯ ಅವತಾರದಲ್ಲಿ ಪರಶುರಾಮರೂಪದಿಂದ ಬ್ರಹ್ಮದ್ವೇಷಿಗಳಾದ ಕ್ಷತ್ರಿಯರನ್ನು ಇಪ್ಪತ್ತೊಂದಾವರ್ತಿ ಸಂಹರಿಸಿ, ಭೂಮಿಯಲ್ಲಿ ಕ್ಷತ್ರಿಯಬೀಜವೇ ಇಲ್ಲದಂತೆ ಮಾಡಿದನು. ಅದರಿಂದಾಚೆಗೆ ಹದಿನೇಳನೆಯ ಅವತಾರದಲ್ಲಿ ಸತ್ಯವತೀದೇವಿಯಲ್ಲಿ ವೇದವ್ಯಾಸನಾಗಿ ಹುಟ್ಟಿ,

ವೇದಾರ್ಥಗಳ ತತ್ವವನ್ನು ತಿಳಿಯದೆ ಮಂದಮತಿಗಳಾದ ಜನರನ್ನುದ್ಧರಿಸುವು ದಕ್ಕಾಗಿ, ವೇದವೆಂಬ ವೃಕ್ಷವನ್ನು ಋಕ್ಕು, ಯಜುಸ್ಸು, ಸಾಮ, ಅಥರ್ವಣಗಳೆಂಬ ಶಾಖೆಗಳಾಗಿ ವಿಭಾಗಿಸಿದನು. ಅದರಿಂದಾಚೆಗೆ ಹದಿನೆಂಟನೆಯ ಅವತಾರದಲ್ಲಿ ದೇವತೆಗಳ ಕಾರ್ಯಾರ್ಥವಾಗಿ ರಾಮನೆಂಬ ಹೆಸರಿನಿಂದ ದಶರಥಪುತ್ರನಾಗಿ ಹುಟ್ಟಿ, ಸಮುದ್ರಸೇತುಬಂಧನವೇ ಮೊದಲಾದ ಅಸಾಧ್ಯಕಾರ್ಯಗಳನ್ನು ನಡೆಸಿದನು. ಅದ ರಿಂದಾಚೆಗೆ ಯದುವಂಶದಲ್ಲಿ ಬಲರಾಮಕೃಷ್ಣರೆಂಬ ಹೆಸರಿನಿಂದ ಎರಡವ ತಾರಗಳನ್ನೆತ್ತಿ ಭೂಭಾರವನ್ನು ಪರಿಹರಿಸಿದನು. ಹೀಗೆ ಆ ಭಗವಂತನು ಇಪ್ಪತ್ತವ ತಾರಗಳನ್ನೆತ್ತಿದನು. ಇನ್ನು ಮುಂದೆಯೂ ಅತನು ಈ ಕಲಿಯುಗದಲ್ಲಿ ಕ್ರಮ ಕ್ರಮವಾಗಿ ಹೆಚ್ಚಿಬರುತ್ತಿರುವ ದುರ್ಮಾರ್ಗರನ್ನು ಮೋಹಗೊಳಿಸುವುದಕ್ಕಾಗಿ, ಕೀಕಟದೇಶದಲ್ಲಿ (ಮಧ್ಯಗಯಾಪ್ರದೇಶದಲ್ಲಿ) ಬುದ್ಧನೆಂಬ ಹೆಸರಿನಿಂದ ಜಿನಪುತ್ರ ನಾಗಿ ಹುಟ್ಟುವನು. ಇದೇ ಅತನ ಇಪ್ಪತ್ತೊಂದನೆಯ ಅವತಾರವು ಇದರಿಂದಾ ಚೆಗೆ ಜಗತ್ಪತಿಯಾದ ಆ ಭಗವಂತನು, ಕಲಿಕಾಲವು ಮುಗಿದು ಕೃತಯುಗವು ಆರಂಭಿಸುವುದಕ್ಕೆ ಮೊದಲು ಈ ಎರಡುಯುಗಗಳ ಸಂಧಿಕಾಲಗಳಲ್ಲಿ ಕ್ಷತ್ರಿಯ ರೆಲ್ಲರೂ ಚೋರಪ್ರಾಯರಾಗಿ ಸಮಸ್ತಲೋಕವೂ ಅಧರ್ಮಪ್ರಚುರವಾಗಿರುವು ದನ್ನು ನೋಡಿ, ಆ ದುಷ್ಟರನ್ನು ಸಂಹರಿಸುವುದಕ್ಕಾಗಿ ವಿಷ್ಣುಯಶಸ್ಸೆಂಬ ಬ್ರಾಹ್ಮ ಣನಿಗೆ ಕಲ್ಕಿಸ್ವರೂಪದಿಂದ ಹುಟ್ಟುವನು. ಎಲೈ ಶೌನಕಾದಿಮಹರ್ಷಿಗಳೇ! ಆ ಶ್ರೇಷ್ಠವಾದ ಸರಸ್ಸಿನಿಂದ ಸಾವಿರಾರು ಕೋಡಿಗಳು ಹರಿಯುವಂತೆ ಶುದ್ಧ ಸತ್ವ ಮೂರ್ತಿಯಾದ ಆ ಭಗವಂತನ ಅನಿರುದ್ಧಸ್ವರೂಪದಿಂದ ಹುಟ್ಟಿದ ಅವತಾರಗಳು ಇನ್ನೂ ಅಸಂಖ್ಯಾತಗಳಾಗಿರುವುವು. ಇವುಗಳಲ್ಲಿ ಎಲ್ಲಿಯೋ ಕೆಲವನ್ನು ಮಾತ್ರ ಹೇಳಿರುವೆನು ಮಂತ್ರಜ್ಞರಾದ ವಸಿಷ್ಠಾದಿಮಹರ್ಷಿಗಳೂ ಆತ್ಮತತ್ವವನ್ನು ತಿಳಿದ ಶುಕಾದಿಮುನಿಶ್ರೇಷ್ಠರೂ, ಇಂದ್ರಾದಿದೇವತೆಗಳೂ, ಪ್ರಿಯವ್ರತನೇ ಮೊದಲಾದ ಮುನಿಪುತ್ರರೂ, ಮಹಾಮಹಿಮೆಯುಳ್ಳ ದಕ್ಷಪ್ರಜಾಪತಿಮೊದಲಾದವರೂ, ಇವ ರೆಲ್ಲರೂ ಆ ಭಗವಂತನ ಅಂಶಮಾತ್ರದಿಂದಲೇ ಹುಟ್ಟಿದವರು. ಆ ಅನಿರುದ್ಧದೇವ ನಿಗೆ ಅಂಶಾಂಶಭೂತರಾದ ಈ ಮಹಾತ್ಮರೂ, ಆ ಭಗವಂತನ ಪೂರ್ಣಾವತಾರರೂಪ ನಾದ ಶ್ರೀಕೃಷ್ಣನೂ ರಾಕ್ಷಸರಿಂದ ಬಾಧಿತವಾದ ಈ ಲೋಕವನ್ನು ರಕ್ಷಿಸುವು ದಕ್ಕಾಗಿ, ಒಂದೊಂದು ಯುಗದಲ್ಲಿಯೂ ಅವತರಿಸಿ, ಇದಕ್ಕೆ ಕ್ಷೇಮವನ್ನುಂಟು ಮಾಡುವರು. ಎಲೈ ಮಹರ್ಷಿಗಳೇ! ಯಾವನು ಈ ಭಗವದವತಾರರಹಸ್ಯವನ್ನು ಭಕ್ತಿಯಿಂದಲೂ, ಶ್ರದ್ಧೆಯಿಂದಲೂ, ಪ್ರಾತಸ್ಸಾಯಂಕಾಲಗಳಲ್ಲಿ ಕೀರ್ತಿಸುವನೋ ಅಂತವನು ಸಮಸ್ತಪಾಪಗಳಿಂದಲೂ ಬಿಡಲ್ಪಟ್ಟು ಮುಕ್ತಿಹೊಂದುವನು.

ಆ ಅವತಾರಗಳು ಮಾತ್ರವೇ ಭಗವದ್ರೂಪಗಳೆಂದು ತಿಳಿಯಬೇಡಿರಿ!* ಜ್ಞಾನಾತ್ಮಕನಾಗಿಯೂ, ಅವ್ಯಕ್ತಸ್ವರೂಪನಾಗಿಯೂ ಇರುವ ಆ ಭಗವಂತನ ಮಾಯಾಗುಣಪರಿಣಾಮಗಳಾದ ಮಹದಾದಿಗಳಿಂದ ರಚಿತವಾಗಿ ಕಾಣುವ ಈ ಜಗತ್ತೆಲ್ಲವೂ ಆತನ ರೂಪವಲ್ಲದೆ ಬೇರೆಯಲ್ಲ. ಈ ಸಮಸ್ತಪ್ರಪಂಚಕ್ಕೂ ಆತನೇ ಆತ್ಮರೂಪದಿಂದ ಆಧಾರನಾಗಿರುವನು. ಆ ಆತ್ಮನಿಗೆ ಇದೇ ಶರೀರದಂತಿರುವುದು! ಹೀಗೆ ಈ ಪ್ರಪಂಚದಲ್ಲಿರುವ ದೇವಮನುಷ್ಯಾದಿಶರೀರಗಳೆಲ್ಲವೂ ಭಗವಂತನ ರೂಪವೆಂಬುದನ್ನು ತಿಳಿಯದ ಕೆಲವು ಮೂಢಾತ್ಮರು ಹೊರಗೆ ಕಾಣುವ ತಮ್ಮ ದೇಹವನ್ನು ನೋಡಿಕೊಂಡು "ನಾನು ದೇವನು" "ನಾನು ಮನುಷ್ಯನು" ಎಂದು ಅಹಂಕಾರ, ಮಮಕಾರಗಳಿಂದ ಭ್ರಮಿಸುವರು ನಿಜಸ್ಥಿತಿಯನ್ನು ತಿಳಿಯದವರು ಮೇಘಗಳನ್ನು ನೋಡಿ ಅದನ್ನೇ ಆಕಾಶವೆಂದೂ, ಮೇಲಕ್ಕೇಳುವ ನೆಲದ ಧೂಳನ್ನು

---

* ಇಲ್ಲಿಂದ ಮುಂದಿನ ಮೂರು ಶ್ಲೋಕಗಳಿಗೆ ದ್ವೈತಾದ್ವೈತ ಪರಗಳಾದ ಅರ್ಥಭೇದಗಳುಂಟು. ಅವುಗಳಲ್ಲಿ ಅದ್ವೈತಪರವಾದ ಅರ್ಥವೇನೆಂದರೆ:—ಚೇತನರ ಈ ಸ್ಥೂಲರೂಪವು ಎಂದರೆ ಸ್ಥೂಲಶರೀರವು, ಭಗವಂತನ ಅವಿದ್ಯಾಗುಣಗಳಾದ ಮಹದಾದಿಗಳಿಂದ ತನ್ನಲ್ಲಿಯೇ ಆರೋಪಿತವಾಗಿರುವುದು. ಮೇಘದಲ್ಲಿ ಆಕಾಶವೆಂದೂ, ಧೂಳಿನಲ್ಲಿ ವಾಯುವೆಂದೂ ಭ್ರಾಂತರಾಗುವಂತೆ ವಿವೇಕಶೂನ್ಯರು, ಆತ್ಮನಲ್ಲಿ ಶರೀರತ್ವವನ್ನಾರೋಪಿಸುವರು. ಈ ಆತ್ಮನಿಗೆ ಸ್ಥೂಲಶರೀರಕ್ಕಿಂತಲೂ ಬೇರೆಯಾದ ಸೂಕ್ಷ್ಮ (ಲಿಂಗ) ಶರೀರವೊಂದುಂಟು. ಅದಕ್ಕೆ ಆಕೃತಿವಿಶೇಷಗಳೊಂದೂ ಇಲ್ಲದುದರಿಂದ ಅದು ಕಣ್ಣಿಗೆ ಕಾಣತಕ್ಕುದಲ್ಲ! ಆ ಲಿಂಗಶರೀರವೇ ಪುನರ್ಜನ್ಮಾದಿಗಳಿಗೆ ಅವಶ್ಯವಾದುದು. ಈ ಶರೀರವೂ ಕೂಡ ಅವಿದ್ಯೆಯಿಂದಲೇ ಆರೋಪಿತವಾಗಿರುವುದು. ಯಾವಾಗ ಮನುಷ್ಯನು ಈ ಸ್ಥೂಲಸೂಕ್ಷ್ಮಶರೀರಗಳೆರಡೂ ಅವಿದ್ಯೆಯಿಂದ ಆತ್ಮನಲ್ಲಿ ಕಲ್ಪಿತವೆಂದು ತಿಳಿದುಕೊಳ್ಳುವನೋ, ಆಗಲೇ ಜ್ಞಾನರೂಪವಾದ ಪರಮಾತ್ಮದರ್ಶನವುಂಟಾಗುವುದು. ಕಟ್ಟಿಗೆಯಿಲ್ಲದಿದ್ದಾಗ ಅಗ್ನಿಯು ತನಗೆತಾನೇ ನಂದಿಹೋಗುವಂತೆ ಅವಿದ್ಯೆಯ ಸಂಬಂಧವು ಬಿಟ್ಟುಹೋದೊಡನೆ ಜೀವನು ಬ್ರಹ್ಮದಲ್ಲಿ ಲಯಿಸುವನು. (ಶ್ರೀಧರೀಯವು.)

ದ್ವೈತಾರ್ಥವೇನೆಂದರೆ:—ಈ ಕಾಣುವಜಡಪ್ರಪಂಚವೆಲ್ಲವೂ ಜ್ಞಾನಸ್ವರೂಪವಾದ ಆ ಪರಮಾತ್ಮನಿಗೆ ಪ್ರತಿಮಾಸ್ಥಾನವಾದುದು. ಇದನ್ನು ಭಗವಂತನ ಸಾಕ್ಷಾದ್ರೂಪವೆಂದು ಕಲ್ಪಿಸುವುದು, ಮೇಘದಲ್ಲಿ ಆಕಾಶಬುದ್ಧಿಯಂತೆ ಕೇವಲಭ್ರಮವು. ವಿವೇಕವಿಲ್ಲದವರು ಹೀಗೆ ಆರೋಪಿಸುವರು. ಭಗವಂತನ ಪರಸ್ವರೂಪಕ್ಕಿಂತಲೂ, ಪ್ರತಿಮಾಸ್ವರೂಪವಾದ ಈ ಜಡಪ್ರಪಂಚಕ್ಕಿಂತಲೂ ಬೇರೆಯಾದ ಮತ್ತೊಂದು ವಸ್ತುವುಂಟು. ಅದೇ ಜೀವನು. ತನಗೆ ಸ್ವಾಮಿಯಾದ ಆ ಪರಮಾತ್ಮನ ಸ್ವರೂಪವನ್ನು ಸಾಕ್ಷಾತ್ಕರಿಸಲಾರದಿರುವವರೆಗೂ ಪುನಃ ಪುನಃ ಜನನಮರಣಗಳಿಗೆ ಈಡಾಗುತ್ತಿರುವನು (ವಿಜಯಧ್ವಜವ್ಯಾಖ್ಯಾನವು.)

ನೋಡಿ ಅದನ್ನೇ ಗಾಳಿಯಿಂದೂ ಭ್ರಮಿಸುವಂತೆ, ಆತ್ಮತತ್ವವನ್ನು ತಿಳಿಯದವರು, ಜೀವಾತ್ಮನಲ್ಲಿ ದೃಶ್ಯವಾದ ಶರೀರಗುಣವನ್ನಾರೋಪಿಸಿ ಭ್ರಮಿಸುವರು. "ಹಾಗಿದ್ದರೆ ಜೀವಸ್ವರೂಪವೆಂತಹುದು?" ಎಂದು ಕೇಳುವಿರಾ? ಆ ಜೀವವೆಂಬುದು ಅಚಿದಾತ್ಮಕವಾದ ಈ ದೃಶ್ಯ ಪ್ರಪಂಚಕ್ಕಿಂತಲೂ ವಿಲಕ್ಷಣವೆನಿಸುವುದು. ಅದನ್ನು ಬಾಹ್ಯೇಂದ್ರಿಯಗಳಿಂದ ನೋಡುವುದೂ ಸಾಧ್ಯವಲ್ಲ ಅದು ಪ್ರಕೃತಿಯಂತೆ ಕಾರ್ಯದಶೆಯಲ್ಲಿ ಗುಣವಿಭಾಗಗಳಿಂದ ಸ್ಥೂಲತ್ವವನ್ನು ಹೊಂದಿ ಕಣ್ಣಿಗೆ ಗೋಚರಿಸತಕ್ಕುದಲ್ಲ. ಅಥವಾ ಕಾರಣಾವಸ್ಥೆಯಲ್ಲಿರುವ ಪ್ರಕೃತಿಸ್ವರೂಪದಂತೆ ಶಾಸ್ತ್ರಗಳಿಂದ ಶ್ರುತವಾಗತಕ್ಕದೂ ಅಲ್ಲ! ಹೀಗೆ ಕಂಡುಕೇಳಿ ತಿಳಿಯುವುದಕ್ಕೂ ಸಾಧ್ಯವಲ್ಲದುದರಿಂದ ಅದೊಂದು ವಿಲಕ್ಷಣವಾದ ತತ್ವವೆನಿಸುವುದು. ಇದೇ ಜೀವವು. ಆ ಜೀವನಿಗೆ ಪ್ರಕೃತಿಸಂಬಂಧದಿಂದ ಜನನಮರಣಗಳು ನಡೆಯುತ್ತಲೇ ಇರುವುವು. "ಹಾಗಿದ್ದರೆ ಆ ಜೀವನಿಗೆ ಪುನರ್ಜನ್ಮವನ್ನುಂಟುಮಾಡತಕ್ಕ ಮಾಯಾಸಂಬಂಧವು ತೀರುವುದೆಲ್ಲಿಗೆ? ಈವಿಧವಾದ ಪುನರ್ಜನ್ಮಾದಿಗಳಿಂದ ಮುಕ್ತನಾದ ಜೀವನ ಸ್ವರೂಪವೆಂತಹುದು?" ಎಂದು ನೀವು ಕೇಳಬಹುದು. ಅಚಿತ್ತಿಗೆ ಸಂಬಂಧಪಟ್ಟ ಈ ಉತ್ಪತ್ತಿವಿನಾಶಗಳೆಲ್ಲವೂ ಆತ್ಮನಲ್ಲಿ ಅಜ್ಞಾನದಿಂದಲೇ ಆರೋಪಿಸಲ್ಪಡುವುವು. ಆ ಜೀವನಿಗೆ ತನ್ನನ್ನು ಶರೀರವಾಗಿ ಧರಿಸಿರುವ ಪರಮಾತ್ಮನನ್ನು ಕುರಿತು ನಿಜವಾದ ಜ್ಞಾನವು ಯಾವಾಗಹುಟ್ಟುವುದೋ ಅಲ್ಲಿಂದಾಚೆಗೆ ಉತ್ಪತ್ತಿವಿನಾಶಗಳೂ ನಿವರ್ತಿಸುವುವು. ಅಲ್ಲಿಂದಾಚೆಗೆ ಪುನರ್ಜನ್ಮವೂ ನಿವೃತ್ತವಾಗುವುದು. ಅಂತಹ ಜ್ಞಾನದಿಂದ ಉತ್ಪತ್ತಿವಿನಾಶಗಳನ್ನು ನೀಗಿ, ಪ್ರಕೃತಿಸಂಬಂಧವನ್ನೂ ತ್ಯಜಿಸಿದ ಕೇವಲಶುದ್ಧಾತ್ಮಸ್ವರೂಪಜ್ಞಾನವೇ ಮುಕ್ತಜೀವಸ್ವರೂಪವೆನಿಸುವುದು. ಮತ್ತು ಮಹದಾದಿಕಾರ್ಯಗಳಿಂದ ವಿಸ್ತರಿಸಿದ ಮಾಯೆಯೂ, ಆ ಮಾಯಾಮೂಲಕವಾಗಿ ದೇಹಾತ್ಮಾಭಿಮಾನರೂಪವಾದ ಬುದ್ಧಿಯೂ ನೀಗಿದಕ್ಷಣವೇ, ಜೀವನು ಸತ್ಯಸಂಕಲ್ಪಾದಿಗುಣಗಳುಳ್ಳವನಾಗಿ, ಬ್ರಹ್ಮಾನಂದಸುಖವನ್ನನುಭವಿಸುತ್ತ ಪರಮಪದವಾಸಿಗಳಿಂದ ಗೌರವಿಸಲ್ಪಡುವನು. ಎಲೈ ಮಹರ್ಷಿಗಳೆ! ಜೀವಸ್ವರೂಪವನ್ನು ಕೇಳಿದುದಾಯಿತಷ್ಟೆ? ಇನ್ನು ನಿಮಗೆ ಆ ಭಗವದವತಾರಗಳಿಗೂ, ಈ ಜೀವಾತ್ಮನು ಅವಲಂಬಿಸುತ್ತಿರುವ ಜನ್ಮಗಳಿಗೂ ಭೇದವನ್ನು ತಿಳಿಸುವೆನು. ಕೇಳಿರಿ? ಜೀವನು ಕರ್ಮಾಧೀನನಾಗಿ ಜನ್ಮಗಳನ್ನೆತ್ತುವನು. ಪುಣ್ಯಪಾಪಕಾರ್ಯಗಳನ್ನು ನಡೆಸುತ್ತಿರುವನು. ಭಗವಂತನಾದರೋ ಹಾಗಿಲ್ಲವು. ಆತನು ತನ್ನ ಸಂಕಲ್ಪಮಾತ್ರದಿಂದಲೇ ಲೀಲಾರ್ಥವಾಗಿ ಜನ್ಮಗಳನ್ನೆತ್ತುವನು. ಆತನಿಗೆ ಜೀವನಂತೆ ಪುಣ್ಯಪಾಪಾದಿಕರ್ಮಗಳೊಂದೂ ಇಲ್ಲದುದರಿಂದ ಆತನು ಕರ್ಮಾಧೀನನಲ್ಲ. ಆತನು

ಸರ್ವಹೃದಯಾಂತರ್ಯಾಮಿಯಾಗಿರುವನು.” ವಾಸ್ತವಕ್ಕೆ ಜನ್ಮ ಕರ್ಮಗಳೊಂದೂ ಇಲ್ಲದ ಆ ಭಗವಂತನಲ್ಲಿ ಜನ್ಮಗಳೂ, ಕರ್ಮಗಳೂ, ಈ ವಿಧವಾದುವುಗಳೆಂದು, ‘ಜ್ಞಾನಿಗಳಾದವರು ಅವುಗಳನ್ನು ವೇದಗಳ ರಹಸ್ಯಾರ್ಥಗಳಿಂದ ತಿಳಿದು ಆ ರಹಸ್ಯಗಳನ್ನೇ ಪ್ರಕಾಶಪಡಿಸುವರು. ಭಗವಂತನು ಅಮೋಘವಾದ ಲೀಲೆಯುಳ್ಳವನು. ಚಿದಚಿದಾತ್ಮಕವಾದ ಪ್ರಪಂಚವನ್ನು ತಾನೇ ಸೃಷ್ಟಿಸುವನು. ತಾನೇ ಪಾಲಿಸುವನು. ತಾನೇ ನಾಶಹೊಂದಿಸುವನು. ಜೀವನು ಹಾಗಲ್ಲ! ಅಲ್ಪವಾದ ಕರ್ಮಗಳನ್ನು ಮಾಡುತ್ತ, ನಡುನಡುವೆ ಅನೇಕವಿಘ್ನಗಳಿಂದ ಪ್ರತಿಹತನಾಗಿ, ಹಿಡಿದ ಕರ್ಮಗಳನ್ನೂ ಸರಿಯಾಗಿ ಕೊನೆಮುಟ್ಟಿಸಲಾರನು. ಮತ್ತು ಆ ಭಗವಂತನು ಚಿದಚಿದಾತ್ಮಕವಾದ ಸಮಸ್ತ ಭೂತಗಳಲ್ಲಿಯೂ ಅಡಗಿದ್ದರೂ ಯಾರಿಗೂ ತಿಳಿಯಲಾರನು. ದೇಹದಲ್ಲಿರುವ ಜೀವಾತ್ಮನನ್ನಾದರೋ ಅನುಮಾನಲಕ್ಷಣಗಳಿಂದ ತಿಳಿಯಬಹುದು. ಭಗವಂತನು ಸರ್ವಸ್ವತಂತ್ರನೇ ಹೊರತು ಜೀವನಂತೆ ಕಾಲಕ್ರಮಾದಿಗಳಿಗೆ ಪರತಂತ್ರನಲ್ಲ. ಮತ್ತು ಆ ಭಗವಂತನು ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ ತೇಜಸ್ಸುಗಳೆಂಬ ಷಡ್ಗುಣಗಳಿಗೆ ಅಧಿಪತಿಯಾಗಿರುವವನು. ಜೀವನಲ್ಲಿ ಈ ಗುಣಗಳೆಲ್ಲವೂ ವಿರುದ್ಧವಾಗಿರುವುವು. ಮತ್ತು ಭಗವಂತನು ಜೀವನಂತೆ ಸುಖದುಃಖಮೋಹಾದಿಗಳಿಗೆ ಈಡಾಗದೆ, ಷಡಿಂದ್ರಿಯವೇದ್ಯಗಳಾದ ಶಬ್ದಾದಿಗಳ ಮೂಲಕವಾಗಿ ಲೀಲಾರಸವನ್ನನುಭವಿಸುವನು. ಮತ್ತು ಆ ಪರಮಾತ್ಮನು ತನ್ನ * ಸಂಕಲ್ಪದಿಂದಲೇ ದೇವಾದಿರೂಪಗಳನ್ನೂ, ವೇದಮಯಗಳಾದ ತನ್ನ ವಾಕ್ಕುಗಳಿಂದ ದೇವಮನುಷ್ಯಾದಿನಾಮಗಳನ್ನೂ ನಟಚರ್ಯೆಯಂತೆ ನಡೆಸುತ್ತಿರುವನು. ಹೀಗೆ ನಡೆಸುತ್ತಿರುವ ಆ ಈಶ್ವರನ ನೀತಿಗಳನ್ನು ಕುತ್ಸಿತಬುದ್ಧಿಯುಳ್ಳವರೂ, ಮಂದಬುದ್ಧಿಯುಳ್ಳವರೂ, ಎಷ್ಟೇನೈಪುಣ್ಯದಿಂದಲಾದರೂ ತಿಳಿದುಕೊಳ್ಳಲಾರರು. ಶಬ್ದಾದಿ ವಿಷಯಗಳಲ್ಲಿ ವಿರಕ್ತನಾಗಿಯೂ, ಜೀವಾತ್ಮ ಪರಮಾತ್ಮತತ್ವಗಳನ್ನು ತಿಳಿಯಬಲ್ಲವರಾಗಿಯೂ ಇರತಕ್ಕ ಬುದ್ಧಿಶಾಲಿಗಳು ಮಾತ್ರವೇ ಆತನ ನಿಜಸ್ಥಿತಿಯನ್ನು ತಿಳಿಯಬಲ್ಲರು. ಮತ್ತು ನಾಟಕದಲ್ಲಿ ನಟನು ವಿಚಿತ್ರಗಳಾದ ವೇಷಗಳನ್ನು ಧರಿಸಿ, ಆಯಾಪಾತ್ರಗಳಿಗೆ ತಕ್ಕ ಚೇಷ್ಟೆಗಳನ್ನು ನಟಿಸುವಂತೆ, ಭಗವಂತನೂಕೂಡ ಮತ್ಸ್ಯಕೂರ್ಮಾದ್ಯವತಾರಗಳನ್ನೆತ್ತಿದಾಗ, ತನ್ನ ನಿಜಸ್ವಭಾವವನ್ನು ಬಿಡದೆ, ತಾನು ಲೀಲಾರ್ಥವಾಗಿ ಅವಲಂಬಿಸಿದ ರೂಪಕ್ಕೆ ತಕ್ಕಕಾರ್ಯಗಳನ್ನೇ

* ಇಲ್ಲಿ “ಅಜಾಯಮಾನೋ ಬಹುಧಾ ವಿಜಾಯತೇ” ಎಂಬುದು ವೇದವಾಕ್ಯವು. ಇದರಲ್ಲಿರುವ ರಹಸ್ಯಾರ್ಥವೇನೆಂದರೆ:—ಭಗವಂತನಿಗೆ ಕರ್ಮಾಧೀನವಾದ ಜನ್ಮಗಳಿಲ್ಲದಿದ್ದರೂ ತನ್ನ ಸಂಕಲ್ಪಮೂಲಕವಾಗಿ ತಾನೇ ಅವತರಿಸತಕ್ಕವನೆಂದು ಭಾವವು.

ನಡೆಸುವನು. ಆದುದರಿಂದ ಯಾವನು ಮಾಯಾಗುಣಗಳಾದ ಕಾಮಾದಿಗಳೆನ್ನು ಬಿಟ್ಟು, ಭಗವಂತನ ಪಾದಪದ್ಮಗಳನ್ನು ಸೇವಿಸುವನೋ, ಯಾವನು ಆ ಪರಮಪುರುಷನಾದ ಚಕ್ರಪಾಣಿಯನ್ನು ಭಕ್ತಿಯಿಂದ ಭಜಿಸುವನೋ ಅವನೇ ಪರಮಾತ್ಮನ ಲೀಲೆಗಳನ್ನು ವ್ಯಕ್ತವಾಗಿ ತಿಳಿಯಬಲ್ಲನು. ಎಲೈ ಮಹರ್ಷಿಗಳೆ! ಪೂಜ್ಯರಾದ ನೀವೆಲ್ಲರೂ ಸರ್ವಲೋಕನಾಥನಾದ ಆ ಶ್ರೀಹರಿಯಲ್ಲಿ, ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ ಭಕ್ತಿಯೋಗವನ್ನವಲಂಬಿಸಿ, ಆತನನ್ನು ಸೇವಿಸುತ್ತಿರುವುದರಿಂದ ನೀವೇ ಪರಮಧನ್ಯರು! ಭಕ್ತಿಯೋಗವೆಂಬುದು ಸಾಮಾನ್ಯವಲ್ಲ. ಆ ಭಕ್ತಿಯು ಹುಟ್ಟಿದೊಡನೆ, ಗರ್ಭ, ಜನ್ಮ, ಜರಾ, ಮರಣಾದಿದುಃಖಗಳುಳ್ಳ ಭಯಂಕರವಾದ ಸಂಸಾರಪಾಶವು ಬಿಟ್ಟುಹೋಗುವುದು ಭಾಗವತವೆಂಬ ಈ ಪುರಾಣರತ್ನವು ಪುಣ್ಯಶ್ಲೋಕನಾದ ಆ ಭಗವಂತನ ಚರಿತ್ರಗಳನ್ನು ಪ್ರತಿಪಾದಿಸುವುದರಿಂದ, ವೇದಸಮಾನವೆನಿಸುವುದು. ಸಕಲ ವೇದಗಳ ಸಾರವನ್ನೂ ತಿಳಿದ ವ್ಯಾಸನೇ ಇದನ್ನು ರಚಿಸಿರುವನು. ಇದನ್ನೋದುವುದರಿಂದ ಜನರು ಉತ್ತಮಜ್ಞಾನವನ್ನು ಹೊಂದಿ ಕೃತಾರ್ಥರಾಗುವರು. ಅತ್ಯಂತಮಂಗಳಕರವಾದ ಈ ಸದ್ಗ್ರಂಥವನ್ನು ಪಠಿಸಿ ಚೇತನರೆಲ್ಲರೂ ಉಜ್ಜೀವಿಸಬೇಕೆಂಬುದಕ್ಕಾಗಿಯೇ ವ್ಯಾಸಮುನಿಯು ಇದನ್ನು ರಚಿಸಿ, ಆತ್ಮಜ್ಞಾನಿಗಳಲ್ಲಿ ಮೇಲೆನಿಸಿಕೊಂಡ ತನ್ನ ಪುತ್ರನಾದ ಶುಕನಿಂದ ಅಧ್ಯಯನಮಾಡಿಸಿದನು. ವೇದಗಳಲ್ಲಿಯೂ ಪುರಾಣಗಳಲ್ಲಿಯೂ ಇರುವ ಸಮಸ್ತಸಾರಗಳನ್ನೂ ಗ್ರಹಿಸಿ ಈ ಪುರಾಣವು ರಚಿಸಲ್ಪಟ್ಟಿರುವುದು. ಶುಕನು ಇದನ್ನು ತನ್ನ ತಂದೆಯಾದ ವ್ಯಾಸಮಹರ್ಷಿಯಿಂದ ಅಧ್ಯಯನಮಾಡಿದ ಮೇಲೆ, ಗಂಗಾತೀರದಲ್ಲಿ ಅನೇಕಮಹರ್ಷಿಗಳಿಂದ ಪರಿವೃತನಾಗಿ ಪ್ರಾಯೋಪವೇಶದಲ್ಲಿದ್ದ ಪರೀಕ್ಷಿದ್ರಾಜನನ್ನು ನೋಡಿ, ಅವನಲ್ಲಿ ಕರುಣೆಯಿಂದ ಇದನ್ನು ಆ ರಾಜನಿಗೆ ಉಪದೇಶಿಸುತ್ತಿದ್ದನು. ಎಲೈ ಬ್ರಾಹ್ಮಣೋತ್ತಮರೆ! ಹೀಗೆ ಶುಕಮುನಿಯು ಪರೀಕ್ಷಿದ್ರಾಜನಿಗೆ ಇದನ್ನುಪದೇಶಿಸುತ್ತಿರುವ ಸಮಯದಲ್ಲಿ, ನಾನೂ ಅಕಸ್ಮಾತ್ತಾಗಿ ಅಲ್ಲಿಗೆ ಹೋಗಿ, ಆ ಮಹರ್ಷಿಯ ಅನುಗ್ರಹದಿಂದ ಆ ಸಚ್ಚರಿತ್ರವನ್ನು ಕೇಳಿದೆನು. ನಾನು ಅಲ್ಲಿ ಕೇಳಿದ ರೀತಿಯಲ್ಲಿ ನನಗೆ ತಿಳಿದಮಟ್ಟಿಗೆ ನಿಮಗೂ ಅದನ್ನು ತಿಳಿಸುವೆನು. ಭಗವಂತನಾದ ಕೃಷ್ಣನು ಧರ್ಮಜ್ಞಾನಾದಿಗಳೊಡನೆ ಸೇರಿ ನಿಜಲೋಕವನ್ನು ಕುರಿತು ಹೊರಟೊಡನೆಯೇ ಇಲ್ಲಿ ಕಲಿಯು ಪ್ರಬಲವಾಗುತ್ತ ಬಂದುದರಿಂದ, ಕತ್ತಲೆಯಲ್ಲಿ ಕಣ್ಣುಕಾಣದಂತೆ ಮನುಷ್ಯರಿಗೆ ಪ್ರಜ್ಞೆಯು ಕೆಟ್ಟುಹೋಗುತ್ತ ಬಂದಿತು! ಸೂರ್ಯೋದಯವಾದಮೇಲೆ ತಿರುಗಿ ದೃಷ್ಟಿಶಕ್ತಿಯುಂಟಾಗುವಂತೆ ಆ ಜನರಿಗೆ ತಿರುಗಿ ಪ್ರಜ್ಞೆಯನ್ನು ಹುಟ್ಟಿಸುವು

ದಕ್ಕಾಗಿಯೇ ಈ ಪುರಾಣವು ಹುಟ್ಟಿರುವುದೆಂದು ತಿಳಿಯಿರಿ! ಇದು ಮೂರನೆಯ ಅಧ್ಯಾಯವು.

---

### ವ್ಯಾಸಮಹರ್ಷಿಯು ಚಿಂತಾಕುಲನಾಗಿ ದುಃಖಿಸುತ್ತಿದ್ದಾಗ, ನಾರದನು ಆತನ ಬಳಿಗೆ ಬಂದುದು

ಸೂತನು ಹೀಗೆ ತತ್ವಗಳನ್ನು ತಿಳಿಸುತ್ತಿರಲು, ಯಜ್ಞದೀಕ್ಷಿತರಾಗಿ ಅಲ್ಲಿ ಸೇರಿದ್ದ ಋಷಿಗಳಲ್ಲಿ ವೃದ್ಧನಾಗಿಯೂ, ಮಹಾಜ್ಞಾನಿಯಾಗಿಯೂ ಋಗ್ವೇದಿಯಾಗಿಯೂ ಇದ್ದ ಶೌನಕನು, ಪರಮಸಂತೋಷದಿಂದ ಆತನನ್ನು ಬಹಳವಾಗಿ ಸ್ತುತಿಸುತ್ತ "ಓ ಮಹಾತ್ಮಾ! ಸೂತಾ! ನೀನು ಸಮಸ್ತತತ್ವಗಳನ್ನೂ ತಿಳಿದ ಮಹಾಭಾಗ್ಯವಂತನು. ಇಂತಹ ಸಚ್ಚರಿತ್ರಗಳನ್ನು ಇತರರಿಗೆ ಬೋಧಿಸುವುದರಲ್ಲಿ ನಿನ್ನನ್ನು ಮೀರಿದವನೊಬ್ಬನೂ ಇಲ್ಲವು! ಆದುದರಿಂದ ಶುಕಪ್ರೋಕ್ತವಾದ ಆ ಭಾಗವತವೆಂಬ ಪುಣ್ಯಚರಿತ್ರೆಯನ್ನೇ ನಮಗೂ ತಿಳಿಸಬೇಕು. ಈ ಪುರಾಣವು ಯಾವ ಯುಗದಲ್ಲಿ, ಯಾವ ಸ್ಥಳದಲ್ಲಿ, ಯಾವ ಕಾರಣಕ್ಕಾಗಿ ಪ್ರವರ್ತಿಸಿತು? ಕೃಷ್ಣದ್ವೈಪಾಯನಮಹರ್ಷಿಯು ಯಾರ ಪ್ರೇರಣೆಯಿಂದ ಈ ಭಾಗವತಸಂಹಿತೆಯನ್ನು ರಚಿಸಿದನು? ಆತನ ಪುತ್ರನಾದ ಶುಕಮುನಿಯಾದರೋ ಸಾಮಾನ್ಯವಲ್ಲ? ಯೋಗಿಶ್ರೇಷ್ಠನು! ಸಮದೃಷ್ಟಿಯುಳ್ಳವನು! ಯಾವ ವಿಧವಾದ ವಿಕಲ್ಪವೂ ಇಲ್ಲದ ಪರಮಾರ್ಥಜ್ಞಾನವುಳ್ಳವನು. ಪರಮಾತ್ಮನಲ್ಲಿ ನಿಶ್ಚಲವಾದ ಭಕ್ತಿಯುಳ್ಳವನು. ಆತ್ಮಜ್ಞಾನದಲ್ಲಿ ಯಾವಾಗಲೂ ಎಚ್ಚರವುಳ್ಳವನು. ತನ್ನ ಮಹಿಮೆಯನ್ನು ಹೊರಗೆ ಕಾಣಿಸುವ ಸ್ವಭಾವವಿಲ್ಲದೆ, ನೋಡುವವರಿಗೆ ಏನೂ ತಿಳಿಯದವನಂತೆ ಕಾಣುತ್ತ ಗೂಢವಾಗಿರತಕ್ಕವನು. ಒಮ್ಮೆ ಆ ಶುಕಮುನಿಯು ಒಂದು ನದೀತೀರದಲ್ಲಿ ಹೋಗುತ್ತಿರುವಾಗ, ಅಲ್ಲಿ ಮೈಮೇಲೆ ಬಟ್ಟೆಯಿಲ್ಲದೆ ಕೆಲವು ದೇವತಾಸ್ತ್ರೀಯರು ಜಲಕ್ರೀಡೆಯನ್ನಾಡುತ್ತಿದ್ದು, ವಸ್ತ್ರಧಾರಿಯಾದ ಈತನನ್ನು ನೋಡಿಯೂಕೂಡ ಲಜ್ಜೆಯಿಲ್ಲದೆ ನಿರ್ವಾಣದಲ್ಲಿಯೇ ನಿಂತಿದ್ದರು. ಶುಕನನ್ನು ಹಿಂಬಾಲಿಸಿ ಬರುತಿದ್ದ ಈತನ ತಂದೆಯಾದ ವ್ಯಾಸನು, ಆ ಸ್ತ್ರೀಯರ ನಡತೆಯನ್ನು ನೋಡಿ ಆಶ್ಚರ್ಯಪಟ್ಟವನಾಗಿ, ಅವರು ನಾಚಿಕೆಯಿಲ್ಲದೆ ನಿಂತಿರುವುದಕ್ಕೆ ಕಾರಣವೇನೆಂದು ಅವರನ್ನೇ ಪ್ರಶ್ನೆಮಾಡಿದನು. ಅದಕ್ಕಾ ದೇವಸ್ತ್ರೀಯರು ವ್ಯಾಸಮುನಿಯನ್ನು ಕುರಿತು "ಎಲೈ! ನಿನಗೆ ಇನ್ನೂ ಸ್ತ್ರೀಯರೆಂದೂ, ಪುರುಷರೆಂದೂ ಭೇದ



72. ಶುಕನು ಬಂದಾಗ ದೇವತಾಸ್ತ್ರಿಯರು ನದಿಯಲ್ಲಿ ಸ್ನಾನಮಾಡುತ್ತ ದಿಗಂಬರೆಯರಾಗಿದ್ದು, ವ್ಯಾಸನು ಬರುವುದನ್ನು ಕಂಡೊಡನೆ ವಸ್ತ್ರವನ್ನು ಸುತ್ತಿಕೊಳ್ಳುವುದು.

ಬುದ್ಧಿಯಿರುವಂತಿದೆ. ನಿನ್ನ ಪುತ್ರನಾದ ಈ ಶುಕಮುನಿಯಾದರೋ ನಿನಗಿಂತಲೂ ಪರಿಪಕ್ವವಾದ ಜ್ಞಾನವುಳ್ಳವನು. ಆತನಿಗೆ ಪ್ರಕೃತಿಪುರುಷವಿಲಕ್ಷಣನಾದ ಪರಮಾತ್ಮನೊಬ್ಬನಲ್ಲಿ ದೃಷ್ಟಿಯೇಹೊರತು, ಅದನ್ನು ಬಿಟ್ಟು ಬೇರೊಂದು ವಿಧವಾದ ಭೇದವೂ ತಿಳಿಯದು. ಆದುದರಿಂದಲೇ ನಮಗೆ ಅವನನ್ನು ನೋಡಿಯೂ ಲಜ್ಜೆ ಹುಟ್ಟಲಿಲ್ಲವು" ಎಂದರು. ಇಂತಹ ಮಹಾಜ್ಞಾನಿಯಾದ ಶುಕನು ಏನೂತಿಳಿಯದ ಮೂಢನಂತೆಯೂ, ಹುಚ್ಚನಂತೆಯೂ, ಜಡನಂತೆಯೂ, ಕುರುಜಾಂಗಲ ಪ್ರದೇಶಗಳಲ್ಲಿ ನಿಂತಲ್ಲಿ ನಿಲ್ಲದೆ ಸುತ್ತುತ್ತಿದ್ದನಲ್ಲವೇ? ಇಂತವನಿಗೆ ಹಸ್ತಿನಾಪುರದಲ್ಲಿ ಹೇಗೆ ಪ್ರವೇಶವುಂಟಾಯಿತು? ಅಲ್ಲಿನ ನಿವಾಸಿಗಳಿಗೆ ಇವನ ಮಹಿಮೆಯು ಹೇಗೆ ತಿಳಿಯಿತು? ಎಲೈಭದ್ರನೆ! ಪಾಂಡವಕುಲಕ್ಕೆ ಅಲಂಕಾರನೆನಿಸಿಕೊಂಡ ರಾಜಋಷಿಯಾದ ಪರೀಕ್ಷಿತ್ತಿಗೂ, ಈ ಶುಕಮುನಿಗೂ ಪರಸ್ಪರಸಂವಾದವು ಹುಟ್ಟಿದುದು ಹೇಗೆ? ಆ ಸಂವಾದದಲ್ಲಿ ಈ ಭಾಗವತಸಂಹಿತೆಯ ಪ್ರಸಂಗವು ಬರುವುದಕ್ಕೆ ಕಾರಣವೇನು? ಮತ್ತು ಮಹಾತ್ಮನಾದ ಈ ಶುಕಮಹಾಮುನಿಯು ಅಲ್ಲಲ್ಲಿ ಸುತ್ತುವಾಗ, ಗೃಹಸ್ಥರ ಮನೆಯನ್ನು ಪವಿತ್ರವನ್ನಾಗಿ ಮಾಡುವುದಕ್ಕಾಗಿ ಎಂದಾದರೂ ಒಮ್ಮೆ ಅಲ್ಲಿಗೆ ಪ್ರವೇಶಿಸಿದರೂಕೂಡ, ಆ ಸ್ಥಳಗಳಲ್ಲಿ ಹಸುಗಳನ್ನು ಹಾಲುಕರೆಯುವಷ್ಟು ಕಾಲದವರೆಗೆ ನಿಲ್ಲುತಿದ್ದನೇ ಹೊರತು, ಅದಕ್ಕೆಮೇಲೆ ನಿಲ್ಲತಕ್ಕವನಲ್ಲ. ಇಂತಹ ಶುಕನು ಈ ಭಾಗವತಸಂಹಿತೆಯೆಲ್ಲವನ್ನೂ ಪರೀಕ್ಷಿತ್ತಿಗೆ ಉಪದೇಶಿಸಿ ಮುಗಿಸುವವರೆಗೆ ಅಲ್ಲಿ ನಿಲ್ಲುವುದಕ್ಕೆ ಹೇಗೆ ಸಮ್ಮತಿಸಿದನು? ಎಲೈಸೂತನೆ! ಅಭಿಮನ್ಯುಪುತ್ರನಾದ ಆ ಪರೀಕ್ಷಿದ್ರಾಜನನ್ನು ಭಾಗವತೋತ್ತಮನೆಂದು ಹೇಳುವರು. ಆತನ ಉತ್ಪತ್ತಿಯೂ, ಆತನ ಕಾರ್ಯಗಳೂ ಮಹಾದ್ಭುತಗಳೆಂದೂ ಕೇಳಿರುವೆವು. ಆದುದರಿಂದ ಅವೆಲ್ಲವನ್ನೂ ನೀನು ನಮಗೆ ವಿವರವಾಗಿ ತಿಳಿಸಬೇಕು. ಪಾಂಡುವಂಶಕ್ಕೆ ಗೌರವವನ್ನು ತರತಕ್ಕವನಾಗಿ, ಚಕ್ರವರ್ತಿಪದವಿಯಲ್ಲಿದ್ದ ಆ ರಾಜನು, ತನ್ನ ರಾಜ್ಯಸಂಪತ್ತನ್ನೂ ಬಿಟ್ಟು, ಗಂಗಾತೀರದಲ್ಲಿ ಪ್ರಾಯೋಪವೇಶದಿಂದ ಪ್ರಾಣತ್ಯಾಗಮಾಡಲು ಪ್ರಯತ್ನಿಸಿದುದಕ್ಕೆ ಕಾರಣವೇನು? ಇದಲ್ಲದೆ ಶತ್ರುರಾಜರೆಲ್ಲರೂ ತಮ್ಮಕ್ಷೇಮಕ್ಕಾಗಿ ತಾವಾಗಿಯೇ ಅಪರಿಮಿತವಾದ ಧನವನ್ನು ತಂದು ಅವನಪಾದಗಳಲ್ಲಿರಿಸಿ ನಮಸ್ಕರಿಸುತ್ತಿದ್ದರಲ್ಲವೆ? ಅಂತಹ ಸ್ಥಿರಸಾಮ್ರಾಜ್ಯವುಳ್ಳ ಆ ಪರೀಕ್ಷಿತ್ತಿಗೆ ಅಷ್ಟೊಂದು ವಿರಕ್ತಿಯು ಹುಟ್ಟಿದುದೇಕೆ? ಆಹಾ! ಇನ್ನೂ ಸಣ್ಣವಯಸ್ಸುಳ್ಳ ಆ ರಾಜನು, ತನ್ನ ರಾಜ್ಯಲಕ್ಷ್ಮಿಯೊಡನೆ ಪ್ರಾಣಗಳನ್ನೂ ಬಿಡುವುದಕ್ಕೆ ನಿಶ್ಚಯಿಸಿದನಲ್ಲವೆ? ಭಗವದ್ಭಕ್ತರು ಲೋಕವ್ಯಾಪಾರಗಳಲ್ಲಿ ಕೇವಲ ವಿರಕ್ತರಾಗಿ, ಪುಣ್ಯಶ್ಲೋಕನಾದ ಆ ಪರಮಾತ್ಮನೊಬ್ಬನನ್ನೇ ನಂಬಿದ್ದರೂ, ಸ್ವಪ್ರಯೋಜನಕ್ಕಾ

ಗಿಯೇ ತಾವು ಬದುಕಿರತಕ್ಕವರಲ್ಲ! ಸಮಸ್ತಲೋಕಕ್ಕೂ ಶ್ರೇಯಸ್ಸನ್ನೂ, ಶುಭವನ್ನೂ, ಸಂಪತ್ತನ್ನೂ ಆ ಸಂಪತ್ತಿಗೆ ಮೇಲೆಮೇಲೆ ಅಭ್ಯುದಯವನ್ನೂ ಕೂಡಿಸುವುದಕ್ಕಾಗಿಯೇ ಜೀವಿಸಿರುವುದುಂಟು. ಹೀಗಿರುವಾಗ ಈ ಪರೀಕ್ಷಿದ್ರಾಜನು ಮಾತ್ರ ತನ್ನಿಂದ ನಡೆಯಬೇಕಾದ ಲೋಕೋಪಕಾರವನ್ನೂ ಲಕ್ಷಿಸದೆ, ದೇಹವನ್ನು ಬಿಡುವುದಕ್ಕೆ ಯತ್ನಿಸಿದುದೇಕೆ? ಎಲೈ ಮಹಾತ್ಮನೆ! ಈ ವಿಷಯಗಳೆಲ್ಲವನ್ನೂ ನಮಗೆ ಚೆನ್ನಾಗಿ ವಿವರಿಸಬೇಕು. ಇನ್ನೂ ನಮ್ಮ ಅಜ್ಞತೆಯಿಂದ ನಾವುಕೆಲಕೆಲವುವಿಷಯಗಳನ್ನು ಪ್ರಶ್ನೆಮಾಡದೆ ಬಿಟ್ಟಿದ್ದರೂ, ಅವುಗಳನ್ನು ನೀನಾಗಿಯೇ ವಿವರಿಸಿ ಹೇಳಬೇಕು. ವೇದವಾಕ್ಯಗಳುಹೊರತು ಇತರ ಪುರಾಣೇತಿಹಾಸಗಳೆಲ್ಲವೂ ನಿನಗೆ ಮುಖಸ್ಥವಾಗಿರುವುವು. ನೀನೇ ನಮಗೆ ಅವುಗಳನ್ನು ತಿಳಿಸದಿದ್ದಮೇಲೆ ಅವುಗಳನ್ನು ನಮಗೆ ತಿಳಿಸತಕ್ಕ ಬೇರೆ ಮಹಾತ್ಮರು ಯಾರುಂಟು?” ಎಂದನು. ಇದನ್ನು ಕೇಳಿ ಸೂತನು ಅತ್ಯಂತಸಂತುಷ್ಟನಾಗಿ, “ಶೌನಕಾ! ಹೇಳುವೆನು ಕೇಳು! ಮೂರನೆಯ ಯುಗವಾದ ದ್ವಾಪರದ ಕೊನೆಯಲ್ಲಿ, ಸತ್ಯವತೀದೇವಿಯಲ್ಲಿ ಭಗವದಂಶದಿಂದ ವ್ಯಾಸಮಹಾಮುನಿಯು ಜನಿಸಿದನು. ಆ ಮಹರ್ಷಿಯು ಒಂದಾನೊಂದುದಿನದ ಪ್ರಾತಃಕಾಲದಲ್ಲಿ, ಸರಸ್ವತೀನದಿಯಲ್ಲಿ ಸ್ನಾನಮಾಡಿ, ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು, ನಿರ್ಜನವಾದ ಪ್ರದೇಶದಲ್ಲಿ ಏಕಾಕಿಯಾಗಿ ಕುಳಿತಿದ್ದನು. ಆಗಲೇ ಸೂರ್ಯೋದಯವಾಗುತ್ತಿತ್ತು. ಸಕಲವೇದಗಳ ಸಾರವನ್ನೂ ತಿಳಿದವನಾಗಿಯೂ, ಪ್ರಕೃತಿಪುರುಷಾದಿಪರಾಪರತತ್ವಸ್ವರೂಪವನ್ನು ಬಲ್ಲವನಾಗಿಯೂ ಇದ್ದ ಆ ವ್ಯಾಸಮುನಿಯು ಆ ನದೀತೀರದಲ್ಲಿ ಹೀಗೆ ಏಕಾಕಿಯಾಗಿ ಕುಳಿತು ಧ್ಯಾನದೃಷ್ಟಿಯಿಂದ ಯೋಚಿಸತೊಡಗಿದನು. ಯಾರಿಗೂ ತಿಳಿಯದಂತೆ ವೇಗದಿಂದೋಡುತ್ತಿರುವ ಕಾಲಗತಿಯಿಂದ ಭೂಲೋಕದಲ್ಲಿ ಯುಗಧರ್ಮಗಳು ಭೇದಿಸುತ್ತಿರುವುದನ್ನೂ, ಈ ಧರ್ಮಗಳ ಹಾನಿವೃದ್ಧಿರೂಪವಾದ ವ್ಯತ್ಯಾಸದಿಂದ, ಪಂಚಭೂತಪರಿಣಾಮರೂಪಗಳಾದ ದೇವಾದಿಶರೀರಗಳಲ್ಲಿಯೂ, ತತ್ಸಂಬಂಧವುಳ್ಳ ಜೀವಗಳಲ್ಲಿಯೂ ಕ್ರಮಕ್ರಮವಾಗಿ ಶಕ್ತಿಯು ಕುಂದುತ್ತ ಬರುವುದನ್ನೂ ಚಿಂತಿಸಿದನು. ಕಾಲದೋಷದಿಂದ ಜನರಿಗೆ ತಮ್ಮ ತಮ್ಮ ವರ್ಣಾಶ್ರಮಧರ್ಮಗಳಲ್ಲಿ ಶ್ರದ್ಧೆಹುಟ್ಟುವುದೇ ಕಡಿಮೆ! ಒಂದುವೇಳೆ ಶ್ರದ್ಧೆಯುಹುಟ್ಟಿದರೂ ಆಯಾಕರ್ಮಗಳನ್ನು ಕ್ರಮವಾಗಿ ನಡೆಸುವುದಕ್ಕೆ ತಕ್ಕಷ್ಟು ದೇಹಬಲವಿಲ್ಲದೆ ದುರ್ಬಲರಾಗಿರುವರು. ಬಲವಿದ್ದವರು ಬುದ್ಧಿಹೀನರಾಗಿರುವರು. ಒಂದುವೇಳೆ ಈ ಸೌಕರ್ಯಗಳೆಲ್ಲವೂ ಸಂಪೂರ್ಣವಾಗಿದ್ದರೂ, ಅಂತವರು ಅಲ್ಪಾಯುಸ್ಸಿನಲ್ಲಿಯೇ ಸಾಯುವರು. ಹೀಗೆ ಕಾಲಗತಿ

ಯಿಂದ ಜನರೆಲ್ಲರೂ ಭಾಗ್ಯಹೀನರಾಗಿರುವುದನ್ನು ಕಂಡು ವ್ಯಾಸಮಹಾ ಮುನಿಯು, ಅಂತವರಿಗೆ ಯಾವವಿಧದಿಂದ ಕ್ಷೇಮವನ್ನುಂಟುಮಾಡಬಹು ದೆಂದು ಯೋಗಪರಿಶುದ್ಧವಾದ ತನ್ನ ಧ್ಯಾನದೃಷ್ಟಿಯಿಂದಲೇ ಚೆನ್ನಾಗಿ ಆಲೋಚಿಸಿದನು. ಹೀಗೆಯೋಚಿಸಿ, ಲೋಕದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಮೂರು ವರ್ಣದವರಿಗೂ ಶ್ರೇಯಸ್ಸನ್ನುಂಟುಮಾಡಬೇಕಾದರೆ, ವೇದಗಳ ಪೂರ್ವಭಾಗದಲ್ಲಿರುವ ಚಾತುರ್ಹೋತ್ರಮಂತ್ರಗಳಿಂದ ಪ್ರಕಾಶಿತವಾದ ಯಾಗಾದಿಕರ್ಮಗಳಲ್ಲದೆ ಬೇರೆಯಲ್ಲವೆಂದು ನಿಶ್ಚಯಿಸಿಕೊಂಡನು. ಆ ವೇದ ಗಳೆಲ್ಲವೂ ಒಂದೇರೂಪವಾಗಿರುವುದನ್ನು ನೋಡಿ, ಅದನ್ನು ಬೇರ್ಪಡಿಸಿ ತಿಳಿಸುವು ದಕ್ಕಾಗಿ, ಋಕ್ಕು, ಯಜುಸ್ಸು, ಸಾಮ, ಅಥರ್ವಣಗಳೆಂಬ ನಾಲ್ಕು ವಿಭಾಗ ಗಳಾಗಿ ಅದನ್ನು ವಿಭಾಗಿಸಿಟ್ಟನು. ಇತಿಹಾಸಪುರಾಣಗಳನ್ನೂ ಬೇರೆಯಾಗಿ ವಿಭಾಗಿಸಿದನು. ಇದು ಐದನೆಯ ವೇದವೆನಿಸಿಕೊಂಡಿತು ಹೀಗೆ ವಿಭಾಗಿಸಿಟ್ಟ ಮೇಲೆ ಅವೆಲ್ಲವನ್ನೂ ತನ್ನ ಶಿಷ್ಯರಿಗೆ ಉಪದೇಶಿಸಿದನು. ಈಶಿಷ್ಯರಲ್ಲಿ ಪೈಲನೆಂಬ ಮಹರ್ಷಿಯು ಋಗ್ವೇದವನ್ನೂ, ಜೈಮಿನಿಯು ಸಾಮವೇದವನ್ನೂ, ಗ್ರಹಿಸಿ ದರು. ವೈಶಂಪಾಯನನು ಯಜುರ್ವೇದದಲ್ಲಿ ಪಾರಂಗತನಾದನು. ವರುಣ ಪುತ್ರನಾದ ಸುಮಂತುವೆಂಬವನು ಅಥರ್ವಣವೇದವನ್ನು ಗ್ರಹಿಸಿದನು. ನನ್ನ ತಂದೆಯಾದ ರೋಮಹರ್ಷಣನು ಇತಿಹಾಸಪುರಾಣಗಳಲ್ಲಿ ಪಾರಂಗತನಾದನು. ಈ ಶಿಷ್ಯರೆಲ್ಲರೂ ಆಯಾವೇದಶಾಖೆಗಳೆಲ್ಲವನ್ನೂ ಶ್ರದ್ಧೆಯಿಂದ ಪಠಿಸಿದರು. ಅವರಿಂದ ಅವರಶಿಷ್ಯಪ್ರಶಿಷ್ಯರುಗಳಿಗೂ ವ್ಯಾಪಿಸಿ, ಈಗಲೂ ಅನೇಕಶಾಖೆ ಗಳಾಗಿ ಹರಡಿರುವುವು. ಹೀಗೆ ದೀನವತ್ಸಲನಾದ ವ್ಯಾಸಮಹಾಮುನಿಯು ಸಾಮಾನ್ಯವಾಗಿ ಮಂದಬುದ್ಧಿಗಳಿಗೂ ಕೂಡ ಸುಲಭಗ್ರಾಹ್ಯವಾಗುವಂತೆ, ವೇದ ಗಳನ್ನು ವಿಭಾಗಿಸಿಬಿಟ್ಟುದರಿಂದಲೇ ವ್ಯಾಸನೆಂಬ ಪ್ರಸಿದ್ಧಿಯನ್ನು ಹೊಂದಿದನು. ಆಮೇಲೆ ಈ ವ್ಯಾಸಮಹಾಮುನಿಯು ಸ್ತ್ರೀಯರಿಗೂ, ಶೂದ್ರರಿಗೂ, ಬಹ್ಮ ಹತ್ಯಾದಿಪಾಪಗಳನ್ನು ನಡೆಸಿದವರಿಗೂ ಈ ವೇದಗಳಲ್ಲಿ ಅಧಿಕಾರವಿಲ್ಲದುದನ್ನೂ, ಈ ವೈದಿಕಕರ್ಮಗಳಿಂದ ಸಿದ್ಧಿಸತಕ್ಕ ಶ್ರೇಯಸ್ಸಿಗೆ ಅವರು ಪಾತ್ರರಾಗ ದಿರುವುದನ್ನೂ ನೋಡಿ, ಅವರಿಗಾಗಿಯೇ ಭಾರತವೆಂಬ ಉಪಾಖ್ಯಾನವನ್ನು ರಚಿಸಿದನು. ಎಲೈ ಮಹರ್ಷಿಗಳೆ! ಹೀಗೆ ವೇದವ್ಯಾಸಮಹರ್ಷಿಯು ಸಮಸ್ತ ಜನರ ಶ್ರೇಯಸ್ಸಿಗಾಗಿ ಅನೇಕಕಾರ್ಯಗಳನ್ನು ನಡೆಸಿಟ್ಟರೂ, ಆತನ ಮನಸ್ಸಿಗೆ ಇನ್ನೂ ಸಮಾಧಾನವು ಹುಟ್ಟದೇಹೋಯಿತು. ತನ್ನ ಮನಸ್ಸಿಗೆ ಪೂರ್ಣವಾದ ಸಮಾಧಾನವುಂಟಾಗದಿದ್ದುದರಿಂದ, ಆ ಸರಸ್ವತೀನದೀತೀರದಲ್ಲಿ ರಹಸ್ಯವಾಗಿ

ಕುಳಿತು, ತನ್ನಲ್ಲಿತಾನು ಚಿಂತಿಸುವನು. "ಆಹಾ! ನಾನು ದೃಢವಾದ ವ್ರತವನ್ನು ಹಿಡಿದು, ನಿಷ್ಕಪಟವಾದ ಮನಸ್ಸಿನಿಂದ, ಗುರುಗಳನ್ನೂ ಅಗ್ನಿ ಹೋತ್ರವನ್ನೂ ಪೂಜಿಸಿದೆನು. ವೇದಗಳನ್ನು ವಿಭಾಗಿಸಿಟ್ಟೆನು. ಭಾರತವೆಂಬ ಬೇರೆ ಹೆಸರಿನಿಂದ ವೇದಾರ್ಥಗಳನ್ನೂ ವಿಶದೀಕರಿಸಿದೆನು. ಇದರಿಂದ. ಸ್ತ್ರೀ ಶೂದ್ರಾದಿಗಳೂಕೂಡ ತಮತಮಗನುರೂಪವಾದಧರ್ಮಗಳನ್ನು ತಿಳಿದುಕೊಳ್ಳುವು ದಕ್ಕೆ ಅವಕಾಶವನ್ನುಂಟುಮಾಡಿದೆನು. ಅಯ್ಯೋ! ಇಷ್ಟಾದರೂ ನನ್ನ ದೇಹ ದಲ್ಲಿರುವ ಆತ್ಮವು, ಸಮಾಧಾನವಿಲ್ಲದೆ ತನಗೆತಾನೇ ಕಳವಳಿಸುತ್ತಿರುವುದು! ಬ್ರಹ್ಮವರ್ಚಸ್ಸಿನಿಂದ ಶುದ್ಧವಾಗಿದ್ದರೂ ಏನೋ ಒಂದುವಿಧವಾದ ನ್ಯೂನತೆ ಯಿದ್ದಂತೆ ಕುದಿಯುತ್ತಿರುವುದಲ್ಲಾ! ಇದಕ್ಕೆ ಕಾರಣವೇನು? ಇಹಾ! ಇದೇ ಕಾರಣವಿರಬಹುದು! ಅಂತರಾತ್ಮನಾದ ಭಗವಂತನನ್ನು ತೃಪ್ತಿಪಡಿಸಿದ ಮೇಲಲ್ಲವೇ ತದಧೀನವಾದ ಮನಸ್ಸಿಗೆ ಆನಂದವು ಪ್ರಾಪ್ತವಾಗುವುದು! ಆ ಭಗವಂತನೂಕೂಡ ತನ್ನ ಭಕ್ತರು ಸಂತುಷ್ಟರಾಗಿದ್ದ ಪಕ್ಷದಲ್ಲಿಯೇ ಸಂತೋಷ ವನ್ನು ಹೊಂದುವನು. ಭಗವದ್ಭಕ್ತರಿಗೆ ಸಂತೋಷಕರವಾದ ಭಾಗವತಧರ್ಮ ಗಳನ್ನು ವಿವರಿಸಿದ ಪಕ್ಷದಲ್ಲಿ ಅವರು ಸಂತುಷ್ಟರಾಗುವರು. ಅದರಿಂದ ಭಗವಂ ತನೂ ಸಂತುಷ್ಟನಾಗುವನು. ಆ ಧರ್ಮಗಳನ್ನು ಇದುವರೆಗೆ ನಾನು ಸಂಪೂರ್ಣ ವಾಗಿ ವಿವರಿಸದೆ ಹೋದುದರಿಂದಲೇ ನನ್ನ ಮನಸ್ಸಿಗೆ ಶಾಂತಿಯಿಲ್ಲದಿರುವುದು. ಇದೇ ಧರ್ಮಗಳನ್ನು ನಾನು ಭಾರತದಲ್ಲಿ ಸೂಕ್ಷ್ಮವಾಗಿ ವಿವರಿಸಿದ್ದರೂ, ವಿಶೇಷವಾಗಿ ವಿಸ್ತರಿಸದೆ ಹೋದೆನು. ಆ ಕಾರ್ಯವನ್ನು ಪೂರ್ತಿಗೊಳಿಸಿದ ಹೊರತು ನನ್ನ ಮನಸ್ಸಿಗೆ ಶಾಂತಿಯುಂಟಾಗದು. ಇದಕ್ಕೇನುಮಾಡಲಿ?" ಎಂದು ಚಿಂತಿಸುತ್ತ ಕುಳಿತಿದ್ದನು. ಹೀಗೆ ಆ ವ್ಯಾಸಮಹಾಮುನಿಯು ತನ್ನನ್ನು ಕೃತಕೃತ್ಯನಲ್ಲದಂತೆ ಭಾವಿಸಿ ದುಃಖಿಸುತ್ತಿರುವ ಸಮಯದಲ್ಲಿಯೇ ನಾರದಮಹರ್ಷಿಯು ಆ ಪುಣ್ಯಾ ಶ್ರಮಸ್ಥಳಕ್ಕೆ ಬಂದನು. ಸಮಸ್ತದೇವತೆಗಳಿಂದಲೂ ಪೂಜಿತನಾದ ನಾರದನು ಬಂದುದನ್ನು ನೋಡಿ, ವ್ಯಾಸಮುನಿಯು ಸಂಭ್ರಮದಿಂದೆದ್ದುಬಂದು ವಿಧ್ಯುಕ್ತವಾಗಿ ಆತನನ್ನು ಸತ್ಕರಿಸಿದನು. ಇದು ನಾಲ್ಕನೆಯ ಅಧ್ಯಾಯವು.

---



76. ನಾರದನು ವ್ಯಾಸನ ಬಳಿಗೆ ಬಂದುದು.

## ವ್ಯಾಸ ನಾರದ ಸಂವಾದವು

ಹೀಗೆ ನಾರದನು ವ್ಯಾಸನಿಂದ ಯಥಾವಿಧಿಯಾಗಿ ಪೂಜಿಸಲ್ಪಟ್ಟ ಮೇಲೆ, ಅವರಿಬ್ಬರೂ ಸುಖಾಸೀನರಾಗಿದ್ದರು. ಆಗ ಮಹಾಕೀರ್ತಿವಂತನಾದ ನಾರದನು, ತನ್ನ ಬಳಿಯಲ್ಲಿ ಸುಖಾಸೀನನಾಗಿ ಕುಳಿತಿದ್ದ ವ್ಯಾಸಮಹರ್ಷಿಯನ್ನು ನೋಡಿ ಮಂದಹಾಸಪೂರ್ವಕವಾಗಿ "ಎಲೈ ಋಷಿಶ್ರೇಷ್ಠನೆ! ಓ ಮಹಾತ್ಮನೆ! ನಿನ್ನ ಮನಸ್ಸು ನಿಶ್ಚಿಂತವಾಗಿರುವುದಷ್ಟೆ? ತಿಳಿಯಬೇಕಾದ ಧರ್ಮಗಳೆಲ್ಲವನ್ನೂ ತಿಳಿದಿರುವೆ! ಲೋಕೋಪಕಾರಾರ್ಥವಾಗಿ ಸರ್ವಾರ್ಥಗಳನ್ನೂ ವಿವರಿಸತಕ್ಕ ಮಹಾದ್ಭುತವಾದ ಭಾರತವೆಂಬ ಗ್ರಂಥವನ್ನು ರಚಿಸಿದೆ! ಇದರಿಂದಲೇ ನಿನ್ನ ಜ್ಞಾನವಿಶೇಷವು ಹೊರಪಡುವುದು. ಆದ್ಯಂತಶೂನ್ಯವಾಗಿರುವ ವೇದಗಳೆಲ್ಲವನ್ನೂ ಓದಿ, ಆ ವೇದಾರ್ಥಗಳೆಲ್ಲವನ್ನೂ ವಿಚಾರಿಸಿರುವೆ? ಹೀಗಿದ್ದರೂ ನೀನು ಕೃತಕೃತ್ಯನಲ್ಲದವನಂತೆ ಹೀಗೇಕೆ ಚಿಂತಿಸುತ್ತಿರುವೆ?" ಎಂದನು. ಅದಕ್ಕಾ ವ್ಯಾಸನು "ಎಲೈ ಮುನೀಂದ್ರನೆ! ನೀನು ಹೇಳಿದುದೆಲ್ಲವೂ ನಿಜವು. ಹಾಗಿದ್ದರೂ ನನ್ನ ಆತ್ಮವು ತೃಪ್ತಿಯಿಲ್ಲದೆ ಕಳವಳಿಸುತ್ತಿರುವುದು. ಇದಕ್ಕೆ ಕಾರಣವೇನೆಂದು ನನಗೇ ತೋರಲಿಲ್ಲ. ನೀನೋ ದಿವ್ಯಜ್ಞಾನವುಳ್ಳವನು. ಸಮಸ್ತಲೋಕಗಳಿಗೂ ಸೃಷ್ಟಿಕರ್ತನಾದ ಚತುರ್ಮುಖಬ್ರಹ್ಮನ ಶರೀರದಲ್ಲಿ ಸಾಕ್ಷಾತ್ತಾಗಿ ಹುಟ್ಟಿದವನು. ಸರ್ವಜ್ಞನು. ಆದುದರಿಂದ ನಿನ್ನಿಂದಲೇ ನಾನು ಅದರ ಕಾರಣವನ್ನು ತಿಳಿಯಬೇಕಾಗಿರುವುದು. ನನ್ನ ಮನಸ್ಸಿಗೆ ತೃಪ್ತಿಯಿಲ್ಲದಿರುವುದಕ್ಕೆ ಕಾರಣವೇನೆಂಬುದನ್ನು ನೀನೇ ಯೋಚಿಸಿ ಹೇಳಬೇಕು. ಉತ್ತಮೋತ್ತಮನಾಗಿ, ಸರ್ವನಿಯಾಮಕನಾದ ಭಗವಂತನು, ಸತ್ವಾದಿಗುಣಗಳ ಬಂಧವಿಲ್ಲದೆ ತನ್ನ ಸಂಕಲ್ಪಮಾತ್ರದಿಂದಲೇ ಸಮಸ್ತಲೋಕಗಳನ್ನೂ ಸೃಷ್ಟಿಸುವನು. ಅವುಗಳನ್ನು ತಾನೇ ರಕ್ಷಿಸುತ್ತಿರುವನು. ಕೊನೆಗೆ ತಾನೇ ಅವುಗಳನ್ನು ಸಂಹರಿಸುವನು. ಸರ್ವಾಂತರ್ಯಾಮಿಯಾದ ಆತನಿಗೆ ತಿಳಿಯದೆ ನಡೆಯತಕ್ಕ ವಿಷಯಗಳೊಂದೂ ಇಲ್ಲವು. ಅಂತಹ ಪರಮಪುರುಷನನ್ನೇ ನೀನು ಉಪಾಸನಮಾಡಿ ವಶಪಡಿಸಿಕೊಂಡವನಾದುದರಿಂದ, ಪ್ರಾಣಿಗಳಲ್ಲಿ ಅಂತರ್ಗತವಾದ ಸಮಸ್ತರಹಸ್ಯವನ್ನೂ ನೀನು ತಿಳಿಯಬಲ್ಲೆ! ಇದಲ್ಲದೆ ನೀನು ಸೂರ್ಯನಂತೆ ತ್ರಿಲೋಕಸಂಚಾರಿಯಾದುದರಿಂದ ಹೊರಗಿನ ವಿಷಯಗಳೆಲ್ಲವನ್ನೂ ನೀನು ಕಾಣಬಲ್ಲೆ. ವಾಯುವಿನಂತೆ ಜ್ಞಾನವ್ಯಾಪ್ತಿಯಿಂದ ಸಮಸ್ತಪ್ರಾಣಿಗಳಲ್ಲಿ ಸಂಚರಿಸುತ್ತ, ಅವರ ಮನೋಗತಗಳೆಲ್ಲವನ್ನೂ ಕಂಡುಕೊಳ್ಳುತ್ತಿರುವೆ? ಇದರಿಂದ ಲೋಕದಲ್ಲಿ ನೀನು ಕಾಣದುದೊಂದೂ ಇಲ್ಲವು! ಪರಮಾತ್ಮನ ವಿಷಯವಾಗಿ ನಿವೃತ್ತಿಧರ್ಮಗಳನ್ನೂ, ವೇದಗಳ ವಿಷಯವಾಗಿ ಸಮಸ್ತವ್ರತಗಳನ್ನೂ ಮುಗಿಸಿದ್ದರೂ, ನನ್ನ ಮನಸ್ಸಿಗೆ

ಸಂತೋಷವಿಲ್ಲದಿರುವುದು. ಆದುದರಿಂದ ಇನ್ನೂ ನನ್ನಲ್ಲಿ ಯಾವವಿಧವಾದ ಲೋಪ ವುಂಟೆಂಬುದನ್ನು ನೀನೇ ನಿನ್ನ ದಿವ್ಯಜ್ಞಾನದಿಂದ ತಿಳಿದು ಹೇಳಬೇಕು" ಎಂದನು. ಅದಕ್ಕಾ ನಾರದನು "ಎಲೈ ಮುನೀಶ್ವರನೆ! ಹೇಳುವೆನು ಕೇಳು. ಶ್ರವಣಪಠ ನಾದಿಗಳಿಂದ ಸರ್ವಪಾಪಹರವಾದ ಭಗವಂತನ ಕೀರ್ತಿಯನ್ನು ನೀನು ಅಲ್ಲಲ್ಲಿ ಸೂಕ್ಷ್ಮವಾಗಿ ಹೇಳಿರುವೆಯೇ ಹೊರತು, ಅದನ್ನು ಪೂರ್ಣವಾಗಿ ಹೇಳಿ ಮುಗಿಸ ಲಿಲ್ಲವು. ಆತನ ಸ್ವರೂಪಗುಣಾದಿಗಳನ್ನು ಯಥಾಸ್ಥಿತವಾಗಿ ತಿಳಿಸದೆ ಹೋದುದೇ ನಿನ್ನಲ್ಲಿರುವ ನ್ಯೂನತೆಯು. ನಿನ್ನ ಆತ್ಮವು ಸಂತೋಷವಿಲ್ಲದೆ ಕಳವಳಿಸುವುದಕ್ಕೆ ಇದೇ ಕಾರಣವು. ಎಲೈಮಹರ್ಷಿಯೇ! ನೀನು ಭಾರತದಲ್ಲಿ ಧರ್ಮಾರ್ಥಕಾಮ ಪುರುಷಾರ್ಥಗಳನ್ನು ಎಷ್ಟುಮಟ್ಟಿಗೆ ವಿವರಿಸಿ ಹೇಳಿರುವೆಯೋ, ಅಷ್ಟುಮಟ್ಟಿಗೆ ಭಗವಂತನ ಮಹಿಮೆಯನ್ನು ವರ್ಣಿಸಲಿಲ್ಲವು ಒಂದು ಕಾವ್ಯವು ಪ್ರಾಸಾದ್ಯ ಲಂಕಾರಗಳಿಂದ ಬಹಳ ವಿಚಿತ್ರವಾಗಿದ್ದರೂ ಕೂಡ, ಅದರಲ್ಲಿ ಲೋಕಪವಿತ್ರಗಳಾದ ಭಗವಂತನ ಗುಣಾನುವರ್ಣನೆಗಳಿಲ್ಲದಿದ್ದರೆ, ಅದು ಕಾವ್ಯವೆನಿಸಿಕೊಳ್ಳುವುದೇ ಇಲ್ಲವು. ಅಂತಹ ಕಾವ್ಯವನ್ನು, ಕಾಗೆಗಳ ಗುಂಪಿಗೆ ನಿತ್ಯನಿವಾಸವಾಗಿ, ಹಂಸಗಳ ಪ್ರವೇ ಶಕ್ಕೆ ಯೋಗ್ಯವಲ್ಲದ ವಾಯಸತೀರ್ಥಕ್ಕೆ ಸಮಾನವೆಂದು ಹೇಳುವರು. ಅಂತಹ ತೀರ್ಥದಂತೆ ಭಗವದ್ಗುಣಾನುವರ್ಣನವಿಲ್ಲದ ಕಾವ್ಯವೂ ಕೂಡ ಅಪವಿತ್ರವಾಗಿ, ಕಾಮುಕರಿಗೆ ಮಾತ್ರವೇ ಪ್ರೀತಿದಾಯಕವಾಗಿರುವುದೇ ಹೊರತು, ಬ್ರಹ್ಮಾನಂ ದಾನುಭವವುಳ್ಳವರಾಗಿಯೂ, ಶುದ್ಧಮನಸ್ಕರಾಗಿಯೂ ಇರುವ ಪರಮಹಂಸರಿಗೆ ತೃಪ್ತಿಕರವಾಗಿರದು. ಕಾವ್ಯದಲ್ಲಿರುವ ಪ್ರತಿವಾಕ್ಯವೂ ಅಪಶಬ್ದಗಳಿಂದ ಕೂಡಿ ದರೂಕೂಡ, ಅದರಲ್ಲಿ ಭಗವನ್ನಾಮಗಳು ಮಿಶ್ರವಾಗಿದ್ದ ಪಕ್ಷದಲ್ಲಿ ಪಾಪನಿ ವಾರಕವೆನಿಸುವುದು. ಅಂತಹ ಕಾವ್ಯಗಳನ್ನು ಸಾಧುಗಳಾದ ಭಗವದ್ಭಕ್ತರು ಯಾವಾಗಲೂ ಕಿವಿಯಲ್ಲಿ ಕೇಳುತ್ತಿರುವರು. ಇತರರಿಗೂ ಹೇಳುತ್ತಿರುವರು. ಬೇರೆ ಯಾರೂ ಇಲ್ಲದಿದ್ದಾಗ ತಮಗೆ ತಾವೇ ಅದನ್ನು ಗಾನಮಾಡಿ ಆನಂದವನ್ನನು ಭವಿಸುವರು. ರಾಗದ್ವೇಷಾದಿವಿಕಾರಗಳಿಲ್ಲದೆ ಕರ್ಮಬಂಧವಿಲ್ಲವಿರುವ ಕೇವಲ ಜ್ಞಾನಯೋಗವಾದರೂ, ಭಗವದ್ಭಾವಶೂನ್ಯವಾಗಿದ್ದ ಪಕ್ಷದಲ್ಲಿ ಆ ಜ್ಞಾನವು ಎಷ್ಟುಮಾತ್ರವೂ ಪ್ರಕಾಶಿಸಲಾರದು. ನಿಷ್ಕಾಮರಾಗಿಯೇ ಕರ್ಮಗಳನ್ನು ನಡೆಸಿ ದರೂಕೂಡ, ಭಗವದರ್ಪಿತವೆಂಬ ಭಾವವಿಲ್ಲದಿದ್ದರೆ ಆಕರ್ಮಯೋಗವೂ ಪ್ರಕಾ ಶಿಸಲಾರದು. ಇನ್ನು ಕಾಮಾದಿಫಲೋದ್ದೇಶಪೂರ್ವಕವಾಗಿಯೇ ನಡೆಸತಕ್ಕ ಕಾಮ್ಯಕರ್ಮಗಳೆಲ್ಲವೂ, ಅವುಗಳನ್ನು ನಡೆಸುವಾಗಲೂ, ಅವುಗಳಫಲವನ್ನನುಭ ವಿಸುವಾಗಲೂಕೇವಲ ದುಃಖಪ್ರದವಾಗುವವದಲ್ಲದೆ ಶೋಭಿಸಲಾರವೆಂಬುದನ್ನು

ಹೇಳತಕ್ಕುದೇನು ? ಎಲೈ ಮುನಿವರ್ಯನೆ ! ನಿನ್ನ ಮಹಿಮೆಯಾದರೋ ಸಾಮಾನ್ಯ ವಲ್ಲ! ನೀನು ಲೋಕೋಪಕಾರನಿರತನಾದವನು ! ಇಂತ ವಿಷಯದಲ್ಲಿ ಬಹಳದೂರ ದೃಷ್ಟಿಯುಳ್ಳವನು. ಲೋಕೋಪಕಾರವಿಷಯದಲ್ಲಿ ದೃಢವಾದ ದೀಕ್ಷೆಯನ್ನೂ ಹಿಡಿದವನು. ಪವಿತ್ರವಾದ ಕೀರ್ತಿಯುಳ್ಳವನು. ಹೀಗಿರುವಾಗಲೂ ನೀನು ನಿರರ್ಥಕ ಳಾದ ಧರ್ಮಾರ್ಥ ಕಾಮಗಳನ್ನೂ, ಅದಕ್ಕೆ ಬೇಕಾದ ಸಾಧನಗಳನ್ನೂ, ವರ್ಣಿಸು ವುದರಲ್ಲಿಯೇ ನಿನ್ನ ಶ್ರಮವನ್ನು ವ್ಯರ್ಥಮಾಡಿದುದು ಅಷ್ಟಾಗಿ ಯುಕ್ತವಲ್ಲ! ನಿಜ ವಾಗಿ ನೀನು ಮನುಷ್ಯರ ಸಮಸ್ತವಿಧಬಂಧಗಳನ್ನೂ ಬಿಡಿಸಿ, ಅವರಿಗೆ ಶ್ರೇಯಸ್ಸ ನ್ನುಂಟುಮಾಡುವ ಉದ್ದೇಶವುಳ್ಳವನಾಗಿದ್ದ ಪಕ್ಷದಲ್ಲಿ, ಈಗಲೂ ತ್ರಿವಿಕ್ರಮಮೂರ್ತಿ ಯಾದ ಆಪರಮಾತ್ಮನಲೀಲೆಗಳೆಲ್ಲವನ್ನೂ ಚೆನ್ನಾಗಿಪರ್ಯಾಲೋಚಿಸಿ, ಪ್ರಬಂಧರೂಪ ವಾಗಿ ರಚಿಸು ! ಆ ಕಾರ್ಯವನ್ನು ನಡೆಸಿದಹೊರತು ನಿನ್ನ ಮನಸ್ಸು ನಿಶ್ಚಿಂತವಾಗಿ ರದು! ಭಗವಂತನಿಗೆ ಸಂಬಂಧಪಡದ ಬೇರೆವಿಷಯಗಳನ್ನು ವರ್ಣಿಸುತ್ತಿರುವವರೆಗೂ ನಿನ್ನ ಬುದ್ಧಿಯು, ಬಿರುಗಾಳಿಯ ಬಡಿತಕ್ಕೆ ಸಿಕ್ಕಿದದೋಣಿಯಂತೆ ಕ್ಷಣಮಾತ್ರವೂ ನೆಮ್ಮದಿಯಿಲ್ಲದೆ ಅಲೆಯುತ್ತಿರುವುದು. ಲೋಕದಲ್ಲಿ ಭಗವದಾತ್ಮಕವಲ್ಲದ ವಸ್ತು ವೊಂದಾದರೂ ಇಲ್ಲವೆಂಬುದನ್ನು ನೀನು ತಿಳಿಯದವನಲ್ಲ ! ಹೀಗಿರುವಾಗ ನೀನು ಹೇಳಬೇಕಾದ ವಿಷಯಗಳೆಲ್ಲವನ್ನೂ ಆ ಭಗವದ್ವಿಭೂತಿಯನ್ನಾಗಿಯೇ ಹೇಳ ಬೇಕಲ್ಲವೆ? ಇದನ್ನು ಬಿಟ್ಟು ಬೇರೆಮಾರ್ಗವನ್ನು ಹಿಡಿದರೆ ನಿನ್ನ ಬುದ್ಧಿಗೇ ಅದೊಂದು ನ್ಯೂನತೆಯನ್ನು ತೋರಿಸುವುದು. ಮುಖ್ಯವಾಗಿ ನೀನು ಸಮಸ್ತಭೂತ ಗಳಿಗೂ ಹಿತವನ್ನು ಮಾಡಬೇಕೆಂದು ಪ್ರಯತ್ನಿಸಿ ಅವರಿಗೆ ಅಹಿತವನ್ನೇ ಮಾಡಿ ದಂತಾಯಿತು. ಹೇಗೆಂದು ಕೇಳುವೆಯಾ? ಜನರಿಗೆ ಸಹಜವಾಗಿಯೇ ಅರ್ಥಕಾಮ ಗಳಲ್ಲಿ ಪ್ರೀತಿಯು ಹೆಚ್ಚು ! ಈ ಪ್ರಯತ್ನದಲ್ಲಿಯೇ ಅವರು ತಾಪತ್ರಯಗಳಿಗೆ ಸಿಕ್ಕಿ ನರಳುತ್ತಿರುವರು. ಇಂತವರನ್ನು ಆ ದಾರಿಯಿಂದ ತಪ್ಪಿಸುವುದು ನಿನ್ನಮುಖ್ಯಕಾರ್ಯ ವಾಗಿದ್ದರೂ, ನೀನು ಅವರಿಗೆ ಆ ವಿಧಗಳಾದ ಅರ್ಥಕಾಮಗಳಲ್ಲಿಯೇ ಇನ್ನೂ ಅಭಿ ರುಚಿಯನ್ನು ಹೆಚ್ಚಿಸುವಂತೆ, ಅವುಗಳಿಗೆ ಸಾಧಕಗಳಾದ ಧರ್ಮಗಳನ್ನು ಬೋಧಿಸುವು ದಕ್ಕಾಗಿ ಭಾರತವನ್ನು ರಚಿಸಿದಂತಾಯಿತು. ಇದೇ ನಿನ್ನಿಂದ ನಡೆದ ದೊಡ್ಡ ತಪ್ಪು. "ನಾನು ಹೇಳಿದ ಮಾತ್ರಕ್ಕೇನು? ಜನರು ತಮ್ಮ ತಮ್ಮ ಅಭಿರುಚಿ ಯಿದ್ದಂತೆ ಪರಮಪುರುಷಾರ್ಥದಲ್ಲಿಯೇ ಪ್ರವರ್ತಿಸಬಾರದೆ? ನಾನೂ ಭಾರತದಲ್ಲಿ ಒಂದೊಂದು ಕಡೆಯಲ್ಲಿ ಅರ್ಥಕಾಮಗಳ ಹೇಯತ್ವವನ್ನು ತಿಳಿಸಿಯೇ ಇರುವೆನು! ಇನ್ನು ನನ್ನಲ್ಲಿ ದೋಷವೇನು?" ಎಂದು ನೀನು ಸಮಾಧಾನವನ್ನು ಹೇಳ ಬಹುದು! ಎಲೈ ಮುನಿವರ್ಯನೆ! ಅದುಹಾಗಲ್ಲ! ನೀನಾದರೋ ಲೋಕದಲ್ಲಿ ಸರ್ವಜ್ಞ

ನೆಂದು ಹೆಸರುಗೊಂಡವನು. ಎಲ್ಲರೂ ನಿನ್ನಂತೆಯೇ ಸೂಕ್ಷ್ಮಜ್ಞಾನವುಳ್ಳವರಲ್ಲ! ಆದುದರಿಂದ ನೀನು ಭಾರತದಲ್ಲಿ ಧರ್ಮಾರ್ಥಕಾಮಗಳನ್ನೇ ವಿಶೇಷವಾಗಿ ವಿಸ್ತರಿಸಿ ಪ್ರತಿಪಾದಿಸಿರುವುದನ್ನು ನೋಡಿದರೆ,ಅಲ್ಪಜ್ಞರಾದ ಇತರಜನರು, ಅರ್ಥಕಾಮಗಳೇ ಉತ್ತಮಪುರುಷಾರ್ಥಗಳೆಂದೂ, ಅವನ್ನು ಕೈಗೂಡಿಸುವುದಕ್ಕಾಗಿ ನಡೆಸತಕ್ಕ ಧರ್ಮಗಳೇ ಉತ್ತಮಧರ್ಮಗಳೆಂದೂ ನಂಬುವರೇಹೊರತು ನೀನು ಎಲ್ಲಿಯೋ ಒಂದೆ ರಡು ಕಡೆಗಳಲ್ಲಿ ಅವುಗಳನ್ನು ಖಂಡಿಸಿದ್ದ ಮಾತ್ರಕ್ಕೆ, ಇದೇ ನಿನ್ನ ಮುಖ್ಯಾಭಿ ಪ್ರಾಯವೆಂಬುದನ್ನು ತಿಳಿದುಕೊಳ್ಳಲಾರರು. ಲೋಕದಲ್ಲಿ ಎಲ್ಲಿಯೋ ಕೆಲವು ನಿಪುಣ ಬುದ್ಧಿಯುಳ್ಳವರು ಮಾತ್ರ ನಿವೃತ್ತಿಧರ್ಮನಿಷ್ಠೆಯಿಂದ ಆಭಗವಂತನ ಅಪಾರ ಮಹಿಮೆಗಳನ್ನು ಸುಖವಾಗಿ ತಿಳಿದುಕೊಳ್ಳಬಲ್ಲರು. ಅಂತವರು ಬಹಳವಿರಳರು. ರಜಸ್ಸುಮೊದಲಾದಗುಣಗಳಿಂದ ಹುಟ್ಟಿದ ರಾಗಾದಿಗಳಲ್ಲಿ ಪ್ರವರ್ತಿಸಿ, ಆತ್ಮ ಸ್ವರೂಪಜ್ಞಾನವಿಲ್ಲದವರಿಗೆ ಆ ಪರಮಾತ್ಮನ ಮಹಿಮೆಗಳು ಸುಲಭವಾಗಿ ತಿಳಿಯ ಲಾರವು. ಈ ಅಜ್ಞತೆಯಿಂದ ಕೆಟ್ಟುಹೋಗತಕ್ಕವರೇ ಲೋಕದಲ್ಲಿ ಬಹಳಮಂದಿ ಯಿರುವುದರಿಂದ ಅಂತವರೆಲ್ಲರಿಗೂ ಸುಲಭವಾಗಿ ತಿಳಿಯುವಂತೆ ಅರ್ಥಕಾಮಗಳಲ್ಲಿ ರುವ ನ್ಯೂನತೆಯನ್ನೂ, ಭಗವದ್ಗುಣಾನುಭವವೇ ಮನುಷ್ಯರಿಗೆ ನಿರತಿಶಯ ಪುರುಷಾರ್ಥವೆಂಬುದನ್ನೂ, ನೀನು ಒಂದು ದೊಡ್ಡಪ್ರಬಂಧದ ಮೂಲಕವಾಗಿ ತಿಳಿಸಬೇಕು. ಇದಲ್ಲದೆ ಲೋಕದಲ್ಲಿ ಮನುಷ್ಯನು ತಾನು ಫಲಾಪೇಕ್ಷೆಯಿಂದ ನಡೆಸಬೇಕಾದ ಧರ್ಮವನ್ನು ಬಿಟ್ಟುಮೇಲೆ, ಶ್ರೀಹರಿಯ ಪಾದಾರವಿಂದವನ್ನು ಸ್ಮರಿಸುವುದಕ್ಕೆ ಮೊದಲೇ ಮೃತಿಹೊಂದಿದರೂ ಅವನಿಗೆ ಅದರಿಂದ ಕೆಡುಕುಗಳೇನೂ ಉಂಟಾಗಲಾರದು. ಹರಿಚರಣಸ್ಮರಣೆ ಇಲ್ಲದೆ ತನ್ನ ಧರ್ಮಗಳನ್ನೇ ಚೆನ್ನಾಗಿ ನಡೆಸುತ್ತಿದ್ದವನಿಗೂಕೂಡ, ಯಾವ ವಿಧವಾದ ಶ್ರೇಯಸ್ಸೂ ಕೈಗೂಡದು. ಮೇಲಿನ ಬ್ರಹ್ಮಲೋಕಾದಿಗಳಲ್ಲಿಯೂ, ಕೆಳಗೆಪಾತಾಳಲೋಕಾದಿಗಳಲ್ಲಿಯೂತೊಳಲುತ್ತಿರುವ ಜೀವಗಳಿಗೆ, ಪರಬ್ರಹ್ಮಾನಂದರೂಪವಾದ ಮೋಕ್ಷಸುಖವು ಭಗವದ್ಭಕ್ತಿಯಿಂದ ಹೊರತು ಬೇರೆಯಾವ ಉಪಾಯದಿಂದಲೂ ಲಭಿಸಲಾರದು. ಆದುದರಿಂದ ನಿಪುಣ ಬುದ್ಧಿಯುಳ್ಳವರು ಅಂತವರಿಗೆ ಆ ಶಾಶ್ವತಸುಖವನ್ನು ಪಡೆಯುವುದಕ್ಕೆ ಬೇಕಾದ ಉಪಾಯವನ್ನು (ಭಕ್ತಿಯನ್ನು) ತಿಳಿಸುವುದಕ್ಕಾಗಿಯೇ ಪ್ರಯತ್ನಿಸಬೇಕು. ಇದೇ ಲೋಕೋಪಕಾರವಲ್ಲದೆ ಬೇರೆಯಲ್ಲವು. ವಿಷಯಸುಖಗಳನ್ನು ಯಾವ ಉಪಾಯಾಂತರದಿಂದಲಾದರೂ ಸಾಧಿಸಬಹುದು. ದುಃಖವೆಂಬುದನ್ನು ನಾವು ಕೋರದಿದ್ದರೂ ಅದು ಪೂರ್ವಕರ್ಮಗಳಿಂದ ತನಗೆ ತಾನೇ ಬಂದುಸೇರುವುದು. ಹಾಗೆಯೇ ವಿಷಯಸುಖವೂಕೂಡ ಕರ್ಮಾಧೀನವಾಗಿ ಬಂದುಸೇರುವುದು.

ದುರ್ಲಕ್ಷ್ಯವಾದ ವೇಗವುಳ್ಳ ಕಾಲಗತಿಯಿಂದಲೂ ಪ್ರಾಚೀನಕರ್ಮಗಳಿಂದಲೂ ಬದ್ಧರಾಗಿ ತೊಳಲುತ್ತಿರುವವರಿಗೆ, ಪ್ರಯತ್ನವಿಲ್ಲದೆಯೇ ಈ ವಿಷಯಸುಖಗಳು ಆವರಿಸಿಕೊಳ್ಳುವುವು. ಇವೆಲ್ಲವೂ ಕೇವಲದುಃಖಮಿಶ್ರವೇ ಹೊರತು ಬೇರೆಯಲ್ಲ. ಎಲೆ ಮುನೀಂದ್ರ! ಶ್ರೀಹರಿಯಲ್ಲಿ ಪರಿಪಕ್ವವಾದ ಭಕ್ತಿಯುಳ್ಳವನು, ಯಾವಾಗಲೂ ಯಾವವಿಧದಿಂದಲೂ ಸಂಸಾರವೆಂಬ ಕಟ್ಟಿನಲ್ಲಿ ಸಿಕ್ಕಿಬೀಳಲಾರನು, ಎಂದಿದ್ದರೂ ಅದನ್ನು ತಪ್ಪದೆ ಬಿಡಿಸಿಕೊಳ್ಳಬಲ್ಲನು. ಏಕೆಂದರೆ, ಒಂದಾವರ್ತಿ ಶ್ರೀಹರಿಯ ಪಾದಾರವಿಂದಗಳನ್ನು ಸ್ಮರಿಸಿದವನಿಗೆ ಅದರ ರುಚಿಯು ಚೆನ್ನಾಗಿ ತಿಳಿದಿರುವುದರಿಂದ ಬೇರೊಂದೂ ಅವನ ಮನಸ್ಸಿಗೆ ರುಚಿಸದು. "ಹಾಗಿದ್ದರೆ ಈಗ ವರ್ಣಿಸಬೇಕಾದ ಭಗವಂತನ ಗುಣಗಳಾವುವು?" ಎಂದು ಕೇಳುವೆಯಾ? ಕೊನೆ ಮೊದಲಿಲ್ಲದ ಅವೆಲ್ಲವನ್ನೂ ಹೇಳಿತಿಳಿಸಬೇಕೆಂದರೆ ನನ್ನಿಂದ ಸಾಧ್ಯವಿಲ್ಲ! ಒಂದೇ ಮಾತಿನಿಂದ ಹೇಳುವೆನು ಕೇಳು! ಯಾವನಿಂದ ಜಗತ್ತಿನ ಸೃಷ್ಟಿಸ್ಥಿತಿಸಂಹಾರಗಳು ನಡೆಯುವುವೋ ಆ ಭಗವಂತನು ತಾನೇ ಈ ಜಗತ್ತಾಗಿರುವನು. ಹಾಗಿದ್ದರೂ ಅವನು ಈ ಪ್ರಪಂಚಗಳಿಗಿಂತ ವಿಲಕ್ಷಣನಾಗಿರುವನು. ಈ ತತ್ವವನ್ನು ನೀನೂ ಚೆನ್ನಾಗಿ ತಿಳಿದೇ ಇರುವೆ. ಹಾಗಿದ್ದರೂ ನನ್ನನ್ನು ನೀನು ಪ್ರಶ್ನೆಮಾಡುದರಿಂದ ಅದರಲ್ಲಿ ಸ್ವಲ್ಪಮಾತ್ರವನ್ನು ತಿಳಿಸಿರುವೆನು. ಎಲೆ ಮಹಾತ್ಮ! ನೀನಾದರೋ ಸಮಸ್ತವಸ್ತುಗಳ ತತ್ವವನ್ನೂ ಯಥಾಸ್ಥಿತವಾಗಿ ತಿಳಿದಿರತಕ್ಕವನು. ಆದುದರಿಂದ ಪರಮಪುರುಷನಾದ ಆ ಪರಮಾತ್ಮನ ಅಂಶವನ್ನು ನಿನ್ನಲ್ಲಿಯೇ ನೀನು ತಿಳಿದುಕೊಳ್ಳಬಹುದು. ಆ ಪರಮಾತ್ಮನಿಗೆ ಕರ್ಮಾಧೀನವಾದ ಉತ್ಪತ್ತಿಯಿಲ್ಲದಿದ್ದರೂ ಲೋಕಕ್ಷೇಮಾರ್ಥವಾಗಿ ಸ್ವೇಚ್ಛೆಯಿಂದಲೇ ಹುಟ್ಟುತ್ತಿರುವನು. ಆ ಮಹಾತ್ಮನ ಜನ್ಮಗಳನ್ನೂ, ಕರ್ಮಗಳನ್ನೂ ಗುಣಗಳನ್ನೂ ನೀನು ಪ್ರಬಂಧರೂಪವಾಗಿ ತಿಳಿಸಿ ಈ ಕಾರ್ಯವನ್ನು ಮಾಡಿದಮೇಲೆಯೇ ಕೃತಕೃತ್ಯನೆನಿಸಿಕೊಳ್ಳುವೆ. ಆಗಲೇ ನಿನ್ನ ಮನಸ್ಸಿನಲ್ಲಿರುವ ಕೊರತೆಯು ಪೂರ್ಣವಾಗಿ ನೀಗುವುದು. ಲೋಕದಲ್ಲಿ ಮನುಷ್ಯನು ತನ್ನನ್ನು ಕೃತಾರ್ಥನನ್ನಾಗಿ ಮಾಡಿಕೊಳ್ಳಬೇಕೆಂದು ನಡೆಸತಕ್ಕ ಉಪವಾಸಾದಿವ್ರತಗಳೂ ವೇದಾಧ್ಯಯನವೂ ಯಜ್ಞಯಾಗಾದಿಗಳೂ, ಕೆರೆ, ಬಾವಿ, ಮುಂತಾದ ಧರ್ಮಕಾರ್ಯಗಳೂ, ಜ್ಞಾನವೂ ಇವೇ ಮೊದಲಾದ ಸತ್ಕಾರ್ಯಗಳೆಲ್ಲಕ್ಕೂ ನಿರಪಾಯವಾದ ಫಲವು ಕೈಗೂಡಬೇಕಾದರೆ ಆ ಭಗವಂತನ ಗುಣಾನುವರ್ಣನವೇ ಮುಖ್ಯಸಹಕಾರಿಯೆಂದು ತತ್ವಜ್ಞಾನಿಗಳಾದ ಹಿರಿಯರು ನಿರ್ಣಯಿಸಿರುವರು. ಇದರಲ್ಲಿ ರುಚಿಯನ್ನು ಹುಟ್ಟಿಸದ ಯಾವ ಸತ್ಕರ್ಮಗಳೂ ಉತ್ತಮಫಲವನ್ನು ಕೈಗೂಡಿಸಲಾರವು. ಇದಕ್ಕೆ ನಿದರ್ಶನವಾಗಿ ನನ್ನ ಪೂರ್ವವೃತ್ತಾಂತವನ್ನು ಹೇಳುವೆನು ಕೇಳು.

---

## ನಾರದನು ತನ್ನ ಪೂರ್ವಜನ್ಮ ಚರಿತ್ರವನ್ನು ತಿಳಿಸಿದುದು.

ಎಲೈ ವ್ಯಾಸಮುನೀಂದ್ರಾ! ನಾನು ನನ್ನ ಪೂರ್ವಜನ್ಮದಲ್ಲಿ ವೇದಾಧ್ಯಯನ ಶೀಲರಾದ ಬ್ರಾಹ್ಮಣರ ಮನೆಯಲ್ಲಿ ಕೆಲಸಮಾಡುತಿದ್ದ ಒಬ್ಬ ದಾಸಿಯ ಪುತ್ರನಾಗಿ ಹುಟ್ಟಿದೆನು. ನಾನು ಅಲ್ಲಿಯೇ ಬೆಳೆಯುತ್ತಿರುವಾಗ ಒಮ್ಮೆ ಮಳೆಗಾಲವು ಸಮೀಪಿಸಿತು. ಕೆಲವು ಸನ್ಯಾಸಿಗಳು ಚಾತುರ್ಮಾಸ್ಯದೀಕ್ಷೆಯನ್ನು ವಹಿಸಿ ಅಲ್ಲಿಂದಾಚೆಗೆ ನಾಲ್ಕುತಿಂಗಳವರೆಗೆ ಆ ವೇದವಾದಿಗಳ ಮನೆಯಲ್ಲಿಯೇ ಇರಬೇಕೆಂದೆಣಿಸಿ ಅಲ್ಲಿಗೆ ಬಂದು ಸೇರಿದರು. ಆಗ ನಾನು ಇನ್ನೂ ಬಹಳ ಬಾಲನಾಗಿದ್ದೆನು. ವೇದವಾದಿಗಳು ನನ್ನನ್ನು ಈಸನ್ಯಾಸಿಗಳಿಗೆ ಶುಶ್ರೂಷೆಯನ್ನು ಮಾಡುವುದಕ್ಕಾಗಿ ನೇಮಿಸಿದರು. ಅತಿಥಿಗಳಾಗಿ ಬಂದ ಆಸನ್ಯಾಸಿಗಳಾದರೋ ಎಲ್ಲರನ್ನೂ ಸಮದೃಷ್ಟಿಯಿಂದ ನೋಡತಕ್ಕ ಸ್ವಭಾವವುಳ್ಳವರು. ಆದುದರಿಂದ ಅವರುನನ್ನ ನಡತೆಯನ್ನು ನೋಡಿ ನನ್ನಲ್ಲಿ ಪ್ರೀತಿಯನ್ನು ತೋರಿಸುತಿದ್ದರು. ನಾನು ಇನ್ನೂ ಬಾಲ್ಯವಯಸ್ಸಿನವನಾದರೂ ಮನಶ್ಚಾಪಲ್ಯಗಳೆಲ್ಲವನ್ನೂ ಬಿಟ್ಟು, ಜಿತೇಂದ್ರಿಯನಾಗಿ, ಆಟಪಾಟಗಳಲ್ಲಿಯೂ ಅಕ್ಕರೆಯಿಲ್ಲದೆ, ಹೆಚ್ಚುಮಾತುಗಳಿಗೆಹೋಗದೆ. ಅವರುಹೇಳಿದ ಕಾರ್ಯಗಳನ್ನು ನಡೆಸುತ್ತಬಂದೆನು. ಅವರಿಗೆ ನನ್ನಲ್ಲಿ ಪೂರ್ಣಾನುಗ್ರಹವುಂಟಾಯಿತು. ನನ್ನನ್ನು ಬಹಳಪ್ರೀತಿಯಿಂದ ಕಾಣುತಿದ್ದರು. ಅವರೆಲ್ಲರೂ ಭೋಜನವಮಾಡಿದಮೇಲೆ ಮಿಕ್ಕುದನ್ನು ನನಗೆ ಕೊಡುತಿದ್ದರು. ಅದನ್ನೇ ನಾನು ಎಷ್ಟೋ ಪ್ರೀತಿಯಿಂದ ಸ್ವೀಕರಿಸಿ, ಒಂದೇ ಆವರ್ತಿ ಭೋಜನವನ್ನು ಮಾಡುತ್ತ ಅವರ ಶುಶ್ರೂಷೆಯನ್ನು ಮಾಡುತಿದ್ದೆನು. ಆ ಮಹಾತ್ಮರು ತಿಂದುಳಿಸಿದ ಉಚ್ಛಿಷ್ಟಭೋಜನದಿಂದಲೇ ನನ್ನ ಪಾಪಗಳೆಲ್ಲವೂ ನೀಗಿದುವು. ನನ್ನ ಮನಸ್ಸು ಶುದ್ಧವಾಗುತ್ತಬಂದಿತು. ಭಗವದ್ಭಕ್ತಿಯೊಂದರಲ್ಲಿಯೇ ನನ್ನ ಮನಸ್ಸಿಗೆ ಅಭಿರುಚಿಹೆಚ್ಚುತ್ತ ಬಂದಿತು. ಇದಲ್ಲದೆಆಯೋಗಿಗಳು ಪ್ರತಿದಿನವೂ ಭಗವಂತನಾದ ಶ್ರೀಕೃಷ್ಣನ ಕಥೆಗಳನ್ನು ಗಾನಮಾಡುವಾಗ ನಾನೂ ಶ್ರದ್ಧೆಯಿಂದ ಕೇಳುತಿದ್ದೆನು. ಆ ಕಥೆಗಳೆಲ್ಲವೂ ನನಗೆ ಆ ಮಹಾತ್ಮರ ಅನುಗ್ರಹಬಲದಿಂದಲೇ ಕರ್ಣರಸಾಯನರೂಪಗಳಾಗಿ ಭಗವಂತನಲ್ಲಿ ಅನುರಾಗವನ್ನು ಹೆಚ್ಚಿಸುತ್ತಬಂದಿತು. ಈ ಅಭಿರುಚಿ ಹೆಚ್ಚಿದಮೇಲೆ ನನ್ನ ಬುದ್ಧಿಯು ಆ ಪರಮಾತ್ಮನೊಬ್ಬನಲ್ಲಿಯೇ ಸ್ಥಿರವಾಗಿ ನೆಲಸಿತು. ಇದರಮೇಲೆ ಜೀವಸ್ವರೂಪವೇನೆಂಬುದು ವ್ಯಕ್ತವಾಯಿತು. ಚಕ್ರದಬಳಿಗೆ ಅರವೂ, ಅದಕ್ಕೆನಾಭಿಯೂ ಆಧಾರವಾಗಿರುವಂತೆ, ಕಾರ್ಯಕಾರಣಾತ್ಮಕವಾದ ಜಗತ್ತಿಗೆ ಈಜೀವಾತ್ಮನೂ ಆಜೀವಾತ್ಮನಿಗೆ ಪರಬ್ರಹ್ಮನೂ ಆಧಾರವಾಗಿರುವುದೆಂಬ ಜ್ಞಾನವು ಹುಟ್ಟಿತು. ಹೀಗೆ ಕಾರ್ಯಕಾರಣಾತ್ಮಕವಾದ ಜಗತ್ತನ್ನು ನಾನು ಧರಿಸಿರುವುದೂ ನನ್ನನ್ನು ಸಂಬಂಧಿಸಿದ ಪ್ರಕೃತಿ

ಯಿಂದುಂಟಾದುದೇ ಹೊರತು ಸ್ವತಸಿದ್ಧವಲ್ಲವೆಂಬುದನ್ನೂ ಕಂಡುಕೊಂಡೆನು. ಹೀಗೆ ವರ್ಷಾಕಾಲಶರತ್ಕಾಲಗಳೆಂಬ ನಾಲ್ಕುತಿಂಗಳು ಕಳೆಯುವವರೆಗೂ ನಾನು ಪ್ರತಿದಿನವೂ ಹರಿಕೀರ್ತನೆಯನ್ನು ಕೇಳುತ್ತಿರಲು, ಆಗ ನನ್ನಲ್ಲಿ ರಜಸ್ತಮೋಗುಣಗಳನ್ನು ನೀಗಿಸತಕ್ಕ ಭಕ್ತಿಯು ಸ್ಥಿರವಾಗಿನೆಲೆಗೊಂಡಿತು. ನಾನು ಕೇವಲಬಾಲನಾಗಿದ್ದರೂ, ಈ ಭಕ್ತಿಯು ಹುಟ್ಟಿದಮೇಲೆ ಬಹಳವಿನೀತನಾಗಿಯೂ, ಶ್ರದ್ಧೆಯುಳ್ಳವನಾಗಿಯೂ, ಜಿತೇಂದ್ರಿಯನಾಗಿಯೂ, ಆಸನ್ಯಾಸಿಗಳನ್ನನುವರ್ತಿಸುತಿದ್ದೆನು. ನನ್ನ ಪಾಪಗಳೆಲ್ಲವೂ ನೀಗಿದುವು. ಆಯೋಗಿಗಳು ದಯಾಸ್ವಭಾವವುಳ್ಳವರಾದುದರಿಂದ ಚಾತುರ್ಮಾಸ್ಯವನ್ನು ಮುಗಿಸಿಕೊಂಡು ಆ ಸ್ಥಳವನ್ನು ಬಿಟ್ಟುಹೋಗುವಾಗ, ಅನುಗ್ರಹಪೂರ್ವಕವಾಗಿನನ್ನನ್ನು ಕರೆದು ಭಗವಂತನು ತಾನಾಗಿಯೇ ಉಪದೇಶಿಸಿದಅತಿರಹಸ್ಯವಾದ ಜ್ಞಾನವನ್ನು ನನಗೂ ಉಪದೇಶಿಸಿದರು. * ಆ ಜ್ಞಾನದಿಂದ ನಾನು ಸೃಷ್ಟಿಕರ್ತನಾದ ಭಗವಂತನ ತ್ರಿಗುಣಾತ್ಮಕವಾದ ಪ್ರಕೃತಿಮಹಿಮೆಯನ್ನು ತಿಳಿದುಕೊಂಡೆನು. ಎಲೈ ಮಹರ್ಷಿಯೆ! ಈ ವಿಧವಾದ ಜ್ಞಾನದಿಂದಲೇ ಜ್ಞಾನಿಗಳು ಭಗವತ್ಸಾನ್ನಿಧ್ಯವನ್ನು ಹೊಂದುವರು. ನನಗೆ ಆ ವಿಧವಾದ ಭಕ್ತಿಯು ಹುಟ್ಟುವುದಕ್ಕೆ ಹರಿಕೀರ್ತನ ಶ್ರವಣವೂ, ಆ ಮಹಾತ್ಮರ ಸೇವೆಯೂ ಕಾರಣಗಳಾದುವು. ಭಗವಂತನ ಗುಣಗಳನ್ನು ಕೇಳುವುದರಿಂದ ಭಕ್ತಿಯು ಹುಟ್ಟುವುದರಲ್ಲಿ ಯಾವ ಸಂದೇಹವೂ ಇಲ್ಲ. ಮುನೀಂದ್ರಾ! ನಿನಗೆ ಭಗವದ್ಭಕ್ತಿಯಿಂದುಂಟಾಗತಕ್ಕ ಲಾಭವು ತಿಳಿಯಿತಲ್ಲವೆ! ಈಶ್ವರಾರ್ಪಿತವಾಗಿ ಮಾಡಿದ ಕರ್ಮಗಳು ಭಕ್ತಿಯೋಗವನ್ನು ಹುಟ್ಟಿಸಿ, ಆ ಮೂಲಕವಾಗಿ ತಾಪತ್ರಯನಿವೃತ್ತಿಗೆ ಕಾರಣವಾಗುವುದು. ಧರ್ಮಾರ್ಥ ಕಾಮುಗಳನ್ನುದ್ದೇಶಿಸಿ ಮಾಡಿದ ಕರ್ಮಗಳು, ತಾಪತ್ರಯಹೇತುವಾದ ಸಂಸಾರದಲ್ಲಿಯೇ ಸಿಕ್ಕಿಸಿ ನರಳಿಸುವುದು. ಈ ಸಂಗತಿಯು ನಿನಗೆ ಮೊದಲೇ ತಿಳಿದಿರುವುದಲ್ಲವೆ? ಶ್ರುತಿ ಸ್ಮೃತಿ ಮೊದಲಾದುವೂಕೂಡ ಈ ಅರ್ಥವನ್ನೇ ಸೂಚಿಸುವುವು. ರೋಗಕಾರಣಗಳಾದ ವಸ್ತುಗಳನ್ನೇ ಔಷಧವೆಂದು ಕುಡಿಸಿದಮಾತ್ರಕ್ಕೆ ರೋಗಗಳು ಬಿಟ್ಟುಹೋಗುವುವೇ? ಎಂದಿಗೂ ಹೋಗಲಾರವು! ಅಪಥ್ಯವಸ್ತುಗಳು ರೋಗಕಾರಣಗಳಾಗುವಂತೆಯೇ,ಮನುಷ್ಯರ ಕರ್ಮಯೋಗಗಳು ಫಲೋದ್ದೇಶದಿಂದ ಕೂಡಿದುದಾಗಿದ್ದರೆ ಅವುಸಂಸಾರ ಹೇತುವಾಗದೆಬಿಡವು. ಮತ್ತು ಅವು ಭಗವದರ್ಪಿತಗಳಲ್ಲದ ಪಕ್ಷದಲ್ಲಿ ಆತ್ಮನಾಶಕ್ಕೂ ಕಾರಣಗಳಾಗುವುವು. ರೋಗ

* ಇಲ್ಲಿ ಅರ್ಥಪಂಚಕಜ್ಞಾನವೇ ಅವರಿಂದುಪದಿಷ್ಟವಾದ ಜ್ಞಾನವೆಂದು ಗ್ರಾಹ್ಯವು. ಮುಮುಕ್ಷುಗಳು ತಿಳಿಯಬೇಕಾದ ಸ್ವಸ್ವರೂಪ ಪರಸ್ವರೂಪ ಉಪಾಯಸ್ವರೂಪ ವಿರೋಧಿಸ್ವರೂಪ, ಫಲಸ್ವರೂಪವೆಂಬಿವುಗಳ ಜ್ಞಾನವೇ ಅರ್ಥಪಂಚಕ ಜ್ಞಾನವು.

ಕಾರಣಗಳಾದ ದ್ರವ್ಯಗಳೇ ಬೇರೆಕೆಲವು ವಸ್ತುಗಳ ಸಂಬಂಧದಿಂದ ಔಷಧಸಮಾನಗಳಾಗಿ ರೋಗವನ್ನು ಶಮನಮಾಡುವುದಕ್ಕೆ ಸಮರ್ಥಗಳಾಗುವಂತೆ, ಈ ಧರ್ಮಾರ್ಥಕಾಮಸಾಧಕಗಳಾದ ಕರ್ಮಗಳೇ ಭಗವದರ್ಪಿತಗಳಾದ ಪಕ್ಷದಲ್ಲಿ ಸಂಸಾರವನ್ನು ನೀಗಿಸುವುವು. "ಹಾಗಿದ್ದರೆ ಭಗವದರ್ಪಿತಗಳಾದ ಕರ್ಮಗಳೆಲ್ಲವು ಸ್ವತಂತ್ರವಾಗಿಯೇ ಮೋಕ್ಷಪ್ರದವಾಗಬಾರದೆ? ಅವು ಭಕ್ತಿಯನ್ನು ಹುಟ್ಟಿಸಿ, ಆ ಮೂಲಕವಾಗಿಯೇ ಮೋಕ್ಷಪ್ರದವೆಂಬುದೇಕೆ?" ಎಂದರೆ, ಅದಕ್ಕೂ ಸಮಾಧಾನವನ್ನು ಹೇಳುವೆನು ಕೇಳು. ನಮ್ಮ ಶರೀರವು ಬಿದ್ದುಹೋಗುವವರೆಗೂ ನಾವು ಭಗವಂತನಿಗೆ ಸಂತೋಷಕರಗಳಾದ ಕರ್ಮಗಳನ್ನು ನಡೆಸುತ್ತಿರಬೇಕು. ಆಗಲೇ ಭಗವಂತನಿಗುಂಟಾದ ಅಸಂತೋಷವು ಭಕ್ತಿಯೋಗಕ್ಕೆ ತಕ್ಕ ಪ್ರತಿಬಂಧಕಗಳನ್ನು ನೀಗಿಸುವುದಕ್ಕೆ ಸಮರ್ಥಗಳಾಗುವುವು. ಆ ಪ್ರತಿಬಂಧಕಗಳು ನೀಗಿದಮೇಲೆ ಭಕ್ತಿಯು ಹುಟ್ಟುವುದು. ಕರ್ಮಗಳಿಗೂ ಭಕ್ತಿಗೂ ಇರುವ ಸಂಬಂಧವು ಈರೀತಿಯಾದುದು. ಈ ಭಕ್ತಿಯೋಗವು ಸಹಕಾರಿಯಾಗದಿದ್ದ ಪಕ್ಷದಲ್ಲಿ ಮೋಕ್ಷವು ಲಭಿಸಲಾರದು * ಭಗವದ್ವಚನಾನುಸಾರವಾಗಿ ಮಾಡುವ ವರ್ಣಾಶ್ರಮಾನುಗುಣ ಕರ್ಮಗಳು ಮಾತ್ರವೇ ಸಾಧನವಲ್ಲ. ಆತನ ಗುಣಾನುಸ್ಮರಣಗಳೂ, ಆತನ ನಾಮಕೀರ್ತನವೂ ಸಹಕಾರಿಗಳಾಗುವುವು. ಇದಕ್ಕಾಗಿ ಜ್ಞಾನಿಗಳು ಈ ಕಾರ್ಯಗಳನ್ನು ಅನವರತವೂ ಶ್ರದ್ಧೆಯಿಂದ ನಡೆಸುತ್ತಿರುವರು. ಲೋಕದಲ್ಲಿ ಯಾವನು ಆ ಪರಮಾತ್ಮನನ್ನುದ್ದೇಶಿಸಿ "ಓಂಕಾರಸ್ವರೂಪನಾದ ನಿನಗೆ ನಮಸ್ಕಾರವು! ಷಡ್ಗುಣೈಶ್ವರ್ಯಸಂಪನ್ನನಾದ ನಿನಗೆ ನಮಸ್ಕಾರವು! ವಾಸುದೇವನಿಗೆ ನಮಸ್ಕಾರವು! ಪ್ರದ್ಯುಮ್ನನಿಗೆ ನಮಸ್ಕಾರವು! ಅನಿರುದ್ಧನಿಗೆ ನಮಸ್ಕಾರವು! ಸಂಕರ್ಷಣನಿಗೆ ನಮಸ್ಕಾರವು" ಎಂದು ಮಂತ್ರಶರೀರಕನಾಗಿಯೂ, ಯಾಗಾರಾಧ್ಯನಾಗಿಯೂ, ಇರುವ ಪರಮಪುರುಷನನ್ನು ಧ್ಯಾನಿಸುತ್ತ, ಆತನ ದಿವ್ಯನಾಮಗಳನ್ನು ಬಾಯಿಂದ ನುಡಿದು, ಆತನನ್ನು ಭಕ್ತಿಯಿಂದ ಪೂಜಿಸುವನೋ, ಆತನೇ ಉತ್ತಮಜ್ಞಾನಿಯೆನಿಸುವನು. ಇದರಿಂದ ಶೀಘ್ರದಲ್ಲಿಯೇ ಭಕ್ತಿಯೂ ಲಭ್ಯವಾಗುವುದು. ವ್ಯಾಸಮುನೀಂದ್ರಾ! ನಾನೂ ಇದೇರೀತಿಯಲ್ಲಿ ಆ ಭಗವದಾಜ್ಞೆಯನ್ನು ತಪ್ಪದೆ ಅನುಷ್ಠಿಸುವುದನ್ನುನೋಡಿ ಶ್ರೀವಾಸುದೇವನು ಪ್ರಸನ್ನನಾಗಿ, ನನಗೆ ಆ ವಿಧವಾದ ಭಕ್ತಿಯೋಗವನ್ನೂ ಜ್ಞಾನವನ್ನೂ, ವೇದಋಷಿಯೆನಿಸಿಕೊಳ್ಳುವುದಕ್ಕೆ ತಕ್ಕ ಸಾಮರ್ಥ್ಯವನ್ನೂ ಅನುಗ್ರಹಿಸಿದನು. ಎಲೈ ಕೀರ್ತಿಮಂತನೆ! ಈಗಲೂ, ನೀನು ಆ ಭಗವಂತನ ಪುಣ್ಯಚರಿತ್ರವನ್ನೇ ಪ್ರಬಂಧರೂಪವಾಗಿ ರಚಿಸಿ ಅದರಿಂದ ಜನರಿಗೆ ಪರಮಾತ್ಮ ವಿಷಯ

* ಇಲ್ಲಿ "ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್। ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ" ಎಂಬುದೇ ಭಗವದ್ವಚನವು.

ವಾಗಿ ತಿಳಿಸಬೇಕಾದ ವಿಷಯಗಳಲ್ಲಿ ಯಾವುದನ್ನೂ ಬಿಡದೆ ಸಂಪೂರ್ಣವಾಗಿ ತಿಳಿಸು ತಾಪತ್ರಯದಲ್ಲಿ ಸಿಕ್ಕಿ ನರಳುವವರಿಗೆ ಆ ಕಷ್ಟಗಳನ್ನು ನೀಗಿಸಿ ಸಂತೋಷವು ಹುಟ್ಟುವಂತೆ ಮಾಡು. ಬೇರೆ ಯಾವ ಉಪಾಯದಿಂದಲೂ ಇದು ಸಾಧ್ಯವಲ್ಲ. ನೀನು ರಚಿಸತಕ್ಕ ಗ್ರಂಥವು ಎಲ್ಲರಿಗೂ ಆದರವನ್ನು ಹುಟ್ಟಿಸುವಂತಿರಬೇಕು. ಅಂತಹ ಪ್ರಬಂಧವನ್ನು ರಚಿಸು ?" ಎಂದನು. ಇಲ್ಲಿಗೆ ಐದನೆಯ ಅಧ್ಯಾಯವು.

---

{ ನಾರದನು ತಾನು ವನಪ್ರವೇಶಮಾಡಿದುದನ್ನೂ, ತನಗೆ ಶ್ರೀಮನ್ನಾರಾಯಣನು ಪ್ರತ್ಯಕ್ಷನಾದುದನ್ನೂ ವ್ಯಾಸನಿಗೆ ತಿಳಿಸಿ, ಅವನ ಅನುಮತಿಯನ್ನು ಪಡೆದು ಹಿಂತಿರುಗಿ ಹೋದುದು }

ನಾರದನು ತನ್ನ ಪೂರ್ವಜನ್ಮದ ವೃತ್ತಾಂತವನ್ನು ಹೇಳಿದಮೇಲೆ, ತಿರುಗಿ ವ್ಯಾಸನು ಅವನನ್ನು ಕುರಿತು, "ಓ ಮುನೀಂದ್ರಾ! ನಿನಗೆ ಜ್ಞಾನೋಪದೇಶವನ್ನು ಮಾಡಿದ ಸನ್ಯಾಸಿಗಳು ನಿನ್ನನ್ನು ಬಿಟ್ಟುಹೋಗುವಾಗ, ನೀನು ಇನ್ನೂ ಬಹಳ ಸಣ್ಣ ಯಸ್ಸಿನವನಾಗಿದ್ದೆಯಲ್ಲವೆ? ಆಮೇಲೆ ನೀನೇನು ಮಾಡಿದೆ? ಅವರು ಹೊರಟು ಹೋದಂದಿನಿಂದಾಚೆಗೆ, ನೀನು ಹೇಗೆ ಕಾಲವನ್ನು ಕಳೆಯುತಿದ್ದೆ? ಅವಸಾನಕಾಲದಲ್ಲಿ ಆ ಪೂರ್ವಶರೀರವನ್ನು ಯಾವ ರೀತಿಯಲ್ಲಿ ತ್ಯಜಿಸಿದೆ? ಆ ಪೂರ್ವಜನ್ಮವೃತ್ತಾಂತವನ್ನು ಇನ್ನೂ ನೀನು ಮರೆಯದಿರುವುದು ಹೇಗೆ? ಕಾಲವಶದಿಂದ ಇವೆಲ್ಲವೂ ನಾಶವಾಗುತ್ತಿರಬೇಕಲ್ಲವೆ? ಅಂತಹಕಾಲವೂ ಕೂಡ ನಿನಗೆ ಪೂರ್ವಜನ್ಮಸ್ಮರಣಶಕ್ತಿಯನ್ನು ಕೆಡಿಸದಿದ್ದುದು ಹೇಗೆ?" ಎಂದನು. ಅದಕ್ಕಾನಾರದನು "ವ್ಯಾಸಮುನೀಂದ್ರಾ! ಅದರಿಂದಾಚೆಗೆ ನಾನು ನಡೆಸಿದ ಕಾರ್ಯವನ್ನು ಹೇಳುವೆನು ಕೇಳು! ನನ್ನ ತಾಯಿಗೆ ನಾನೊಬ್ಬನೇ ಮಗನು. ಆಕೆಯು ಸ್ತ್ರೀಸ್ವಭಾವಕ್ಕೆ ತಕ್ಕಂತೆ ಏನೂ ತಿಳಿದವಳಲ್ಲ. ಮತ್ತೊಬ್ಬರ ಮನೆಯಲ್ಲಿ ಕೆಲಸಕ್ಕೆ ಸೇರಿ ಪರಾಧೀನಳಾಗಿದ್ದರೂ ಬೇರೆಯೂರೂ ದಿಕ್ಕಿಲ್ಲದ ನನ್ನನ್ನು ಬಹಳ ಪ್ರೇಮದಿಂದ ಕಾಣುತಿದ್ದಳು. ಆದರೇನು? ಆಕೆಯು ನನ್ನ ಯೋಗಕ್ಷೇಮವನ್ನು ನೋಡಿಕೊಳ್ಳುವುದರಲ್ಲಿ ಆತ್ಯಾತುರವುಳ್ಳವಳಾಗಿದ್ದರೂ, ತಾನು ಕೇವಲಪರಾಧೀನೆಯಾಗಿ, ಸ್ವಲ್ಪವೂ ಸ್ವಾತಂತ್ರ್ಯವಿಲ್ಲದೆ ಮರದಬೊಂಬೆಯಂತೆ ಯಜಮಾನನುಆಡಿಸಿದಹಾಗೆಆಡಬೇಕಾಗಿದ್ದುದರಿಂದ,

ನನ್ನ ಪೋಷಣೆಯನ್ನು ಸರಿಯಾಗಿ ನಡೆಸುವುದಕ್ಕೂ ಆವಳಿಗೆ ಅವಕಾಶವಿರಲಿಲ್ಲ. ಆಗನಾನು ಐದುವಯಸ್ಸಿನಬಾಲನಾಗಿದ್ದೆನು. ಅಷ್ಟು ಸಣ್ಣ ವಯಸ್ಸಿನವನಾದುದರಿಂದ ಕಾಲದೇಶಸ್ವಭಾವಗಳನ್ನು ತಿಳಿದುಕೊಳ್ಳುವಷ್ಟು ಜ್ಞಾನವೂ ನನಗೆ ಹುಟ್ಟಿರಲಿಲ್ಲ. ಈ ಕಾರಣದಿಂದಲೂ, ಸಾಕಿದ ತಾಯಿಯನ್ನು ಬಿಟ್ಟುಹೋಗುವುದು ಯುಕ್ತವಲ್ಲ ವೆಂದು ನನಗೆ ತೋರಿದುದರಿಂದಲೂ, ನಾನು ಬೇರೊಂದು ಸ್ಥಳಕ್ಕೂ ಹೋಗದೆ, ಆ ನನ್ನ ತಾಯಿಯ ದೇಹಾವಸಾನವನ್ನು ನಿರೀಕ್ಷಿಸುತ್ತ, ಆ ಬ್ರಾಹ್ಮಣರ ಮನೆ ಯಲ್ಲಿಯೇ ವಾಸಮಾಡುತಿದ್ದೆನು. ಹೀಗಿರುವಲ್ಲಿ ಒಂದಾನೊಂದುರಾತ್ರಿ ನನ್ನ ತಾಯಿಯು ಆ ಬ್ರಾಹ್ಮಣನ ಮನೆಯ ಗೋವುಗಳನ್ನು ಹಾಲುಕರೆಯುವುದಕ್ಕಾಗಿ ಹೊರಟಾಗ, ಆಕಸ್ಮಾತ್ತಾಗಿ ಒಂದುಸರ್ಪವನ್ನು ತುಳಿದುಬಿಟ್ಟಳು. ಕಾಲಚೋದಿತ ವಾಗಿ ಬಂದ ಆ ಸರ್ಪವು, ಅವಳ ಕಾಲನ್ನು ಕಚ್ಚಿಬಿಟ್ಟಿತು. ಒಡನೆಯೇ ವಿಷವೇರಿ ನನ್ನ ತಾಯಿಯು ಪ್ರಾಣವನ್ನು ಬಿಟ್ಟಳು. ಇದನ್ನು ನೋಡಿಯೂ ನನಗೆ ಸ್ವಲ್ಪವೂ ವ್ಯಸನವು ಹುಟ್ಟಲಿಲ್ಲ. ಮಾತೃಮರಣವನ್ನು ಭಗವದನುಗ್ರಹವೆಂದೆಣಿಸಿ, ಆ ಕ್ಷಣವೇ ಆಸ್ಥಳವನ್ನು ಬಿಟ್ಟು ಉತ್ತರದಿಕ್ಕಿನ ಕಡೆಗೆ ಹೊರಟೆನು. ದಾರಿಯಲ್ಲಿ ಸಸ್ಯಸಮೃದ್ಧಗಳಾದ ಅನೇಕ ದೇಶಗಳನ್ನೂ, ಅಂದವಾದ ಪಟ್ಟಣಗಳನ್ನೂ, ಗ್ರಾಮ ಗಳನ್ನೂ, ಹಳ್ಳಿಗಳನ್ನೂ, ರತ್ನಪೂರ್ಣಗಳಾದ ಗಣಿಗಳನ್ನೂ, ವೈರಿಡತಕ್ಕವರಿಗೆ ವಾಸಸ್ಥಾನಗಳಾದ ಪ್ರದೇಶಗಳನ್ನೂ, ಬೇಡರ ಗುಡಿಸಲುಗಳನ್ನೂ, ಹೂತೋಟ ಗಳನ್ನೂ, ಅಂದವಾದ ಅರಣ್ಯಗಳನೂ, ನೋಡುತ್ತ ಬಂದೆನು. ಗೈರಿಕಾದಿಧಾತು ಗಳಿಂದಲೂ, ಕಾಡಾನೆಗಳು ಮುರಿದು ಕೆಡಹಿದ ವೃಕ್ಷಗಳಿಂದಲೂ ಒಪ್ಪುವ ಪರ್ವತ ಗಳನ್ನೂ, ತಿಳಿನೀರಿನಿಂದಲೂ, ತಾವರೆ ಮೊದಲಾದ ನೀರುಹೂಗಳಿಂದಲೂ ಶೋಭಿತವಾಗಿ, ದೇವತೆಗಳಿಗೆ ಕ್ರೀಡಾಸ್ಥಾನವೆನಿಸಿಕೊಂಡು, ವಿಚಿತ್ರಧ್ವನಿಯುಳ್ಳ ಪಕ್ಷಿಗಳಿಂದಲೂ, ಮೇಲೆಸುತ್ತುತ್ತಿರುವ ಭ್ರಮರಸಮೂಹಗಳಿಂದಲೂ ಮನೋಹರ ಗಳಾದ ಸರೋವರಗಳನ್ನೂ ದಾಟಿದೆನು. ನಾನುಹೀಗೆ ಏಕಾಕಿಯಾಗಿ ಬರುತ್ತಿರು ವಾಗ, ನೊದೆಗಳಿಂದಲೂ ಬಿದಿರುಮೆಳೆಗಳಿಂದಲೂ ದರ್ಭೆ ಮೊದಲಾದ ತೃಣ ವಿಶೇಷಗಳಿಂದಲೂ, ಕೀಚಕಗಳೆಂಬ ಬಿದಿರುಗಳಿಂದಲೂ ದಟ್ಟವಾಗಿ ತುಂಬಿದ ಒಂದು ಮಹಾರಣ್ಯವನ್ನು ಕಂಡೆನು. ನೋಡುವಾಗಲೇ ಭಯವನ್ನು ಹುಟ್ಟಿಸು ವಂತೆ ಆ ಅಡವಿಯು ಅತ್ಯಂತದುರ್ಗಮವಾಗಿದ್ದಿತು. ಕ್ರೂರಸರ್ಪಗಳೂ, ಗೂಬೆ ಗಳೂ, ನರಿಗಳೂ, ನಾನಾಮುಖವಾಗಿ ಸುತ್ತುತ್ತಿದ್ದುವು. ಹೀಗೆ ಅತ್ಯಂತಭಯಂಕರ ವಾದ ಆ ಕಾಡನ್ನು ಪ್ರವೇಶಿಸಿ, ಅಲ್ಲಿ ಸ್ವಲ್ಪದೂರದವರೆಗೆ ಹೋಗುವುದರೊಳಗಾಗಿ, ಮಾರ್ಗಾಯಾಸದಿಂದ ಬಹಳವಾಗಿ ಬಳಲಿಹೋದೆನು. ನನ್ನ ಇಂದ್ರಿಯಗಳೇ ನನಗೆ

ಸ್ವಾಧೀನತಪ್ಪಿದುವು. ಹಸಿವುಬಾಯಾರಿಕೆಗಳು ಮೇಲೆಮೇಲೆ ಹೆಚ್ಚಿದುವು ಮುಂದೆ ದಾರಿನಡೆಯುವುದಕ್ಕೂ ಸಾಧ್ಯವಿಲ್ಲದೆ ಹೋಯಿತು. ಸಮೀಪದಲ್ಲಿದ್ದ ಒಂದು ನದಿಯಲ್ಲಿಳಿದು ಸ್ನಾನಮಾಡಿ ಸ್ವಲ್ಪಹೊತ್ತಿನವರೆಗೆ ವಿಶ್ರಾಂತಿಯನ್ನು ತೆಗೆದು ಕೊಂಡೆನು. ದಾಹವಾರುವವರೆಗೆ ಆನೀರನ್ನು ಕುಡಿದು ಬಾಯಾರಿಕೆಯನ್ನೂ ತೀರಿಸಿಕೊಂಡೆನು ಆಜಲಪಾನದಿಂದಲೇ ನನ್ನ ಹಸಿವೂ ಸ್ವಲ್ಪಮಟ್ಟಿಗೆ ಅಡಗಿತು. ಅಲ್ಲಿಂದೆದ್ದು ಮುಂದೆಹೋಗುವಷ್ಟರಲ್ಲಿ, ನಿರ್ಮಾನುಷ್ಯವಾದ ಆ ಮಹಾರಣ್ಯದ ನಡುವೆ ಒಂದು ಅಶ್ವತ್ಥವೃಕ್ಷದ ಕೆಳಗೆ ಬಂದುಸೇರಿ, ಸನ್ಯಾಸಿಗಳ ಉಪದೇಶಕ್ರಮ ವನ್ನನುಸರಿಸಿ ಜೀವಾತ್ಮನಲ್ಲಿ ಅಂತರಾತ್ಮನಾದ ಪರಮಾತ್ಮನನ್ನು ಮನಸ್ಸಿನಿಂದಲೇ ಧ್ಯಾನಿಸತೊಡಗಿದೆನು. ಹೀಗೆನಾನು ಅಭ್ಯಾಸದಿಂದ ಸ್ವಾಧೀನಪಡಿಸಿಕೊಂಡ ನನ್ನ ಮನಸ್ಸಿನಿಂದ ಭಗವಂತನ ಚರಣಾರವಿಂದಗಳನ್ನು ಧ್ಯಾನಿಸುತ್ತಿರುವಾಗ, ಭಕ್ತಿ ಪಾರವಶ್ಯದಿಂದ ನನ್ನ ಕಣ್ಣುಗಳಲ್ಲಿ ಆನಂದಬಾಷ್ಪಗಳು ತುಳುಕಿದುವು. ಮೆಲ್ಲ ಮೆಲ್ಲಗೆ ಶ್ರೀಮನ್ನಾರಾಯಣನು ನನ್ನ ಹೃದಯದಲ್ಲಿಯೇ ಕಾಣಿಸಿದನು. ಆ ಭಗ ವಂತನಲ್ಲಿರುವ ಪ್ರೇಮಾತಿಶಯದಿಂದ ನನ್ನ ದೇಹವು ಪುಲಕಿತವಾಯಿತು. ಆನಂದ ರಸಪ್ರವಾಹದಲ್ಲಿ ಮುಳುಗಿದಂತಾದೆನು. ಎಲೈ ಮುನೀಂದ್ರನೇ! ಆ ಸಮಯ ದಲ್ಲಿ ನನ್ನ ದೇಹವನ್ನೂ, ನನ್ನ ಆತ್ಮವನ್ನೂ ನಾನೇ ಮರೆತುಬಿಟ್ಟೆನು. ಇಷ್ಟ ರಲ್ಲಿಯೇ ನನಗೆ ಮೊದಲು ಗೋಚರವಾಗಿದ್ದ ಆಭಗವಂತನ ದಿವ್ಯರೂಪವು ಅದೃಶ್ಯ ವಾಯಿತು. ಅತಿಮನೋಹರವಾಗಿಯೂ, ಸಮಸ್ತದುಃಖಗಳನ್ನು ನೀಗಿಸತಕ್ಕ ದಾಗಿಯೂ ಇದ್ದ ಆ ದಿವ್ಯರೂಪವನ್ನು ತಿರುಗಿನೋಡಬೇಕೆಂದು ಎಷ್ಟೋವಿಧದಿಂದ ಪ್ರಯತ್ನಿಸಿದರೂ ನನಗೆ ಸಾಧ್ಯವಿಲ್ಲದೆಹೋಯಿತು. ಮನಸ್ಸು ದುಃಖದಿಂದ ತತ್ತಳಿಸಿತು. ಆ ದುಃಖದಿಂದ ಮೈಮರೆತು, ಥಟ್ಟನೆ ಮೇಲೆದ್ದುನಿಂತೆನು. ಹೇಗಾ ದರೂ ಆ ದಿವ್ಯರೂಪವನ್ನು ಮತ್ತೊಮ್ಮೆನೋಡಬೇಕೆಂಬ ಕುತೂಹಲದಿಂದ ತತ್ತಳಿ ಸುತ್ತ, ಮನಸ್ಸನ್ನು ಹೃದಯಕಮಲದಲ್ಲಿ ಸ್ಥಿರವಾಗಿ ನೆಲೆಗೊಳಿಸಿ ಧ್ಯಾನಿಸಿದೆನು. ಆದರೂ ಆ ರೂಪವು ತಿರುಗಿ ನನಗೆ ಗೋಚರಿಸಲಿಲ್ಲ. ವಿಷಯಾತುರನಾದ ಮನುಷ್ಯ ನಂತೆ ಮನಸ್ಸಿಗೆ ನೆಮ್ಮದಿಯಿಲ್ಲದೆ ಕುದಿಯುತಿದ್ದೆನು. ಹೀಗೆ ನಿರ್ಮಾನುಷವಾದ ಆ ಅಡವಿಯಲ್ಲಿ ಭಗವಂತನನ್ನು ಸಾಕ್ಷಾತ್ಕರಿಸುವುದಕ್ಕಾಗಿ, ನಾನು ಬಾರಿಬಾರಿಗೂ ಅನೇಕಪ್ರಯತ್ನಗಳನ್ನು ಮಾಡುತ್ತಿರುವಾಗಲೇ, ವೇದವಾಕ್ಯಗಳಿಗೂ ಅಗೋಚರ ನಾದ ಭಗವಂತನು, ಆಕಾಶಮಾರ್ಗದಿಂದ ಗಂಭೀರವಾಗಿಯೂ, ಇಂಪಾಗಿಯೂ ಇರುವ ಮಾತಿನಿಂದ ನನ್ನದುಃಖವೆಲ್ಲವನ್ನೂ ನೀಗಿಸುವಂತೆ ಹೀಗೆಂದು ಹೇಳಿದನು. "ನಾರದಾ! ನೀನು ಎಷ್ಟೆಷ್ಟುಪ್ರಯತ್ನಗಳನ್ನು ಮಾಡಿದರೂ, ಈ ಜನ್ಮದಲ್ಲಿ

ನನ್ನನ್ನು ನೋಡುವುದಕ್ಕೆ ಶಕ್ತನಾಗಲಾರೆ! ನನ್ನ ದರ್ಶನಕ್ಕೆ ಪ್ರತಿಬಂಧಕಗಳಾದ ಪುಣ್ಯಪಾಪಕರ್ಮಗಳೆಂಬ ಕಟ್ಟಿನಲ್ಲಿ ಸಿಕ್ಕಿಬಿದ್ದವರಿಗೆ ನಾನು ಗೋಚರಿಸಲಾರೆನು. ಅಂತಹ ಕುತ್ಸಿತಯೋಗಿಗಳಲ್ಲಿ ನೀನೂ ಒಬ್ಬನಾಗಿರುವೆ. ನಾರದಾ! ಹಾಗಿದ್ದರೂ ಆರಂಭದಲ್ಲಿ ನಿನಗೆ ನಾನು ಒಂದಾವರ್ತಿ ಕಾಣಿಸಿಕೊಂಡುದಕ್ಕೆ ಕಾರಣವನ್ನು ಹೇಳುವೆನು ಕೇಳು? ಒಂದಾವರ್ತಿ ನನ್ನನ್ನು ಸಾಕ್ಷಾತ್ಕರಿಸಿದ ಮನುಷ್ಯನು ನನ್ನ ರೂಪವನ್ನು ಎಂದಿಗೂ ಮರೆಯಲಾರನು. ಯಾವಾಗಲೂ ನನ್ನನ್ನು ನೋಡುತ್ತಿರಬೇಕೆಂದೇ ಅಪೇಕ್ಷಿಸುವನು. ನನ್ನ ದರ್ಶನವನ್ನಪೇಕ್ಷಿಸುವವನು ಸತ್ಪ್ರವರ್ತನವುಳ್ಳವನಾಗಿ, ಮೆಲ್ಲಮೆಲ್ಲಗೆ ತನ್ನ ಹೃದಯದಲ್ಲಿರುವ ರಾಗದ್ವೇಷಾದಿಗಳೆಲ್ಲವನ್ನೂ ನೀಗಿಸಿಕೊಳ್ಳಬಲ್ಲನು. ನೀನು ಹಿಂದೆ ಸ್ವಲ್ಪಕಾಲದವರೆಗೆ ಆ ಮಹಾತ್ಮರ ಸೇವೆಯಲ್ಲಿದ್ದುದರಿಂದಲೇ ನಿನಗೆ ನನ್ನಲ್ಲಿ ಸ್ಥಿರವಾದ ಬುದ್ಧಿಯು ಹುಟ್ಟಿತು. ಈಗಲೂ ನೀನು ನೀಚವಾದ ಈ ಶೂದ್ರದೇಹವನ್ನು ತ್ಯಜಿಸಿದಮೇಲೆ, ಕಲ್ಪಾಂತರದಲ್ಲಿ ನನ್ನ ಭಕ್ತನಾಗುವೆ. ನನ್ನ ಅನುಗ್ರಹಬಲದಿಂದಲೇ ನಿನಗೆ ನನ್ನಲ್ಲಿ ಸ್ಥಿರವಾಗಿರುವ ಈ ಬುದ್ಧಿಯು ಎಂದೆಂದಿಗೂ ಕದಲದು. ಪ್ರಳಯದಲ್ಲಿಯಾದರೂ ನಿನಗೆ ನನ್ನ ಸ್ಮರಣೆಯು ಬಿಟ್ಟುಹೋಗದು" ಎಂದನು ಕರ್ಮಕೃತವಾದ ದೇಹವಿಲ್ಲದವನಾಗಿಯೂ, * ಆಕಾಶಶರೀರಿಯಾಗಿಯೂ, ಸರ್ವನಿಯಾಮಕನಾಗಿಯೂ, ಸರ್ವಾಂತರ್ಯಾಮಿಯಾಗಿಯೂ, ಸರ್ವೇಶ್ವರನಾಗಿಯೂ, ಸರ್ವಸ್ವತಂತ್ರನಾಗಿಯೂ ಇರುವ ಆ ಪರಮಾತ್ಮನು ಈ ಮಾತುಗಳನ್ನು ಹೇಳಿ ಸುಮ್ಮನಾದಮೇಲೆ, ಆತನ ಕೃಪಾಪಾತ್ರನಾದ ನಾನು ಹಾಗೆಯೇ ತಲೆಬಗ್ಗಿ ನಮಸ್ಕರಿಸಿ, ಅಲ್ಲಿಂದ ಹಿಂತಿರುಗಿದೆನು. ಹೋದ ಕಡೆಗಳಲ್ಲೆಲ್ಲಾ ನಿರ್ಲಜ್ಜನಾಗಿ ಆ ಭಗವಂತನ ನಾಮಗಳನ್ನು ಕೀರ್ತಿಸುತ್ತ, ಸಮಸ್ತಜಗತ್ತಿಗೂ ಮಂಗಳಕರವಾಗಿಯೂ, ವೇದರಹಸ್ಯವಾಗಿಯೂ ಇರುವ ಭಗವದವತಾರಗಳನ್ನೂ, ಆತನ ವ್ಯಾಪಾರಗಳನ್ನೂ ಎಡೆಬಿಡದೆ ಸ್ಮರಿಸುತ್ತ, ಭೂಮಿಯೆಲ್ಲವನ್ನೂ ಸುತ್ತುತ್ತಿದ್ದೆನು. ಇದರಿಂದ ನಾನು ನಿತ್ಯಸಂತೋಷಿಯಾಗಿ, ವಿಷಯಾಭಿಲಾಷೆಯನ್ನು ಬಿಟ್ಟು, ಮದಮಾತ್ಸರ್ಯಗಳನ್ನೂ ಅಡಗಿಸಿ, ದೇಹಾವಸಾನವನ್ನೇ ನಿರೀಕ್ಷಿಸುತ್ತ ಕಲ್ಪಾಂತರದವರೆಗೆ ಕಾದಿದ್ದೆನು. ಓ ಮುನೀಂದ್ರಾ! ಹೀಗೆ ಆ ಶ್ರೀಕೃಷ್ಣಪರಮಾತ್ಮನೊಬ್ಬನಲ್ಲಿಯೇ ಬುದ್ಧಿಯನ್ನು ನಿಲ್ಲಿಸಿ, ವಿಷಯಾಭಿಲಾಷೆಯನ್ನು ಬಿಟ್ಟು, ನಿಷ್ಕಳಂಕವಾದ ಮನಸ್ಸಿನಿಂದಿದ್ದ ನನಗೆ, ಪ್ರಾರಬ್ಧಕರ್ಮವು ಮುಗಿಯುವ ಕಾಲವು ಸಮೀಪಿಸಿತು. ಮಿಂಚಿನಂತೆ ಮರಣಕಾಲವು ತಲೆದೋರಿತು.

---

* ಇಲ್ಲಿ "ಆಕಾಶಶರೀರಂ ಬ್ರಹ್ಮ" ಎಂದು ಶ್ರುತಿಯು. ಭಗವಂತನು ಆಕಾಶದಂತೆ ಸರ್ವವ್ಯಾಪಿಯಾಗಿ ಅಗೋಚರನಾಗಿರುವನೆಂದರ್ಥವು.

ಸಮಸ್ತ ಜೀವರಾಶಿಗಳ ಲಯಕ್ಕೆ ಸ್ಥಾನವಾಗಿಯೂ ಅಪ್ರಾಕೃತವಾಗಿಯೂ ಇರುವ ಅನಿರುದ್ಧರೂಪಿಯಾದ ಭಗವಂತನ ಶರೀರದಲ್ಲಿ ಲಯಹೊಂದುವುದಕ್ಕೆ ನಾನು ಪ್ರಯತ್ನಿಸುತ್ತಿದ್ದಾಗ, ನನ್ನ ಪ್ರಾರಬ್ಧವನ್ನು ಕೊನೆಗಾಣಿಸತಕ್ಕ ಮೃತ್ಯುವುಬಂದೊದಗಿತು. ಪಂಚಭೂತಾತ್ಮಕವಾದ ಆ ನನ್ನ ದೇಹವು ನಾಶಹೊಂದಿತು. ಪೂರ್ವದಲ್ಲಿ ಭಗವಂತನು ಆ ಕಲ್ಪದಕೊನೆಗೆ ಜಗತ್ತೆಲ್ಲವನ್ನೂ ತನ್ನಲ್ಲಿ ಲೀನವಾಗಿ ಮಾಡಿಕೊಂಡು, ಸಮುದ್ರಜಲದಲ್ಲಿ ಶಯನಿಸಿದನು. ಆ ಸಮಯದಲ್ಲಿ ಚತುರ್ಮುಖಬ್ರಹ್ಮನು ಆ ಭಗವಂತನ ನಾಭಿಕಮಲದಲ್ಲಿ ಮಲಗಬೇಕೆಂದೆಣಿಸಿದಾಗ, ನಾನೂ ಆತನ ಪ್ರಾಣಗಳಲ್ಲಿ ಸೇರಿಕೊಂಡಿದ್ದೆನು. ಹೀಗೆಯೇ ಸಹಸ್ರಯುಗಗಳು ಕಳೆದುಹೋದುವು. ಆಮೇಲೆಬ್ರಹ್ಮನು ನಾಭಿಕಮಲದಿಂದೆದ್ದು, ವ್ಯಷ್ಟ್ಯಾತ್ಮಕವಾದ ಈಪ್ರಪಂಚವನ್ನು ಸೃಷ್ಟಿಸುವುದಕ್ಕೆ ಉದ್ದೇಶಿಸುತ್ತಿದ್ದನು. ಆ ಸಮಯದಲ್ಲಿಯೇ ಚತುರ್ಮುಖಬ್ರಹ್ಮನ ಪಾದದಿಂದ ನಾನೂ ಮರೀಚಿವಸಿಷ್ಠಾದಿಮಹರ್ಷಿಗಳೂ ಹುಟ್ಟಿದೆವು. ವ್ಯಾಸಮುನೀಂದ್ರಾ! ಅದರಿಂದೀಚೆಗೆ ಆ ಭಗವದನುಗ್ರಹದಿಂದಲೇ ನಾನುಸಮಸ್ತಲೋಕಗಳಲ್ಲಿಯೂ ನಿರಂಕುಶವಾದ ಗಮನವುಳ್ಳವನಾಗಿ, ಅಖಂಡ ಬ್ರಹ್ಮಚರ್ಯವ್ರತವನ್ನು ಸಲಿಸುತ್ತ, ಮೂರುಲೋಕಗಳ ಅಂತರ್ಬಹಿಃಪ್ರದೇಶಗಳೆಲ್ಲವನ್ನೂ ಸುತ್ತುತ್ತಿರುವೆನು. ಪೂರ್ವದಲ್ಲಿ ಬ್ರಹ್ಮನು ನನಗೆ ಇದೊಂದು ವೀಣೆಯನ್ನು ಕೊಟ್ಟನು. ಈ ನನ್ನ ವೀಣೆಯು ನಿಷಾದ ಮೊದಲಾದ ಸಪ್ತಸ್ವರಗಳೆಂಬ ಶಬ್ದಬ್ರಹ್ಮದಿಂದಲಂಕೃತವಾಗಿರುವುದು. ಈ ವೀಣೆಯನ್ನು ನಾನು ಯಾವಾಗಲೂ ಹೀಗೆಯೇ ಕೈಯಲ್ಲಿ ಹಿಡಿದು ನುಡಿಸುತ್ತ, ಸದಾ ಹರಿಕೀರ್ತನಗಳನ್ನು ಗಾನಮಾಡುತ್ತ ಸಂಚರಿಸುತ್ತಿರುವೆನು. ಪುಣ್ಯಶ್ಲೋಕನಾಗಿಯೂ, ಪವಿತ್ರವಾದ ಪಾದಪದ್ಮಗಳುಳ್ಳವನಾಗಿಯೂ ಇರುವ ಆ ಭಗವಂತನು, ನಾನು ಈ ವೀಣಾಧ್ವನಿಗೆ ಳೊಡನೆ ಕೀರ್ತನೆಗಳನ್ನಾರಂಭಿಸಿದ ಕೂಡಲೆ, ಕೂಗಿಕರೆಯಲ್ಪಟ್ಟವನಂತೆ, ನನ್ನ ಮನಸ್ಸಿನಲ್ಲಿ ಬಂದು ನೆಲಸಿ ನನಗೆ ದರ್ಶನವನ್ನು ಕೊಡುವನು. ಎಲೈಮುನಿ ಶ್ರೇಷ್ಠನೆ! ವಿಷಯಾಭಿಲಾಷೆಯಲ್ಲಿ ಆತುರಗೊಂಡಿರತಕ್ಕ ಮನುಷ್ಯರನ್ನು ಸಂಸಾರವೆಂಬ ಸಮುದ್ರದಿಂದ ದಾಟಿಸುವುದಕ್ಕೆ ಆ ಭಗವಂತನ ಚರಿತ್ರವರ್ಣನವೊಂದೇ ದೋಣಿಯಂತಿರುವುದು. ಕಾಮಲೋಭಾದಿಗಳಿಂದ ಕೆಟ್ಟುಹೋದ ಮನಸ್ಸು ಆ ಭಗವಂತನ ಸೇವೆಯಿಂದ ಒಡನೆಯೇ ಆ ದುರ್ಗುಣಗಳನ್ನು ನೀಗುವುದು. ಈ ಹರಿಸೇವೆಯಿಂದ ಆ ದುರ್ಗುಣಗಳು ನೀಗಿ ಹೋಗುವಂತೆ ಯಮನಿಯಮಾದಿಯೋಗಮಾರ್ಗಗಳಿಂದಲೂ ನೀಗಲಾರವು. ಎಲೈಮಹರ್ಷಿಯೇ! ನಿನ್ನ ಕೋರಿಕೆಯಂತೆ ನನ್ನ ಜನ್ಮಕರ್ಮಗಳ ರಹಸ್ಯಗಳೆಲ್ಲವನ್ನೂ ನಿನ್ನ ಮನಸ್ಸಿಗೆ ತೃಪ್ತಿಯುಂಟಾಗುವಂತೆ

ತಿಳಿಸಿದೆನು. ಇನ್ನು ನಾನು ಹೋಗಿಬರುವೆನು” ಎಂದನು. ಹೀಗೆಂದುಹೇಳಿ ನಾರದನು ವೇದವ್ಯಾಸನ ಅನುಮತಿಯನ್ನು ಪಡೆದು, ತನ್ನ ವೀಣೆಯನ್ನು ನುಡಿಸುತ್ತ ಸ್ವೇಚ್ಛಾಸಂಚಾರಿಯಾಗಿ ಹೊರಟುಹೋದನು. ಆಹಾ! ಶೌನಕಾ! ಆನಾರದನು ಸದಾ ಭಗವದ್ಗುಣಗಳನ್ನು ಕೀರ್ತಿಸಿ ಗಾನಮಾಡುತ್ತ, ತಾನು ಆನಂದರಸದಲ್ಲಿ ಯಾವಾಗಲೂ ಮಗ್ನನಾಗಿರುವುದಲ್ಲದೆ, ಸಂಸಾರತಾಪತ್ರಯದಲ್ಲಿ ಸಿಕ್ಕಿನರಳುತ್ತಿರುವ ಈ ಸಮಸ್ತ ಜಗತ್ತನ್ನೂ ಕೂಡ ತನ್ನ ವೀಣಾಧ್ವನಿಯಿಂದುಂಟಾದ ಆನಂದರಸದಲ್ಲಿ ಮುಳುಗಿಸುತ್ತಿರುವನು! ಅಬ್ಬಾ! ಆ ಮಹಾತ್ಮನೊಬ್ಬನಲ್ಲವೇ ಲೋಕದಲ್ಲಿ ಧನ್ಯನು! ಇದು ಆರನೆಯ ಅಧ್ಯಾಯವು

---

## ವ್ಯಾಸಮುನಿಯು ಭಾಗವತವನ್ನು ರಚಿಸಿ ಶುಕಮುನಿಗೆ ಉಪದೇಶಿಸಿದುದು.

ನಾರದನ ಚರಿತ್ರವನ್ನು ಕೇಳಿದಮೇಲೆ ತಿರುಗಿ ಶೌನಕನು ಸೂತಪೌರಾಣಿಕನನ್ನು ನೋಡಿ, “ಓ! ಸೂತಾ! ನಾರದನು ಹೊರಟು ಹೋದಮೇಲೆ ಭಗವಂತನಾದ ವ್ಯಾಸಮುನಿಯು ಮಾಡಿದುದೇನು?” ಎಂದು ಕೇಳಿದನು. ಅದಕ್ಕಾ ಸೂತನು, ‘ಶೌನಕಾ! ಕೇಳು! ಅತ್ತಲಾಗಿ ನಾರದನು ಹೊರಟು ಹೋದಮೇಲೆ ವ್ಯಾಸನು ಸರಸ್ವತೀನದಿಗೆ ಪಶ್ಚಿಮತೀರದಲ್ಲಿ ಶಮ್ಯಾಪ್ರಾಸವೆಂದು ಪ್ರಸಿದ್ಧಿಹೊಂದಿದ ತನ್ನಾಶ್ರಮಕ್ಕೆಹೋದನು. ಆ ಪ್ರದೇಶವು ವಿಶೇಷವಾಗಿ ಬದರೀವೃಕ್ಷಗಳಿಂದ ತುಂಬಿ ಅತಿಮನೋಹರವಾಗಿದ್ದಿತು. ಋಷಿಗಳೆಲ್ಲರೂ ಸತ್ರಯಾಗವನ್ನು ನಡೆಸಬೇಕಾದ ಸ್ಥಾನವೇ ಅದು. ವ್ಯಾಸನು ಈ ಪುಣ್ಯಾಶ್ರಮಕ್ಕೆ ಬಂದು ಆಚಮನವನ್ನು ಮಾಡಿ, ಶುದ್ಧನಾಗಿ ಕುಳಿತು, ತನ್ನ ಮನಸ್ಸನ್ನು ವಿಷಯಾಂತರಗಳಿಂದ ಹಿಂತಿರುಗಿಸಿ ಆತ್ಮಸ್ಥವಾಗಿ ನಿಲ್ಲಿಸಿಕೊಂಡನು. ಹಾಗೆಯೇ ಧ್ಯಾನಿಸುತ್ತಿರುವಾಗ, ಭಕ್ತಿಯೋಗಬಲದಿಂದ ಮನಸ್ಸು ನಿರ್ಮಲವಾಯಿತು. ಸಾವಧಾನದಿಂದ ನೋಡಲು ಅವನಿಗೆ ಮೊದಲು ಪರಮಪುರುಷನ ದರ್ಶನವಾಯಿತು. ಹಾಗೆಯೇ ನೋಡುತ್ತ ಪರಮಪುರುಷನಿಗೆ ಶರೀರಭೂತವಾದ ಮಾಯೆಯನ್ನೂ ಕಂಡುಕೊಂಡನು. ಆ ಮಹಾತ್ಮನು ಇನ್ನೂ ಮುಂದೆ ಜ್ಞಾನದೃಷ್ಟಿಯಿಂದ ನೋಡುತ್ತಿರಲು, ಮಾಯೆಗಿಂತಲೂ ಜೀವಾತ್ಮನು ವಿಲಕ್ಷಣನಾಗಿದ್ದು, ಮಾಯೆಯಿಂದಲೇ ತಾನು ಮೋಹಿತನಾಗಿ,

ತನ್ನನ್ನೇ ಗುಣತ್ರಯಪರಿಣಾಮರೂಪವಾದ ಶರೀರವನ್ನಾಗಿ ತಿಳಿದು ಈ ಭ್ರಮದಿಂದುಂಟಾದ ತಾಪತ್ರಯದಲ್ಲಿ ಸಿಕ್ಕಿ ನರಳುವನೆಂದೂ, ಈ ತಾಪತ್ರಯವನ್ನು ನಿವಾರಿಸುವ ಉಪಾಯವನ್ನು ತಿಳಿಯದ ಜನಗಳಿಗೆ, ಭಗವದ್ಭಕ್ತಿಯಲ್ಲದೆ ಬೇರೆ ಉಪಾಯಾಂತರವಿಲ್ಲವೆಂದೂ ನಿಶ್ಚಯಿಸಿದನು. ಈ ನಿಶ್ಚಯವು ಹುಟ್ಟಿದಮೇಲೆ ಲೋಕಹಿತಾರ್ಥವಾಗಿ ಭಾಗವತವೆಂಬ ಸಂಹಿತೆಯನ್ನು ರಚಿಸಿದನು. ಎಲೈ ಮಹರ್ಷಿಗಳೇ! ಈ ಸಂಹಿತೆಯನ್ನು ಕೇಳಿದಮಾತ್ರದಿಂದಲೇ ಮನುಷ್ಯನಿಗೆ ಮನಸ್ಸಿನಲ್ಲಿರುವ ಶೋಕಮೋಹಾದಿಗಳೆಲ್ಲವನ್ನೂ ನೀಗಿಸತಕ್ಕ ಭಗವದ್ಭಕ್ತಿಯು ಹುಟ್ಟುವುದು. ವ್ಯಾಸನು ತಾನು ಹೇಳಬೇಕಾದ ವಿಷಯಗಳೆಲ್ಲವನ್ನೂ ಆ ಗ್ರಂಥದಲ್ಲಿ ಕ್ರಮವಾಗಿ ವಿವರಿಸಿ, ಮೊದಲು ತನ್ನ ಕುಮಾರನಾದ ಶುಕಮುನಿಗೆ ಉಪದೇಶಿಸಿದನು. ಆ ಶುಕಮುನಿಯಾದರೋ ಸಾಮಾನ್ಯನಲ್ಲ. ಸಾಂಸಾರಿಕಧರ್ಮವನ್ನು ನಿಶ್ಯೇಷವಾಗಿ ಬಿಟ್ಟವನು. ಸ್ಥಿರಮನಸ್ಸುಳ್ಳವನು. ಯಾವಾಗಲೂ ಬ್ರಹ್ಮಧ್ಯಾನದಲ್ಲಿಯೇ ನಿರತನಾದವನು" ಎಂದನು. ಇದನ್ನು ಕೇಳಿ ತಿರುಗಿ ಶೌನಕನು "ಎಲೈ ಮಹಾತ್ಮನಾದ ಸೂತನೆ! ಆ ಶುಕಮುನಿಯಾದರೋ ಯಾವಾಗಲೂ ನಿವೃತ್ತಿಮಾರ್ಗದಲ್ಲಿ ನೆಲೆಗೊಂಡವನು. ಶ್ರವಣಾಧ್ಯಯನಗಳೊಂದರಲ್ಲಿಯೂ ಆದರವಿಲ್ಲದವನು. ಯಾವಾಗಲೂ ಪರಬ್ರಹ್ಮವೊಂದರಲ್ಲಿಯೇ ನಟ್ಟಮನಸ್ಸುಳ್ಳವನು. ಇಂತಹ ಮಹಾತ್ಮನಿಗೆ ಭಗವದ್ಧ್ಯಾನಕ್ಕೆ ಪ್ರತಿಬಂಧಕವಾದ ಈ ಭಾಗವತಸಂಹಿತೆಯನ್ನು ಅಭ್ಯಸಿಸಬೇಕೆಂಬ ಉದ್ದೇಶವು ಹೇಗೆಹುಟ್ಟಿತು?" ಎಂದನು. ಅದಕ್ಕಾ ಸೂತನು "ಶೌನಕಾ! ಈ ಭಾಗವತವೆಂಬುದೂ ಕೂಡ ಭಗವಂತನ ಗುಣವರ್ಣನವೇ. ಆದುದರಿಂದ ಭಗವದ್ಧ್ಯಾನಕ್ಕೆ ನಿರೋಧಕವಾದುದಲ್ಲ! ನೀನು ಹೇಳಿದಂತೆ ಪರಮಾತ್ಮನಿಷ್ಠರಾದ ಯೋಗಿಗಳಿಗೆ ಲೌಕಿಕಾರ್ಥವುಳ್ಳ ಪ್ರಬಂಧದಲ್ಲಿ ಅಪೇಕ್ಷೆಯಿಲ್ಲದಿರುವುದೇನೋ ನಿಜವು! ಹಾಗಿದ್ದರೂ ಅವರು ಭಗವಂತನಲ್ಲಿ ಅನನ್ಯಪ್ರಯೋಜನವಾದ ಭಕ್ತಿಯುಳ್ಳವರಾಗಿರುವರಲ್ಲವೆ? ಆ ಭಕ್ತಿಗೆ ವಿಷಯನಾದವನು ಕಲ್ಯಾಣಗುಣಪರಿಪೂರ್ಣನಾದ ಆ ಶ್ರೀಹರಿಯಲ್ಲವೆ? ಆದುದರಿಂದ ಅವನ ಗುಣವರ್ಣನೆಗಳನ್ನೊಳಕೊಂಡ ಗ್ರಂಥಗಳನ್ನು ಕೇಳುವುದರಲ್ಲಿ ಅವರಿಗೆ ಆಸಕ್ತಿಯಿದ್ದೇಯಿರಬೇಕು? ಅದಕ್ಕಾಗಿಯೇ ಶುಕನು ಪರಮಾತ್ಮಧ್ಯಾನವೊಂದರಲ್ಲಿಯೇ ನೆಲಸಿದವನಾಗಿದ್ದರೂ, ಆ ಹರಿಯಗುಣಗಳಲ್ಲಿ ಪರವಶವಾದ ಬುದ್ಧಿಯುಳ್ಳವನಾದುದರಿಂದಲೂ, ವಿಷ್ಣುಭಕ್ತರಲ್ಲಿ ವಿಶೇಷಪ್ರೇಮವುಳ್ಳವನಾದುದರಿಂದಲೂ, ಭಗವದ್ಗುಣಾನುವರ್ಣನರೂಪವಾದ ಭಾಗವತವನ್ನು ಪಠಿಸಿದನು. ತಾನೇ ಅದನ್ನು ಭಾಗವತೋತ್ತಮನಾದ ಪರೀಕ್ಷಿದ್ರಾಜನಿಗೂ ಉಪದೇಶಿಸಿದನು ಎಲೈ ಮಹರ್ಷಿಗಳೇ! ಇನ್ನು ಆ ಪರೀಕ್ಷಿ

ದ್ಭಾಜನ ಜನ್ಮಕರ್ಮಾದಿಗಳನ್ನೂ ಹೇಳುವೆನು ಕೇಳಿರಿ! ಆ ರಾಜನ ಚರಿತ್ರಕ್ಕೆ ಉಪೋದ್ಘಾತವಾಗಿ ಮೊದಲು ಪಾಂಡವರ ಚರಿತ್ರವನ್ನು ತಿಳಿಸಬೇಕಾಗಿರುವುದು. ಆ ಪಾಂಡವರ ಚರಿತ್ರವೂಕೂಡ ಶ್ರೀಕೃಷ್ಣಚರಿತ್ರದೊಡಗೂಡಿರುವುದರಿಂದ, ಆ ಪುಣ್ಯಚರಿತ್ರವನ್ನು ನೀವು ಸಾವಧಾನವಾಗಿ ಕೇಳಬೇಕು. ಹಿಂದೆ ಪಾಂಡವರಿಗೂ, ಕೌರವರಿಗೂ ನಡೆದ ಯುದ್ಧದಲ್ಲಿ ಉಭಯಪಕ್ಷದಲ್ಲಿಯೂ ಬಹಳ ಮಂದಿವೀರರು ಹತರಾಗಿ ವೀರಸ್ವರ್ಗವನ್ನು ಹೊಂದಿದರು. ಪ್ರಾಯಕವಾಗಿ ಉಭಯಸೈನ್ಯಗಳೂ ನಿಶ್ಶೇಷವಾಗಿ ಹತವಾದುವು. ಕೊನೆಗೆ ಭೀಮನ ಗದಾಪ್ರಹಾರದಿಂದ ದುರ್ಯೋಧನನೂಕೂಡ ತೊಡೆಮುರಿದು ಕೆಳಗೆ ಬಿದ್ದಿದ್ದನು. ಆಗ ಕೌರವರ ಕಡೆಯಲ್ಲಿ ದ್ರೋಣಪುತ್ರನಾದ ಅಶ್ವತ್ಥಾಮನು, ತನ್ನ ಪ್ರಭುವಾದ ಧೃತರಾಷ್ಟ್ರನಿಗೆ ಪ್ರಿಯವನ್ನುಂಟುಮಾಡಬೇಕೆಂದು ಒಂದುದುರಾಲೋಚನೆಯನ್ನು ನಡೆಸಿದನು. ವಾಸ್ತವದಲ್ಲಿ ಈ ಕಾರ್ಯವೇನೋ ಧೃತರಾಷ್ಟ್ರನಿಗೆ ಸಮ್ಮತವಲ್ಲದಿದ್ದರೂ, ಅಶ್ವತ್ಥಾಮನು ಇದರಿಂದ ಆತನನ್ನು ಸಂತೋಷಪಡಿಸಬೇಕೆಂದೆಣಿಸಿ, ಬ್ರಾಹ್ಮಣನಾದ ತನಗೆ ಆ ಕಾರ್ಯವು ಅನುಚಿತವೆಂಬುದನ್ನೂ ಯೋಚಿಸದೆ, ರಾತ್ರಿಯಲ್ಲಿ ನಿದ್ರಿಸುತಿದ್ದ ಉಪಪಾಂಡವರ ತಲೆಗಳನ್ನು ಕತ್ತರಿಸಿಕೊಂಡುಹೋದನು. ಅಶ್ವತ್ಥಾಮನು ನಡೆಸಿದ ಈ ಘೋರಕೃತ್ಯವನ್ನು ಈಗಲೂ ಜನರು ನಿಂದಿಸುತ್ತಿರುವರು? ಇತ್ತಲಾಗಿ ದ್ರೌಪದಿಯು ತನ್ನ ಪುತ್ರರ ಮರಣವನ್ನು ನೋಡಿ ದುಃಖವನ್ನು ತಡೆಯಲಾರದೆ, ಧಾರೆಧಾರೆಯಾಗಿ ಕಣ್ಣೀರನ್ನು ಬಿಡುತ್ತ ವಿಲಪಿಸುತ್ತಿದ್ದಳು. ಅರ್ಜುನನು ಆಕೆಯ ದುಃಖವನ್ನು ಕಂಡು, ಅವಳನ್ನು ಅನೇಕವಿಧದಲ್ಲಿ ಸಮಾಧಾನಪಡಿಸುತ್ತ, "ಪ್ರಿಯೆ! ಆದುದಾಯಿತು! ಇನ್ನು ದುಃಖಿಸಿ ಫಲವೇನು? ಬ್ರಾಹ್ಮಣಾಧಮನಾಗಿಯೂ ಪಾಪಕಾರ್ಯಕ್ಕೆ ಹೆದರದ * (ಆತತಾಯಿ) ವನಾಗಿಯೂ ಇರುವ ಆ ಅಶ್ವತ್ಥಾಮನ ಶಿರಸ್ಸನ್ನು ಇನ್ನು ಕ್ಷಣಕಾಲದೊಳಗಾಗಿಯೇ, ಈ ನನ್ನ ಗಾಂಡೀವಪ್ರಯುಕ್ತಗಳಾದ ಬಾಣಗಳಿಂದ ಕಡಿದು ತರುವೆನು. ಎಲೆದೇವಿ! ಆ ಪಾಪಿಯ ತಲೆಯನ್ನು ಮೊದಲು ನೀನು ನಿನ್ನ ಕಾಲಿನಿಂದ ತುಳಿದು, ಆ ಮೇಲೆ ಸ್ನಾನವನ್ನು ಮಾಡಬಹುದು! ಈ ಪ್ರತೀಕಾರದಿಂದ, ನಿನ್ನ ಪುತ್ರದುಃಖವನ್ನು ನೀಗಿಸುವೆನು. ಇನ್ನು ದುಃಖಿಸಬೇಡ" ಎಂದನು. ಒಡನೆಯೇ ಅರ್ಜುನನು ಕೃಷ್ಣನನ್ನು ಸಾರಥಿಯಾಗಿ

---

* ಆತತಾಯಿಯೆಂದರೆ: ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಃ । ಕ್ಷೇತ್ರದಾರಾಪಹರ್ತಾ ಚ ಷಡೇತೇ ಹ್ಯಾತತಾಯಿನಃ" ಮನೆಗೆ ಬೆಂಕಿಯಿಡುವುದು, ವಿಷವನ್ನು ಹಾಕಿ ಕೊಲ್ಲುವುದು, ಶಸ್ತ್ರಧಾರಿಯಾಗಿ ಜೀವಹಿಂಸೆಮಾಡುವುದು, ಹಣ, ಭೂಮಿ, ಹೆಂಗಸರು ಇವುಗಳನ್ನಪಹರಿಸುವುದು, ಈ ಕ್ರೂರಕೃತ್ಯಗಳನ್ನು ನಡೆಸುವವನು ಆತತಾಯಿಯೆನಿಸುವನು.

ಮಾಡಿಕೊಂಡು, ಭಯಂಕರವಾದ ತನ್ನ ಗಾಂಡೀವಧನಸ್ಸನ್ನು ಕೈಗೆತ್ತಿಕೊಂಡು ಕವಚವನ್ನು ಧರಿಸಿ, ಕಪಿಧ್ವಜವುಳ್ಳ ತನ್ನ ರಥವನ್ನೇರಿ, ಅಶ್ವತ್ಥಾಮನಿದ್ದ ಸ್ಥಳಕ್ಕೆ ಬಂದನು. ಹೀಗೆ ಅರ್ಜುನನು ಅತಿಕೋಪಾವಿಷ್ಟನಾಗಿ ಬರುವುದನ್ನು ಅಶ್ವತ್ಥಾಮನು ದೂರದಿಂದಲೇ ಕಂಡು, ಅವನು ಪುತ್ರಘಾತಿಯಾದ ತನ್ನನ್ನು ಕೊಲ್ಲುವುದಕ್ಕಾಗಿಯೇ ಬರುವನೆಂದು ನಿಶ್ಚಯಿಸಿದನು. ಅವನ ಮನಸ್ಸು ಭಯಗ್ರಸ್ತವಾಯಿತು. ಅವನಿಗೆ ತನ್ನ ಪ್ರಾಣಗಳನ್ನು ರಕ್ಷಿಸಿಕೊಳ್ಳಬೇಕೆಂಬ ಆಸೆಯು ಹುಟ್ಟಿತು. ರುದ್ರನಿಗೆ ಭಯಪಟ್ಟೋಡುವ ದಕ್ಷಪ್ರಜಾಪತಿಯಂತೆ ರಥವನ್ನೇರಿ ತನ್ನಿಂದ ಸಾಧ್ಯವಾದಷ್ಟು ದೂರದವರೆಗೆ ಓಡುತ್ತಹೋದನು. ಕೊನೆಕೊನೆಗೆ ಕುದುರೆಗಳು ಬಹಳವಾಗಿ ಬಳಲಿಮುಂದೆ ಹೆಜ್ಜೆಯಿಡಲಾರದೆ ಹೋದುವು. ಎಷ್ಟೆಷ್ಟು ಪ್ರಯತ್ನಮಾಡಿದರೂ ಕುದುರೆಗಳು ಮುಂದೆ ಹೋಗದಿರುವುದನ್ನೂ, ಹಿಂದೆ ಅರ್ಜುನನು ಮಹಾವೇಗದಿಂದ ಬೆನ್ನಟ್ಟಿಬರುವುದನ್ನೂ ನೋಡಿ ಅಶ್ವತ್ಥಾಮನಿಗೆ ತನ್ನ ಪ್ರಾಣಗಳನ್ನು ರಕ್ಷಿಸಿಕೊಳ್ಳುವುದಕ್ಕೆ ಬೇರೆ ಯಾವ ಉಪಾಯವೂ ತೋರದೆ ಹೋಯಿತು. ಬ್ರಹ್ಮಶಿರಸ್ಸೆಂಬ ಕ್ರೂರಾಸ್ತ್ರವನ್ನು ಪ್ರಯೋಗಿಸಿ, ಅರ್ಜುನನನ್ನು ಕೊಲ್ಲುವುದು ಹೊರತು ತನ್ನ ಪ್ರಾಣರಕ್ಷಣೆಗೆ ಬೇರೆ ಉಪಾಯವಿಲ್ಲವೆಂದು ನಿಶ್ಚಯಿಸಿ ಬಿಟ್ಟನು. ಒಡನೆಯೇ ಆಚಮನವನ್ನು ಮಾಡಿ, ನಿಶ್ಚಲಮನಸ್ಸುಳ್ಳವನಾಗಿ, ಆ ಅಸ್ತ್ರಮಂತ್ರವನ್ನು ಧ್ಯಾನಿಸಿದನು. ಆ ಅಸ್ತ್ರದ ಉಪಸಂಹಾರಮಂತ್ರವು ತನಗೆ ತಿಳಿಯದಿದ್ದರೂ ಕೂಡ, ಪ್ರಾಣಾಪತ್ತಿನ ಸಮಯವಾದುದರಿಂದ, ಹಿಂದುಮುಂದಾಲೋಚನೆಯಿಲ್ಲದೆ ಅದನ್ನು ಅರ್ಜುನನಮೇಲೆ ಪ್ರಯೋಗಿಸಿಬಿಟ್ಟನು. ಆ ಅಸ್ತ್ರವಾದರೋ ಸಮಸ್ತದಿಕ್ಕುಗಳನ್ನೂ ದಹಿಸುವಂತೆ ಹೊರಟುಬಂದಿತು. ಇದನ್ನು ನೋಡಿ ಅರ್ಜುನನು, ಆ ಅಸ್ತ್ರದಿಂದ ತನಗೆ ತಪ್ಪದೆ ಪ್ರಾಣಾಪಾಯವುಂಟಾಗುವುದೆಂದೆಣಿಸಿ, ಸಾರಥಿಯಾಗಿದ್ದ ಕೃಷ್ಣನನ್ನು ಅತ್ಯಾತುರದಿಂದ ಕೂಗುತ್ತ, "ಓ! *ಕೃಷ್ಣಾ! ಹೇ! ಮಹಾಬಾಹೂ! ನೀನು ಭಕ್ತರಿಗೆ ಅಭಯವನ್ನು ಕೊಡತಕ್ಕವನು! ಸಂಸಾರವೆಂಬ ಕಿಚ್ಚಿನಲ್ಲಿ ಬಿದ್ದು ದಗ್ಧರಾಗತಕ್ಕವರ ತಾಪವನ್ನು ನೀಗಿಸಿ ಅವರಿಗೆ ಶಾಶ್ವತಸುಖರೂಪವಾದ ಮೋಕ್ಷವನ್ನು ಕೊಡುವವನು! ದೇವಾ! ನೀನೇ ಆದಿಪುರುಷನು. ಸಕಲಜಗತ್ತಿಗೂ ಕಾರಣಭೂತನು. ಸರ್ವೇಶ್ವರನು. ಸರ್ವಾಂತರಾತ್ಮನು. ಸರ್ವನಿಯಾಮಕನು. ಸಮಸ್ತರ ಹೃದಯದಲ್ಲಿಯೂ ವರ್ತಿಸುತ್ತ

---

* ಇಲ್ಲಿ ಕೃಷ್ಣಶಬ್ದ ಸ್ವಾರಸ್ಯವೇನೆಂದರೆ :.... "ಕೃಷಿರ್ಭೂವಾಚಕಶ್ಶಬ್ದೋ ಣಶ್ಚ ನಿರ್ವೃತಿವಾಚಕಃ" ಎಂಬ ವ್ಯುತ್ಪತ್ತಿಯಿಂದ ಸರ್ವಲೋಕಸುಖಪ್ರದನೆಂದು ಭಾವವು

* ಪುರುಷನೆಂಬ ಹೆಸರಿಗೂ ನೀನೇ ಭಾಗಿಯು! ಚೇತನಾಚೇತನ ಪ್ರಕೃತಿದ್ವಯಕ್ಕಿಂತಲೂ ವಿಲಕ್ಷಣನು. ನೀನು ನಿಜಜ್ಞಾನಶಕ್ತಿಯಿಂದಲೇ ಮಾಯಾಧರ್ಮಗಳನ್ನು ನಿರಸನಮಾಡಿ, ಅದರ ಸಂಬಂಧವಿಲ್ಲದ ಹಾಗೆ ಮಾಡಿಕೊಳ್ಳಬಲ್ಲವನು! ಬೇರೆ ಯಾವ ಆಧಾರವನ್ನೂ ಅಪೇಕ್ಷಿಸದವನು. ಇಂತಹ ಸರ್ವೇಶ್ವರನಾದ ನೀನು, ದೇಹಾತ್ಮಭ್ರಮರೂಪವಾದ ಮಾಯೆಯಿಂದ ಮೋಹಿತನಾದ ಜೀವನಿಗೆ, ಅವನವನ ಕರ್ಮಾನುಸಾರವಾಗಿ ಸುಖದುಃಖಗಳನ್ನು ಕೈಗೂಡಿಸತಕ್ಕವನು. ಇವೆಲ್ಲವೂ ನಿನ್ನ ಮಾಹಾತ್ಮ್ಯದಿಂದಲೇ ನಡೆಯುವುವು. ಕೃಷ್ಣಾ! ಈ ಪರಸ್ವರೂಪವಿಚಾರವೂ ಹಾಗಿರಲಿ! ನೀನು ಅವತಾರವನ್ನೆತ್ತಿರುವುದೂ ಕೂಡ ಭೂಭಾರಭೂತರಾದ ದುಷ್ಟರನ್ನು ಸಂಹರಿಸುವುದೊಂದು, ಅನನ್ಯಪ್ರಯೋಜನವಾಗಿ ಭಕ್ತಿಯೊಂದರಲ್ಲಿಯೇ ನಿರತರಾದ ಭಕ್ತರ ಯೋಗಕ್ಷೇಮವನ್ನು ನೋಡಿಕೊಳ್ಳುವುದೊಂದು. ಈ ಎರಡು ಕಾರ್ಯಗಳಿಗಾಗಿಯೇ ಅಲ್ಲವೇ? ಎಲೈ ದೇವದೇವನೆ! ಭಯಂಕರವಾದ ತೇಜಸ್ಸೊಂದು ಸಮಸ್ತ ದಿಕ್ಕುಗಳನ್ನೂ ವ್ಯಾಪಿಸುತ್ತ, ಮೇಲೆ ಬೀಳುವಂತೆ ಹೊರಟುಬರುವುದು. ಈ ತೇಜಸ್ಸಾವುದೋ, ಎಲ್ಲಿಂದ ಹೊರಟುಬರುವುದೋ, ಹೇಗೆ ಶಾಂತವಾಗುವುದೋ ತಿಳಿಯಲಿಲ್ಲ! ಕೃಷ್ಣಾ! ಇದರ ವೃತ್ತಾಂತವನ್ನು ತಿಳಿಸಬೇಕು" ಎಂದನು. ಆಗ ಕೃಷ್ಣನು ಅರ್ಜುನನನ್ನು ನೋಡಿ "ಪಾರ್ಥಾ! ಈ ತೇಜಸ್ಸು ದ್ರೋಣಪುತ್ರನಾದ ಅಶ್ವತ್ಥಾಮನು ಪ್ರಯೋಗಿಸಿದ ಬ್ರಹ್ಮಾಸ್ತ್ರಸಂಬಂಧವಾದುದು. ಆ ಅಶ್ವತ್ಥಾಮನು ತನ್ನ ಪ್ರಾಣಾಪಾಯವನ್ನು ತಪ್ಪಿಸಿಕೊಳ್ಳುವುದಕ್ಕಾಗಿ, ಹಿಂದುಮುಂದು ನೋಡದೆ ಈ ಅಸ್ತ್ರವನ್ನು ಪ್ರಯೋಗಿಸಿಬಿಟ್ಟಿರುವನು. ಇದನ್ನು ಉಪಸಂಹಾರ ಮಾಡತಕ್ಕ ಮಂತ್ರವು ಆತನಿಗೆ ತಿಳಿಯದು. ಅರ್ಜುನಾ! ಈ ಅಸ್ತ್ರವನ್ನು ತಡೆಯಬೇಕಾದರೆ ಮತ್ತೊಂದು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಬೇಕೇ ಹೊರತು ಬೇರೆ ದಾರಿಯಿಲ್ಲ. ನೀನು ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿ ಅದರ ಜ್ವಾಲೆಯನ್ನಡಗಿಸು" ಎಂದನು. ಈ ಮಾತನ್ನು ಕೇಳಿದೊಡನೆ ಅರ್ಜುನನು ಶುದ್ಧಾಚಮನವನ್ನು ಮಾಡಿ, ಪ್ರದಕ್ಷಿಣನಮಸ್ಕಾರಗಳಿಂದ ಶ್ರೀಕೃಷ್ಣನನ್ನು ಪ್ರಾರ್ಥಿಸಿ, ಆ ಬ್ರಹ್ಮಾಸ್ತ್ರದಮೇಲೆ ತಾನೂ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿದನು. ಈ ಅಸ್ತ್ರಗಳೆರಡೂ ಅಂತರಿಕ್ಷದಲ್ಲಿ ಒಂದನ್ನೊಂದು ತಗುಲಿ ಕಿಡಿಗಳನ್ನು ಕೆದರುತ್ತ, ಸೂರ್ಯಾಗ್ನಿಗಳಂತೆ ಪ್ರಕಾಶಿಸುತ್ತಿದ್ದುವು. ಅಸ್ತ್ರಜ್ವಾಲೆಗಳು ಭೂಮ್ಯಾಕಾಶಗಳೆಲ್ಲವನ್ನೂ ತುಂಬಿದುವು. ಕ್ರಮಕ್ರಮವಾಗಿ ಮೂರುಲೋಕವನ್ನೂ ದಹಿಸುವಂತೆ ಅವುಗಳ ತೇಜಸ್ಸು ಮೇಲೆ

* ಪುರುಷನೆಂದರೆ:.... "ಪೂಸಂಜ್ಞೇ ವೈ ಶರೀರೇಸ್ಮಿನ್ ಶಯನಾತ್ಪುರುಷೋ ಹರಿಃ" ಎಂಬ ನಿರುಕ್ತಿಯನ್ನನುಸರಿಸಿ, ಸರ್ವಾಂತರಾತ್ಮನಾಗಿ ಸರ್ವಾಧಾರನಾಗಿರುವವನೆಂದರ್ಥವು.

ಮೇಲೆ ಹೆಚ್ಚುತಿತ್ತು. ನೋಡಿದವರೆಲ್ಲರಿಗೂ ಪ್ರಳಯಾಗ್ನಿಯೆಂಬ ಭಾವವುಂಟಾಯಿತು. ಹೀಗೆ ಲೋಕವೆಲ್ಲವೂ ದಗ್ಧವಾಗುವುದನ್ನು ನೋಡಿ, ಅರ್ಜುನನಿಗೆ ಮನಸ್ಸಿನಲ್ಲಿ ಮರುಕವುಹುಟ್ಟಿತು. ಲೋಕಕ್ಷೇಮಚಿಂತಕನಾದ ಅರ್ಜುನನು, ಶ್ರೀಕೃಷ್ಣನ ಅನುಮತಿಯನ್ನು ಪಡೆದು, ಆ ಎರಡು ಬ್ರಹ್ಮಾಸ್ತ್ರಗಳ ತೇಜಸ್ಸನ್ನೂ ಅಡಗಿಸುವುದಕ್ಕಾಗಿ, ಮಂತ್ರವನ್ನು ಜಪಿಸಿ, ಅವೆರಡನ್ನೂ ಉಪಸಂಹಾರಮಾಡಿದನು. ಆದರೂ ಆ ಅರ್ಜುನನಿಗೆ ಅಶ್ವತ್ಥಾಮನ ಮೇಲಿದ್ದ ಕೋಪವು ಮಾತ್ರ ಅಡಗಲಿಲ್ಲ. ಕೋಪದಿಂದ ಕೆಂಪೇರಿದ ಕಣ್ಣುಳ್ಳವನಾಗಿ ತಟ್ಟನೆ ಮುಂದೆಹೋಗಿ ಆ ಅಶ್ವತ್ಥಾಮನನ್ನು ಹಿಡಿದು ತಂದು, ಯೂಪಸ್ತಂಭಕ್ಕೆ ಯಾಗಪಶುವನ್ನು ಕಟ್ಟುವಂತೆ, ತನ್ನ ರಥದಲ್ಲಿರುವ ಧ್ವಜದ ಕಂಬಕ್ಕೆ, ಆತನನ್ನು ಹಗ್ಗಗಳಿಂದ ಬಿಗಿದು ಕಟ್ಟಿದನು ಹೀಗೆ ಅಶ್ವತ್ಥಾಮನನ್ನು ಕಟ್ಟಿ ತನ್ನ ಶಿಬಿರಕ್ಕೆ ತರುವ ಪ್ರಯತ್ನದಲ್ಲಿದ್ದಾಗ ಶ್ರೀಕೃಷ್ಣನೂ ಆ ದ್ರೋಣಪುತ್ರನಲ್ಲಿ ಕೋಪವನ್ನು ನಟಿಸುತ್ತ, "ಪಾರ್ಥಾ! ಈ ಬ್ರಾಹ್ಮಣಾಧಮನನ್ನು ಜೀವದಿಂದುಳಿಸಬಾರದು ಇವನನ್ನು. ಈಗಲೇ ಕತ್ತರಿಸಿಬಿಡು? ಈ ದುರ್ಮಾರ್ಗನು ರಾತ್ರಿಯಲ್ಲಿ ನಿದ್ರೆಯಿಂದ ಮೈಮರೆತಿದ್ದ ನಿನ್ನ ಸಣ್ಣಮಕ್ಕಳನ್ನು ಕೊಂದವನಲ್ಲವೆ? ಧರ್ಮಜ್ಞರಾದವರು ಮದ್ಯಪಾನಮಾಡಿ ಮದಿಸಿದವರನ್ನೂ, ಎಚ್ಚರತಪ್ಪಿದವರನ್ನೂ, ಪಿತ್ತವಿಕಾರಾದಿಗಳಿಂದ ಮೈಮರೆತವರನ್ನೂ, ನಿದ್ರಿಸುವವರನ್ನೂ, ಸ್ತ್ರೀಬಾಲವೃದ್ಧರನ್ನೂ, ಜಡಸ್ವಭಾವವುಳ್ಳವರನ್ನೂ, ಶರಣಾಗತರಾದವರನ್ನೂ. ಯುದ್ಧದಲ್ಲಿ ವಿರಥರಾದವರನ್ನೂ, ಭಯಪಟ್ಟವರನ್ನೂ ಕೊಲ್ಲಲಾರರು. ಈ ಧರ್ಮವನ್ನಾಲೋಚಿಸದೆ ಈ ದುರಾತ್ಮನು ನಿದ್ರಿಸುತಿದ್ದ ಬಾಲಕರನ್ನು ಕೊಂದಿರುವನು. ದಯಾಗುಣವಿಲ್ಲದ ಯಾವ ದುರಾತ್ಮನು ಇತರರ ಪ್ರಾಣಗಳನ್ನು ತೆಗೆದು ತನ್ನ ಪ್ರಾಣಗಳನ್ನು ಕಾಪಾಡಿಕೊಳ್ಳಬೇಕೆಂಬ ಪ್ರಯತ್ನವನ್ನು ನಡೆಸುವನೋ. ಅಂತವನನ್ನು ಸಂಹರಿಸುವುದೇ ಕ್ಷತ್ರಿಯಧರ್ಮವು! ಈ ಕಾರ್ಯವು ರಾಜರಿಗೆ ಶ್ರೇಯಸ್ಕರವಾದುದೇ ಹೊರತು ದೋಷಾಸ್ಪದವಲ್ಲ. ಆ ದುಷ್ಕಾರ್ಯವನ್ನು ನಡೆಸಿದ ಮನುಷ್ಯನೂಕೂಡ * ಈ ವಿಧವಾದ ರಾಜದಂಡನವನ್ನು ಹೊಂದದಿದ್ದ ಪಕ್ಷದಲ್ಲಿ, ಆ ಪಾಪಕ್ಕೆ ಬೇರೆ ಪ್ರಾಯಶ್ಚಿತ್ತವಿಲ್ಲದೆ ನರಕಕೂಪದಲ್ಲಿ ಬೀಳುವನು. ಅರ್ಜುನಾ? ಈಗ ನೀನು ಈ ಅಶ್ವತ್ಥಾಮನನ್ನು ಕೊಲ್ಲುವುದರಿಂದ ನಿಮ್ಮಿಬ್ಬರಿಗೂ ಶ್ರೇಯಸ್ಸುಂಟು. ಆದುದರಿಂದ ಒಡನೆಯೇ ಈತನತಲೆಯನ್ನು ಕತ್ತರಿಸಿಬಿಡು!

---

* "ರಾಜಭಿರ್ಧೃತದಂಡಾಸ್ತು ಕೃತ್ವಾ ಪಾಪಾನಿ ಮಾನವಾಃ। ವಿಧೂತಕಲ್ಮಷಾಯಾಂತಿ ಸ್ವರ್ಗಂ ಸುಕೃತಿನೋ ಯಥಾ॥" ಎಂಬಂತೆ ರಾಜದಂಡನವನ್ನು ಹೊಂದಿದವರಿಗೆ ನರಕಶಿಕ್ಷೆಯಿಲ್ಲವೆಂದು ಸ್ಮೃತಿಯು.

ಈ ಧರ್ಮಸೂಕ್ಷ್ಮವಿಚಾರವೂ ಹಾಗಿರಲಿ! ನೀನು ಹಿಂದೆ ದ್ರೌಪದಿಯನ್ನು ಸಮಾಧಾನಪಡಿಸುವಾಗ ಅವಳ ಮುಂದೆ ಪ್ರತಿಜ್ಞೆ ಮಾಡಿ ಬಂದುದನ್ನು ಮರೆತೆಯಾ! "ಪುತ್ರಘಾತುಕನಾದ ಈ ಪಾಪಿಯ ತಲೆಯನ್ನು ಕಡಿದು ತರುವುದಾಗಿ ನನ್ನಿದಿರಾಗಿಯೇ ಪ್ರತಿಜ್ಞೆ ಮಾಡಿಬಂದೆಯಲ್ಲವೆ! ಆ ಪ್ರತಿಜ್ಞೆಗೆ ಭಂಗವುಂಟಾಗದಹಾಗೆ ನೋಡು! ಈ ಪಾಪಾತ್ಮನಾದರೋ ನಿನ್ನ ಮಕ್ಕಳೆಲ್ಲರನ್ನೂ ಕೊಂದಿರುವನು. ನಿದ್ರೆಯಿಂದ ಮೈಮರೆತವರನ್ನು ಕೊಂದುದರಿಂದ ಆತತಾಯಿಯೆನಿಸುವನು. ಧೃತರಾಷ್ಟ್ರನಿಗೆ ಸಮ್ಮತವಲ್ಲದಿದ್ದರೂ, ಅವನನ್ನು ಸಂತೋಷಪಡಿಸುವುದಕ್ಕಾಗಿ, ಈ ದುಷ್ಕಾರ್ಯವನ್ನು ನಡೆಸಿರುವನು. ಈ ಕಾರಣಗಳಿಂದ ವಧ್ಯನಾದ ಈತನನ್ನು ಕೊಲ್ಲದೆ ಬಿಡುವುದು ಸರ್ವಥಾ ಯುಕ್ತವಲ್ಲ!" ಎಂದನು. ಹೀಗೆ ಕೃಷ್ಣನು ಅರ್ಜುನನ ಮನಸ್ಸನ್ನು ಪರೀಕ್ಷಿಸಬೇಕೆಂಬುದಕ್ಕಾಗಿ ಎಷ್ಟೋ ವಿಧದಿಂದ ಬೋಧಿಸಿದರೂ, ಅರ್ಜುನನು ದ್ರೋಣಾಚಾರ್ಯರಿಂದ ತನಗುಂಟಾದ ಮಹೋಪಕಾರವನ್ನು ಸ್ಮರಿಸಿಕೊಂಡು, ಪುತ್ರಘಾತುಕನಾಗಿದ್ದರೂ ಆ ಗುರುಪುತ್ರನನ್ನು ಕೊಲ್ಲುವುದಕ್ಕೆ ಸಮ್ಮತಿಸಲಿಲ್ಲ. ಕೊನೆಗೆ ಅಶ್ವತ್ಥಾಮನನ್ನು ಕಂಬಕ್ಕೆ ಕಟ್ಟಿದಹಾಗೆಯೇ ತನ್ನ ಶಿಬಿರಕ್ಕೆ ತಂದು, ಪುತ್ರಶೋಕದಿಂದ ವಿಲಪಿಸುತ್ತಿದ್ದ ದ್ರೌಪದಿಯ ಮುಂದೆ ನಿಲ್ಲಿಸಿದನು. ಆಗ ದ್ರೌಪದಿಯು ಮೆಲ್ಲಗೆ ಮುಂದೆಬಂದು, ಪಶುವಿನಂತೆ ಹಗ್ಗಗಳಿಂದ ಬಿಗಿಯಲ್ಪಟ್ಟು ಲಜ್ಜೆಯಿಂದ ತಲೆಯೆತ್ತದೆ ನಿಂತಿರುವ ಆತನ ಸ್ಥಿತಿಯನ್ನು ನೋಡಿದಳು. ಆಕೆಯು ಅತ್ಯಂತಸುಶೀಲೆಯಾದುದರಿಂದ, ಅಶ್ವತ್ಥಾಮನು ಮಹಾಪರಾಧಿಯಾಗಿದ್ದರೂ, ಅವನನ್ನು ನಿಂದಿಸದೆ, ಅವನಲ್ಲಿ ಕೋಪವನ್ನೂ ತೋರಿಸದೆ, ವಿನಯದಿಂದ ನಮಸ್ಕರಿಸಿದಳು. ಹೀಗೆ ಗುರುಪುತ್ರನನ್ನು ನಮಸ್ಕರಿಸಿದ ಮೇಲೆ, ಅರ್ಜುನನಕಡೆಗೆ ತಿರುಗಿ "ನಾಥಾ! ಈ ನಮ್ಮ ಗುರುಪುತ್ರನನ್ನು ಹೀಗೆ ನೀನು ಕಂಬಕ್ಕೆ ಕಟ್ಟಿತಂದಿರುವೆಯಲ್ಲಾ! ಇವನ ಕಷ್ಟವನ್ನು ನೋಡಿ ನಾನು ಸಹಿಸಲಾರೆನು. ಈತನಾದರೋ! ಜಾತಿಯಲ್ಲಿಯೂ ನಮಗೆ ಪೂಜ್ಯನು ಇದರಮೇಲೆ ಗುರುಪುತ್ರನಾದುದರಿಂದ ಗುರುವಿಗೆ ಸಮಾನನು. ಆದುದರಿಂದ ಈಕ್ಷಣವೇ ನೀನು ಇವನ ಸೆರೆಯನ್ನು ಬಿಡಿಸಬೇಕು! ನೀನು ಪ್ರಯೋಗೋಪಸಂಹಾರಮಂತ್ರಗಳೊಡನೆ. ಅನೇಕಾಸ್ತ್ರಸಮೂಹಗಳನ್ನೂ, ಧನುರ್ವೇದ ರಹಸ್ಯವನ್ನೂ. ಆ ದ್ರೋಣಾಚಾರ್ಯನಿಂದಲೇ ಕಲಿತವನಲ್ಲವೇ. ಈ ಅಶ್ವತ್ಥಾಮನೂ ಕೂಡ ಪುತ್ರರೂಪದಿಂದಿರುವ ಆ ದ್ರೋಣಾಚಾರ್ಯನೆಂದೇ ತಿಳಿಯಬೇಕು. ಇದಲ್ಲದೆ ನಿನ್ನ ಗುರುವಾದ ದ್ರೋಣನಿಗೆ ಅರ್ಧಶರೀರಭೂತೆಯಾಗಿಯೂ, ವೀರಪುತ್ರವತಿಯಾಗಿಯೂ ಇರುವ ಕೃಪಿಯು, ತನ್ನ ಪತಿಯೊಡನೆ ಸಹಗಮನಮಾಡದೆ ಇನ್ನೂ ಇವನಿಗಾಗಿಯೇ ಜೀವಿಸಿರುವಳು. ಈ ಸ್ಥಿತಿಯಲ್ಲಿ ನೀನು ಈತನಿಗೆ ಅಪಕಾರವನ್ನು ಮಾಡಿದಪಕ್ಷದಲ್ಲಿ, ನಿನ್ನ ಗುರು



96. ಅರ್ಜುನನು ಅಶ್ವತ್ಥಾಮನನ್ನು ರಥದ ಕಂಬಕ್ಕೆ ಕಟ್ಟಿ ಕರೆತಂದು,
ದ್ರೌಪದಿಯ ವಶಕ್ಕೆ ಒಪ್ಪಿಸಿದುದು.

ವಿಗೂ ಗುರುಪತ್ನಿಗೂ ದ್ರೋಹಮಾಡಿದಂತಾಗುವುದು. ಎಲೈ ಧರ್ಮಜ್ಞನೆ! ನಮಗೆ ಪರಮಪೂಜ್ಯವಾಗಿಯೂ, ವಂದನೀಯವಾಗಿಯೂ ಇರುವ ಗುರುಕುಲಕ್ಕೆ ದುಃಖವನ್ನು ತರುವುದು ಎಂದೆಂದಿಗೂ ಯುಕ್ತವಲ್ಲ. ಈಗ ನಾನು ಪುತ್ರದುಃಖ ದಿಂದ ಕಣ್ಣೀರುಬಿಟ್ಟು ದುಃಖಿಸುವಂತೆಯೇ, ಪತಿವ್ರತೆಯಾಗಿಯೂ, ಗುರುಪತ್ನಿ ಯಾಗಿಯೂ ಇರುವ ಆ ಬ್ರಾಹ್ಮಣಮಾತೆಯೂ, ಪುತ್ರದುಃಖದಿಂದ ಕೊರಗುವಂ ತಾಗುವುದಲ್ಲವೆ? ಇಷ್ಟಕ್ಕೆ ನೀನು ಅವಕಾಶವನ್ನು ಕೊಡಬಾರದು. ಇದರಮೇಲೆ ಯಾವ ರಾಜನು ಬ್ರಾಹ್ಮಣಕುಲಕ್ಕೆ ಅಪಕಾರವನ್ನು ಮಾಡುವನೋ, ಆ ರಾಜನು ತನ್ನ ಬಂಧುಮಿತ್ರ ಪರಿವಾರಗಳೊಡನೆ ದುಃಖಾಗ್ನಿಯಿಂದ ಬೇಯುವುದಲ್ಲದೆ, ಅವನ ವಂಶವೂ ನಿರ್ಮೂಲವಾಗುವುದು'' ಎಂದಳು. ಹೀಗೆ ಧರ್ಮಯುಕ್ತ ವಾಗಿಯೂ, ನ್ಯಾಯಸಮ್ಮತವಾಗಿಯೂ, ದಯಾಸೂಚಕವಾಗಿಯೂ, ಅಸತ್ಯವೂ ಅಪ್ರಿಯವೂ ಇಲ್ಲದೆ ಕಾಲಾನುಗುಣವಾಗಿಯೂ, ಗಂಭೀರವಾಗಿಯೂ ಇರುವ ಆ ದ್ರೌಪದಿಯ ಮಾತುಗಳನ್ನು ಕೇಳಿ, ಸಮೀಪದಲ್ಲಿದ್ದ ಧರ್ಮರಾಜನು ಆಕೆಯನ್ನು ಕುರಿತು, ''ದೇವಿ! ನಿನ್ನ ಮಾತಿಗಾಗಿ ನಾನು ಬಹಳ ಸಂತೋಷಪಟ್ಟೆನು. ಈ ನಿನ್ನ ವಾಕ್ಯವು ಧರ್ಮಯುಕ್ತವಾಗಿಯೂ, ನ್ಯಾಯಸಮ್ಮತವಾಗಿಯೂ ಇರುವುದು. ದಯಾಪರಿಶಿಷ್ಟವಾದ ಈ ನಿನ್ನ ಮಾತು ಸರ್ವಾಭಿನಂದ್ಯವಾದುದು.'' ಎಂದು ಅವ ಳನ್ನು ಬಹಳವಾಗಿ ಕೊಂಡಾಡುತ್ತಿದ್ದನು. ನಕುಲಸಹದೇವರೂ, ಸಾತ್ಯಕಿಯೂ, ಶ್ರೀಕೃಷ್ಣನೂ, ಇನ್ನೂ ಅಲ್ಲಿದ್ದ ಇತರಜನರೆಲ್ಲರೂ ದ್ರೌಪದಿಯನ್ನು ಬಹಳವಾಗಿ ಸ್ತೋತ್ರಮಾಡುತ್ತಿದ್ದರು! ಈ ಮಾತುಗಳೆಲ್ಲವನ್ನೂ ಕೇಳುತ್ತಿದ್ದ ಹಾಗೆಲ್ಲಾ ಭೀಮ ನಿಗೆ ಮೇಲೆ ಮೇಲೆ ಕೋಪವು ಉಕ್ಕಿಬರುತ್ತಿತ್ತು. ಕೋಪದಿಂದ ಜ್ವಲಿಸುವಂತೆ ಕಣ್ಣುಗಳಿಂದ ಕಿಡಿಗಳನ್ನು ಕೆದರುತ್ತ, ''ಎಲೈ! ಸಾಕು! ಸುಮ್ಮನಿರಿ! ಈ ದ್ರೌಪದಿಯು ಹೇಳಿದಮಾತು ಸರ್ವಥಾಯುಕ್ತವಲ್ಲ! ಈ ದುರ್ಮಾರ್ಗನು ತನಗಾ ಗಲಿ, ತನ್ನ ಪ್ರಭುವಾದ ಧೃತರಾಷ್ಟ್ರನಿಗಾಗಲಿ, ಎಷ್ಟುಮಾತ್ರವೂ ಇದು ಹಿತವಲ್ಲ ವೆಂಬುದನ್ನು ತಿಳಿಯದೆಹೋದ ನಿದ್ರೆಯಿಂದ ಮೈಮರೆತಿದ್ದ ಮಕ್ಕಳನ್ನು ನಿಷ್ಪ್ರ ಯೋಜನವಾಗಿ ಕೊಂದಿರುವನು ಇವನನ್ನು ಕೊಲ್ಲುವುದೇ ಯುಕ್ತವೆಂತೋರುತ್ತದೆ, ಇವನನ್ನು ಮನ್ನಿಸುವುದು ಸರ್ವಥಾಯುಕ್ತವಲ್ಲ'' ಎಂದನು. ಆಗ ಸಮೀಪದಲ್ಲಿ ನಿಂತಿದ್ದ ಶ್ರೀಕೃಷ್ಣನು, ಕೋಪಯುಕ್ತವಾದ ಭೀಮನವಾಕ್ಯವನ್ನೂ, ದಯಾರ್ದ್ರ ವಾದ ದ್ರೌಪದಿಯ ಮಾತನ್ನೂ ಕೇಳಿ, ತನ್ನಲ್ಲಿತಾನು ಮುಗುಳ್ನಗೆಯಿಂದ ನಗುತ್ತ ತನ್ನ ಮಿತ್ರನಾದ ಅರ್ಜುನನ ಮುಖವನ್ನು ನೋಡಿ, ''ಅರ್ಜುನಾ ಇದುವರೆಗೆ ನಡೆದ ಸಂಭಾಷಣೆಗಳೆಲ್ಲವನ್ನೂ ಕೇಳಿದೆಯಷ್ಟೆ? ಇವನು ಜಾತಿಯಲ್ಲಿ ಬ್ರಾಹ್ಮ ಣನು! ಇದರಮೇಲೆ ಗುರುಪುತ್ರನಾಗಿಯೂ ಇರುವುದರಿಂದ, ಇವನನ್ನುಕೈ ಕೊಲ್ಲ

ಬಾರದು. ಕೊಲೆಗೆ ಯೋಗ್ಯವಾದಕಾರ್ಯವನ್ನು ನಡೆಸಿರುವುದರಿಂದ ಇವನನ್ನು ಕೊಲ್ಲ ದೆಯೂ ಬಿಡಬಾರದು. ಹೀಗೆ ಧರ್ಮಸಂಕಟವು ಬಂದೊದಗಿರುವುದಷ್ಟೆ? ಇವೆರ ಡನ್ನೂ ನಾನು ಮೊದಲೇ ನಿನಗೆ ತಿಳಿಸಿರುವೆನಲ್ಲವೆ? ಇವೆರಡು ಪಕ್ಷಕ್ಕೂ ವಿರೋಧ ವಿಲ್ಲದ ರೀತಿಯಲ್ಲಿ ಕಾರ್ಯವನ್ನು ಹೇಗೆ ನಡೆಸಬೇಕೋ ಅದನ್ನು ನೀನೇ ಯೋಚಿಸಿ ನೋಡು. ಪರಸ್ಪರವಿರುದ್ಧವಾದ ಈ ಧರ್ಮಸೂಕ್ಷ್ಮಗಳೆರಡಕ್ಕೂ ಹಾನಿಯುಂಟಾಗ ಬಾರದು! ನಿನ್ನ ಪ್ರತಿಜ್ಞೆಯೂ ನೆರವೇರಬೇಕು! ದ್ರೌಪದಿಯ ಮತ್ತು ಭೀಮ ಸೇನನ ಮಾತುಗಳಿಗೂ ವಿರೋಧವುಂಟಾಗಬಾರದು. ಆ ರೀತಿಯಾಗಿ ನಡೆಸುವು ದಕ್ಕೆ ಉಪಾಯವನ್ನು ಯೋಚಿಸು. ಅರ್ಜುನಾ *ಮುಖ್ಯವಾಗಿ ನನಗೂ, ನಿನಗೂ, ಈ ದ್ರೌಪದಿಗೂ, ಈ ಭೀಮನಿಗೂ, ಈ ನಾಲ್ವರಿಗೂ ಸಮ್ಮತವಾದ ರೀತಿಯಲ್ಲಿ ಕಾರ್ಯವನ್ನು ನಡೆಸು!" ಎಂದನು. ಈ ಮಾತನ್ನು ಹೇಳುವಾಗಲೇ ಅರ್ಜುನನು ಶ್ರೀಕೃಷ್ಣನ ಮನೋಭಿಪ್ರಾಯವನ್ನು ತಿಳಿದು, ಖಡ್ಗವನ್ನು ಕೈಗೆತ್ತಿಕೊಂಡು, ಅಶ್ವತ್ಥಾಮನ ತಲೆಯಲ್ಲಿದ್ದ ಮಾಣಿಕ್ಯವನ್ನು ಅವನ ತಲೆಕೂದಲಿನೊಡನೆ ಕಿತ್ತು ಕೊಂಡು, ಅವನ ಕಟ್ಟುಗಳನ್ನು ಬಿಡಿಸಿ ಕಳುಹಿಸಿಬಿಟ್ಟನು. ಮೊದಲೇ ಶಿಶುಹತ್ಯಾ ಪಾತಕದಿಂದ ಕಳೆಗೆಟ್ಟಿದ್ದ ಅಶ್ವತ್ಥಾಮನಿಗೆ, ತಲೆಯಲ್ಲಿ ಸಹಜವಾಗಿ ಹುಟ್ಟಿದ್ದ ಮಾಣಿಕ್ಯವೂ ಹೋದಮೇಲೆ ಅವನ ತೇಜಸ್ಸು ಇನ್ನೂ ಕುಂದಿಹೋಯಿತು. ಒಡ ನೆಯೇ ಅವನು ಪಾಂಡವಶಿಬಿರದಿಂದ ಹೊರಕ್ಕೆ ಹೊರಡಿಸಲ್ಪಟ್ಟನು. ಎಲೈ ಶೌನ ಕಾದಿಗಳೇ! ದುರ್ಮಾರ್ಗನಾದ ಅಶ್ವತ್ಥಾಮನಿಗೆ ಅರ್ಜುನನು ಮಾಡಿದ ಶಿಕ್ಷೆ ಯನ್ನು ನೋಡಿದಿರಷ್ಟೆ! ತಲೆಗೆ ಮುಂಡನವಾಯಿತು! ತಲೆಯಲ್ಲಿದ್ದ ಅಸಾಧಾರಣ ವಾದ ಮಾಣಿಕ್ಯವೂ ಹೋಯಿತು! ಪಾಂಡವರ ಶಿಬಿರದಿಂದ ಅವಮಾನಪೂರ್ವಕ ವಾಗಿ ನಿಷ್ಕ್ರಮಣವೂ ಆಯಿತು. ಲೋಕದಲ್ಲಿ ಬ್ರಹ್ಮಬಂಧುಗಳಿಗೆ ಈ ದೇಹದಲ್ಲಿ ಇದಕ್ಕಿಂತಲೂ ಅಧಿಕಶಿಕ್ಷೆಯೇನಿರುವುದು? ಅಶ್ವತ್ಥಾಮನು ಹೀಗೆ ಅವಮಾನಪಟ್ಟು ಹೊರಗೆ ಹೋದಕೂಡಲೇ, ಇತ್ತಲಾಗಿ ಪುತ್ರಶೋಕದಿಂದ ಪೀಡಿತರಾದ ಪಾಂಡವ

---

* ಇಲ್ಲಿ ಅರ್ಜುನನು ಅಶ್ವತ್ಥಾಮನ ಶಿರೋರತ್ನವನ್ನು, ಅವನ ತಲೆಕೂದಲೊಡನೆ ಕತ್ತರಿಸಿಕೊಂಡು ಕಳುಹಿಸುವುದರಿಂದ, ಶ್ರೀಕೃಷ್ಣಾಜ್ಞೆಯಂತೆ ಎಲ್ಲರ ಅಭಿಮತವನ್ನೂ ನೆರ ವೇರಿಸಿದಂತಾಗುವುದು. ಹೇಗೆಂದರೆ.... ಅಶ್ವತ್ಥಾಮನ ಕೇಶಪಾಶದೊಡನೆ ಅವನಿಗೆ ಸಹಜ ವಾದ ಶಿರೋರತ್ನವನ್ನು ಕಿತ್ತುಕೊಳ್ಳುವುದರಿಂದ, ಅವನ ತಲೆಯನ್ನು ಕಡಿದು ತಂದಂತೆಯೇ ಆಗುವುದು. ಇದರಿಂದ ಅರ್ಜುನನ ಪ್ರತಿಜ್ಞೆಯು ನೆರವೇರಿದಂತಾಗುವುದು. ಪ್ರಾಣಹಾನಿ ಯಿಲ್ಲದೆ ಬಿಡುವುದರಿಂದ ದ್ರೌಪದಿಯ ಇಷ್ಟವೂ ನೆರವೇರುವುದು. ಅಶ್ವತ್ಥಾಮನಿಗೆ ಆ ವಿಧ ವಾದ ಮಾನಭಂಗವು ಮರಣಪ್ರಾಯವೇ ಆದುದರಿಂದ ಭೀಮನ ಕೋರಿಕೆಯನ್ನೂ, ಕೃಷ್ಣನ ಆಜ್ಞೆಯನ್ನೂ ನಡೆಸಿದಂತಾಗುವುದು. ಇವೆಲ್ಲಕ್ಕೂ ಅನುಗುಣವಾಗಿಯೇ ಅರ್ಜುನನು ಅಶ್ವತ್ಥಾ ಮನ ಶಿರೋಮಣಿಯನ್ನೂ ಕಿತ್ತುಕೊಂಡು ಕಳುಹಿಸಿದುದಾಗಿ ಗ್ರಾಹ್ಯವು.

ರೆಲ್ಲರೂ ದ್ರೌಪದೀಸಮೇತರಾಗಿ ಹೊರಟು ಯುದ್ಧದಲ್ಲಿ ಮೃತರಾದ ತಮ್ಮ ಜ್ಞಾತಿಗಳೆಲ್ಲರಿಗೂ ನಡೆಸಬೇಕಾದ ದಹನಾದಿಕೃತ್ಯಗಳನ್ನು ನಡೆಸಿದರು. ಇದು ಏಳನೆಯ ಅಧ್ಯಾಯವು.

---

{ ಪಾಂಡವರು ಗಂಗಾತೀರಕ್ಕೆ ಬಂದುದು. ಕುಂತಿಯ ಪ್ರಾರ್ಥನೆಯ ಮೇಲೆ ಕೃಷ್ಣನು ಹಸ್ತಿನಾಪುರದಲ್ಲಿ ನಿಂತುದು. }

ಹೀಗೆ ಪಾಂಡವರು ಅಲ್ಲಿಂದ ಹೊರಟು ಪ್ರೇತರೂಪದಿಂದಿರುವ ತಮ್ಮ ಜ್ಞಾತಿಗಳಿಗೆ ಪಿಂಡೋದಕಗಳನ್ನು ಕೊಡುವುದಕ್ಕಾಗಿ ದ್ರೌಪದಿಮೊದಲಾದ ಪತ್ನಿಯರೊಡನೆಯೂ, ಶ್ರೀಕೃಷ್ಣನೊಡನೆಯೂ ಕೂಡಿ, ಗಂಗಾನದಿಗೆ ಬಂದರು. ಅಲ್ಲಿ ವಿಧ್ಯುಕ್ತವಾಗಿ ತಮ್ಮ ಬಂಧುಗಳೆಲ್ಲರಿಗೂ ಪಿಂಡೋದಕವನ್ನು ಕೊಟ್ಟು, ಬಂಧುಮರಣಕ್ಕಾಗಿ ದುಃಖಿಸಿ ವಿಲಪಿಸುತ್ತ ಕೊನೆಗೆ ಶ್ರೀಕೃಷ್ಣನ ಪಾದರೇಣುವಿನ ಸಂಬಂಧದಿಂದ ಪವಿತ್ರವಾದ ಗಂಗಾನದಿಯಲ್ಲಿ ಸ್ನಾನವನ್ನು ಮಾಡಿ ಸೂತಕವನ್ನೂ ಕಳೆದರು. ಆ ಮೇಲೆ ಶ್ರೀಕೃಷ್ಣನು ಗಂಗಾತೀರದಲ್ಲಿ ಧರ್ಮರಾಜಾದಿಗಳ ನಡುವೆ ಕುಳಿತು, ಅಲ್ಲಿಬಂಧುಮರಣಕ್ಕಾಗಿ ಬಹಳದುಃಖದಿಂದಸಂಕಟಪಡುತ್ತಿದ್ದ ಧೃತರಾಷ್ಟ್ರನನ್ನೂ, ಪುತ್ರಶೋಕಪೀಡಿತೆಯರಾಗಿದ್ದ ದ್ರೌಪದೀಗಾಂಧಾರಿಯರನ್ನೂ ಕುಂತೀದೇವಿಯನ್ನೂ ತಾನೇ ಸಮಾಧಾನಪಡಿಸುವುದಕ್ಕೆ ತೊಡಗಿದನು. ಲೋಕದಲ್ಲಿ ಸಮಸ್ತಪ್ರಾಣಿಗಳಿಗೂ ಜನನಮರಣಾದಿಗಳನ್ನುಂಟುಮಾಡುತ್ತಿರುವ ಕಾಲಗತಿಯು ಯಾರಿಗೂ ತಪ್ಪಿದುದಲ್ಲವೆಂಬ ತತ್ವವನ್ನು ತಿಳಿಸಿ, ಅವರೆಲ್ಲರಿಗೂ ಸಮಾಧಾನವನ್ನು ಹೇಳಿದನು. ಅಲ್ಲಿದ್ದ ಋಷಿಗಳೆಲ್ಲರೂ ಹಾಗೆಯೇ ತತ್ವೋಪದೇಶವನ್ನು ಮಾಡಿ ಸಮಾಧಾನವನ್ನು ಹೇಳುತ್ತಿದ್ದರು. ಎಲೈ ಶೌನಕಾದಿಗಳೇ! ದುರ್ಯೋಧನಾದಿಗಳು ಹಿಂದೆ ದ್ರೌಪದಿಯ ಮಾನಭಂಗವನ್ನು ಮಾಡಿದಾಗಲೇ ಅವರ ಆಯಸ್ಸು ತೀರಿತು! ಹೀಗೆ ಮೊದಲೇ ಮೃತಪ್ರಾಯರಾಗಿದ್ದ ಆ ಕೌರವರನ್ನು ಶ್ರೀಕೃಷ್ಣನು ಅರ್ಜುನಾದಿಗಳ ಕೈಯಿಂದ ತಿರುಗಿ ಕೊಲ್ಲಿಸಿದಂತಾಯಿತೇ ಹೊರತು ಬೇರೆಯಲ್ಲ. ಆ ದುರಾತ್ಮರು ಜೂಜಿನ ನೆವದಿಂದ ಸಾಧಿಸಿದ ರಾಜ್ಯವೂ ತಿರುಗಿ ಧರ್ಮರಾಜನ ವಶವಾಯಿತು! ಆ ಮೇಲೆ ಶ್ರೀಕೃಷ್ಣನು ಧರ್ಮರಾಜನಿಂದ ವಿಧ್ಯುಕ್ತವಾಗಿ ಅಶ್ವಮೇಧಯಾಗಗಳನ್ನು ಮಾಡಿಸಿದನು. ದೇವೇಂದ್ರನ ಕೀರ್ತಿಯಂತೆ ಆ ಧರ್ಮರಾಜನ ಕೀರ್ತಿಯು ತ್ರೈಲೋಕ್ಯವನ್ನೂ ವ್ಯಾಪಿಸಿತು. ಶ್ರೀಕೃಷ್ಣನ ಕೃಪೆಯಿಂದಲೇ

ಧರ್ಮರಾಜನಿಗೆ ಈ ಅಭ್ಯುದಯಗಳೆಲ್ಲ ಕೈಗೂಡಿದುವು. ಆ ಮೇಲೆ ಕೃಷ್ಣನು ಪಾಂಡವರಿಂದ ಅನುಮತಿಯನ್ನು ಪಡೆದು, ಸಾತ್ಯಕಿಯನ್ನೂ, ಉದ್ಧವನನ್ನೂ ಸಂಗಡ ಕರೆದುಕೊಂಡು, ದ್ವಾರಕೆಗೆ ಹೊರಡಲುದ್ಯುಕ್ತನಾದನು. ವ್ಯಾಸಾದಿ ಮಹರ್ಷಿಗಳೆಲ್ಲರೂ ಅವನನ್ನು ಸ್ವಲ್ಪದೂರದವರೆಗೆ ಹಿಂಬಾಲಿಸಿ ಬಂದರು. ಶ್ರೀಕೃಷ್ಣನು ಅವರೆಲ್ಲರನ್ನೂ ಯಥೋಚಿತವಾಗಿ ಪೂಜಿಸಿ, ಅವರ ಸತ್ಕಾರಗಳನ್ನು ಪ್ರೀತಿಯಿಂದ ಕೈಕೊಂಡು, ರಥವನ್ನೇರಿ ಮುಂದಕ್ಕೆಹೊರಡುವಷ್ಟರಲ್ಲಿ, ಉತ್ತರೆಯು ಇದ್ದಕ್ಕಿದ್ದಹಾಗೆ ಭಯಾತುರೆಯಾಗಿ, ಕೃಷ್ಣನ ರಥವನ್ನು ಹಿಂಬಾಲಿಸಿ ಹೊರಟಳು. ಹೀಗೆ ಭಯದಿಂದ ರಥವನ್ನು ಹಿಂಬಾಲಿಸಿ ಬರುತ್ತಿರುವ ಉತ್ತರೆಯನ್ನು ಕಂಡೊಡನೆ ಕೃಷ್ಣನು, ರಥವನ್ನು ನಿಲ್ಲಿಸಿಟ್ಟನು ಆಗ ಉತ್ತರೆಯು ಕೃಷ್ಣನನ್ನು ನೋಡಿ ವಿಜ್ಞಾಪಿಸುವಳು. "ಕೃಷ್ಣಾ! ರಕ್ಷಿಸು! ರಕ್ಷಿಸು! ನೀನು ಬ್ರಹ್ಮಾದಿದೇವತೆಗಳಿಗೂ ದೇವತೆಯೆನಿಸಿಕೊಂಡವನು. ಸಮಸ್ತ ಪ್ರಪಂಚಗಳನ್ನೂ ರಕ್ಷಿಸತಕ್ಕವನು ಸಮಸ್ತ ಸೂಕ್ಷ್ಮಾರ್ಥಗಳನ್ನೂ ತಿಳಿದವನು. ನಿನ್ನೊಬ್ಬನನ್ನು ಹೊರತು ಲೋಕದಲ್ಲಿ ಜರಾಮರಣಾದಿಭಯಗಳು ಯಾರನ್ನೂ ಬಿಟ್ಟಿದಲ್ಲ. ಆ ಮೃತ್ಯುಭಯವನ್ನು ತಪ್ಪಿಸುವುದಕ್ಕೂ ಬೇರೆಯಾರಿಗೂ ಸಾಧ್ಯವಲ್ಲ. ಈಕಾರ್ಯಕ್ಕೆ ನೀನೊಬ್ಬನೇ ಸಮರ್ಥನು! ಆದುದರಿಂದ ಎಲೈ ಲೋಕನಾಥನೆ! ನನ್ನನ್ನು ರಕ್ಷಿಸು ರಕ್ಷಿಸು! ಅಗ್ನಿಜ್ವಾಲೆಯಿಂದುರಿಯುತ್ತಿರುವ ಉಕ್ಕಿನ ಬಾಣವೊಂದು ಇದೋ ನನಗಿದಿರಾಗಿ ಬರುತ್ತಿರುವುದು ಕೃಷ್ಣಾ! ಈ ಬಾಣದಿಂದ ನಾನು ಸಾಯುವೆನೆಂಬ ಭಯವು ನನಗಿಲ್ಲ! ಈ ಬಾಣವು ನನ್ನನ್ನು ಕೊಂದರೂ ಚಿಂತೆಯಿಲ್ಲ! ನನ್ನ ಗರ್ಭದಲ್ಲಿರುವ ಶಿಶುವಿಗೆ ಅಪಾಯವಿಲ್ಲದಂತೆ ರಕ್ಷಿಸುವ ಭಾರವು ನಿನ್ನದು!" ಎಂದು ಕಣ್ಣೀರುಬಿಟ್ಟು ಮೊರೆಯಿಡುತಿದ್ದಳು! ಇದನ್ನು ಕೇಳಿ ಭಕ್ತವತ್ಸಲನಾದ ಶ್ರೀಕೃಷ್ಣನು ತನ್ನಲ್ಲಿ ತಾನು "ಆಹಾ! ಆ ಅಶ್ವತ್ಥಾಮನು ಪಾಂಡವಕುಲವನ್ನು ನಿರ್ಮೂಲವಮಾಡಬೇಕೆಂದು ಇದೊಂದು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿರುವನು." ಎಂದು ನಿಶ್ಚಯಿಸಿಕೊಂಡನು. ಇಷ್ಟರಲ್ಲಿ ಇತ್ತಲಾಗಿ ಪಾಂಡವರು ತಮಗಿದಿರಾಗಿ ಐದುಬಾಣಗಳು ಜಾಜ್ವಲ್ಯಮಾನವಾಗಿ ಬರುತ್ತಿರುವುದನ್ನು ನೋಡಿ. ಅವುಗಳನ್ನಡಗಿಸುವುದಕ್ಕಾಗಿ ಪ್ರತ್ಯಸ್ತ್ರಗಳನ್ನು ಪ್ರಯೋಗಿಸುತ್ತ ಬಂದರು. ಇವರ ಪ್ರಯತ್ನವೊಂದೂ ಸಾಗದೆ ಹೋಯಿತು ಆಗ ಶ್ರೀಕೃಷ್ಣನು ಬೇರೆ ರಕ್ಷಕರಿಲ್ಲದೆ ತನ್ನನ್ನೇ ನಂಬಿರುವ ಪಾಂಡವರ ದುಃಖವನ್ನು ನೋಡಿ, ತನ್ನ ಚಕ್ರಾಯುಧದಿಂದ ಆ ಅಸ್ತ್ರಗಳನ್ನು ತಡೆದು ಪಾಂಡವರನ್ನು ರಕ್ಷಿಸಿದನು. ಅದರಿಂದಾಚೆಗೆ ಆ ಅಸ್ತ್ರಜ್ವಾಲೆಯು ಉತ್ತರೆಯ ಗರ್ಭವನ್ನು ವ್ಯಾಪಿಸಿತು. ಸರ್ವಾಂ

ತರ್ಯಾಮಿಯಾಗಿಯೂ, ಸಮಸ್ತ ಜಗತ್ತಿಗೂ ಧಾರಕನಾಗಿಯೂ, ಸೂಕ್ಷ್ಮದರ್ಶಿಯಾಗಿಯೂ ಇರುವ ಶ್ರೀಕೃಷ್ಣನು ಈ ಸಂಗತಿಯನ್ನು ತಿಳಿದು ಕುರುವಂಶಾಭಿವೃದ್ಧಿಗೆ ಭಂಗವು ಬಾರದಂತೆ ರಕ್ಷಿಸುವುದಕ್ಕಾಗಿ, ಉತ್ತರೆಯ ಗರ್ಭದಲ್ಲಿರುವ ಶಿಶುವು ಬ್ರಹ್ಮಾಸ್ತ್ರದಿಂದ ಅಪಾಯಕ್ಕೆ ಸಿಕ್ಕದಂತೆ, ತನ್ನ ಮಾಯೆಯಿಂದ ಅದನ್ನಾವರಿಸಿಕೊಂಡನು ತನ್ನ ಸುದರ್ಶನಚಕ್ರದಿಂದ ಆ ಬ್ರಹ್ಮಾಸ್ತ್ರದ ಶಕ್ತಿಯನ್ನಡಗಿಸುತ್ತಬಂದನು. ಎಲೈ ಶೌನಕಾದಿಗಳೇ! ವಾಸ್ತವವನ್ನು ವಿಚಾರಿಸಿದರೆ, ಬ್ರಹ್ಮಶಿರೋನಾಮಕವಾದ ಆ ಮಹಾಸ್ತ್ರಕ್ಕೆಯಾವ ವಿಧದಿಂದಲೂ ಪ್ರತೀಕಾರವಿಲ್ಲ. ಬೇರೆ ಯಾವ ಉಪಾಯದಿಂದಲೂ ಅದರ ಶಕ್ತಿಯನ್ನಡಗಿಸುವುದು ಸಾಧ್ಯವಲ್ಲ. ಹಾಗಿದ್ದರೂ ವಿಷ್ಣುತೇಜೋರೂಪವಾದ ಚಕ್ರಾಯುಧದ ಮುಂದೆಮಾತ್ರ ಅದರ ಶಕ್ತಿಯು ಸಾಗದೆ ಹೋಯಿತು. ಅಪ್ರತಿಹತವಾದ ಆ ಬ್ರಹ್ಮಾಸ್ತ್ರದ ಶಕ್ತಿಯನ್ನಡಗಿಸುವುದಕ್ಕೆ ವಿಷ್ಣುಚಕ್ರವುಮಾತ್ರ ಹೇಗೆ ಸಮರ್ಥವಾಯಿತೆಂದು ನೀವು ಆಶ್ಚರ್ಯಪಡಬೇಕಾದುದಿಲ್ಲ! ವಿಷ್ಣುವಿನ ಮಹಿಮೆಯು ಸಾಮಾನ್ಯವಾದುದಲ್ಲ. ಆತನು ಸರ್ವಾಶ್ಚರ್ಯಮಯನು! ಆ ಭಗವಂತನು ಕರ್ಮಾಧೀನವಾದ ಶರೀರವಿಲ್ಲದವನಾಗಿ, ತನ್ನ ಆಶ್ಚರ್ಯಶಕ್ತಿಯಿಂದಲೇ ಚಿದಚಿದಾತ್ಮಕವಾದ ಈ ಪ್ರಪಂಚವೆಲ್ಲವನ್ನೂ ಸೃಷ್ಟಿಸುವನು. ತಾನೇ ಅದನ್ನು ರಕ್ಷಿಸುವನು. ತಾನೇ ಅದನ್ನು ನಾಶಹೊಂದಿಸುವನು. ಈ ಮೂರುಕಾರ್ಯಗಳನ್ನೂ ಆತನು ತನಗಧೀನವಾಗಿಯೇ ಇಟ್ಟುಕೊಂಡಿರುವುದರಿಂದ, ಅವನಿಗೆ ಇದೊಂದು ಘನವಾದ ಕಾರ್ಯವಲ್ಲ. ಈ ವಿಚಾರವು ಹಾಗಿರಲಿ! ಇತ್ತಲಾಗಿ ಕುಂತೀದೇವಿಯು ಬ್ರಹ್ಮಾಸ್ತ್ರಬಾಧೆಯಿಂದ ತಪ್ಪಿಸಿಕೊಂಡ ತನ್ನ ಪುತ್ರರೊಡನೆಯೂ, ದ್ರೌಪದಿಯೊಡನೆಯೂ ಸೇರಿಬಂದು ಪ್ರಯಾಣಾಭಿಮುಖನಾದ ಶ್ರೀಕೃಷ್ಣನನ್ನು ನೋಡಿ ವಿಜ್ಞಾಪಿಸುವಳು. “ಎಲೈ ದೇವದೇವನೆ! ನೀನು ಸಕಲಜಗತ್ಕಾರಣನು! ಪ್ರಕೃತಿಗಿಂತಲೂ ಬೇರೆಯಾದವನು! ಸರ್ವಲೋಕೇಶ್ವರನು! ಸಮಸ್ತಭೂತಗಳ ಹೊರಗೂ, ಒಳಗೂ ವರ್ತಿಸತಕ್ಕವನಾದರೂ, ಪ್ರಕೃತಿಯಂತೆ ದೃಷ್ಟಿಗೋಚರನಾಗುವವನಲ್ಲ. ದೇವಾ! ನೀನು ಮಾಯೆಯೆಂಬ ತೆರೆಯಲ್ಲಿ ಮರೆಸಿಕೊಂಡವನಾದುದರಿಂದ, ಉಪಾಸಕರಲ್ಲದವರ ಇಂದ್ರಿಯಗಳಿಗೆ ಕಾಣುವವನಲ್ಲ. ವೇಷಧಾರಿಯಾದ ನಟನ ನಿಜರೂಪವನ್ನು ತಿಳಿಯುವುದು ಮಂದಬುದ್ಧಿಯುಳ್ಳವರಿಗೆ ಹೇಗೆ ಸಾಧ್ಯವಲ್ಲವೋ, ಹಾಗೆ ಯೋಗಸಿದ್ಧಿಯಿಲ್ಲದವರ ಕಣ್ಣಿಗೆ ನೀನು ಕಾಣಿಸಲಾರೆ! ಕೃಷ್ಣಾ! ಅಂತಹ ಪರಾತ್ಪರನಾದ ನಿನ್ನ ಪಾದಗಳಿಗೆ ನಮಸ್ಕಾರವು. ಎಲೈ ದೇವದೇವನೆ! ಯಾವಾಗಲೂ ನಿನ್ನ ಸ್ವರೂಪವನ್ನು ಮನನಮಾಡುತ್ತ, ಶುದ್ಧಾತ್ಮರಾಗಿ, ಪರಮಹಂಸ

ರಿನಿಸಿಕೊಂಡ ಮಹರ್ಷಿಗಳ ಭಕ್ತಿಯೋಗಕ್ಕೆ ಮಾತ್ರವೇ ವಿಷಯನಾಗತಕ್ಕ ನಿನ್ನನ್ನು, ಮೂಢಸ್ತ್ರೀಯರಾದ ನಾವು ಹೇಗೆತಾನೇ ತಿಳಿಯಬಲ್ಲೆವು? ನಟನು ಪಾತ್ರಗಳಿಗೆ ತಕ್ಕ ವೇಷಭಾಷೆಗಳನ್ನು ತೋರಿಸುವಾಗ, ಆಯಾ ನಾಮರೂಪಗಳಿಂದಲೇ ಹೊರಕ್ಕೆ ಕಾಣುವಂತೆ, ನೀನೂ ಅವತಾರಗಳನ್ನೆತ್ತಿದಾಗ ನಿನಗಿರುವ ಕೃಷ್ಣ ವಾಸುದೇವಾದಿನಾಮಗಳನ್ನು ಮಾತ್ರ ನಾವು ತಿಳಿಯಬಲ್ಲೆವು. ಆದುದರಿಂದ ಆ ಹೆಸರುಗಳಿಂದಲೇ ನಿನ್ನನ್ನು ಸ್ತುತಿಸುವೆವು. ಹೇ ಕೃಷ್ಣಾ! ಹೇ ವಾಸುದೇವಾ! ಹೇ ದೇವಕೀನಂದನಾ! ಹೇ ನಂದಕುಮಾರಾ? ಗೋವಿಂದಾ! ನಿನಗೆ ಬಾರಿ ಬಾರಿಗೂ ನಮಸ್ಕಾರವು! ಓ ಪದ್ಮನಾಭಾ! ನಿನಗೆ ನಮಸ್ಕಾರವು! ಪುಂಡರೀಕಾಕ್ಷಾ! ನಿನಗೆ ನಮಸ್ಕಾರವು! ಪದ್ಮಮಾಲಾಶೋಭಿತನಾದ ಓ ಕೃಷ್ಣಾ! ನಿನಗೆ ನಮಸ್ಕಾರವು. ಕಮಲವುಂತೆ ಪಾದವುಳ್ಳ ಹೇ ವಾಸುದೇವಾ! ನಿನಗೆ ನಮಸ್ಕಾರವು. ಓ ಹೃಷೀಕೇಶಾ! ದುರಾತ್ಮನಾದ ಕಂಸನ ಸೆರೆಯಲ್ಲಿ ಸಿಕ್ಕಿ ದುಃಖಿತೆಯಾದ ದೇವಕೀದೇವಿಯನ್ನು ದುಃಖದಿಂದ ಬಿಡಿಸಿದಂತೆ, ನನ್ನನ್ನೂ ಈ ನನ್ನ ಪುತ್ರರೊಡನೆ ವಿಪತ್ತುಗಳಿಂದ ತಪ್ಪಿಸಿ ಕಾಪಾಡಿದ ಪ್ರಭುವೇ ನೀನಲ್ಲವೇ? ಆಶ್ರಿತವತ್ಸಲಾ! ಹಿಂದೆ ಭೀಮನು ವಿಷಾನ್ನವನ್ನು ತಿಂದಾಕೂಡ ಸಾಯದಂತೆ ರಕ್ಷಿಸಿದೆ! ಅರಗಿನ ಮನೆಯಲ್ಲಿ ಸಿಕ್ಕಿ ಬೇಯುತ್ತಿದ್ದ ನಮ್ಮನ್ನು ಆ ಮಹಾಗ್ನಿಯಿಂದ ತಪ್ಪಿಸಿದೆ! ಆಗಾಗ ಅರಣ್ಯದಲ್ಲಿ ರಾಕ್ಷಸದರ್ಶನದಿಂದುಂಟಾದ ಭಯದಿಂದ ಕಾಪಾಡಿ, ವನವಾಸದುಃಖಗಳಿಂದಲೂ ಸಂರಕ್ಷಿಸಿದೆ! ದುರ್ಯೋಧನಾದಿಗಳ ಸಭೆಯಲ್ಲಿ ದ್ರೌಪದಿಯ ಮಾನವನ್ನು ಕಾಪಾಡಿದೆ! ಒಂದೊಂದು ಯುದ್ಧದಲ್ಲಿಯೂ, ಎಷ್ಟೋ ಮಹಾವೀರರ ಶಸ್ತ್ರಾಸ್ತ್ರಗಳಿಂದ ರಕ್ಷಿಸಿದೆ! ಕೊನೆಗೆ ಈ ದ್ರೋಣಪುತ್ರನಾದ ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದಲೂ ತಪ್ಪಿಸಿದೆ! ಓ ಜಗನ್ನಾಯಕಾ! ಕೃಷ್ಣಾ! ತಿರುಗಿ ಸಂಸಾರಸಂಪರ್ಕವೇ ಇಲ್ಲದಂತೆ ಮಾಡುವ ಈ ನಿನ್ನ ದರ್ಶನವು ಹೀಗೆಯೇ ಲಭಿಸುತ್ತಿದ್ದಪಕ್ಷದಲ್ಲಿ, ನಮಗೆ ಇಂತಹ ವಿಪತ್ತುಗಳು ಎಷ್ಟೆಷ್ಟೇ ಬಂದರೂ ಚಿಂತೆಯಿಲ್ಲ. ಇಂತಹ ವಿಪತ್ತುಗಳಿಗೆ ಸಿಕ್ಕದಹೊರತು ಮನುಷ್ಯರು ನಿನ್ನ ಕೃಪೆಗೆ ಪಾತ್ರರಾಗಲಾರರು. ಕುಲದಲ್ಲಿಯೂ, ಐಶ್ವರ್ಯದಲ್ಲಿಯೂ, ವಿದ್ಯೆಯಲ್ಲಿಯೂ, ಧನದಲ್ಲಿಯೂ, ಮೇಲಿಮೇಲೆ ವೃದ್ಧಿಯನ್ನು ಹೊಂದಿ, ಗರ್ವಿತರಾದ ಮನುಷ್ಯರು, ದೀನವತ್ಸಲನಾದ ನಿನ್ನ ಹೆಸರನ್ನು ಹೇಳುವುದಕ್ಕಾದರೂ ಅರ್ಹರಾಗಲಾರರು. ದೇವಾ! ನೀನು ನಿಷ್ಕಾಮರಾದ ಯೋಗಿಗಳಿಗೆ ಮಾತ್ರವೇ ಲಭ್ಯನು. ಮತ್ತು * ಸತ್ವರಜಸ್ತ

---

* ಈ ಮೂರು ವಿಶೇಷಣಗಳಿಂದ, ಭಗವಂತನ ಅಸಾಧಾರಣಗುಣಗಳು ವ್ಯಕ್ತವಾಗುವುವು. ಗುಣಜನಿತಕಾರ್ಯಗಳಿಲ್ಲದವನೆಂಬುದರಿಂದ ಅಚಿತ್ತಿಗೆ ವ್ಯಾವೃತ್ತಿಯು ಸೂಚಿತವಾಗು

ಮೋಗುಣಕಾರ್ಯಗಳಾದ ಕಾಮಕ್ರೋಧಾದಿಗಳಿಲ್ಲದವನು! ಹಸಿವು, ಬಾಯಾರಿಕೆ, ಶೋಕ, ಮೋಹ, ಜರಾಮರಣಗಳೆಂಬ ಆರುಬಗೆಯ ಬಾಧೆಗಳಿಲ್ಲದವನು! ಆತ್ಮಾರಾಮನು! ಮೋಕ್ಷಪ್ರದನು. ನಿನಗೆ ನಮಸ್ಕರಿಸುವೆನು. ದೇವದೇವಾ! ಕಾಲವೆಂಬುದಕ್ಕೆ ಕೊನೆಮೊದಲಿಲ್ಲ! ಅದು ಸರ್ವಸಮವಾಗಿ ವರ್ತಿಸತಕ್ಕುದು. ಆ ಕಾಲದಿಂದಲೇ ಭೂತಗಳಿಗೆ ಅನ್ಯೋನ್ಯಕಲಹವು ಸಂಭವಿಸುತ್ತಿರುವುದು! ಬ್ರಹ್ಮಾದಿದೇವತೆಗಳನ್ನಾದರೂ ಅದು ವಶೀಕರಿಸದೇ ಬಿಡುವುದಿಲ್ಲ. ಆ ಕಾಲವೇ ನಿನಗೆ ಶರೀರರೂಪವಾಗಿರುವುದೆಂದು ತಿಳಿಯುವೆನು. ಎಲೈ ಮಹಾತ್ಮನೆ! ನೀನು ಮನುಷ್ಯರಸ್ತೆ ತೋರುತ್ತಿರುವಾಗಲೂ ನಿನ್ನ ವ್ಯಾಪಾರಗಳನ್ನು ಯಾವನೂ ಕಂಡು ಕೊಳ್ಳಲಾರನು. ನಿನಗೆ ಒಬ್ಬನು ಪ್ರಿಯನೆಂದೂ, ಮತ್ತೊಬ್ಬನು ದ್ವೇಷಿಯೆಂದೂ ಭೇದಬುದ್ಧಿಯಿಲ್ಲವು ನೀನು ಕೆಲವರಲ್ಲಿ ತೋರಿಸತಕ್ಕ ನಿಗ್ರಹವೂ ಕೂಡ ಕೊನೆಗೆ ಪರಮಾನುಗ್ರಹರೂಪವಾಗಿ ಮುಕ್ತಿಯನ್ನೇ ಕೈಗೂಡಿಸುವುದು. ಯಮಳಾರ್ಜುನಾದಿಗಳು ನಿನ್ನಿಂದ ನಿಗ್ರಹಿಸಲ್ಪಟ್ಟು ಮುಕ್ತಿಯನ್ನು ಹೊಂದುದೇ ಇದಕ್ಕೆ ನಿದರ್ಶನವು ಆದುದರಿಂದ ನಿನಗೆ ಯಾರಲ್ಲಿಯೂ, ಯಾವ ವಿಧವಾದ ವೈಷಮ್ಯವೂ ಇರದು! ಹೀಗೆ ಸರ್ವಸಮನಾಗಿರುವ ನಿನ್ನಲ್ಲಿ ವೈಷಮ್ಯವನ್ನಾರೋಪಿಸಬೇಕಾದರೆ ಅವರ ಬುದ್ಧಿಯೇ ವಿಷಮವಾಗಿರಬೇಕಲ್ಲದೆ ಬೇರೆಯಲ್ಲ! ಓ ವಿಶ್ವಾತ್ಮಾ! ನೀನು ಕರ್ಮಸಂಬಂಧವಿಲ್ಲದವನು. ಕರ್ಮಾಧೀನವಾದ ಜನ್ಮವಿಲ್ಲದವನು? ತಿರ್ಯಕ್ಕುಗಳಲ್ಲಿಯೂ, ಋಷಿಗಳಲ್ಲಿಯೂ, ಮನುಷ್ಯರಲ್ಲಿಯೂ ಬೇರೆಬೇರೆ ಅವತಾರಗಳನ್ನೆತ್ತಿ, ನೀನು ನಡೆಸಿದ ಕಾರ್ಯಗಳೆಲ್ಲ ಕೇವಲನಟನಗಳಲ್ಲದೆ ಬೇರೆಯಲ್ಲ. ಚಿಕ್ಕಂದಿನಲ್ಲಿ ನೀನು ಯಾವುದೋ ಒಂದು ತಪ್ಪನ್ನುಮಾಡಿದುದಕ್ಕಾಗಿ, ಯಶೋದೆಯು ನಿನ್ನನ್ನು ಹಗ್ಗದಿಂದ ಕಟ್ಟುವ ಸಂದರ್ಭದಲ್ಲಿ ನಿನ್ನ ಕೈಯನ್ನು ಹಿಡಿದಾಗ, ಕಾಲಮೃತ್ಯುವಿಗೂ ನೀನು ಭಯವನ್ನುಂಟು ಮಾಡಬಲ್ಲವನಾಗಿದ್ದರೂ, ಅಬಲೆಯಾದ ಆಕೆಯೊಬ್ಬಳಿಗೆ ಎಷ್ಟೋ ಭಯಪಟ್ಟವನಂತೆ ನಟಿಸುತ್ತ, ಕಾಡಿಗೆಯೆಲ್ಲವೂ ಕದರುವಂತೆ ಕಣ್ಣೀರುಬಿಟ್ಟು, ಬೆದರಿದ ದೃಷ್ಟಿಗಳಿಂದ ನೋಡುತ್ತ ನಿಂತೆಯಲ್ಲವೇ? ಆಗ ಮುಖದಲ್ಲಿ ಭಯವನ್ನು ನಟಿಸಿದ ನಿನ್ನ ಸ್ಥಿತಿಯು ನನ್ನನ್ನು ಮೋಹಸಮುದ್ರದಲ್ಲಿ ಮುಳುಗಿಸುತ್ತಿರುವುದು. ಕೃಷ್ಣಾ! ಆ ನಿನ್ನ ಭಯವು ಕೇವಲ ನಟನವಲ್ಲದೆ ನಿಜವೆಂದು ಹೇಳುವುದಕ್ಕಾದೀತೇ? ನೀನು ಜನ್ಮಾದಿಗಳಿಲ್ಲದವನಾದರೂಕೂಡ ಕೆಲವರು ನಿನ್ನನ್ನು, ಪುಣ್ಯಶ್ಲೋಕನಾಗಿಯೂ ನಿನಗೆ ಪರಮಭಕ್ತನಾಗಿಯೂ ಇರುವ

---

ವುದು. ಜರಮರಣಾದಿಗಳಿಲ್ಲವೆಂಬುದರಿಂದ ಬದ್ಧಜೀವನಿಗೂ, ಆತ್ಮಾರಾಮತ್ವಮೋಕ್ಷಪ್ರದತ್ವಗಳಿಂದ ನಿತ್ಯಮುಕ್ತಜೀವರಿಗೂ ವ್ಯಾವೃತ್ತಿಯು ಹೇಳಲ್ಪಡುವುದು.

ಯದುವಿನ ಕೀರ್ತಿಯನ್ನು ಹರಡಿಸುವುದಕ್ಕಾಗಿ ಮಲಯಪರ್ವತದಲ್ಲಿ ಚಂದನವೃಕ್ಷದಂತೆ ಆತನ ವಂಶದಲ್ಲಿ ಹುಟ್ಟಿದುದಾಗಿ ಹೇಳುವರು. ಬೇರೆ ಕೆಲವರು ಪರಮಪುರುಷನಾದ ನೀನು ದುಷ್ಟರಾಕ್ಷಸರ ವಧಾರ್ಥವಾಗಿಯೂ, ಲೋಕಕ್ಷೇಮಕ್ಕಾಗಿಯೂ, ದೇವಕೀವಸುದೇವರ ಪ್ರಾರ್ಥನೆಯಮೇಲೆ ಅವರಿಗೆ ಕುಮಾರನಾಗಿ ಜನಿಸಿದೆಯೆಂದು ಹೇಳುವರು. ಇನ್ನು ಕೆಲವರು, ನೀನು ಬ್ರಹ್ಮಾದಿದೇವತೆಗಳಿಂದ ಪ್ರಾರ್ಥಿತನಾಗಿ, ಸಮುದ್ರದಲ್ಲಿ ಭಾರದಿಂದ ಮುಳುಗಿ ಹೋಗುತ್ತಿರುವ ಹಡಗಿನಿಂದ ಆ ಭಾರವನ್ನಿಳಿಸುವಂತೆ, ಭೂಭಾರವನ್ನು ತಪ್ಪಿಸುವುದಕ್ಕಾಗಿಯೇ ಹುಟ್ಟಿದೆಯೆಂದು ಹೇಳುವರು. ತತ್ವಜ್ಞಾನಿಗಳಾದ ಮತ್ತೆ ಕೆಲವರು, ಈ ಲೋಕದಲ್ಲಿ ಅಜ್ಞಾನದಿಂದಲೂ, ವಿಷಯಾಭಿಲಾಷೆಯಿಂದಲೂ, ಅವಶ್ಯಾನುಕೂಲಗಳಾದ ಕಾರ್ಯಗಳಿಂದಲೂ ಬದ್ಧರಾಗಿ, ಸಂಸಾರಸಮುದ್ರದಲ್ಲಿ ಸಿಕ್ಕಿ ನರಳುತ್ತಿರುವ ಮನುಷ್ಯರಿಗೆ ನಿನ್ನ ಚರಿತ್ರಗಳನ್ನು ಕೇಳುವುದಕ್ಕೂ, ನಿನ್ನ ರೂಪವನ್ನು ಧ್ಯಾನಿಸುವುದಕ್ಕೂ ಆಶೆಹುಟ್ಟಿಸುವಂತೆ, ಈ ಅವತಾರಗಳನ್ನೆತ್ತಿರುವೆಯೆಂದು ಹೇಳುವರು. ದೇವಾ! ನಿನ್ನ ಚರಿತ್ರಗಳನ್ನು ಯಾರು ಕೇಳುವರೋ, ಯಾರು ಹೇಳುವರೋ ಯಾರು ಗಾನಮಾಡುವರೋ, ಯಾರು ಆಗಾಗ ಸ್ಮರಿಸುವರೋ ಯಾರು ನಿನ್ನ ಗುಣವರ್ಣನದಿಂದಾನಂದಿಸುವರೋ, ಅಂತವರುಮಾತ್ರವೇ ಶೀಘ್ರಕಾಲದಲ್ಲಿ ಸಂಸಾರತಾರಕವಾದ ನಿನ್ನ ಪಾದಪದ್ಮಗಳನ್ನು ನೋಡಬಲ್ಲರು. ಎಲೈ ಮಹಾತ್ಮನೆ! ನಿನ್ನ ಪಾದಾಶ್ರಯದಿಂದ ಸಮಸ್ತದುಃಖಗಳನ್ನೂ ಜಯಿಸಿದ ನಮಗೆ ಈ ನಿನ್ನ ಪಾದಪದ್ಮಗಳು ಹೊರತು ಬೇರೆ ದಿಕ್ಕಿಲ್ಲವು. ಹೀಗೆ ಸರ್ವವಿಧದಲ್ಲಿಯೂ ನಿನ್ನನ್ನೇ ನಂಬಿ, ನಿನ್ನಲ್ಲಿ ಸ್ನೇಹವನ್ನು ಬೆಳಸಿ, ನಿನಗೆ ಅನುಜೀವಿಗಳಾಗಿರುವ ನಮ್ಮನ್ನು ಈಗ ಬಿಟ್ಟು ಹೋಗಬೇಕೆಂದೆಣಿಸುವೆಯಾ? ಜೀವನಿಲ್ಲದಮೇಲೆ ಇಂದ್ರಿಯಗಳ ವ್ಯಾಪಾರವು ಹೇಗೆ ನಿಂತುಹೋಗುವುದೋ, ಹಾಗೆ ನಿನ್ನ ಸಾನ್ನಿಧ್ಯವಿಲ್ಲದಮೇಲೆ, ನಾವಾಗಲಿ, ಯಾದವರಾಗಲಿ, ಯಾವ ಕಾರ್ಯಕ್ಕೂ ಬೇಡದೆ ಹೋಗುವೆವು. ನಾವು ಕೇವಲ ನಾಮರೂಪಗಳನ್ನು ಹೊತ್ತಿದ್ದಮಾತ್ರಕ್ಕೆ ನಮ್ಮಿಂದೇನಾಗುವುದು? ಸರ್ವೋತ್ತಮಗಳಾದ ಶುಭಲಕ್ಷಣಗಳಿಂದ ಶೋಭಿತವಾದ ಈ ನಿನ್ನ ಪಾದದ ಗುರುತುಗಳು. ಈ ನೆಲದಲ್ಲಿ ಕಾಣುತ್ತಿರುವ ವರೆಗೆಮಾತ್ರವೇ ಈದೇಶವು ಶೋಭಿಸುತ್ತಿರುವುದೇ ಹೊರತು, ಅದಿಲ್ಲದಿದ್ದಾಗ ಇದರ ಕಳೆಯೇ ಕೆಟ್ಟುಹೋಗುವುದು. ಕೃಷ್ಣಾ! ನಿನ್ನ ಕಟಾಕ್ಷಮಾತ್ರದಿಂದಲ್ಲವೇ ಈ ಪ್ರದೇಶಗಳೆಲ್ಲ ಸಸ್ಯಸಮೃದ್ಧಿಯಿಂದಲೂ, ಪುಷ್ಪಫಲಗಳಿಂದಲೂ ಅಲಂಕೃತವಾಗಿರುವುವು. ಅನುಗ್ರಹಪೂರ್ವಕವಾದ ನಿನ್ನ ಈ ನೋಟದಿಂದಲ್ಲವೇ ಇಲ್ಲಿನ ಉದ್ಯಾನವನಗಳೂ, ನದಿಗಳೂ, ಪರ್ವತಗಳೂ ವೃದ್ಧಿಹೊಂದುತ್ತಿರುವುವು.

ಎಲೈ ವಿಶ್ವಾತ್ಮನೆ! ಎಲೈ ವಿಶ್ವಶರೀರನೆ! ಸಮಸ್ತಪ್ರಾಣಿಗಳ ಅಂತಃಕರಣಗಳನ್ನೂ ನಿಯಮಿಸತಕ್ಕವನು ನೀನೇ ಅಲ್ಲವೆ? ಇದೇನು? ನೀನು ನಿನ್ನವರಾದ ಈ ಪಾಂಡವರಲ್ಲಿಯೂ, ನನ್ನಲ್ಲಿಯೂ, ಯಾದವರಲ್ಲಿಯೂ ಇರತಕ್ಕ ದೃಢವಾದ ಸ್ನೇಹಪಾಶವನ್ನು ಛೇದಿಸುವುದಕ್ಕೆ ಪ್ರಯತ್ನಿಸುವೆಯಾ? ಮುಂದೆ ನಮ್ಮ ಗತಿಯೇನು? ನಿನಗಿಂತಲೂ ಬೇರೆ ಗತಿಯಿಲ್ಲವೆಂದು ನಂಬಿರುವ ಈ ನಮ್ಮಬುದ್ಧಿಯೂ, ಗಂಗಾಪ್ರವಾಹವು ಅನಿಚ್ಛಿನ್ನವಾಗಿ ಸಮುದ್ರವನ್ನು ಸೇರುವಂತೆ ಬಾರಿಬಾರಿಗೂ ನಿನ್ನಲ್ಲಿಯೇ ಲಯಹೊಂದಿ, ಅಮಿತಾನಂದವನ್ನು ಹೊಂದುತ್ತಿರುವುದು. ಸಮುದ್ರವನ್ನು ಬಿಟ್ಟರೆ ಗಂಗಾಪ್ರವಾಹಕ್ಕೆ ಬೇರೆ ಆಶ್ರಯವು ಇಲ್ಲದಂತೆ ನಿನ್ನನ್ನು ಬಿಟ್ಟರೆ ನಮಗೆ ಬೇರೆ ಆಶ್ರಯವಿಲ್ಲವು ಹೇ ಕೃಷ್ಣಾ! ನನ್ನ ಪುತ್ರನಾದ ಅರ್ಜುನನಿಗೆ ನೀನು ಪರಮಮಿತ್ರನಲ್ಲವೇ? ಭೂಮಿಗೆ ಭಾರಭೂತರಾದ ದುಷ್ಟಕ್ಷತ್ರಿಯರ ವಂಶವನ್ನು ದಹಿಸುವುದರಲ್ಲಿ ನಿನ್ನ ವೀರ್ಯವು ಅಗ್ನಿಪ್ರಾಯವಾದುದು. ನೀನು ಯಾದವಕುಲಕ್ಕೆ ತಿಲಕದಂತಿರುವವನು. ಎಣೆಯಿಲ್ಲದ ವೀರ್ಯವುಳ್ಳವನು ಗೋಬ್ರಾಹ್ಮಣರ ಮತ್ತು ದೇವತೆಗಳಹಿತಕ್ಕಾಗಿಯೇ ಈ ಅವತಾರವನ್ನೆತ್ತಿದವನು. ಯೋಗೀಶ್ವರರೆಲ್ಲರಿಗೂ ನೀನೇ ಗುರುವೆನಿಸಿಕೊಂಡವನು. ಲೋಕದಲ್ಲಿ ನಿನ್ನನ್ನು ಯಾರು ತಾನೇ ಸ್ತುತಿಸಬಲ್ಲರು? ಗೋವಿಂದಾ! ನಿನಗೆ ಅನೇಕವಂದನೆಗಳನ್ನು ಸಮರ್ಪಿಸುವೆನು. ನನ್ನ ಪ್ರಣಾಮಗಳನ್ನು ಸ್ವೀಕರಿಸು!" ಎಂದು ಕೈಮುಗಿದು ನಿಂತಿದ್ದಳು. ಹೀಗೆ ಕುಂತಿಯು ಮೃದುಮಧುರವಚನಗಳಿಂದ ಸ್ತುತಿಸುವುದನ್ನು ನೋಡಿ ಕೃಷ್ಣನು ತನ್ನ ಮಾಯೆಯಿಂದ ಅವಳನ್ನು ಮೋಹಗೊಳಿಸುವಂತೆ ಮುಗುಳ್ನಗೆಯಿಂದ ನಗುತ್ತ "ಅಮ್ಮಾ! ನಿನ್ನಿಷ್ಟದಂತೆಯೇ ನಡೆಸುವೆನು" ಎಂದು ಹೇಳಿ ಧರ್ಮರಾಜನ ಪ್ರಾರ್ಥನೆಯನ್ನೂ ನಿರಾಕರಿಸಲಾರದೆ, ತನ್ನ ಪ್ರಯಾಣಸನ್ನಾಹವನ್ನು ನಿಲ್ಲಿಸಿ ಹಿಂತಿರುಗಿದನು. ಹಾಗೆಯೇ ಕುಂತಿದೇವಿಯನ್ನೂ, ಸುಭದ್ರೆಮೊದಲಾದ ಇತರ ಸ್ತ್ರೀಯರನ್ನೂ, ಸಮಾಧಾನಪಡಿಸುತ್ತ, ತಿರುಗಿ ಹಸ್ತಿನಾಪುರಕ್ಕೆ ಪ್ರವೇಶಿಸಿದನು. ಇಷ್ಟರಲ್ಲಿ ಧರ್ಮರಾಜನು ತಾನು ಹಿಂದಿನ ಯುದ್ಧದಲ್ಲಿ ನಡೆಸಿದ ಬಂಧುವಧಕ್ಕಾಗಿ ಬಹಳ ಚಿಂತಾಕುಲನಾಗಿರುವುದನ್ನು ನೋಡಿ, ವ್ಯಾಸಾದಿ ಮಹರ್ಷಿಗಳೂ, ಅದ್ಭುತಪ್ರಭಾವವುಳ್ಳ ಶ್ರೀಕೃಷ್ಣನೂ. ಎಷ್ಟೆಷ್ಟೋ ಇತಿಹಾಸಗಳನ್ನು ಹೇಳಿ ತಿಳಿಸಿ, ಆಗಾಗ ಅವನನ್ನು ಸಮಾಧಾನಪಡಿಸುತಿದ್ದರು. ಇಷ್ಟಾದರೂ ಧರ್ಮರಾಜನ ಮನಸ್ಸಿಗೆ ದುಃಖಶಾಂತಿಯುಂಟಾಗಲಿಲ್ಲ. ಆಗಾಗ ತನ್ನ ಬಂಧುಮರಣವನ್ನು ನೆನೆಸಿಕೊಂಡು ಮೋಹಪಾಶದಿಂದ ಪರವಶನಾಗಿ, ಅಜ್ಞಾನದಿಂದ ಕವಿದ ಮನಸ್ಸುಳ್ಳವನಾಗಿ "ಅಯ್ಯೋ! ಕೇವಲದುರಾತ್ಮನಾದ ನನ್ನ ಅಜ್ಞತೆಯನ್ನೇನೆಂದು

ಹೇಳಲಿ! ನಾಯಿನರಿಗಳಿಗೆ ಆಹಾರಯೋಗ್ಯವಾಗಿ, ಕೇವಲತುಚ್ಛವಾದ ಈ ಶರೀರಕ್ಕೆ ಸೌಖ್ಯವನ್ನುಂಟುಮಾಡಬೇಕೆಂಬ ದುರಾಶೆಯಿಂದ, ಎಷ್ಟೋ ಪ್ರಾಣಿಗಳನ್ನು ಕೊಲ್ಲಿಸಿದೆನು. ಲೋಕದಲ್ಲಿ ಇಂತಹ ಅವಿವೇಕಿಯೂ ಬೇರೊಬ್ಬನುಂಟೆ? ಮಕ್ಕಳೆಂದೂ, ಮುದುಕರೆಂದೂ, ಬ್ರಾಹ್ಮಣರೆಂದೂ, ಗುರುಗಳೆಂದೂ, ಮಿತ್ರರೆಂದೂ, ಅಣ್ಣ ತಮ್ಮಂದಿರೆಂದೂ ನೋಡದೆ, ನಿರ್ದಯನಾಗಿ ಅಂತಹ ಮಹಾವೀರರೆಲ್ಲರನ್ನೂ ಕೊಲ್ಲಿಸಿದ ನಾನು, ಇನ್ನು ಹತ್ತೆಂಟುಜನ್ಮಗಳನ್ನೆತ್ತಿದರೂ ಆ ಮಹಾಪಾತಕದಿಂದ ತಪ್ಪಿಸಿಕೊಳ್ಳಲಾರೆನು. ಧರ್ಮಯುದ್ಧದಲ್ಲಿ ಶತ್ರುಗಳನ್ನು ಕೊಲ್ಲುವುದರಿಂದ ಪಾಪವಿಲ್ಲವೆಂದು ಹೇಳುವುದುಂಟು! ಇದಕ್ಕೆ ನಾನುಮಾತ್ರ ಸಮ್ಮತಿಸಲಾರೆನು. ದೇಶದ ಪ್ರಜೆಗಳಿಗೆ ಕಷ್ಟವನ್ನುಂಟುಮಾಡಿ, ಅವರನ್ನು ಬಾಧಿಸತಕ್ಕ ಶತ್ರುರಾಜರನ್ನು ಕೊಂದರೂ ಕೊಲ್ಲಬಹುದು. ಅದರಿಂದ ಪಾಪವುಂಟಾಗದು. ನಾನು ನಡೆಸಿದ ಕೃತ್ಯವಾದರೋ ಅಂತಹುದಲ್ಲ. ನನ್ನ ತಮ್ಮನಾದ ದುರ್ಯೋಧನನು ಎಷ್ಟೋ ಸುಖದಿಂದ ರಾಜ್ಯವನ್ನು ಪರಿಪಾಲಿಸುತಿದ್ದವನು. ಅಂತಹ ಸ್ಥಿತಿಯಲ್ಲಿಯೂ ನಾನು ರಾಜ್ಯಲೋಭದಿಂದಲ್ಲವೇ ಅವನನ್ನೂ, ಅವನ ಪರಿವಾರವೆಲ್ಲವನ್ನೂ ಕೊಲ್ಲಿಸಿದಂತಾಯಿತು. ಈ ಪಾಪವು ನನ್ನನ್ನುಂಟದಿರುವುದೆ? ಒಂದು ವೇಳೆ ಯುದ್ಧದಲ್ಲಿ ನಿಂತ ಶತ್ರುರಾಜರನ್ನು ಕೊಲ್ಲುವುದು ಧರ್ಮವೆಂದೇ ಎಣಿಸಿಕೊಂಡರೂ, ಪತಿಗಳನ್ನೂ, ಪುತ್ರರನ್ನೂ, ಬಂಧುಗಳನ್ನೂ ಕಳೆದುಕೊಂಡು ದುಃಖಿಸುತ್ತಿರುವ ಸ್ತ್ರೀಯರ ವಿಷಯದಲ್ಲಿ ನಾನುಮಾಡಿದ ದ್ರೋಹವನ್ನು ಅಷ್ಟಿಷ್ಟೆಂದು ಹೇಳುವುದಕ್ಕಿಲ್ಲ. ಕ್ಷತ್ರಿಯನಾಗಿಯೂ, ಗೃಹಸ್ಥನಾಗಿಯೂ ಇರತಕ್ಕವನು ನಡೆಸತಕ್ಕ ಧರ್ಮಗಳೆಲ್ಲವನ್ನೂ, ನಾನು ನನ್ನ ಜೀವಾವಧಿಯಾಗಿ ತಪ್ಪದೆ ನಡೆಸುತ್ತ ಬಂದರೂ, ಈ ಪಾಪವು ನನ್ನನ್ನು ಬಿಟ್ಟು ಹೋಗತಕ್ಕುದಲ್ಲ. "ಯಜ್ಞಾದಿಕರ್ಮಗಳಿಂದ ಈ ಪಾಪವನ್ನು ನೀಗಿಸಿಕೊಳ್ಳಬಾರದೆ?" ಎಂದರೆ, ಕರ್ಮದಿಂದಲೇ ಕರ್ಮವನ್ನು ನೀಗಿಸಿಕೊಳ್ಳುವುದು ಹೇಗೆತಾನೇ ಸಾಧ್ಯವು? ಕೊಳೆಯ ನೀರಿನಿಂದಲೇ ಕೊಳೆಯನ್ನು ನೀಗಿಸುವುದಕ್ಕಾದೀತೇ? ಮದ್ಯಪಾತ್ರವನ್ನು ಮದ್ಯದಿಂದಲೇ ತೊಳೆದು ಶುದ್ಧಮಾಡುವುದು ಸಾಧ್ಯವೆ? ಹಾಗೆಯೇ ಬಂಧುಮಿತ್ರರನ್ನು ಕೊಲ್ಲಿಸಿದುದರಿಂದುಂಟಾದ ಈ ನನ್ನ ಮಹಾಪಾತಕವನ್ನು ಯಾಗವೆಂಬ ನೆವದಿಂದ ಮತ್ತೊಂದು ಪಶುವಧವನ್ನುಮಾಡಿ ಹೋಗಲಾಡಿಸಿಕೊಳ್ಳುವುದೆಂದರೇನು? ಆದುದರಿಂದ ಈ ನನ್ನ ಮಹಾಪಾಪವು ಯಜ್ಞಯಾಗಾದಿಗಳಿಂದಲೂ ನೀಗತಕ್ಕುದಲ್ಲವೆಂದೆಣಿಸುವೆನು" ಎಂದನು. ಇದು ಎಂಟನೆಯ ಅಧ್ಯಾಯವು.

———



107. ಧರ್ಮರಾಜನು ತಮ್ಮಂದಿರೊಡನೆ ಭೀಷ್ಮನ ಬಳಿಗೆ ಬಂದು, ಅಲ್ಲಿ ಶ್ರೀಕೃಷ್ಣನ ಸಮಕ್ಷದಲ್ಲಿ ಧರ್ಮೋಪದೇಶವನ್ನು ಪಡೆದುದು.

ಧರ್ಮರಾಜನು ತನ್ನ ತಮ್ಮಂದಿರೊಡನೆಯೂ, ಶ್ರೀಕೃಷ್ಣನೊಡನೆಯೂ ಭೀಷ್ಮಾಚಾರ್ಯನ ಬಳಿಗೆ ಬಂದು ಅವನಿಂದ ಧರ್ಮೋಪದೇಶವನ್ನು ಹೊಂದಿದುದು. ಭೀಷ್ಮನು ಶ್ರೀಕೃಷ್ಣನನ್ನು ಸ್ತುತಿಸುತ್ತ ದೇಹತ್ಯಾಗವನ್ನು ಮಾಡಿದುದು.

ಹೀಗೆ ಧರ್ಮರಾಜನು ತಾನು ನಡೆಸಿದ ದ್ರೋಹಕಾರ್ಯಕ್ಕಾಗಿ ಮನಸ್ಸಿನಲ್ಲಿ ಭಯಪಡುತ್ತ, ಆ ಪಾಪನಿವೃತ್ತಿ ಪೂರ್ವಕವಾಗಿ ಪುಣ್ಯಲೋಕಪ್ರಾಪ್ತಿಗೆ ಬೇಕಾದ ಧರ್ಮಗಳನ್ನು ಕೇಳಿ ತಿಳಿಯಬೇಕೆಂಬ ಅಪೇಕ್ಷೆಯಿಂದ, ಕುರುಕ್ಷೇತ್ರದಲ್ಲಿ ಮರಣೋನ್ಮುಖನಾಗಿ ಮಲಗಿದ್ದ ಭೀಷ್ಮಾಚಾರ್ಯರನ್ನು ನೋಡುವುದಕ್ಕಾಗಿ ಹೊರಟನು. ಇವನ ಹಿಂದೆ ಭೀಮಾರ್ಜುನರೇ ಮೊದಲಾದ ಇವನ ತಮ್ಮಂದಿರೆಲ್ಲರೂ, ಉತ್ತಮಾಶ್ವಗಳಿಂದಲೂ, ಸುವರ್ಣಭೂಷಣಗಳಿಂದಲೂ ಅಲಂಕೃತವಾದ ರಥವನ್ನೇರಿ ಹೊರಟರು. ಹಾಗೆಯೇ ವ್ಯಾಸಧೌಮ್ಯರೇ ಮೊದಲಾದ ಬ್ರಾಹ್ಮಣೋತ್ತಮರೂ ಅವನನ್ನು ಹಿಂಬಾಲಿಸಿದರು. ಭಗವಂತನಾದ ಶ್ರೀಕೃಷ್ಣನೂಕೂಡ ಅರ್ಜುನಸಹಿತನಾಗಿ ರಥವನ್ನೇರಿ ಹೊರಟನು. ಹೀಗೆ ಧರ್ಮರಾಜನು ಯಕ್ಷರಿಂದ ಪರಿವೃತನಾದ ಕುಬೇರನಂತೆ, ಸಮಸ್ತಪರಿವಾರಗಳಿಂದಲೂ ಕೂಡಿ ಪ್ರಯಾಣಮಾಡಿ ಬಂದನು. ಇತ್ತಲಾಗಿ ಕುರುಕ್ಷೇತ್ರದಲ್ಲಿ ಆಕಾಶದಿಂದ ಕೆಳಗಿಳಿದ ದೇವತೆಯಂತೆ ಪ್ರಕಾಶಿಸುತಿದ್ದ ಭೀಷ್ಮಾಚಾರ್ಯರನ್ನು ನೋಡಿ, ಪಾಂಡವರೆಲ್ಲರೂ ಶ್ರೀಕೃಷ್ಣನೊಡಗೂಡಿ ನಮಸ್ಕರಿಸಿದರು. ಈ ಸಮಯಕ್ಕೆ ಸರಿಯಾಗಿ ಆಕಾಶದಿಂದ ದೇವರ್ಷಿಗಳೂ, ಬ್ರಹ್ಮರ್ಷಿಗಳೂ, ಅನೇಕರಾಜರ್ಷಿಗಳೂ, ಕುರುಪಿತಾಮಹನಾದ ಭೀಷ್ಮನನ್ನು ನೋಡುವುದಕ್ಕಾಗಿ ಬಂದು ನೆರೆದಿದ್ದರು. ಅನೇಕಮಹಾತ್ಮರು ಸಭೆಕೂಡಿದ್ದರು. ಪರ್ವತನಾರದರೆಂಬ ಮಹರ್ಷಿಗಳೂ, ಪೂಜ್ಯನಾದ ವ್ಯಾಸನೂ, ಧೌಮ್ಯ, ಬೃಹದಶ್ವ, ಭಾರದ್ವಾಜರೂ, ಅನೇಕಶಿಷ್ಯರಿಂದ ಪರಿವೃತನಾದ ಪರಶುರಾಮನೂ, ಶುಕನು, ವಸಿಷ್ಠನು, ಇಂದ್ರಪ್ರಮದನು, ತ್ರಿತನು, ಗೃತ್ಸಮದನು, ಅಸಿತನು, ಕಕ್ಷೀವಂತನು, ಗೌತಮನು, ಅತ್ರಿಮುನಿ, ವಿಶ್ವಾಮಿತ್ರನು, ಸುದರ್ಶನನು, ಶಿಷ್ಯವರ್ಗದಿಂದ ಪರಿವೃತರಾದ ಕಶ್ಯಪಾಂಗಿರಸರೇ ಮೊದಲಾದ ಮಹರ್ಷಿಗಳು, ಬ್ರಹ್ಮರಾತನು, ಇವರೆಲ್ಲರೂ ಬಂದು ಸೇರಿದ್ದರು. ಹೀಗೆ ತನ್ನನ್ನು ನೋಡುವುದಕ್ಕಾಗಿ ಬಂದ ಈ ಮಹರ್ಷಿಗಳೆಲ್ಲರನ್ನೂ, ಧರ್ಮಜ್ಞನಾಗಿಯೂ, ಕಾಲದೇಶವಿಭಾಗಗಳನ್ನು ಚೆನ್ನಾಗಿ ತಿಳಿದವನಾಗಿಯೂ ಇರುವ ಭೀಷ್ಮನು ಯಥಾವಿಧಿಯಾಗಿ ಪೂಜಿಸಿದನು. ಮತ್ತು ತನ್ನಮುಂದೆ ನಿಂತಿದ್ದ ಶ್ರೀಕೃಷ್ಣನನ್ನು ನೋಡಿ ಲೀಲಾಮಾನುಷವಿಗ್ರಹವನ್ನು ಧರಿಸಿದ ಆತನ ನಿಜರೂಪವನ್ನು ತನ್ನ

ಹೃದಯದಲ್ಲಿಟ್ಟುಕೊಂಡು, ಮಾನಸಪೂಜೆಯಿಂದ ಆತನನ್ನು ಧ್ಯಾನಿಸಿದನು. ಆಮೇಲೆ ತನ್ನ ಸಮೀಪದಲ್ಲಿ ವಿನೀತರಾಗಿನಿಂತಿದ್ದ ಧರ್ಮರಾಜಾದಿಗಳನ್ನು ನೋಡಿ, ಪ್ರೀತಿಪೂರ್ವಕವಾದ ಆನಂದಬಾಷ್ಪವನ್ನು ಸುರಿಸುತ್ತ, ಅವರ ಕ್ಷೇಮಲಾಭಗಳನ್ನು ವಿಚಾರಿಸಿ, ಗೌರವಪೂರ್ವಕವಾಗಿ “ಎಲೈವತ್ಸರೆ! ವೇದೋಕ್ತಧರ್ಮಗಳಿಗೂ, ಬ್ರಾಹ್ಮಣರಿಗೂ, ಭಗವಂತನಾದ ಶ್ರೀಕೃಷ್ಣನಿಗೂ ಅತ್ಯಂತವಿಧೇಯರಾಗಿ ನಡೆದುಕೊಳ್ಳುತ್ತಿರುವ ನಿಮಗೂಕೂಡ, ಹೀಗೆ ಕಷ್ಟಜೀವನ ವುಂಟಾಯಿತೆಂಬುದು ಬಹಳ ದುಃಖಕರವಾದ ವಿಷಯವು. ಆಹಾ! ಇದೇನನ್ಯಾಯವು! ನಿಮ್ಮ ತಾಯಿಯಾದ ಕುಂತಿದೇವಿಯು ನಿಮ್ಮಂತಹ ಪುತ್ರರನ್ನು ಪಡೆದೂಕೂಡ, ತನ್ನ ಪತಿಯಾದ ಪಾಂಡುರಾಜನು ಮೃತನಾದಂದಿನಿಂದಲೂ ದುಃಖದಲ್ಲಿಯೇ ಕಾಲವನ್ನು ಕಳೆಯುತ್ತಿರುವಳು. ನೀವು ಇನ್ನೂ ಎಳೆವಯಸ್ಸಿನವರಾದುದರಿಂದ ನಿಮಗಾಗಿಯೇ ಅವಳು ಎಷ್ಟೋ ದುಃಖವನ್ನನುಭವಿಸಬೇಕಾಯಿತು. ಆದರೇನು? ಆ ವಿಷಯವನ್ನು ಕುರಿತು ನೀವು ಸ್ವಲ್ಪಮಾತ್ರವೂ ದುಃಖಿಸಬಾರದು! ವಾಯುವಿಗಧೀನವಾಗಿ ಮೇಘಗಳು ಸಂಚರಿಸುವಂತೆ ಸಮಸ್ತ ಪ್ರಾಣಿಗಳೂ ಕಾಲಾಧೀನರಾಗಿಯೇ ನಡೆಯಬೇಕು. ಆದುದರಿಂದ ಇದುವರೆಗೆ ನಿಮಗೆ ಬಂದ ಕಷ್ಟಗಳೆಲ್ಲವೂ ಕಾಲವಶದಿಂದ ಬಂದುದಲ್ಲದೆ ಬೇರೆಯಲ್ಲ. ಆಹಾ! ಕಾಲವೆಂಬುದು ದುರ್ಘಟವಾದ ವಸ್ತುವನ್ನಾದರೂ ಘಟಿಸುವಂತೆ ಮಾಡುವುದಲ್ಲವೆ? ಇದಕ್ಕೆ ನಿಮಗಿಂತಲೂ ಬೇರೆ ನಿದರ್ಶನವೇಕೆ? ಸಾಕ್ಷಾತ್ ಧರ್ಮದೇವತೆಯ ಪುತ್ರನಾದ ಯುಧಿಷ್ಠಿರನೇ ರಾಜನು! ಯಾವ ಯುದ್ಧದಲ್ಲಿಯೂ ಅಪ್ರತಿಹತವಾದ ಗದಾದಂಡವನ್ನು ಧರಿಸಿದ ಭೀಮನೂ ಗಾಂಡೀವವೆಂಬ ಮಹಾಧನುಸ್ಸನ್ನು ಹಿಡಿದ ಅರ್ಜುನನೂ, ಆತನಿಗೆ ಬೆಂಬಲವಾಗಿ ಒಡಹುಟ್ಟಿದ ತಮ್ಮಂದಿರು! ಲೋಕನಾಥನಾದ ಶ್ರೀಕೃಷ್ಣನೇ ಪರಮಮಿತ್ರನು! ಹೀಗೆ ದೇಹಬಲದಲ್ಲಿಯೂ, ಶಸ್ತ್ರನೈಪುಣ್ಯದಲ್ಲಿಯೂ, ದೈವಾನುಕೂಲ್ಯದಲ್ಲಿಯೂ ಬೇರೆ ಯಾವ ಭಾಗದಲ್ಲಿಯೂ ನ್ಯೂನತೆಯಿಲ್ಲದ ಈ ಸ್ಥಳದಲ್ಲಿಯೂ ಕೂಡ ಇಂತಹ ವಿಪತ್ತು ಬಂದೊದಗಿತೆಂದರೆ ಕಾಲಗತಿಯನ್ನು ಮೀರುವುದಕ್ಕೆ ಬೇರೆ ಯಾರಿಂದ ತಾನೇ ಸಾಧ್ಯವು? ಎಲೆ ಕುಮಾರರೇ! “ಸಮಸ್ತಲೋಕಗಳನ್ನೂ ತನ್ನ ಸ್ವಾಧೀನವಾಗಿ ಮಾಡಿಕೊಂಡಿರುವ ಶ್ರೀ ಕೃಷ್ಣನ ದಯೆಗೆ ನಾವು ಪಾತ್ರರಾಗಿರುವಾಗ ಆ ಕಾಲಗತಿಯನ್ನು ಆತನು ತಪ್ಪಿಸಲಾರನೆ?” ಎಂದು ನೀವು ಶಂಕಿಸಬಾರದು. ಈ ಶ್ರೀ ಕೃಷ್ಣನು ನಡೆಸತಕ್ಕ ವಿಚಿತ್ರವ್ಯಾಪಾರಗಳನ್ನು ತಿಳಿಯಬೇಕೆಂದಪೇಕ್ಷಿಸಿ, ಬ್ರಹ್ಮಾದಿಗಳೂ ಮೋಹವನ್ನು ಹೊಂದುವರು. ಹೀಗಿರುವಾಗ ಅದನ್ನು ಬೇರೆ

ಯಾವ ಮನುಷ್ಯನು ತಾನೇ ತಿಳಿಯಬಲ್ಲನು. ಎಲೈ ಧರ್ಮರಾಜನೆ! ಸಮಸ್ತ ಪ್ರಾಣಿಗಳ ಸುಖದುಃಖಗಳೂ ಕಾಲಾಧೀನಗಳು ಆ ಸುಖದುಃಖಕ್ಕೆ ಕಾರಣಗಳಾದ ಕರ್ಮಗಳೆಲ್ಲವೂ ಈ ಕೃಷ್ಣನಿಗಧೀನವಾದುವು. ಕೃಷ್ಣನೂಕೂಡ ಕಾಲಾದಿಗಳನ್ನೇ ಅನುವರ್ತಿಸುತ್ತಿರುವನು. ಆದುದರಿಂದ ಸುಖದುಃಖಾದಿಗಳೆಲ್ಲವೂ ದೈವಾಯತ್ತವೆಂದೂ, ಆ ಕಾಲಕರ್ಮಾದಿಗಳಿಗೆ ಪ್ರೇರಕನಾಗಿಯೂ, ಅದನ್ನನುವರ್ತಿಸತಕ್ಕವನಾಗಿಯೂ ಇರುವ ಈ ಶ್ರೀ ಕೃಷ್ಣನೇ ಸರ್ವವಿಧದಲ್ಲಿಯೂ ನಿಮಗೆ ಪ್ರೇರಕನೆಂದೂ ತಿಳಿದು, ಆತನ ಪ್ರವರ್ತನೆಗೊಳಪಟ್ಟಿರುವುದೇ ನಿಮಗೆ ಕೃತ್ಯವು. ಆದುದರಿಂದ ಮೊದಲೇ ಶ್ರೀ ಕೃಷ್ಣನು ನಿನಗೆ ನಿಯಮಿಸಿರುವಂತೆ, ದಿಕ್ಕಿಲ್ಲದ ಆ ನಿನ್ನ ಪ್ರಜೆಗಳೆಲ್ಲರನ್ನೂ ಪ್ರೇಮದಿಂದ ರಕ್ಷಿಸುತ್ತಿರು! ರಾಜಾ? ಇಲ್ಲಿ ಮನುಷ್ಯರೂಪದಿಂದ ನಿನ್ನ ಕಣ್ಣಿದಿರಿಗೆ ನಿಂತಿದ್ದ ಮಾತ್ರಕ್ಕೆ ಈತನನ್ನು ನೀನು ಸಾಮಾನ್ಯನಾದ ಪ್ರಾಕೃತಮನುಷ್ಯನೆಂದೆಣಿಸಬೇಡ! ಈತನೇ ಆ ಸಾಕ್ಷಾದ್ಭಗವಂತನು! ಈತನೇ ಆದಿಪುರುಷನಾದ ಆ ನಾರಾಯಣಮೂರ್ತಿಯು! ಇವನು ತನ್ನ ಮಾಯೆಯಿಂದ ಲೋಕವನ್ನು ಮರುಳುಗೊಳಿಸುವುದಕ್ಕಾಗಿ ರಹಸ್ಯವಾಗಿ ಬಂದು ಯಾದವಕುಲದಲ್ಲಿ ತಾನೂ ಒಬ್ಬನಂತೆ ನಟಿಸುತ್ತಿರುವನು. ದುಜ್ಞೇಯವಾದ ಈತನ ಮಹಿಮೆಯನ್ನು ಪೂಜ್ಯನಾದ ಆ ಪರಮಶಿವನೊಬ್ಬನು ಬಲ್ಲನು! ದೇವರ್ಷಿಯಾದ ಆ ನಾರದನೊಬ್ಬನು ಬಲ್ಲನು! ಮಹಾತ್ಮನಾದ ಆ ಕಪಿಲಮುನಿಯೊಬ್ಬನು ಬಲ್ಲನು! ಈ ಮೂವರು ಹೊರತು ಬೇರೆ ಯಾರೂ ಇವನ ನಿಜವನ್ನು ಕಂಡುಕೊಳ್ಳಲಾರರು! ಧರ್ಮರಾಜಾ! ಇನ್ನು ಹೆಚ್ಚು ಮಾತಿನಿಂದೇನು? ಯಾವನನ್ನು ನೀನು ನಿನ್ನ ಮಾವನ ಮಗನೆಂದು ಕರೆಯುವೆಯೋ, ಯಾವನಲ್ಲಿ ನಿನಗಿರುವ ವಿಶೇಷವಾದ ಸಲಿಗೆಯಿಂದ, ಒಮ್ಮೆ ಮಂತ್ರಿಯನ್ನಾಗಿಯೂ, ಒಮ್ಮೆ ದೂತನನ್ನಾಗಿಯೂ ಒಮ್ಮೆ ಬಂಡಿಯಾಳನ್ನಾಗಿಯೂ ಮಾಡಿಕೊಂಡು, ಅವನಿಂದ ಕೆಲಸವನ್ನು ತೆಗೆಯುತ್ತಿರುವೆಯೋ, ಆ ಈ ಕೃಷ್ಣನು ಸಾಕ್ಷಾತ್ಪರಮಪುರುಷನಲ್ಲದೆ ಬೇರೆಯಲ್ಲ! ಆದರೆ ಅಂತಹ ಪರಮಪುರುಷನಾದವನು ನಿನಗಧೀನನಾಗಿ ಕೆಲಸಮಾಡುವುದೇಕೆಂದು ನೀನು ಕೇಳಬಹುದು! ಧರ್ಮರಾಜಾ! ಆತನು ಸರ್ವಾತ್ಮಕನು! ಸಮಸ್ತಪ್ರಪಂಚವನ್ನೂ ಸಮವಾಗಿ ನೋಡತಕ್ಕವನು. ಎಣೆಯಿಲ್ಲದವನು. ಸೇವಕರಲ್ಲಿರುವ ನಿಕೃಷ್ಟತ್ವಾದಿ ದೋಷಗಳೊಂದೂ ಇವನಲ್ಲಿ ಸೇರವು. ಅವನಲ್ಲಿ ನೀನು ಸಾಮಾನ್ಯ ಭಾವನೆಯನ್ನಿಟ್ಟು, ಈ ಅಲ್ಪಕಾರ್ಯಗಳನ್ನು ಮಾಡಿಸಿದ ಮಾತ್ರಕ್ಕೆ ಅವನ ಮನಸ್ಸು ನಿನ್ನಲ್ಲಿ ತಗಲಲಾರದು. ಎಲ್ಲರನ್ನೂ ಒಂದೇ ವಿಧವಾದ ಸೌಲಭ್ಯದಿಂದ

ನೋಡುವವನು. ಆತನು ಹೀಗೆ ಸರ್ವಸಮಾನನೆನಿಸಿಕೊಂಡಿದ್ದರೂ, ತನ್ನ ಏಕಾಂತಭಕ್ತರಲ್ಲಿಮಾತ್ರ, ಅಸಾಧಾರಣವಾದ ದಯೆಯನ್ನು ತೋರಿಸದೆ ಬಿಡನು. ಧರ್ಮಪುತ್ರಾ! ಇದಕ್ಕೆ ಬೇರೆ ನಿದರ್ಶನವೇಕೆ? ಇದೋ ನೋಡು! ನಾನು ಪ್ರಾಣವನ್ನು ಬಿಡುವುದಕ್ಕೆ ಸಿದ್ಧನಾಗಿರುವ ಕಾಲದಲ್ಲಿ, ತಾನೇ ಪ್ರತ್ಯಕ್ಷವಾಗಿ ಬಂದು ನನಗೆ ದರ್ಶನವನ್ನು ಕೊಡುತ್ತಿರುವನಲ್ಲವೆ? ಈತನ ದರ್ಶನದಿಂದುಂಟಾಗುವ ಫಲವು ಸಾಮಾನ್ಯವಲ್ಲ? ಯೋಗೀಶ್ವರರೆಲ್ಲರೂ ಯಾವನಲ್ಲಿ ಭಕ್ತಿಯುಕ್ತವಾದ ಮನಸ್ಸನ್ನು ಸೇರಿಸಿ, ಯಾವನ ಪುಣ್ಯಕೀರ್ತನೆಗಳನ್ನು ಬಾಯಿಂದ ಹೇಳುತ್ತಾ, ತಮ್ಮ ದೇಹವನ್ನು ತ್ಯಜಿಸಿ, ಕಾಮದಿಂದಲೂ, ಕರ್ಮಗಳಿಂದಲೂ ಮುಕ್ತರಾಗುವರೋ, ಆ ಪರಮಾತ್ಮನೇ ಈ ಕೃಷ್ಣನು. ಹೀಗೆತನ್ನ ನಾಮಕೀರ್ತನದಿಂದಲೇ ಮೋಕ್ಷಸುಖವನ್ನು ಕೊಡತಕ್ಕ ಈ ಮಹಾತ್ಮನ ಪ್ರತ್ಯಕ್ಷದರ್ಶನದಿಂದುಟಾಗತಕ್ಕ ಫಲವನ್ನು ಹೇಳತಕ್ಕುದೇನು? ಆದುದರಿಂದ ದೇವದೇವನಾಗಿಯೂ, ಚತುರ್ಭುಜನಾಗಿಯೂ ಇರುವ ಆ ಭಗವಂತನು, ಈಗ ಇಲ್ಲಿ ಕಾಣುವಂತೆಯೇ ಪ್ರಸನ್ನವಾದ ಮಂದಹಾಸದಿಂದಲೂ, ರಕ್ತಾಂತನೇತ್ರಗಳಿಂದಲೂ, ಶೋಭಿತವಾದ ಮುಖಕಮಲವುಳ್ಳವನಾಗಿ, ನಾನು ಈ ದೇಹವನ್ನು ತ್ಯಜಿಸುವವರೆಗೆ ನನ್ನ ಧ್ಯಾನವಿಷಯನಾಗಿ, ಇಲ್ಲಿಯೇ ಪ್ರತೀಕ್ಷಿಸುತ್ತಿರಲಿ! ಎಂದು ಪ್ರಾರ್ಥಿಸುತಿದ್ದನು. ಹೀಗೆ ಶರಪಂಜರದಲ್ಲಿ ಮಲಗಿ ಶ್ರೀಕೃಷ್ಣಸ್ಮರಣೆಯಲ್ಲಿರುವ ಭೀಷ್ಮಾಚಾರ್ಯನನ್ನು ನೋಡಿ ಧರ್ಮರಾಜನು, ಅಲ್ಲಿದ್ದ ಮಹರ್ಷಿಗಳೆಲ್ಲರೂ ಕೇಳುತ್ತಿರುವ ಹಾಗೆಯೇ ನಾನಾವಿಧ ಧರ್ಮಸೂಕ್ಷ್ಮಗಳೆಲ್ಲವನ್ನೂ ಕ್ರಮವಾಗಿ ಪ್ರಶ್ನೆಮಾಡಿ ಅವನಿಂದ ಕೇಳಿ ತಿಳಿದುಕೊಂಡನು. ಮನುಷ್ಯರ ಶಕ್ತಿಸ್ವಭಾವಗಳಿಗೂ, ಅವರವರ ವರ್ಣಾಶ್ರಮಗಳಿಗೂ ಅನುಸಾರವಾಗಿ, ಅವರವರು ನಡೆಸಬೇಕಾದ ಕರ್ಮಗಳಲ್ಲಿ, ಕೇವಲ ವಿರಕ್ತಿಯಿಂದ ನಡೆಸತಕ್ಕವುಗಳೆಂದೂ, ಫಲಾಪೇಕ್ಷೆಯಿಂದ ನಡೆಸತಕ್ಕವುಗಳೆಂದೂ ಎರಡು ವಿಧವಾಗಿರುವ ಪ್ರವೃತ್ತಿಧರ್ಮಗಳ ಭೇದವನ್ನು ತಿಳಿದುಕೊಂಡನು. ಹಾಗೆಯೇ ದಾನಧರ್ಮಗಳನ್ನೂ, ರಾಜನೀತಿಗಳನ್ನೂ, ಪಾಂಚರಾತ್ರೋಕ್ತಗಳಾದ ಮೋಕ್ಷಧರ್ಮವಿಭಾಗಗಳನ್ನೂ, ಧರ್ಮಾರ್ಥಕಾಮಮೋಕ್ಷಗಳೆಂಬ ಪುರುಷಾರ್ಥಗಳನ್ನೂ, ಅವುಗಳ ಸಾಧನಗಳನ್ನೂ, ಸ್ತ್ರೀಧರ್ಮಗಳನ್ನೂ, ಹರಿಕಥಾಶ್ರವಣ ಕೀರ್ತನಾದಿರೂಪದ ಭಗವದ್ಧರ್ಮಗಳನ್ನೂ, ಸಂಕ್ಷೇಪವಾಗಿಯೂ, ವಿಸ್ತರವಾಗಿಯೂ ಕ್ರಮವಾಗಿ ಪ್ರಶ್ನೆಮಾಡಿ ಕೇಳಿ ತಿಳಿಯುತ್ತಿದ್ದನು. ತತ್ವಜ್ಞನಾದ ಭೀಷ್ಮಾಚಾರ್ಯನು, ಆಯಾ ಧರ್ಮಗಳಿಗೆ ನಿದರ್ಶಕಗಳಾದ ಬೇರೆಬೇರೆ ಉಪಾಖ್ಯಾನಗಳನ್ನೂ, ಇತಿಹಾಸಗಳನ್ನೂ ಹೇಳಿ, ಅವೆಲ್ಲವನ್ನೂ ವಿವರಿಸಿ ತಿಳಿಸಿದನು. ಸ್ವೇಚ್ಛಾಮರಣೆ

ಯಾದ ಆ ಭೀಷ್ಮನು, ಹೀಗೆ ಧರ್ಮರಾಜನಿಗೆ ಧರ್ಮೋಪದೇಶವನ್ನು ಮಾಡಿ ಮುಗಿಸು ವಷ್ಟರಲ್ಲಿ ಅವನು ತನ್ನ ಮರಣಕ್ಕಾಗಿ ನಿರೀಕ್ಷಿಸುತ್ತಿದ್ದ ಉತ್ತರಾಯಣವು ಸಮೀಪಿಸಿತು. ಸಹಸ್ರಸಂಖ್ಯಾತರಾದ ಕೌರವಪಾಂಡವರೆಲ್ಲರಿಗೂ ನಿಯಾಮಕನಾದ ಆ ಭೀಷ್ಮನು, ತಾನು ನಿರೀಕ್ಷಿಸುತ್ತಿದ್ದ ಕಾಲವು ಬಂದೊದಗಿದುದನ್ನು ತಿಳಿದು, ಅದು ವರೆಗೆ ತಾನಾಡುತಿದ್ದ ಮಾತನ್ನು ಅಷ್ಟರಲ್ಲಿಯೇ ನಿಲ್ಲಿಸಿ, ದೇಹಾದಿಸಂಬಂಧವನ್ನು ತೊರೆದು, ಕೇವಲವೈರಾಗ್ಯವನ್ನು ವಹಿಸಿ, ತನ್ನ ಮುಂದೆ ಪೀತಾಂಬರಧಾರಿಯಾಗಿ ನಿಂತಿದ್ದ ಪರಮಪುರುಷನಾದ ಶ್ರೀಕೃಷ್ಣನನ್ನು ಎವೆಮುಚ್ಚದೆ ನೋಡುತ್ತ, ಆ ಪರಮಾತ್ಮನ ರೂಪವನ್ನು ಮನಸ್ಸಿನಲ್ಲಿ ಧ್ಯಾನಿಸತೊಡಗಿದನು. ಹೀಗೆ ಭೀಷ್ಮಾಚಾರ್ಯನು ಶ್ರೀಕೃಷ್ಣನನ್ನು ಶುದ್ಧವಾದ ಮನಸ್ಸಿನಿಂದ ಧ್ಯಾನಿಸುವುದಕ್ಕೆ ತೊಡಗಿದೊಡನೆ, ಅವನ ಮನಸ್ಸಿನಲ್ಲಿ ಭಗವತ್ಪ್ರಾಪ್ತಿಗೆ ಪ್ರತಿಬಂಧಕಗಳಾಗಿದ್ದ ಕಲ್ಮಷಗಳೆಲ್ಲವೂ ನೀಗಿದುವು. ಆ ಶ್ರೀಕೃಷ್ಣನ ದಿವ್ಯರೂಪವನ್ನು ಕಣ್ಣಿಂದ ನೋಡಿದಾಗಲೇ ಅವನಿಗಿದ್ದ ಶಸ್ತ್ರಬಾಧೆಗಳೆಲ್ಲವೂ ನಿವೃತ್ತವಾದುವು. ವಿಷಯಾಂತರಗಳಲ್ಲಿದ್ದ ಇಂದ್ರಿಯವ್ಯಾಪಾರಗಳೆಲ್ಲವೂ ಅಡಗಿದುವು. ಅವನ ಮನಸ್ಸಿನಲ್ಲಿದ್ದ ದೇಹಾತ್ಮಭ್ರಮವೂ ನಿವರ್ತಿಸಿತು. ಹೀಗೆ ನಿಷ್ಕಲ್ಮಷನಾದ ಭೀಷ್ಮನು, ತನ್ನ ದೇಹವನ್ನು ಬಿಟ್ಟು ಹೊರಡುವುದಕ್ಕೆ ಸಿದ್ಧನಾಗಿ ಭಗವಂತನನ್ನು ಸ್ತುತಿಸುವನು.

---

(ಭೀಷ್ಮನು ದೇಹಾವಸಾನಕಾಲದಲ್ಲಿ ಶ್ರೀಕೃಷ್ಣನನ್ನು ಸ್ತುತಿಸಿದುದು.)

ಶ್ಲೋ॥ ಇತಿ ಮತಿರುಪಕಲ್ಪಿತಾ ವಿತೃಷ್ಣಾ ಭಗವತಿ ಶಾತ್ವತಪುಂಗವೇ ವಿಭೂಮ್ನಿ।
ಸ್ವಸುಖಮುಪಗತೇ ಕ್ವಚಿದ್ವಿಹರ್ತುಂ ಪ್ರಕೃತಿಮುಪೇಯುಷಿ ಯದ್ಭವಪ್ರವಾಹಃ ॥

ಯದುಕುಲೋತ್ತಮನಾಗಿಯೂ, (ಭಕ್ತಪಾಲಕನಾಗಿಯೂ) ವಿಲಕ್ಷಣಮಹಿಮೆಯುಳ್ಳವನಾಗಿಯೂ, ಸಹಜವಾದ ನಿತ್ಯಾನಂದಪರಿಪೂರ್ಣನಾಗಿದ್ದರೂ ಲೀಲಾರ್ಥವಾಗಿ ಒಂದೊಂದುಕಡೆಯಲ್ಲಿ ಪ್ರಾಕೃತದೇಹವನ್ನು ಹೊಂದಿ ಅವತರಿಸುವವನಾಗಿಯೂ, ತನ್ನ ಸಂಕಲ್ಪದಿಂದಲೇ ಚೇತನರಿಗೆ ಸಂಸಾರಪ್ರವೃತ್ತಿಯನ್ನುಂಟುಮಾಡತಕ್ಕವನಾಗಿಯೂ ಇರುವ ಭಗವಂತನಾದ ಈ ಶ್ರೀಕೃಷ್ಣನಲ್ಲಿ, ನನ್ನ ಬುದ್ಧಿಯು ಎಂದೆಂದಿಗೂ ತೃಪ್ತಿಹೊಂದದೆ ಸ್ಥಿರವಾಗಿ ನೆಲೆಗೊಂಡಿರಲಿ!

ಶ್ಲೋ॥ ತ್ರಿಭುವನಕಮನಂ ತಮಾಲವರ್ಣಂ ರವಿಕರಗೌರ ವರಾಂಬರಂ ದಧಾನೇ।
ವಪುರಲಕಕುಲಾವೃತಾನನಾಬ್ಜೇ ವಿಜಯಸಖೇ ರತಿರಸ್ತು ಮೇನವದ್ಯಾ ॥೩॥

ತಮಾಲಶ್ಯಾಮಲವಾದ ಮೈಮೇಲೆ ಸೂರ್ಯಕಾಂತಿಗೆ ಸಮಾನವಾದ ಪೀತಾಂಬರದಿಂದಲೂ, ಮುಂಗುರುಗಳಿಂದ ಮರೆಸಲ್ಪಟ್ಟ ಮುಖಕಮಲದಿಂದಲೂ ಕೂಡಿ, ತ್ರೈಲೋಕ್ಯಮೋಹಕವಾದ ದಿವ್ಯರೂಪವುಳ್ಳ ಅರ್ಜುನ ಮಿತ್ರನಾದ ಈ ಕೃಷ್ಣನಲ್ಲಿ ನನ್ನ ಭಕ್ತಿಯು ಅನನ್ಯಪ್ರಯೋಜನವಾಗಿ ನೆಲೆಗೊಳ್ಳಲಿ !

ಶ್ಲೋ॥ ಯುಧಿ ತುರಗರಜೋವಿಧೂಮ್ರವಿಷ್ವಕ್ಕಚ ಲುಲಿತಶ್ರಮವಾರ್ಯಲಂಕೃತಾಸ್ಯೇ।
ಮಮ ನಿಶಿತಶರೈರ್ವಿಭಿದ್ಯಮಾನತ್ವಚಿ ವಿಲಸತ್ಕವಚೇಽಸ್ತು ಕೃಷ್ಣ ಆತ್ಮಾ ॥೪॥

ಕುದುರೆಯ ಕಾಲಿನ ಧೂಳಿನಿಂದ ಕೊಳೆಮುಚ್ಚಿದ ತಲೆ! ಕದಲಿದ ಕೂದಲು! ಮುಖದಲ್ಲಿ ಸುರಿಯುತ್ತಿರುವ ಬೆವರು ! ನನ್ನ ತೀಕ್ಷ್ಣಬಾಣಗಳಿಂದ ಮೈಮೇಲಿನ ಚರ್ಮವು ಕಿತ್ತು, ಕವಚದಮೇಲೆ ಅಲ್ಲಲ್ಲಿ ಶೋಭಿಸುತ್ತಿರುವ ರಕ್ತಬಿಂದುಗಳು ! ಇವುಗಳಿಂದಲಂಕೃತನಾಗಿ ರಣಾಗ್ರದಲ್ಲಿ ನಿಂತಿದ್ದ ಆ ಶ್ರೀಕೃಷ್ಣನಲ್ಲಿ ನನ್ನ ಮನಸ್ಸು ರಮಿಸಲಿ।

ಶ್ಲೋ॥ ಸಪದಿ ಸಖಿವಚೋ ನಿಶಮ್ಯ ಮಧ್ಯೇ ನಿಜಪರಯೋರ್ಬಲಯೋ ರಥಂ ನಿವೇಶ್ಯ।
ಸ್ಥಿತವತಿ ಪರಸೈನಿಕಾಯುರಕ್ಷ್ಣಾ ಹೃತವತಿ ಪಾರ್ಥಸಖೇ ರತಿರ್ಮಮಾಸ್ತು ॥

ಎರಡುಸೈನ್ಯಗಳ ನಡುವೆ ರಥವನ್ನು ತಂದು ನಿಲ್ಲಿಸಿ, ತನ್ನ ನೋಟದಿಂದಲೇ ಶತ್ರುಸೈನ್ಯಗಳ ಆಯುಸ್ಸನ್ನು ಅಪಹರಿಸಿದ ಪಾರ್ಥಸಖನಾದ ಶ್ರೀಕೃಷ್ಣನಲ್ಲಿ ನನ್ನ ಬುದ್ಧಿಯು ಸ್ಥಿರವಾಗಿ ನೆಲೆಗೊಳ್ಳಲಿ !

ಶ್ಲೋ॥ ವ್ಯವಹಿತಪೃತನಾಮುಖಂ ನಿರೀಕ್ಷ್ಯ ಸ್ವಜನವಧಾದ್ವಿಮುಖಸ್ಯ ದೋಷಬುದ್ಧ್ಯಾ।
ಕುಮತಿಮಹರದಾತ್ಮವಿದ್ಯಯಾ ಯಶ್ಚರಣರತಿಃ ಪರಮಸ್ಯ ತಸ್ಯ ಮೇಸ್ತು ॥೬॥

ಅರ್ಜುನನು ರಣಾಗ್ರಕ್ಕೆ ಬಂದಮೇಲೆ, ಮುಂಎದ್ದ ಶತ್ರುಸೈನ್ಯವನ್ನು ನೋಡಿ ಸ್ವಜನವನ್ನು ಕೊಲ್ಲುವುದಕ್ಕೆ ಹಿಂಜರಿದಾಗ, ಅವನ ಅಜ್ಞಾನವನ್ನು ನೀಗಿಸುವುದಕ್ಕಾಗಿ ಯಾವನು ಗೀತೆಯನ್ನುಪದೇಶಿಸಿದನೋ, ಆ ಪರಮಪುರುಷನಾದ ಕೃಷ್ಣನ ಪಾದಗಳಲ್ಲಿ ನನ್ನ ಭಕ್ತಿಯು ನಿಶ್ಚಲವಾಗಿ ನೆಲೆಗೊಳ್ಳಲಿ !

ಶ್ಲೋ॥ ಸ್ವನಿಗಮಮಪಹಾಯ ಮತ್ಪ್ರತಿಜ್ಞಾಮೃತಮಧಿಕರ್ತುಮವಪ್ಲುತೋ ರಥಸ್ಥಃ।
ಧೃತರಥಚರಣೋಭ್ಯಯಾಚ್ಚಲದ್ಗುರ್ಹರಿರಿವ ಹನ್ತುಮಿಭಂ ಗತೋತ್ತರೀಯಃ
ಶಿತವಿಶಿಖಹತೋ ವಿಶೀರ್ಣದಂಶಃ ಕ್ಷತಜಪರಿಪ್ಲುತ ಆತತಾಯಿನೋ ಮೇ।
ಪ್ರಸಭಮಭಿಸಸಾರ ಮದ್ವಧಾರ್ಥಂ ಸ ಭವತು ಮೇ ಭಗವಾನ್ ಗತಿರ್ಮುಕುಂದಃ ॥

ಭಾರತಯುದ್ಧದಲ್ಲಿ ಅದಕ್ಕೆ ವಿರುದ್ಧವಾಗಿ ನಾನು ಪ್ರತಿಜ್ಞೆಮಾಡಿರುವುದನ್ನು ತಿಳಿದು, ತಾನು ಮಾತಿಗೆ ತಪ್ಪಿದರೂ ತನ್ನ ಭಕ್ತನಾದ ನನ್ನ ಪ್ರತಿಜ್ಞೆ

ಯನ್ನು ಕೆಡಿಸಬಾರದೆಂಬ ವಾತ್ಸಲದಿಂದ, ತನ್ನ ಚಕ್ರಾಯುಧವನ್ನು ಕೈಗೆತ್ತಿಕೊಂಡು, ರಥದಿಂದಿಳಿದು, ಮೈಮೇಲಿನ ಬಟ್ಟೆಯು ಜಾರಿದುದನ್ನೂ ತಿಳಿಯದೆ, ಹರಿದ ಕವಚದಿಂದಲೂ, ರಕ್ತದಿಂದ ತೊಯ್ದ ಮೈಯಿಂದಲೂ ಕೂಡಿದವನಾಗಿ, ಆನೆಯಮೇಲೆ ಬೀಳುವ ಸಿಂಹದಂತೆ ನನ್ನನ್ನು ಕೊಲ್ಲಬೇಕೆಂಬ ಆತುರದಿಂದ ಯಾವನು ಮುಂದೆ ಬಂದನೋ, ಆ ಕೃಷ್ಣನೇ ನನಗೆ ಗತಿಯಾಗಲಿ!

ಶ್ಲೋ॥ ವಿಜಯರಥಕುಟುಂಬ ಆತ್ತತೋತ್ರೇ ಧೃತಹಯರಶ್ಮಿನಿ ತಚ್ಛ್ರಿಯೇಕ್ಷಣೀಯೇ।
ಭಗವತಿ ರತಿರಸ್ತು ಮೇ ಮುಮೂರ್ಷೋರ್ಯಮಿಹ ನಿರೀಕ್ಷ್ಯ ಹತಾ ಗತಾಸ್ಸ್ವರೂಪಮ್॥

ಅರ್ಜುನನ ರಥಕ್ಕೆ ಕಾವಲಾಗಿ, ಒಂದು ಕೈಯಿಂದ ಚಾಟಿಯನ್ನೂ, ಮತ್ತೊಂದು ಕೈಯಿಂದ ಕುದುರೆಯ ಹಗ್ಗವನ್ನೂ ಹಿಡಿದು, ಲೋಕಮೋಹಕವಾದ ವಿಲಕ್ಷಣರೂಪದಿಂದ ಶೋಭಿಸುತ್ತ, ಯುದ್ಧದಲ್ಲಿ ಹತರಾದ ವೀರರೆಲ್ಲರಿಗೂ ತನ್ನ ದರ್ಶನದಿಂದಲೇ ಮೋಕ್ಷವನ್ನು ಕೊಡುವವನಾಗಿ, ರಣಾಗ್ರದಲ್ಲಿ ಸಂಚರಿಸುತ್ತಿದ್ದ ಆ ಭಗವಂತನಲ್ಲಿ, ಮರಣೋನ್ಮುಖನಾದ ಈ ನನಗೆ ಭಕ್ತಿಯು ನಿಶ್ಚಲವಾಗಿ ನೆಲೆಗೊಳ್ಳಲಿ!

ಶ್ಲೋ॥ ಲಲಿತಗತಿವಿಲಾಸವಲ್ಗುಹಾಸಪ್ರಣಯನಿರೀಕ್ಷಣಕಲ್ಪಿತೋರುಮಾನಾಃ।
ಕೃತಮನುಕೃತವತ್ಯ ಉನ್ಮದಾಂಧಾಃ ಪ್ರಕೃತಿಮಗನ್ಕಿಲ ಯಸ್ಯ ಗೋಪವಧ್ವಃ॥

ಯಾವನ ಅಂದವಾದ ನಡೆ; ಮನೋಹರಗಳಾದ ವಿಲಾಸಗಳು! ಅನುರಾಗವಿಶಿಷ್ಟವಾದ ಕಣ್ಣಿನ ನೋಟಗಳು! ಮುಗುಳ್ನಗೆ! ಇವುಗಳಿಂದಲೇ ಗೋಪಸ್ತ್ರೀಯರು ತಾವು ಸರ್ವವಿಧದಿಂದಲೂ ಸತ್ಕೃತರಾದಂತೆಣಿಸಿ. ಮಿತಿಮೀರಿದ ಮೋಹಾಂಧತೆಯಿಂದ ಮುಂಗಾಣದೆ, ಅವನನ್ನು ತಮಗೆ ಸಮಾನನೆಂದು ತಿಳಿದು, ಆತನು ನಡೆಸಿದ ಅತಿಮಾನುಷಕೃತ್ಯಗಳನ್ನು ತಾವೂ ಅನುಕರಿಸುತ್ತಿದ್ದು, ಕೊನೆಗೆ ಈ ನೆವದಿಂದಲೇ ಆಕೃಷ್ಣನೊಡನೆ ಸಾಧರ್ಮ್ಯವನ್ನು ಹೊಂದಿದರೋ ಅಂತಹ ಶ್ರೀಕೃಷ್ಣನಲ್ಲಿ ನನ್ನ ಮನಸ್ಸು ನೆಲೆಗೊಳ್ಳಲಿ!

ಶ್ಲೋ॥ ಮುನಿಗಣನೃಪವರ್ಯಸಂಕುಲೇಂತಸ್ಸದಸಿ ಯುಧಿಷ್ಠಿರ ರಾಜಸೂಯ ಏಷಾಂ।
ಅರ್ಹಣಮುಪಪೇದ ಈಕ್ಷಣೀಯೋ ಮಮ ದೃಶಿ ಗೋಚರ ಏಷ ಆವಿರಾತ್ಮಾ।!

ರಾಜಸೂಯಯಾಗದಲ್ಲಿ ಅನೇಕಮಹರ್ಷಿಗಳೂ, ರಾಜರ್ಷಿಗಳೂ ಸೇರಿರುವಾಗ ಧರ್ಮರಾಜನು ಸಭಾಮಧ್ಯದಲ್ಲಿ ಮಾಡಿದ ಅಗ್ರಪೂಜೆಯನ್ನು ಗ್ರಹಿಸಿದ ಕಾಲದಲ್ಲಿ, ಆ ಶ್ರೀಕೃಷ್ಣನಿಗಿದ್ದ ಲೋಕಮನೋಹರವಾದ ಸ್ವರೂಪವು ನನ್ನ ಕಣ್ಣಿಗೆ ಯಾವಾಗಲೂ ಗೋಚರಿಸುತ್ತಿರಲಿ!

ಶ್ಲೋ॥ ಕ್ಷಿತಿಭರಮವರೋಪಿತುಂ ಕುರೂಣಾಂ ಶ್ವಸನ ಇವಾಸೃಜದಕ್ಷವಂಶವಹ್ನಿಂ ।
ತಮಿಮಮಹಮನುವ ತಾರ್ತಿಹಾಂಘ್ರಿಂ ಹೃದಿ ಪರಿರಭ್ಯ ಜಹಾಮಿ ಮರ್ತ್ಯನೀಡಂ ॥

ಗಾಳಿಯು ಬಿದಿರುಮೆಳೆಯಲ್ಲಿ ಒಂದಕ್ಕೊಂದಕ್ಕೆ ಘರ್ಷಣವನ್ನುಂಟುಮಾಡಿ, ಬೆಂಕಿಯನ್ನು ಹುಟ್ಟಿಸಿ ಕಾಡನ್ನು ಸುಡುವಂತೆ ಯಾವನು ಪಗಡೆಯಾಟವೆಂಬ ನೆವದಿಂದ ಕೌರವರಲ್ಲಿಯೇ ಅಂತಃಕಲಹವನ್ನು ಹುಟ್ಟಿಸಿ, ಕುರುವಂಶವೆಲ್ಲವನ್ನೂ ನಾಶಮಾಡಿ, ಭೂಭಾರವನ್ನ ಪಹರಿಸಿದನೋ, ಆ ಕೃಷ್ಣನ ಆಶ್ರಿತದುಃಖನಿವಾರಕಗಳಾದ ಪಾದಾರವಿಂದಗಳನ್ನು ಹೃದಯದಿಂದಪ್ಪಿಕೊಂಡು, ಈಗ ನಾನು ಈ ನನ್ನ ಶರೀರವೆಂಬ ಹೊದ್ದಿಕೆಯನ್ನು ಬಿಟ್ಟುಬಿಡುವೆನು.

ಶ್ಲೋ॥ ತಮಿಮಮಹಮಜಂ ಶರೀರಭಾಜಾಂ ಹೃದಿಹೃದಿ ಧಿಷ್ಠಿತಮಾತ್ಮಕಲ್ಪಿತಾನಾಂ ।
ಪ್ರತಿದೃಶಮಿವ ನೈಕಧಾರ್ಕಮೇಕಂ ಸಮಧಿಗತೋಽಸ್ಮಿ ವಿಧೂತಭೇದಮೋಹಃ ॥

ಸೂರ್ಯನು ಆಕಾಶದಲ್ಲಿ ತಾನೊಬ್ಬನೇ ಪ್ರಕಾಶಿಸುತಿದ್ದರೂ, ಭೂಮಿಯಲ್ಲಿರುವ ಸಮಸ್ತ ಜಲಾಶ್ರಯಗಳಲ್ಲಿಯೂ ಪ್ರತಿಬಿಂಬಿಸಿ, ಆ ಜಲಗತವಾದ ಚೇಷ್ಟೆಗಳಿಗೆ ತಾನುಮಾತ್ರ ಈಡಾಗದಿರುವಂತೆ, ಯಾವ ಭಗವಂತನು ತಾನೊಬ್ಬನಾಗಿದ್ದರೂ, ಜೀವಿಗಳ ಪ್ರತಿಹೃದಯದಲ್ಲಿಯೂ ಅಂತರಾತ್ಮನಾಗಿ, ನಾನಾತ್ವವನ್ನು ಹೊಂದಿ, ಆ ದೇವಾದಿಗತವಾದ ದೋಷಕ್ಕೆಮಾತ್ರ ತಾನು ಭಾಗಿಯಾಗದಿರುವನೋ, ಅಂತಹ ಈ ಶ್ರೀಕೃಷ್ಣನನ್ನು ನಾನು, ಮನಸ್ಸಿನ ಮೋಹಾದಿಗಳನ್ನು ಬಿಟ್ಟು, ಶರಣುಹೊಂದುವೆನು.

ಹೀಗೆಂದು ಭೀಷ್ಮನು ಶ್ರೀಕೃಷ್ಣ ಪರಮಾತ್ಮನನ್ನು ಸ್ತುತಿಸುತ್ತ, ಆ ಭಗವಂತನಲ್ಲಿಯೇ ಮನಸ್ಸು, ವಾಕ್ಕು, ದೃಷ್ಟಿ ಇವೇಮೊದಲಾದ ಸರ್ವೇಂದ್ರಿಯಗಳನ್ನೂ ನೆಲೆಗೊಳಿಸಿ, ಆ ಅಂತರಾತ್ಮನನ್ನು ತನ್ನ ಹೃದಯಲ್ಲಿ ಸೇರಿಸಿಕೊಂಡು, ತನ್ನ ಶ್ವಾಸವಾಯುವನ್ನು ತನ್ನೊಳಗೆ ತಾನೇ ಅಡಗಿಸಿಕೊಂಡು, ಮೌನವನ್ನು ವಹಿಸಿದನು. ಹೀಗೆ ಭೀಷ್ಮಾಚಾರ್ಯನು ನಿರ್ದೋಷವಾದ ಪರಬ್ರಹ್ಮದಲ್ಲಿ ಸೇರುತ್ತಿರುವಾಗ, ಅಲ್ಲಿದ್ದವರೆಲ್ಲರೂ ರಾತ್ರಿಯಲ್ಲಿ ಪಕ್ಷಿಗಳು ಹೇಗೋ ಹಾಗೆ ಮೌನದಿಂದ ನಿಶ್ಶಬ್ದರಾಗಿ ನೋಡುತಿದ್ದರು. ಈ ಭೀಷ್ಮನಿರ್ಯಾಣಕಾಲದಲ್ಲಿ ಆಕಾಶದಲ್ಲಿ ದೇವತೆಗಳಿಂದಲೂ, ಭೂಮಿಯಲ್ಲಿ ಮನುಷ್ಯರಿಂದಲೂ, ನುಡಿಸಲ್ಪಡುತಿದ್ದ ದುಂದುಭಿವಾದ್ಯಗಳು ಮಹಾಧ್ವನಿಯಿಂದ ಮೊಳಗುತಿದ್ದುವು. ಅಲ್ಲಲ್ಲಿ ಸಾಧುಗಳೆಲ್ಲರೂ ಭೀಷ್ಮನ ಗುಣಗಳನ್ನು ಕೊಂಡಾಡುತಿದ್ದರು. ಆಕಾಶದಿಂದ ಪುಷ್ಪವೃಷ್ಟಿಯು ಸುರಿಯಿತು. ಆ ಮೇಲೆ ಧರ್ಮರಾಜನು ವ್ಯಾಸಾದಿಗಳ ಅನುಮತಿಯಿಂದ ಭೀಷ್ಮನಿಗೆ ಅಪರಸಂಸ್ಕಾರಗಳನ್ನು ನಡೆಸಿ, ಕುಲಪಿತಾಮಹನಾದ ಆತನ ಮರಣಕ್ಕಾಗಿ ಸ್ವಲ್ಪ

ಹೊತ್ತಿನವರೆಗೆ ದುಃಖಿತನಾಗಿದ್ದನು. ಅಲ್ಲಿ ಸೇರಿದ್ದ ಋಷಿಗಳೆಲ್ಲರೂ ಶ್ರೀಕೃಷ್ಣ ಪರಮಾತ್ಮನನ್ನು ವೇದೋಕ್ತನಾಮಗಳಿಂದ ಸಂತೋಷಪೂರ್ವಕವಾಗಿ ಸ್ತುತಿಸುತ್ತ, ಆ ಕೃಷ್ಣನನ್ನು ತಮ್ಮ ಹೃದಯದಲ್ಲಿ ದೃಢವಾಗಿಟ್ಟುಕೊಂಡು, ಅತನಾಜ್ಞೆಯನ್ನು ಪಡೆದು, ತಮ್ಮ ತಮ್ಮ ಆಶ್ರಮಗಳಿಗೆ ಬಂದು ಸೇರಿದರು. ಆಮೇಲೆ ಧರ್ಮರಾಜನು ತನ್ನ ತಮ್ಮಂದಿರಾದ ಭೀಮಾದಿಗಳೊಡನೆಯೂ, ಶ್ರೀಕೃಷ್ಣನೊಡನೆಯೂ ಸೇರಿ ಹಸ್ತಿನಾಪುರಕ್ಕೆ ಬಂದು, ಇತ್ತಲಾಗಿ ಪುತ್ರಶೋಕದಿಂದ ದುಃಖಿಸುತಿದ್ದ ತನ್ನ ತಾಯಿತಂದೆಗಳಾದ ಗಾಂಧಾರೀಧೃತರಾಷ್ಟ್ರರನ್ನು ತಾನೇ ಸಮಾಧಾನಪಡಿಸಿದನು. ಆಮೇಲೆ ತನ್ನ ತಂದೆಯಾದ ಧೃತರಾಷ್ಟ್ರನ ಮತ್ತು ಶ್ರೀಕೃಷ್ಣನ ಆಜ್ಞಾನುಸಾರವಾಗಿ, ತನ್ನ ಕುಲಕ್ರಮಾಗತವಾದ ರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗಿ, ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತ ಸಂತೋಷದಿಂದಿದ್ದನು. ಇಲ್ಲಿಗೆ ಒಂಭತ್ತನೆಯ ಅಧ್ಯಾಯವು.

---

### {ಶ್ರೀಕೃಷ್ಣನು ಧರ್ಮರಾಜನನ್ನು ರಾಜ್ಯಭಾರಕ್ಕಾಗಿ ನಿಯಮಿಸಿ ತಾನು ದ್ವಾರಕೆಗೆ ಹೊರಟುದು.}

ಆಮೇಲೆ ಶೌನಕನು ಸೂತನನ್ನು ಕುರಿತು "ಎಲೈ ಸೂತನೆ! ಧರ್ಮರಾಜನು, ತನ್ನ ರಾಜ್ಯಭಾಗವನ್ನಪಹರಿಸಿ ತನ್ನನ್ನು ಕೆಡಿಸಬೇಕೆಂದುದ್ದೇಶಿಸಿದ ನೀಚನಾದ ದುರ್ಯೋಧನನನ್ನೂ, ಅವನ ತಮ್ಮಂದಿರನ್ನೂ ಕೊಂದು ರಾಜ್ಯವನ್ನು ಕೈಕೊಂಡಮೇಲೆ, ಅವನು ತನ್ನ ತಮ್ಮಂದಿರೊಡಗೂಡಿ ರಾಜ್ಯರಕ್ಷಣೆಯನ್ನು ಮಾಡಿದ ಕ್ರಮವೇನು? ಅವನು ತನ್ನ ರಾಜ್ಯಭಾರದಲ್ಲಿ ಮಾಡಿದ ಬೇರೆ ಕಾರ್ಯಗಳೇನು?" ಎಂದನು. ಅದಕ್ಕಾ ಸೂತನು "ಶೌನಕಾ! ಕೇಳು! ಬಿದಿರುಮೆಳೆಗಳ ಸಂಘರ್ಷಣದಿಂದ ಹುಟ್ಟಿದ ಬೆಂಕಿಯೇ ಕಾಡನ್ನು ಸುಡುವಂತೆ, ಕುಲದಲ್ಲಿ ಹುಟ್ಟಿದ ಕಲಹದಿಂದ ಕುರುವಂಶವು ನಿರ್ಮೂಲವಾಗುತಿದ್ದಾಗ, ಶ್ರೀಕೃಷ್ಣನು ಪರೀಕ್ಷಿದ್ರಾಜನನ್ನು ರಕ್ಷಿಸಿ, ಕುರುವಂಶಕ್ಕೆ ಅಭ್ಯುದಯವನ್ನನುಗ್ರಹಿಸಿದ ಮೇಲೆ ಆ ಪರೀಕ್ಷಿತ್ತು ರಾಜ್ಯಸಮರ್ಥನಾಗುವವರೆಗೂ ಧರ್ಮರಾಜನನ್ನೇ ರಾಜ್ಯವಾಳುವಂತೆ ನಿಯಮಿಸಿ, ಈ ಕಾರ್ಯದಿಂದ ತಾನು ಕೃತಕೃತ್ಯನಾದಂತೆಣಿಸಿ ಸಂತೋಷದಿಂದಿದ್ದನು. ಧರ್ಮರಾಜನೂ ಕೂಡ ಶ್ರೀಕೃಷ್ಣಾಜ್ಞೆಯಿಂದ ರಾಜ್ಯವನ್ನು ಸ್ವೀಕರಿಸಿದ ಮೇಲೆ ಭೀಷ್ಮಾಚಾರ್ಯನೂ, ಕೃಷ್ಣನೂ, ತನಗುಪದೇಶಿಸಿದ್ದ ಧರ್ಮಮಾರ್ಗವನ್ನನುಸರಿಸಿ ರಾಜ್ಯವನ್ನು ನಡೆಸತೊಡಗಿದನು. ಆ ಧರ್ಮಪುತ್ರನು ವಿಶಾಲ

ವಾದ ಜ್ಞಾನವುಳ್ಳವನಾದುದರಿಂದ, ಮನಸ್ಸಿನ ಅಜ್ಞಾನವನ್ನು ನಿಶ್ಶೇಷವಾಗಿ ನೀಗಿ, ಶ್ರೀಮನ್ನಾರಾಯಣನ ಕೃಪಾಬಲದಿಂದ ಸ್ವರ್ಗವನ್ನು ಪಾಲಿಸುವ ದೇವೇಂದ್ರನಂತೆ, ಶ್ರೀಕೃಷ್ಣನನ್ನೇ ತನಗೆ ಮುಖ್ಯಗತಿಯನ್ನಾಗಿ ನಂಬಿ ತಮ್ಮಂದಿರೊಡನೆ, ಸಮುದ್ರಾಂತವಾದ ಸಮಸ್ತಭೂಮಂಡಲವನ್ನೂ ಧರ್ಮದಿಂದ ಪಾಲಿಸುತಿದ್ದನು. ಶೌನಕಾ! ಈ ಧರ್ಮರಾಜನ ರಾಜ್ಯದಲ್ಲಿ ಕಾಲಕಾಲಕ್ಕೆ ಸರಿಯಾಗಿ ಮೇಘಗಳು ಸುವೃಷ್ಟಿಯನ್ನು ಸುರಿಸುತಿದ್ದುವು. ಭೂಮಿಯು ಸಮೃದ್ಧವಾದ ಬೆಳೆಯನ್ನು ಕೊಡುತಿತ್ತು. ಗೋವುಗಳೆಲ್ಲವೂ ಉಬ್ಬಿದ ಕೆಚ್ಚಲುಗಳಿಂದ ಕೂಡಿ ಬೇಕಾದಷ್ಟು ಹಾಲನ್ನು ಕರೆಯುತಿದ್ದುವು. ಎಲ್ಲಾ ಋತುಗಳಲ್ಲಿಯೂ ತದನುಗುಣಗಳಾದ ಓಷಧಿಗಳು ಬೆಳೆಯುತಿದ್ದುವು. ನದಿಗಳು ಯಾವಾಗಲೂ ನಿರ್ಮಲಜಲದಿಂದ ತುಂಬಿ ತುಳುಕುತಿದ್ದುವು. ಸಮುದ್ರವು ನಾನಾವಿಧರತ್ನಸಮೂಹಗಳಿಂದ ಶೋಭಿಸುತಿತ್ತು. ಪರ್ವತಪ್ರಾಂತಗಳೆಲ್ಲವೂ ಸರ್ವವಿಧಧಾತುಗಳಿಂದ ಬೆಳಗುತಿದ್ದುವು. ವನಗಳೆಲ್ಲವೂ ಪ್ರಶಸ್ತವಾದ ಫಲಪುಷ್ಪಸಮೃದ್ಧಿಯಿಂದ ಶೋಭಿಸುತಿದ್ದುವು. ಧರ್ಮರಾಜನ ರಾಜ್ಯದಲ್ಲಿ ಪ್ರಜೆಗಳಿಗೆ ಯಾವವಿಧದ ಮನೋವ್ಯಥೆಯಾಗಲೀ ರೋಗಗಳಾಗಲೀ ಆಧ್ಯಾತ್ಮಿಕಾದಿ ತಾಪತ್ರಯಗಳಾಗಲೀ ಸಂಭವಿಸುತ್ತಿರಲಿಲ್ಲ. 'ಹೀಗೆ ಧರ್ಮರಾಜನು ಸುಖದಿಂದ ರಾಜ್ಯವನ್ನು ಪರಿಪಾಲಿಸತೊಡಗಿದಮೇಲೆ, ಶ್ರೀಕೃಷ್ಣನು ಸಂತುಷ್ಟನಾಗಿ, ದ್ವಾರಕೆಗೆ ಹೊರಡಲುದ್ಯುಕ್ತನಾದನು. ಆ ಶ್ರೀಕೃಷ್ಣನು ತನ್ನ ತಂಗಿಯಾದ ಸುಭದ್ರೆಯ ಕೋರಿಕೆಯನ್ನು ತೀರಿಸುವುದಕ್ಕಾಗಿಯೂ ಧರ್ಮರಾಜನ ದುಃಖಸಮಾಧಾನಕ್ಕಾಗಿಯೂ ಹೀಗೆ ಹಸ್ತಿನಾಪುರದಲ್ಲಿ ಕೆಲವು ತಿಂಗಳಿದ್ದು, ಆ ಮೇಲೆ ಧರ್ಮರಾಜನ ಅನುಮತಿಯನ್ನು ಪಡೆದು, ಭೀಮಾದಿಗಳನ್ನಾಲಿಂಗಿಸಿಕೊಂಡು, ಅಲ್ಲಿದ್ದ ಸಮಸ್ತಜನಗಳಿಂದಲೂ ನಮಸ್ಕರಿಸಲ್ಪಟ್ಟವನಾಗಿ ಪ್ರಯಾಣಕ್ಕಾಗಿ ರಥವನ್ನೇರಿ ಕುಳಿತನು. ಹೀಗೆ ಕೃಷ್ಣನು ರಥಾರೂಢನಾಗಿ ಪಟ್ಟಣಕ್ಕೆ, ಹೊರಡುವ ಸಮಯದಲ್ಲಿ, ಆತನ ವಿಯೋಗ ದುಃಖವನ್ನು ಸಹಿಸಲಾರದೆ ಕುಂತಿ ಸುಭದ್ರೆ, ಉತ್ತರೆ, ಗಾಂಧಾರಿ, ಮೊದಲಾದ ಸ್ತ್ರೀಯರೂ, ಧರ್ಮರಾಜ, ಭೀಮ, ನಕುಲ, ಸಹದೇವರೂ, ಧೃತರಾಷ್ಟ್ರಾದಿಗಳೂ, ಧೌಮ್ಯರೇ ಮೊದಲಾದ ಮಹರ್ಷಿಗಳೂ, ಆತನ ರಥವನ್ನು ಹಿಂಬಾಲಿಸಿ ಹೊರಟರು. ಶೌನಕಾ! ಲೋಕದಲ್ಲಿ ಮನುಷ್ಯರು ಸತ್ಪುರುಷರ ಸಹವಾಸದಿಂದ ದುಸ್ಸಂಗವನ್ನು ಬಿಟ್ಟು, ಸಜ್ಜನರಿಗೆ ಸೇವ್ಯವಾದ ಶ್ರೀಕೃಷ್ಣನ ಕೀರ್ತಿಯನ್ನೊಂದಾವರ್ತಿ ಕೇಳಿದ ಮಾತ್ರದಿಂದಲೇ ಅದನ್ನು ಎಂದೆಂದಿಗೂ ಬಿಟ್ಟಿರಲಾರರು. ಹೀಗಿರುವಾಗ ಸರ್ವಕಾಲದಲ್ಲಿಯೂ, ಶ್ರೀ ಕೃಷ್ಣನೊಡನೆಯೇ ಸೇರಿ ನಿದ್ರಾಹಾರಗಳನ್ನು ನಡೆಸುತ್ತ ಅವನ ಸಂಗಡಲೇ ಕುಳಿತು

ಸಂಭಾಷಣಗಳನ್ನು ನಡೆಸುತಿದ್ದ ಪಾಂಡವರು, ಹೇಗೆ ತಾನೇ ಆ ಮಹಾತ್ಮನ ವಿರಹವನ್ನು ಸಹಿಸಬಲ್ಲರು ? ಹೀಗೆ ಧರ್ಮರಾಜಾದಿಗಳೂ, ಕುಂತಿ ಮೊದಲಾದ ಸ್ತ್ರೀಯರೂ ಕೃಷ್ಣನಲ್ಲಿರುವ ಸ್ನೇಹದಿಂದ, ಆತನನ್ನಗಲಿರಲಾರದೆ, ಮನಸ್ಸನ್ನು ಅವನಲ್ಲಿಯೇ ನೆಲೆಗೊಳಿಸಿ, ಎವೆಮುಚ್ಚದೆ ಆತನನ್ನೇ ನೋಡುತ್ತ, ಬಹಳ ಚಿಂತಾಪರರಾಗಿ ಅಲ್ಲಲ್ಲಿ ತಿರುಗುತಿದ್ದರು. ಸ್ತ್ರೀಜನವೆಲ್ಲವೂ ಕೃಷ್ಣನ ಪ್ರಯಾಣಕಾಲದಲ್ಲಿ ಕಣ್ಣೀರನ್ನು ಬಿಡುವುದು ಅಮಂಗಳಸೂಚಕವೆಂದೆಣಿಸಿ, ಅವನ ವಿರಹದುಃಖದಿಂದ ತುಂಬಿ ತುಳುಕುತ್ತಿರುವ ಬಾಷ್ಪಜಲವನ್ನು ಎಷ್ಟೋಪ್ರಯತ್ನದಿಂದ ತಡೆದಿಟ್ಟುಕೊಳ್ಳುತಿದ್ದರು. ಶಂಖ, ಭೇರಿ, ಮೃದಂಗ, ವೀಣೆ, ಪಣವ, ಗೋಮುಖ, ದುಂದುಭಿ, ಘುಂಟೆ, ಕರತಾಳ ಮೊದಲಾದ ಶುಭವಾದ್ಯಗಳೆಲ್ಲವೂ ಗಂಭೀರವಾಗಿ ನುಡಿಸಲ್ಪಡುತಿದ್ದುವು. ಹಸ್ತಿನಾಪುರದಲ್ಲಿದ್ದ ಸ್ತ್ರೀಯರೆಲ್ಲರೂ ಆಕೃಷ್ಣನ ಪ್ರಯಾಣೋತ್ಸವವನ್ನು ನೋಡಬೇಕೆಂಬ ಆಸೆಯಿಂದ ಉಪ್ಪರಿಗೆಗಳನ್ನೇರಿ, ಪ್ರೀತಿಯನ್ನೂ, ಲಜ್ಜೆಯನ್ನೂ, ಮಂದಹಾಸವನ್ನೂ ಸೂಚಿಸತಕ್ಕ ನೋಟಗಳಿಂದ ಈತನನ್ನೇ ನೋಡುತ್ತ, ಮೇಲಿನಿಂದ ಶ್ರೀಕೃಷ್ಣನ ಮೇಲೆ ಪುಷ್ಪವರ್ಷವನ್ನು ಸುರಿಸುತಿದ್ದರು. ಶ್ರೀಕೃಷ್ಣನಿಗೆ ಪರಮಪ್ರಿಯನಾದ ಅರ್ಜುನನು, ಆತನ ಪ್ರಯಾಣಕಾಲದಲ್ಲಿ ಮುತ್ತಿನ ಕುಚ್ಚುಗಳಿಂದಲೂ, ರತ್ನಖಚಿತವಾದ ದಂಡದಿಂದಲೂ ಶೋಭಿತವಾದ ಶ್ವೇತಚ್ಛತ್ರವನ್ನು ತನ್ನ ಕೈಯಿಂದಲೇ ಹಿಡಿಯುತ್ತ ಬಂದನು. ಉದ್ಧವಸಾತ್ಯಕಿಗಳಿಬ್ಬರೂ ಶ್ರೀಕೃಷ್ಣನ ಉಭಯಪಾರ್ಶ್ವದಲ್ಲಿ ನಿಂತು ಮಹಾದ್ಭುತಗಳಾದ ಚಾಮರಗಳನ್ನು ಬೀಸುತ್ತ ಬಂದರು. ದಾರಿಯುದ್ದಕ್ಕೂ ಸ್ತ್ರೀಯರು ಪುಷ್ಪವೃಷ್ಟಿಯನ್ನು ಕರೆಯುತಿದ್ದರು. ಅಲ್ಲಲ್ಲಿ ಬ್ರಾಹ್ಮಣರು ಮುಂದೆ ಬಂದು, ಪ್ರಕೃತಿ ಜನ್ಯವಾದ ಹೇಯಗುಣವಿಲ್ಲದವನಾಗಿಯೂ, ಜ್ಞಾನಶಕ್ತ್ಯಾದಿಗುಣಪರಿಪೂರ್ಣನಾಗಿಯೂ ಇರುವ ಆ ಶ್ರೀಕೃಷ್ಣಪರಮಾತ್ಮನಿಗೆ ತಮಗೆ ತೋರಿದ ಮಂಗಳಾಶೀರ್ವಚನಗಳನ್ನು ಮಾಡುತಿದ್ದರು. ಪೂರ್ಣಕಾಮನಾದ ಆ ಶ್ರೀಕೃಷ್ಣನ ವಿಷಯದಲ್ಲಿ ಈ ಬ್ರಾಹ್ಮಣರು ಮಾಡತಕ್ಕ ಆಶೀರ್ವಚನಗಳು ನಿರರ್ಥಕಗಳಾಗಿದ್ದರೂ, ಇವರ ವಾಕ್ಯಗಳು ಅವರಿಗೆ ಆತನಲ್ಲಿರುವ ಭಕ್ತಿಗೂ, ಸ್ನೇಹಕ್ಕೂ ಅನುರೂಪಗಳಾಗಿ, ನಾನಾ ಕಡೆಯಿಂದ ಹೊರಡುತಿದ್ದುವು. ಶ್ರೀಕೃಷ್ಣನ ಪ್ರಯಾಣಕಾಲದಲ್ಲಿ ಆತನಲ್ಲಿ ವಿಶೇಷಭಕ್ತಿಯುಳ್ಳವರಾಗಿದ್ದ ಪುರಸ್ತ್ರೀಯರು, ಒಬ್ಬರನ್ನೊಬ್ಬರು ನೋಡಿ ಶ್ರೀಕೃಷ್ಣಗುಣಗಳನ್ನು ಹೀಗೆಂದು ಕೊಂಡಾಡುತಿದ್ದರು, 'ಆಹಾ! ಪ್ರಳಯಕಾಲದಲ್ಲಿ ಸತ್ವಾದಿಗುಣಗಳು ಹುಟ್ಟುವ ಮೊದಲು, ಕರ್ಮರೂಪಗಳಾದ ಶಕ್ತಿ

ಗಳೆಲ್ಲವೂ ಅಡಗಿರುವಾಗ್ಯ, ಯಾವನು ತಾನೊಬ್ಬನೇ ಸೂಕ್ಷ್ಮಚಿದಚಿದ್ರೂಪವಾದ ಜಗತ್ತನ್ನು ಶರೀರವನ್ನಾಗಿ ಹೊಂದಿ, ಸರ್ವನಿಯಾಮಕನಾಗಿ ಬೇರೊಂದನ್ನೂ ಕಾಣಿಸದೆ ಪ್ರಕಾಶಿಸುತಿದ್ದನೋ, ಆ ಪರಮಪುರುಷನೇ ಈ ಕೃಷ್ಣನಲ್ಲದೆ ಬೇರೆಯಲ್ಲ! ಮೊದಲು ಕಾರಣದಶೆಯಲ್ಲಿ, ಯಾವ ಭಗವಂತನು ತಾನೊಬ್ಬನಾಗಿಯೇ ಇದ್ದು, ತನಗೆ ಶರೀರಭೂತಗಳಾದ ಜೀವಗಳಿಗೆ ಹೊದ್ದಿಕೆಯಾಗಿಯೂ, ತನ್ನ ಸಂಕಲ್ಪದಿಂದ ಪ್ರೇರಿತವಾಗಿಯೂ, ಪ್ರಪಂಚಸೃಷ್ಟಿಗೆ ಉನ್ಮುಖವಾಗಿಯೂ ಇರುವ ಪ್ರಕೃತಿಯನ್ನವಲಂಬಿಸಿ, ತಾನೂ ಅಂತರಾತ್ಮನಾಗಿ ಪ್ರವೇಶಿಸಿ, ನಾಮರೂಪಗಳಿಲ್ಲದ ಜೀವಾತ್ಮನಲ್ಲಿ ನಾಮರೂಪಗಳನ್ನುಂಟುಮಾಡಬೇಕೆಂದುದ್ದೇಶಿಸಿ, ವೇದಗಳಿಗೆ ಪ್ರವರ್ತಕನಾದನೋ ಆ ಮಹನೀಯನೇ ಈ ಕೃಷ್ಣನೆಂಬುದರಲ್ಲಿ ಸಂದೇಹವಿಲ್ಲ! ಇದಲ್ಲದೆ ಲೋಕದಲ್ಲಿ ಮಹಾಜ್ಞಾನಿಗಳೆಲ್ಲರೂ ತಮ್ಮ ಪ್ರಾಣವಾಯುಗಳನ್ನು ತಡೆದು, ಇಂದ್ರಿಯಗಳನ್ನು ನಿಗ್ರಹಿಸಿ, ಶುದ್ಧವಾದ ಮನಸ್ಸಿನಿಂದಲೂ, ಭಕ್ತಿಯಿಂದಲೂ ಕೂಡಿದವರಾಗಿ, ಯಾವ ಪರಮಾತ್ಮನ ಸ್ವರೂಪವನ್ನು ನೋಡುತ್ತಿರುವರೋ ಅವನೇ ಈ ಕೃಷ್ಣನು! ಎಲೆ ಸಖಿ! ವೇದವಿತ್ತುಗಳು ಯಾವನ ಸತ್ಕಥೆಗಳನ್ನು ಅತಿರಹಸ್ಯಾರ್ಥವುಳ್ಳ ವೇದಾಂತಗಳಿಂದ ಗಾನಮಾಡುತ್ತಿರುವರೋ, ಯಾವನು ತಾನೊಬ್ಬನೇ ಆಗಿದ್ದರೂ, ಜಗತ್ತಿನ ಸೃಷ್ಟಿಸ್ಥಿತಿಸಂಹಾರಗಳಲ್ಲಿ ಲೀಲಾರ್ಥವಾಗಿ ಪ್ರವರ್ತಿಸುತ್ತಿರುವನೋ, ಯಾವ ಮಹಾನುಭಾವನು ಈ ಜಗತ್ತಿನಲ್ಲಿ ಅಂತರ್ಯಾಮಿಯಾಗಿದ್ದರೂ, ಅದರಿಂದುಂಟಾದ ದೋಷಸಂಬಂಧವಿಲ್ಲದಿರುವನೋ, ಆ ಈಶ್ವರನೇ ಈ ಕೃಷ್ಣನು! ಇದಲ್ಲದೆ ಲೋಕದಲ್ಲಿ ಕುಬುದ್ಧಿಯುಳ್ಳ ರಾಜರು, ದುಷ್ಪ್ರವರ್ತನವುಳ್ಳವರಾಗಿ, ಅಧರ್ಮದಲ್ಲಿ ಪ್ರವರ್ತಿಸಿದಾಗಲೆಲ್ಲಾ, ಲೋಕವನ್ನು ರಕ್ಷಿಸುವುದಕ್ಕಾಗಿ ಮತ್ಸ್ಯಾದ್ಯವತಾರಗಳನ್ನು ಧರಿಸಿ, ಧರ್ಮವನ್ನೂ ಜ್ಞಾನಾದಿಸದ್ಗುಣಗಳನ್ನೂ, ಸತ್ಯ, ದಯೆ, ಕೀರ್ತಿ, ಮೊದಲಾದುವುಗಳನ್ನೂ ನೆಲೆಗೊಳಿಸತಕ್ಕವನೂ ಈತನಲ್ಲದೆ ಬೇರೆಯಲ್ಲ. ಇನ್ನು ಹೆಚ್ಚಿಗೆ ಹೇಳಿದುದರಿಂದೇನು? ಈ ಕೃಷ್ಣನು ಹುಟ್ಟಿದುದರಿಂದಲೇ ಯದುಕುಲವು ಪವಿತ್ರವಾಯಿತು! ಈ ಶ್ರೀ ಕೃಷ್ಣಮೂರ್ತಿಯ ಪಾದವಿನ್ಯಾಸದಿಂದಲೇ ಮಥುರಾಪುರವು ಪವಿತ್ರವೆನಿಸಿರುವುದು. ಆಹಾ! ದ್ವಾರಕಾಪುರದ ಭಾಗ್ಯವೇ ಭಾಗ್ಯವಲ್ಲವೆ? ಯಾವ ಪಟ್ಟಣದಲ್ಲಿರುವ ಪ್ರಜೆಗಳು ಸದಾ ಶ್ರೀ ಕೃಷ್ಣನ ದರ್ಶನದಿಂದ ಮಹಾನಂದವನ್ನನುಭವಿಸುತ್ತಿರುವರೋ. ಯಾವ ಪಟ್ಟಣದ ಭೂಭಾಗವು ಈತನ ಪಾದಸ್ಪರ್ಶದಿಂದ ಅತಿಪವಿತ್ರವೆನಿಸಿ ಕೊಂಡಿರುವುದೋ ಯಾವ ಪಟ್ಟಣವು ಈತನ ನಿತ್ಯ

ನಿವಾಸದಿಂದ ಸ್ವರ್ಗಕ್ಕಿಂತಲೂ ಅತಿಶಯವಾದ ಪ್ರಭಾವವನ್ನು ಹೊಂದಿರುವುದೋ, ಆ ದ್ವಾರಕಾಪುರಿಯೊಂದೇ ಈಸಮಸ್ತ ಭೂಮಿಗೂ ಪುಣ್ಯವನ್ನೂ, ಯಶಸ್ಸನ್ನೂ ಕೈಗೂಡಿಸುತ್ತಿರುವುದು. ಎಲೈ ಸಖಿಯರೇ! ಯಾವ ಗೋಪಸ್ತ್ರೀಯರು ಈತನ ಕೈಯನ್ನು ಹಿಡಿದು, ಈತನಲ್ಲಿಯೇ ನಟ್ಟಮನಸ್ಸುಳ್ಳವರಾಗಿ, ಮೋಹಪಾರವಶ್ಯದಿಂದ ಇವನ ಅಧರಾಮೃತವನ್ನು ಪಾನಮಾಡುತ್ತಿರುವರೋ, ಅವರೆಲ್ಲರೂ ಪೂರ್ವಜನ್ಮದಲ್ಲಿ ಭಗವಂತನನ್ನು ಎಷ್ಟೋವಿಧದಿಂದ ಆರಾಧಿಸಿರಬೇಕು! ಅವರು ಜನ್ಮಾಂತರದಲ್ಲಿ ಎಷ್ಟೋ ವ್ರತಗಳನ್ನೂ, ಎಷ್ಟೋ ದಾನಗಳನ್ನೂ, ಎಷ್ಟೋ ಹೋಮಗಳನ್ನೂ ನಡೆಸಿರಬೇಕು! ಹಾಗಲ್ಲದಿದ್ದರೆ ಅವರಿಗೆ ಈ ಭಾಗ್ಯವೆಲ್ಲಿಯದು? ಮತ್ತು ಹಿಂದೆ ಗರ್ವದಿಂದ ಕೊಬ್ಬಿದ ಶಿಶುಪಾಲಾದಿಗಳನ್ನು ನಿಗ್ರಹಿಸಿ, ಸ್ವಯಂವರದಲ್ಲಿ ವೀರ್ಯಶುಲ್ಕವಾಗಿ ಸಾಧಿಸಿ ತಂದ ರುಕ್ಮಿಣಿ, ಜಾಂಬವತಿ, ಮೊದಲಾದ ನಾರೀಮಣಿಯರೂ, ನರಕಾಸುರನನ್ನು ನಿಗ್ರಹಿಸಿ ತಂದ ಹದಿನಾರು ಸಾವಿರಮಂದಿ ಸ್ತ್ರೀಯರೂ, ಈ ಶ್ರೀ ಕೃಷ್ಣನನ್ನು ತಮ್ಮ ಮನೆಯಲ್ಲಿ ನಿತ್ಯವಾಗಿ ನಿಲ್ಲಿಸಿಕೊಳ್ಳುವುದರಿಂದ, ಅಶುಚಿಯಾಗಿಯೂ, ಕ್ರೂರವಾಗಿಯೂ ಇರುವ ಸ್ತ್ರೀಜಾತಿಗೇ ಒಂದು ವಿಧವಾದ ಮೇಲ್ಮೆಯನ್ನುಂಟುಮಾಡಿದರಲ್ಲವೇ? ಈ ಮಹಾನುಭಾವನು ಆಗಾಗ ಹೆಸರು ಹಿಡಿದು ಕರೆಯುವುದರಿಂದ ಯಾವ ಸ್ತ್ರೀಯರ ಮನಸ್ಸನ್ನು ಮೋಹಗೊಳಿಸುತ್ತಿರುವನೋ, ಆಹಾ! ಅವರ ಭಾಗ್ಯವೇ ಭಾಗ್ಯವು. ಹೀಗೆಂದು ಸಂಭಾಷಿಸುತ್ತಿರುವ ಪುರಸ್ತ್ರೀಯರ ವಾಕ್ಯವನ್ನು ಕೇಳಿ, ಶ್ರೀಕೃಷ್ಣನು ಮಂದಹಾಸವಿಶಿಷ್ಟವಾದ ನೋಟದಿಂದ ಅವರನ್ನು ಮತ್ತಷ್ಟು ಆನಂದಪಡಿಸುತ್ತ. ಹಸ್ತಿನಾಪುರದ ಬೀದಿಗಳನ್ನು ದಾಟಿಬರುತಿದ್ದನು. ಆಗ ಧರ್ಮರಾಜನು ಕೃಷ್ಣನಲ್ಲಿ ತನಗಿದ್ದ ಮಿತಿಮೀರಿದ ಪ್ರೇಮದಿಂದ, ಆತನಿಗೆ ಶತ್ರುಗಳಿಂದೇನಾದರೂ ಅಪಾಯವುಂಟಾಗುವುದೋ ಎಂದು ಹೆದರಿ, ಆ ಕೃಷ್ಣನ ಬೆಂಗಾವಲಿಗಾಗಿ ಒಂದು ದೊಡ್ಡ ಚತುರಂಗಸೈನ್ಯವನ್ನು ಕಳುಹಿಸಿಕೊಟ್ಟನು. ತನ್ನ ತಮ್ಮಂದಿರೊಡನೆ ತಾನೂ ಬಹಳದೂರದವರೆಗೆ ಹಿಂಬಾಲಿಸಿದನು. ಹೀಗೆ ಪಾಂಡವರು ತನ್ನನ್ನು ಬಿಟ್ಟಿರಲಾರದೆ ಬಹುದೂರದವರೆಗೆ ಹಿಂಬಾಲಿಸಿ ಬಂದುದನ್ನು ನೋಡಿ, ಕೃಷ್ಣನು, ಇಂಪಾದ ಮೃದುವಾಕ್ಯಗಳಿಂದ ಅವರನ್ನು ಹಿಂತಿರುಗಿಸಿ, ತನ್ನ ಪ್ರಿಯಜನದೊಡನೆ ದ್ವಾರಕಾಭಿಮುಖನಾಗಿ ಹೊರಟನು. ದಾರಿಯಲ್ಲಿ ಕ್ರಮವಾಗಿ, ಕುರುಜಾಂಗಲ, ಪಾಂಚಾಲ, ಶೂರಸೇನಾದಿದೇಶಗಳನ್ನೂ, ಯಮುನಾತೀರಪ್ರಾಂತಗಳನ್ನೂ ಬ್ರಹ್ಮಾವರ್ತ, ಕುರುಕ್ಷೇತ್ರಗಳನ್ನೂ, ಮತ್ಸ್ಯದೇಶವನ್ನೂ, ಸರಸ್ವತೀನದಿಯ ತೀರದೇಶಗಳನ್ನೂ, ಇನ್ನೂ ಅಲ್ಲಲ್ಲಿ ತೃಣಜಲರಹಿತಗಳಾದ ಬಯಲುಗಳನ್ನೂ ದಾಟಿ ಬಂದನು. ಅದರಿಂದಾಚೆಗೆ ಸೌವೀರಾದಿದೇಶಗಳ ಮೇಲೆ ಹೊರಟು, ದ್ವಾರಕೆಗೆ ಸೇರಿ

ದಂತಿದ್ದ ಆನರ್ತದೇಶವನ್ನು ಸಮೀಪಿಸುವಷ್ಟರಲ್ಲಿ, ಆತನ ರಥದ ಕುದುರೆಗಳು ಸ್ವಲ್ಪ ವಾಗಿ ಬಳಲಿದಂತೆ ತೋರಿದುವು. ಹಾಗಿದ್ದರೂ ಪ್ರಯಾಣವನ್ನು ನಿಲ್ಲಿಸದೆ ಮುಂದೆ ಹೋಗುತ್ತ, ದಾರಿಯಲ್ಲಿ ಆಯಾದೇಶದ ಜನರು ಭಕ್ತಿಯಿಂದ ತಂದು ಸಮರ್ಪಿಸಿದ ಕಾಣಿಕೆಗಳನ್ನು ಪ್ರೀತಿಯಿಂದ ಸ್ವೀಕರಿಸುತ್ತ, ಸೂರ್ಯನು ಪಶ್ಚಿಮಶಿಖರದಿಂದ ಹಾರಿ ಅಪರಸಮುದ್ರದಲ್ಲಿ ಧುಮುಕುವಷ್ಟರೊಳಗಾಗಿ ದ್ವಾರಕಾಪುರಪ್ರಾಂತದಲ್ಲಿರುವ ಆನರ್ತದೇಶವನ್ನು ಪ್ರವೇಶಿಸಿದನು. ಇಲ್ಲಿಗೆ ಹತ್ತನೆಯ ಅಧ್ಯಾಯವು.

---

## ಶ್ರೀಕೃಷ್ಣನು ದ್ವಾರಕೆಯನ್ನು ಪ್ರವೇಶಿಸಿದುದು

ಹೀಗೆ ಕೃಷ್ಣನು ಸಕಲಸಂಪತ್ಸಮೃದ್ಧವಾಗಿಯೂ, ತನ್ನಿಂದ ಪರಿಪಾಲಿತವಾಗಿಯೂ ಇರುವ ಆನರ್ತದೇಶವನ್ನು ಪ್ರವೇಶಿಸಿದೊಡನೆ, ಅಲ್ಲಿ ಬಹುಕಾಲದಿಂದ ತನನ್ನಗಲಿದುದಕ್ಕಾಗಿ, ದುಃಖಿತರಾಗಿದ್ದ ಆಪುರಜನವೆಲ್ಲಕ್ಕೂ ದುಃಖನಿವೃತ್ತಿಯಾಗುವಂತೆ, ತನ್ನ ಪಾಂಚಜನ್ಯವೆಂಬ ಮಹಾಶಂಖವನ್ನು, ಪೂರಯಿಸಿ ಧ್ವನಿಮಾಡಿದನು. ಹೀಗೆ ಕೃಷ್ಣನು ಶಂಖವನ್ನು ಕೈಯಿಂದೆತ್ತಿ ಬಾಯಲ್ಲಿಟ್ಟು ಪೂರೈಸುವಾಗ, ಆತನ ಅಧರಕಾಂತಿಯಿಂದ ಕೆಂಪಾದ ಪಾಂಚಜನ್ಯವು ಶ್ರೀಕೃಷ್ಣನ ಕರಕಮಲ ಸಂಬಂಧದಿಂದ, ಕಮಲವನಮಧ್ಯದಲ್ಲಿ ಧ್ವನಿಮಾಡುತ್ತಿರುವ ಕಲಹಂಸದಂತೆ ಶೋಭಿಸುತಿತ್ತು. ಲೋಕಕಂಟಕರಾದವರಿಗೆ ಭಯವನ್ನುಂಟುಮಾಡತಕ್ಕ ಆ ಶಂಖಧ್ವನಿಯನ್ನು ಕೇಳಿದೊಡನೆ, ಆದೇಶವಾಸಿಗಳೆಲ್ಲರೂ ತಮ್ಮ ಪ್ರಭುವಾದ ಕೃಷ್ಣನು ಬರುವುದನ್ನು ತಿಳಿದು, ಆತನ ದರ್ಶನಕ್ಕಾಗಿ ಕುತೂಹಲಗೊಂಡು, ಅವನನ್ನಿದಿರುಗೊಳ್ಳುವುದಕ್ಕಾಗಿ ಹೊರಟುಬಂದರು. ಮತ್ತು ಇವರೆಲ್ಲರೂ ಸೂರ್ಯನಿಗೆ ಬೆಳಕನ್ನು ತೋರಿಸುವಂತೆ ನೈಜಾನಂದಲಾಭದಿಂದ ಪೂರ್ಣಕಾಮನಾಗಿಯೂ, ಆತ್ಮಾರಾಮನಾಗಿಯೂ, ನಿರಪೇಕ್ಷನಾಗಿಯೂ ಇರುವ ಆ ಶ್ರೀ ಕೃಷ್ಣನಿಗೆ ತಮ್ಮ ತಮ್ಮ ಶಕ್ತ್ಯನುಸಾರವಾಗಿ ಕೈಕಾಣಿಕೆಗಳನ್ನೂ ತಂದೊಪ್ಪಿಸಿದರು. ಇವರೆಲ್ಲರೂ ಕಾಣಿಕೆಗಳನ್ನೊಪ್ಪಿಸಿ, ಪ್ರೀತಿಯಿಂದರಳಿದ ಮುಖವುಳ್ಳವರಾಗಿ ಮುಂದೆ ಬಂದು, ಕೃಷ್ಣನನ್ನು ನೋಡಿ, ಎಳೆಮಕ್ಕಳು ತಮಗೆ ರಕ್ಷಕನಾಗಿಯೂ ತಮ್ಮೆಲ್ಲರಲ್ಲಿ ಸಮಾನ ಪ್ರೇಮವುಳ್ಳವನಾಗಿಯೂ ಇರುವ ತಂದೆಯಲ್ಲಿ ತಮ್ಮತಮ್ಮ ಮನಸ್ಸಂತೋಷವನ್ನು ತಿಳಿಸಿಕೊಳ್ಳುವಂತೆ ಸಂತೋಷದಿಂದ ಕುಗ್ಗಿದ ಕಂಠವುಳ್ಳವರಾಗಿ ಹೀಗೆಂದು ವಿಜ್ಞಾಪಿಸುವರು. "ದೇವಾ ! ಬ್ರಹ್ಮಾದಿದೇವತೆಗಳಿಂದಲೂ, ಸನಕಸ

ನಂದನಾದಿ ಮಹರ್ಷಿಸಮೂಹಗಳಿಂದಲೂ ವಂದನೀಯವಾದ ನಿನ್ನ ಪಾದಾರ ವಿಂದಕ್ಕೆ ವಂದಿಸುವೆವು. ಈ ನಿನ್ನ ಪಾದಕಮಲವೇ ಲೋಕದಲ್ಲಿ ಶ್ರೇಯಃಕಾಂಕ್ಷಿ ಗಳಿಗೆ ಪರಮಪ್ರಾಪ್ಯವು ! ಬ್ರಹ್ಮಾದಿ ದೇವತೆಗಳನ್ನಾದರೂ ವಶೀಕರಿಸತಕ್ಕ ಕಾಲ ವೂಕೂಡ ನಿನ್ನ ವಿಷಯದಲ್ಲಿ ಮಾತ್ರ ತನ್ನ ಶಕ್ತಿಯನ್ನು ತೋರಿಸಲಾರದು. ಅಂತಹ ನಿನ್ನ ಪಾದಸೇವೆಯಿಂದ ನಾವು ಧನ್ಯರಾದೆವು. ಎಲೈ ಲೋಕಕಾರಣನೇ ! ನೀನೇ ನಮಗೆ ಮಿತ್ರನು. ನೀನೇ ತಂದೆಯು ! ನೀನೇ ಅಧಿಪತಿಯು ! ನೀನೇ ನಮಗೆ ಜ್ಞಾನೋಪದೇಶಕನಾದ ಪರಮಗುರುವು ! ನೀನೇ ಪರದೈವವು ! ನಿನಗಿಂತಲೂ ನಮಗೆ ಬೇರೆ ದೈವವಿಲ್ಲವು ! ನಾವು ಯಾವಾಗಲೂ ನಿನ್ನನ್ನೇ ನಂಬಿ ನಿನ್ನ ಸೇವೆಯಿಂದಲೇ ಕೃತಕೃತ್ಯರಾಗುತ್ತಿರುವೆವು. ದೇವಾ! ನಮಗೆ ಸರ್ವವಿಧ ದಲ್ಲಿಯೂ, ಆಶ್ರಯನಾದ ನೀನೇ ನಮಗೆ ಉತ್ತರೋತ್ತರಾಭ್ಯುದಯವನ್ನು ಅನು ಗ್ರಹಿಸಬೇಕು. ಎಲೈ ನಾಥನೆ! ಮೂರುಲೋಕದವರಿಗೂ ದುರ್ಲಭವಾಗಿ, ಪ್ರೀತಿ ವಿಶಿಷ್ಟವಾದ ಮಂದಹಾಸದಿಂದಲೂ, ಸ್ನೇಹಪೂರ್ವಕವಾದ ನೋಟದಿಂದಲೂ ಕೂಡಿದ ಮುಖಾರವಿಂದವುಳ್ಳುದಾಗಿ, ಸರ್ವಾತಿಶಯವಾದ ಸೌಂದರ್ಯದಿಂದೊಪ್ಪು ತ್ತಿರುವ ಈ ನಿನ್ನ ಸ್ವರೂಪವನ್ನು ಪ್ರತ್ಯಕ್ಷವಾಗಿ ನೋಡುವ ಭಾಗ್ಯವೇ ನಮಗೆ ಲಭಿಸಿದ ಮೇಲೆ, ಇನ್ನು ನಮ್ಮ ಪುಣ್ಯಕ್ಕೆಣೆಯೇನಿರುವುದು? ಆಹಾ ! ಲೋಕದಲ್ಲಿ ಸನಾಥರೆಂದರೆ ನಮಗೆ ಮಾತ್ರವೇ ಸಲ್ಲುವುದು ! ಓ ! ಪುಂಡರೀಕಾಕ್ಷಾ ! ಇದಕ್ಕೆ ಮೊದಲು ನೀನು ನಿನ್ನ ಮಿತ್ರರನ್ನು ನೋಡುವುದಕ್ಕಾಗಿ, ಹಸ್ತಿನಾವತಿಗೋ, ಮಧುವನಕ್ಕೋ ಹೋಗಿದ್ದ ಕಾಲದಲ್ಲಿ, ಕಣ್ಣುಗಳಿಗೆ ಸೂರ್ಯನ ಬೆಳಕಿಲ್ಲದಿದ್ದರೆ ಹೇ ಗೋ ಹಾಗೆ, ನಿನ್ನ ವಿಯೋಗದಿಂದ ನಮಗೆ ಒಂದೊಂದುಕ್ಷಣವೂ ಕೋಟಿಸಂವತ್ಸ ರಗಳಂತೆ ಕಾಣಿಸುತಿದ್ದುವು" ಎಂದರು. ಹೀಗೆ ಪ್ರಜೆಗಳು ಪ್ರೇಮಪೂರ್ವಕವಾಗಿ ನುಡಿಯುತ್ತಿರುವ ಮೃದುಮಧುರ ವಾಕ್ಯಗಳನ್ನು ಕೇಳುತ್ತ, ಭಕ್ತವತ್ಸಲನಾದ ಶ್ರೀ ಕೃಷ್ಣನು ತನ್ನ ದಯಾದೃಷ್ಟಿಯಿಂದಲೇ ಅವರನ್ನನುಗ್ರಹಿಸಿ, ಪುರಪ್ರವೇಶವನ್ನು ಮಾಡಿದನು. ಸರ್ಪಗಳಿಂದ ರಕ್ಷಿತವಾದ ಭೋಗವತೀಪುರದಂತೆ, ತನಗೆ ಸಮಾನ ಬಲವುಳ್ಳ ಯಾದವರು, ಭೋಜರು, ದಾಶಾರ್ಹರು, ನಂದಕರು ಮೊದಲಾದ ವೀರ ರಿಂದ ಸುರಕ್ಷಿತವಾಗಿದ್ದ ಆಪುರವು, ಎಲ್ಲಾ ಋತುಗಳಲ್ಲಿ ಹುಟ್ಟುವ ಸರ್ವವಿಧ ಫಲ ಪುಷ್ಪಸಮೃದ್ಧಿಗಳಿಂದಲೂ, ಪೂರ್ಣವಾಗಿದ್ದಿತು. ಅಲ್ಲಿ ಮಂದಾರ, ಪಾರಿಜಾತಾದಿ ವೃಕ್ಷಶ್ರೇಷ್ಠಗಳಿಂದಲೂ, ಅಂದವಾದ ಬಳ್ಳಿವನಗಳಿಂದಲೂ, ಪುಣ್ಯಾಶ್ರಮಗಳಿಂ ದಲೂ, ಹೂತೋಟಗಳಿಂದಲೂ, ಉಪವನಗಳಿಂದಲೂ, ವಿಹಾರವನಗಳಿಂದಲೂ ಸುತ್ತಲೂ ಅಮೃತಗಳಾದ ಎಷ್ಟೋ ತಾವರೆಕೊಳಗಳು ನೇತ್ರಾನಂದಕರವಾಗಿದ್ದುವು.

ಪುರದ್ವಾರಗಳಲ್ಲಿಯೂ ಮನೆಬಾಗಿಲುಗಳಲ್ಲಿಯೂ ಉತ್ಸವಸೂಚಕಗಳಾದ ಮಂಗಳ ತೋರಣಗಳು ಕಂಗೊಳಿಸುತಿದ್ದುವು. ರಾಜಮಾರ್ಗಗಳೂ, ರಥಮಾರ್ಗಗಳೂ, ಅಂಗಡಿಬೀದಿಗಳೂ, ಬೀದಿಯ ಚೌಕಗಳೂ ಸಂಮಾರ್ಜನಾದಿಗಳಿಂದ ಸಂಸ್ಕರಿಸಲ್ಪಟ್ಟಿದ್ದುವು. ಅಲ್ಲಿನ ಸಮಸ್ತಬೀದಿಗಳೂ ಸುಗಂಧಜಲದಿಂದ ಘಮಘಮಿಸುತಿದ್ದುವು. ಬೀದಿಗಳೆಲ್ಲವೂ ಪುಷ್ಪಫಲಗಳಿಂದಲೂ, ಅಕ್ಷತೆಗಳಿಂದಲೂ, ಚಿಗುರುಗಳಿಂದಲೂ ಅಲಂಕೃತವಾಗಿದ್ದುವು. ಅಲ್ಲಿನ ನಿವಾಸಿಗಳಲ್ಲಿ ಒಬ್ಬೊಬ್ಬರೂ, ತಮ್ಮ ತಮ್ಮ ಮನೆಯ ಬಾಗಿಲುಗಳಲ್ಲಿ ಮೊಸರು, ಅಕ್ಷತೆ, ಹಣ್ಣುಗಳು, ಕಬ್ಬು, ಪೂರ್ಣಕುಂಭಗಳು, ಧೂಪದೀಪಾದಿಪೂಜಾದ್ರವ್ಯಗಳು ಇವೇ ಮೊದಲಾದ ಮಂಗಳದ್ರವ್ಯಗಳನ್ನಿಟ್ಟು ಅಲಂಕರಿಸಿದ್ದರು. ಹೀಗೆ ನೇತ್ರಾನಂದಕರವಾದ ದ್ವಾರಕೆಯನ್ನು ಕೃಷ್ಣನು ಪ್ರವೇಶಿಸುವುದರೊಳಗಾಗಿ, ಇತ್ತಲಿಂದ ಅಕ್ರೂರನೂ, ಉಗ್ರಸೇನನೂ, ಅದ್ಭುತಪರಾಕ್ರಮವುಳ್ಳ ಬಲರಾಮನೂ, ಪ್ರದ್ಯುಮ್ನನೂ ಚಾರುಧೇಷ್ಣನೂ, ಜಾಂಬವತೀಪುತ್ರನಾದ ಸಾಂಬನೂ ಆ ಕೃಷ್ಣನನ್ನು ನೋಡಬೇಕೆಂಬ ಕುತೂಹಲದಿಂದ ಆತುರಪಡುತ್ತ, ಆ ಸಂತೋಷದಲ್ಲಿ ತಮ್ಮತಮ್ಮ ಭೋಜನಗಳಲ್ಲಿಯೂ, ಶಯನಗಳಲ್ಲಿಯೂ, ಆಸನಗಳಲ್ಲಿಯೂ ದೃಷ್ಟಿಯಿಡದೆ, ಒಂದು ಮದದಾನೆಯನ್ನು ಮುಂದಿಟ್ಟುಕೊಂಡು ಕೃಷ್ಣನನ್ನಿದಿರುಗೊಳ್ಳುವುದಕ್ಕಾಗಿ ಹೊರಟರು. ಅನೇಕಬ್ರಾಹ್ಮಣರು ಮಂಗಳದ್ರವ್ಯಗಳನ್ನು ಕೈಯಲ್ಲಿ ಹಿಡಿದು ಸ್ವಸ್ತಿವಾಚನಗಳನ್ನು ಹೇಳುತ್ತ ಬಂದರು. ವೇದಘೋಷಗಳೂ, ಶಂಖತೂರ್ಯಾದಿ ಮಂಗಳವಾದ್ಯಧ್ವನಿಗಳೂ ಕಿವಿಗಿಂಪಾಗಿ ಕೇಳಿಸುತಿದ್ದುವು. ಇವರೆಲ್ಲರೂ ರಥದಲ್ಲಿ ಕುಳಿತು ಸಂತೋಷದಿಂದಲೂ ಭಯಭಕ್ತಿಗಳಿಂದಲೂ ಕೂಡಿದವರಾಗಿ, ಪರಮಸಂತೋಷದಿಂದ ಕೃಷ್ಣನಿಗಿದಿರಾಗಿ ಬಂದರು. ನೂರಾರುಮಂದಿ ಗಣಿಕಾಸ್ತ್ರೀಯರು, ಕೆನ್ನೆಗಳಲ್ಲಿಯೂ, ಮುಖಗಳಲ್ಲಿಯೂ, ಶೋಭಿಸುತ್ತಿರುವ ಕುಂಡಲಕಾಂತಿಯುಳ್ಳವರಾಗಿ, ಶ್ರೀಕೃಷ್ಣದರ್ಶನಾಸಕ್ತಿಯಿಂದ ವಾಹನಗಳನ್ನೇರಿ ಹೊರಟರು. ಇದಲ್ಲದೆ ನಟನರ್ತಕರೂ, ಗಾಯಕರೂ, ಹೊಗಳುಭಟ್ಟರೂ, ವಂಶಾವಳಿಯನ್ನು ಕೀರ್ತಿಸತಕ್ಕ ಮಾಗಧರೂ, ಪುಣ್ಯಶ್ಲೋಕನಾದ ಶ್ರೀಕೃಷ್ಣನ ದಿವ್ಯಚರಿತ್ರಗಳನ್ನು ಗಾನಮಾಡುತ್ತ ಬಂದರು. ಆಗ ಶ್ರೀಕೃಷ್ಣನು ಪರಮಸಂತೋಷದಿಂದ ಬರುತ್ತಿರುವ ಈ ಬಂಧುವರ್ಗಗಳನ್ನೂ, ಪುರವಾಸಿಗಳನ್ನೂ ನೋಡಿದೊಡನೆ ಅವರೆಲ್ಲರನ್ನೂ ಯಥೋಚಿತವಾಗಿ ಮನ್ನಿಸಿದನು. ವೃದ್ಧರಾದ ಕೆಲವರನ್ನು ನಮಸ್ಕಾರಗಳಿಂದ ಗೌರವಿಸಿದನು. ಕೆಲವರನ್ನು ಪ್ರೇಮದಿಂದಾಲಿಂಗಿಸಿಕೊಂಡನು. ಕೆಲವರನ್ನು ಮಂದಹಾಸದಿಂದ ಮನ್ನಿಸಿದನು.

ಹಾಗೆಯೇ ಕೆಲವರನ್ನು ಕರಸ್ಪರ್ಶದಿಂದಲೂ, ಕೆಲವರನ್ನು ತನ್ನ ಕಟಾಕ್ಷ ವೀಕ್ಷಣಗಳಿಂದಲೂ ಮನ್ನಿಸಿ, ಎಲ್ಲರನ್ನೂ ಕುಶಲಪ್ರಶ್ನೆ ಮಾಡಿದನು. ವಸು ದೇವಾದಿಗಳು ಮೊದಲುಗೊಂಡು ಚಂಡಾಲಪರ್ಯಂತವಾಗಿ ಅಲ್ಲಿಗೆ ಬಂದವ ರೆಲ್ಲರನ್ನೂ ಕೃಷ್ಣನು ಹೀಗೆ ಕುಶಲಪ್ರಶ್ನಾದಿಗಳಿಂದ ಗೌರವಿಸಿದ ಮೇಲೆ ತಾನೂ ಕೂಡ ಗುರುಗಳಿಂದಲೂ ಬ್ರಾಹ್ಮಣರಿಂದಲೂ, ವಯೋವೃದ್ಧರಿಂದಲೂ, ವಂದಿಜನಗಳಿಂದಲೂ ಆಶೀರ್ವದಿಸಲ್ಪಟ್ಟವನಾಗಿ, ರಾಜಮಾರ್ಗದಿಂದಲೇ ಹೊರಟು, ಅಂತಃಪುರದಕಡೆಗೆ ಬರುತಿದ್ದನು. ಈ ಕೃಷ್ಣಾಗಮನವೃತ್ತಾಂತ ವನ್ನು ಕೇಳಿದೊಡನೆ, ಆ ದ್ವಾರಕೆಯಲ್ಲಿದ್ದ ಸ್ತ್ರೀಯರೆಲ್ಲರೂ ತಮ್ಮತಮ್ಮ ಉಪ್ಪರಿಗೆಗಳನ್ನೇರಿ ನೋಡುತಿದ್ದರು. ಶೌನಕಾ! ಲಕ್ಷ್ಮೀನಿವಾಸನಾದ ಆಶ್ರೀಕೃಷ್ಣನನ್ನು ಪ್ರತಿದಿನವೂ ನೋಡುತಿದ್ದರೂ, ದ್ವಾರಕಾವಾಸಿಗಳ ಕಣ್ಣು ಗಳಿಗೆ ತೃಪ್ತಿಯೆಂಬುದೇ ಇಲ್ಲವು. ಅವರಿಗೆ ತೃಪ್ತಿಯುಂಟಾಗದಿರುವುದೇನೂ ಆಶ್ಚರ್ಯವಲ್ಲ. ಆ ಶ್ರೀಕೃಷ್ಣನ ವಕ್ಷಃಸ್ಥಳವು ಶ್ರೀದೇವಿಗೂ, ಆತನ ಮುಖವು ಜನರ ಕಣ್ಣುಗಳಿಗೂ ಲಾವಣ್ಯರಸವನ್ನು ಕುಡಿಯತಕ್ಕ ಪಾನಪಾತ್ರೆಯಂ ತಿರುವುದು. ಹಾಗೆಯೇ ಆ ಮಹಾತ್ಮನ ಅಂದವಾದ ಬಾಹುಗಳು ದಿಕ್ಪಾಲ ಕರಿಗೂ, ಪಾದಪದ್ಮವು ಮಹಾಯೋಗಿಗಳಿಗೂ ಪಾನಪಾತ್ರದಂತಿರುವುದು. ಹೀಗಿರತಕ್ಕ ಆಭಗವಂತನ ದಿವ್ಯಲಾವಣ್ಯವು ಸಾಮಾನ್ಯಜನರಿಗೆ ಮೇಲೆಮೇಲೆ ಆಸೆಯನ್ನು ಹುಟ್ಟಿಸುವುದೇನಾಶ್ಚರ್ಯವು? ಹೀಗೆ ಶ್ರೀಕೃಷ್ಣನು ಸಮಸ್ತಜನರ ನೇತ್ರಗಳಿಗೆ ಆನಂದವನ್ನುಂಟುಮಾಡುತ್ತ ರಾಜಮಾರ್ಗದಲ್ಲಿ ಬರುತ್ತಿರು ವಾಗ, ಪುರವಾಸಿಗಳಲ್ಲಿ ಕೆಲವರು ಛತ್ರಗಳನ್ನು ತಂದು ಹಿಡಿದರು. ಕೆಲವರು ಚಾಮರಗಳನ್ನುತಂದು ಬೀಸಿದರು. ದಾರಿಯುದ್ದಕ್ಕೂ ಪುಷ್ಪವೃಷ್ಟಿಗಳನ್ನು ಚೆಲ್ಲುತಿದ್ದರು. ಹೀಗೆ ನಾನಾವಿಧಗಳಾದ ಉಪಚಾರಗಳಿಂದ ಶ್ರೀಕೃಷ್ಣನು ಅಂತಃಪುರಮಾರ್ಗವಾಗಿ ಬರುತಿದ್ದಾಗ, ಸೂರ್ಯಬಿಂಬಕ್ಕೆ ಸಮಾನವಾದ ಕಿರೀಟ ದಿಂದಲೂ, ಚಂದ್ರಬಿಂಬದಂತಿರುವ ಶ್ವೇತಚ್ಛತ್ರದಿಂದಲೂ, ಮಿಂಚಿನಂತಿದ್ದ ಪೀತಾಂಬರದಿಂದಲೂ, ಇಂದ್ರಧನುಸ್ಸಿಗೆ ಸಮಾನವಾದ ವನಮಾಲಿಕೆಯಿಂದಲೂ ಶೋಭಿತನಾಗಿ, ಕಾಲಮೇಘದಂತೆ ತೋರುತಿದ್ದನು. ಹೀಗೆ ಕೃಷ್ಣನು ಸಮಸ್ತ ವೈಭವಗಳೊಡನೆ ಹೊರಟು, ಮೊದಲು ತನ್ನತಂದೆಯ ಮನೆಯನ್ನು ಪ್ರವೇಶಿ ಸಿದನು. ಅಲ್ಲಿ ದೇವಕಿ, ರೋಹಿಣಿ ಮೊದಲಾದ ಮಾತೆಯರೆಲ್ಲರೂ ಪ್ರೀತಿ ಯಿಂದಾಲಿಂಗಿಸಲು, ಆ ಏಳುಮಂದಿ ಮಾತೆಯರಿಗೂ ಈತನು ತಲೆಬಗ್ಗಿ ನಮಸ್ಕರಿಸಿದನು ಆ ಮಾತೆಯರಲ್ಲಿ ಒಬ್ಬೊಬ್ಬರೂ ಕೃಷ್ಣನನ್ನು ಕರೆದು

ತೊಡೆಯಲ್ಲಿ ಕುಳ್ಳಿರಿಸಿಕೊಂಡು, ಪುತ್ರಪ್ರೇಮದಿಂದ ಸೋರೆಯಿಕ್ಕುವ ಸ್ತನವುಳ್ಳವರಾಗಿ, ಆನಂದಬಾಷ್ಪಬಿಂದುಗಳಿಂದ ಅವನ ಮೈಯನ್ನು ತೋಯಿಸುತ್ತ ಸಂತೋಷಪರವಶರಾಗಿದ್ದರು. ಹೀಗೆ ಕೃಷ್ಣನು ಸ್ವಲ್ಪಕಾಲದವರೆಗೆ ತಂದೆಯ ಅಂತಃಪುರದಲ್ಲಿದ್ದು, ಅಲ್ಲಿಂದ ಹೊರಟು, ಬೇಕುಬೇಕಾದ ಭೋಗ್ಯವಸ್ತುಗಳಿಂದ ತುಂಬಿದುದಾಗಿಯೂ, ಸರ್ವೋತ್ತಮವಾಗಿಯೂ, ತನ್ನ ಹದಿನಾರುಸಾವಿರಮಂದಿ ಪ್ರಿಯಭಾರ್ಯೆಯರಿಗೆ ಬೇರೆಬೇರೆ ನಿವಾಸಸ್ಥಾನಗಳಾದ ಉಪ್ಪರಿಗೆಗಳಿಂದ ಶೋಭಿತವಾಗಿಯೂ ಇರುವ ತನ್ನ ರಾಜಮಂದಿರವನ್ನು ಪ್ರವೇಶಿಸಿದನು. ಆಗ ಆಸ್ತ್ರೀಯರೆಲ್ಲರೂ ಬಹುಕಾಲಕ್ಕೆ ತಮ್ಮನ್ನಗಲಿ ಹಿಂತಿರುಗಿ ಬಂದ ಕೃಷ್ಣನನ್ನು ನೋಡಿದೊಡನೆ ಪರಮಾನಂದಭರಿತರಾಗಿ, ಲಜ್ಜೆಯಿಂದ ಕುಗ್ಗಿದ ಮುಖದೊಡನೆ, ತಮ್ಮ ತಮ್ಮ ಶಯನಾಸನಗಳನ್ನು ಬಿಟ್ಟು ಥಟ್ಟನೆ ಮೇಲೆದ್ದು ನಿಂತರು. ಇದಕ್ಕೆ ಮೊದಲು ಈ ಕೃಷ್ಣಾಗಮನಕ್ಕಾಗಿ ತಾವು ತೊಡಗಿದ್ದ ವ್ರತಗಳನ್ನೂ ಬೇಗನೆ ಮುಗಿಸಿಕೊಂಡು, ಒಡನೆಯೇ ತಮ್ಮ ಮನಸ್ಸಿನಿಂದಲೂ, ತಮ್ಮ ದೃಷ್ಟಿಗಳಿಂದಲೂ, ಶ್ರೀಕೃಷ್ಣನನ್ನಾಲಿಂಗಿಸಿದುದಲ್ಲದೆ, ಪ್ರದ್ಯುಮ್ನನೇ ಮೊದಲಾದ ತಮ್ಮ ತಮ್ಮ ಮಕ್ಕಳ ಮೂಲಕವಾಗಿಯೂ ಆಕೃಷ್ಣದೇಹಾಲಿಂಗನರೂಪವಾದ ಆನಂದವನ್ನನುಭವಿಸಿದರು. ಅವರಲ್ಲಿ ಕೆಲವರು ಬಹು ಗಂಭೀರಸ್ವಭಾವವುಳ್ಳವರಾಗಿದ್ದರೂ, ಆ ಕೃಷ್ಣದರ್ಶನಕಾಲದಲ್ಲಿ ತಮಗುಂಟಾದ ಆನಂದಬಾಷ್ಪವನ್ನು ತಡೆದಿಟ್ಟುಕೊಳ್ಳಲಾರದೆ ಹೋದರು. ಕೃಷ್ಣನು ಆಸ್ತ್ರೀಯರಿಗೆ ಯಾವಾಗಲೂ ಪಕ್ಕದಲ್ಲಿದ್ದು, ಅಂತರಂಗದಲ್ಲಿಯೂ ಅವರೊಡನೆಯೇ ಕಲೆತಿರುವನಾದರೂ, ಅವರಿಗೆ ಆ ಮಹಾತ್ಮನ ಪಾದಯುಗ್ಮವು, ನೋಡಿದಾಗಲೆಲ್ಲಾ ಹೊಸವಸ್ತುವನ್ನು ಕಂಡಂತೆ ಆಸೆಯನ್ನು ಹುಟ್ಟಿಸುತ್ತಿರುವುದು. ಶೌನಕಾ! ಕೇವಲ ಚಂಚಲಸ್ವಭಾವೆಯೆನಿಸಿದ ಲಕ್ಷ್ಮೀದೇವಿಯೇ, ಅತನ ಪಾದಕಮಲವನ್ನು ಎಡೆಬಿಡದೆ ಆಶ್ರಯಿಸಿರುವಾಗ, ಇತರರು ಅವನ ವಿಯೋಗವನ್ನು ಹೇಗೆತಾನೆ ಸಹಿಸಬಲ್ಲರು? ಭೂಮಿಗೆ ಭಾರಭೂತರಾಗಿ, ಅಕ್ಷೋಹಿಣೀಸಂಖ್ಯೆಯಿಂದ ಸೈನ್ಯಗಳನ್ನು ಹೆಚ್ಚಿಸಿಕೊಂಡು, ವೀರ್ಯೋದ್ರಿಕ್ತರಾಗಿದ್ದ ಕ್ಷತ್ರಿಯರನ್ನಡಗಿಸುವುದಕ್ಕಾಗಿಯೇ ಕೃಷ್ಣನು, ಗಾಳಿಯು ಬಿದಿರುಮೆಳೆಯಲ್ಲಿ ಬೆಂಕಿಯನ್ನು ಹುಟ್ಟಿಸಿ ಕಾಡನ್ನು ಸುಡುವಂತೆ, ಕೌರವಪಾಂಡವರಲ್ಲಿ ವೈರವನ್ನು ಹುಟ್ಟಿಸಿ, ತಾನು ಆಯುಧವನ್ನು ಹಿಡಿಯದೆ, ಅವರಲ್ಲಿಯೇ ಒಬ್ಬರಿಂದೊಬ್ಬರನ್ನು ಕೊಲ್ಲಿಸಿ, ದುಷ್ಟಕ್ಷತ್ರಿಯರನ್ನು ನಿರ್ಮೂಲಮಾಡಿದನು. ಶೌನಕಾ! ಆ ಪರಮಾತ್ಮನೇ ತನ್ನ ಸಂಕಲ್ಪ

ದಿಂದ ಈ ಲೋಕದಲ್ಲಿ ಕೃಷ್ಣರೂಪದಿಂದವತರಿಸಿ ಸಾಮಾನ್ಯಪುರುಷನಂತೆ ಸಂಚರಿಸುವನು. ಸ್ತ್ರೀಯರಿಗೆ ತಾನು ವಶ್ಯನಾಗಿದ್ದು ಪಾಮರನಂತೆ ನಟಿಸುವನು. ಈ ನೆವದಿಂದ ತಾನೂ ಸಂಸಾರಸುಖವನ್ನನುಭವಿಸುವ ಹಾಗೆ ತೋರಿಸುವನು. ಮುನೀಂದ್ರಾ! ಗಂಭೀರವಾದ ಅಭಿಪ್ರಾಯಗಳನ್ನು ಸೂಚಿಸತಕ್ಕ ಮಂದಹಾಸಗಳಿಂದಲೂ, ಲಜ್ಜೆಯಿಂದಲೂ ಕೂಡಿದ ನೋಟಗಳಿಂದ ಶೋಭಿತೆಯರಾದ ಆ ಶ್ರೀಕೃಷ್ಣನ ಭಾರ್ಯೆಯರನ್ನು ನೋಡಿದೊಡನೆ, ಮನ್ಮಥನೂ ಕೂಡ ಮರುಳಾಗಿ, ತನ್ನ ಕೈಯಲ್ಲಿರುವ ಧನುಸ್ಸನ್ನು ಬಿಸುಡುವನು. ಹೀಗೆ ಮನ್ಮಥನನ್ನೂ ಮರುಳುಮಾಡತಕ್ಕ ಶಕ್ತಿಯುಳ್ಳವರಾಗಿದ್ದರೂ, ಆ ಸ್ತ್ರೀಯರು ತಮ್ಮ ವಿಲಾಸದಿಂದಾಗಲಿ, ತಮ್ಮ ವಂಚನೆಗಳಿಂದಾಗಲಿ, ಕೃಷ್ಣನನ್ನು ಮೋಹಗೊಳಿಸುವುದಕ್ಕೆ ಸಮರ್ಥರಲ್ಲ. ಹೀಗೆ ನಿಸ್ಸಂಗನಾದ ಶ್ರೀಕೃಷ್ಣನು ನಿಜಸ್ವರೂಪವನ್ನು ಮರೆಸಿಕೊಂಡು, ಮನುಷ್ಯನಂತೆ ನಡೆಯುತ್ತಿರುವುದನ್ನು ನೋಡಿ, ಮೂಢರಾದ ಕೆಲವರು, ಆತನನ್ನು ಸಂಸಾರಸಂಬಂಧವುಳ್ಳವನೆಂದೇ ಎಣಿಸಿ, ತಮ್ಮೊಡನೆ ಹೋಲಿಸಿಕೊಳ್ಳುವರು. ಅಂತವರು ಅಜ್ಞರೆಂಬುದಕ್ಕೆ ಏನೇನೂ ಸಂದೇಹವಿಲ್ಲ. ಸತ್ವಾದಿಗುಣಗಳಾಗಲಿ, ಜೀವನಿಗೆ ಸಹಜವಾದ ಅವಿದ್ಯೆ, ರಾಗ, ದ್ವೇಷ ಮೊದಲಾದುವುಗಳಾಗಲಿ, ಪರಮಾತ್ಮನನ್ನಾಶ್ರಯಿಸಿದ ಜ್ಞಾನವನ್ನು ಹೇಗೆ ಮುಟ್ಟಲಾರವೋ, ಹಾಗೆಯೇ ಭಗವಂತನೂ, ಮೂಲಪ್ರಕೃತಿಯಲ್ಲಿ ವ್ಯಾಪಕನಾಗಿದ್ದರೂ ಅದರ ದೋಷಗಳು ಅವನನ್ನು ಮುಟ್ಟಲಾರವು. ಯಾವಾಗಲೂ ಅದರ ಸಂಬಂಧವುಳ್ಳವನಾಗಿದ್ದರೂ ಅದರ ದೋಷವನ್ನು ತಾನು ಅಂಟಿಸಿಕೊಳ್ಳದಿರುವುದೇ! ಆ ಭಗವಂತನಲ್ಲಿರುವ ಅಸಾಧಾರಣ ಮಹಿಮೆಯೆಂದು ತಿಳಿ! ಲೋಕದಲ್ಲಿ ಸಂಸಾರಿಗಳ ಬುದ್ಧಿಯು ಈಶ್ವರನ ನಿಜಸ್ಥಿತಿಯನ್ನು ತಿಳಿಯಲಾರದೆ ಹೇಗೆ ಬೇರೆವಿಧವಾಗಿ ಭಾವಿಸುವುದೋ, ಹಾಗೆಯೇ ಮೂಢೆಯರಾದ ಈ ಸ್ತ್ರೀಯರೂಕೂಡ, ಆತನ ನಿಜಸ್ಥಿತಿಯನ್ನು ತಿಳಿಯಲಾರದೆ ಆ ಕೃಷ್ಣನು ತಮಗೆ ವಶನೆಂದು ತಿಳಿದಿರುವರು. ಇಲ್ಲಿಗೆ ಹನ್ನೊಂದನೆಯ ಅಧ್ಯಾಯವು.

---

## ಪರೀಕ್ಷಿನ್ಮಹಾರಾಜನ ಜನನವು

ಇದನ್ನು ಕೇಳಿ ಶೌನಕನು ತಿರುಗಿ ಸೂತನನ್ನು ಪ್ರಶ್ನೆಮಾಡುವನು. “ಎಲೈ ಸೂತನೆ! ಉತ್ತರೆಯ ಗರ್ಭವು ಸಹಿಸಲಸಾಧ್ಯವಾದ ತೇಜಸ್ಸುಳ್ಳ ಬ್ರಹ್ಮಶಿರೋನಾಮಕವಾದ ಅಶ್ವತ್ಥಾಮನ ಅಸ್ತ್ರದಿಂದ ದಗ್ಧವಾಗುವ ಕಾಲದಲ್ಲಿ, ಕೃಷ್ಣನು ಅದನ್ನು ರಕ್ಷಿಸಿದುದಾಗಿ ಹೇಳಿದೆಯಲ್ಲವೆ? ಆ ಗರ್ಭೋತ್ಪತ್ತಿವೃತ್ತಾಂತವನ್ನು ವಿವರಿಸಿ ತಿಳಿಸು! ಆ ಪರೀಕ್ಷಿದ್ರಾಜನು ಹುಟ್ಟಿದುದು ಹೇಗೆ? ಆತನು ನಡೆಸಿದ ಕಾರ್ಯವೇನು? ಶುಕಮುನಿಯು ಆತನಿಗುಪದೇಶಿಸಿದ ತತ್ವಜ್ಞಾನದ ಕ್ರಮವೇನು? ಕೊನೆಗೆ ಪರೀಕ್ಷಿದ್ರಾಜನು ಹೇಗೆ ದೇಹವನ್ನು ನೀಗಿದನು? ಅವನಿಗೆ ಯಾವ ಸದ್ಗತಿಯುಂಟಾಯಿತು? ಈ ವೃತ್ತಾಂತಗಳೆಲ್ಲವನ್ನೂ ನಾವು ಶ್ರದ್ಧೆಯಿಂದ ಕೇಳಬೇಕೆಂದಿರುವೆವು. ಈ ವಿಷಯಗಳೆಲ್ಲವನ್ನೂ ನಮಗೆ ಹೇಳಬಹುದಾಗಿದ್ದರೆ, ವಿವರಿಸಿ ತಿಳಿಸು” ಎಂದನು. ಅದಕ್ಕಾ ಸೂತನು ಶೌನಕಾ! ಕೇಳು? ಧರ್ಮರಾಜನು ಪಟ್ಟಾಭಿಷಿಕ್ತನಾದ ಮೇಲೆ ಶ್ರೀಕೃಷ್ಣನ ಪಾದಪದ್ಮವೊಂದನ್ನೇ ನಂಬಿದವನಾಗಿ, ಸಮಸ್ತ ಕಾಮುಗಳಲ್ಲಿಯೂ ಆಸೆಯನ್ನು ತೊರೆದು, ತನ್ನ ತಂದೆಯಂತೆ ಪ್ರಜೆಗಳನ್ನು ರಂಜಿಸುತ್ತ ರಾಜ್ಯವನ್ನು ನಡೆಸುತಿದ್ದನು. ಧರ್ಮರಾಜನು ಅಷ್ಟೊಂದು ಮಹಾವೈಭವದಲ್ಲಿದ್ದರೂ, ಶ್ರೀಕೃಷ್ಣನ ಪಾದಸೇವೆಯೊಂದಲ್ಲದೆ ಬೇರೊಂದೂ ಅವನಿಗೆ ರುಚಿಯನ್ನು ಹುಟ್ಟಿಸಲಿಲ್ಲ! ಆಗ ಧರ್ಮಪುತ್ರನಿಗೆ ಕೈಗೂಡಿದ್ದ ಸಕಲ ಸಂಪತ್ತುಗಳೂ, ಪರಲೋಕಸಾಧಕಗಳಾದ ರಾಜಸೂಯಾದಿಯಾಗಗಳೂ, ಪ್ರಜಾಸಮೃದ್ಧಿಯೂ, ಸುಂದರಿಯರಾದ ಪತ್ನಿಯರೂ, ದಿಗ್ವಿಜಯಸಮರ್ಥರಾದ ಭೀಮಾರ್ಜುನಾದಿ ಸಹೋದರರೂ, ನಿಷ್ಕಂಟಕವಾದ ರಾಜ್ಯವೂ, ಜಂಬೂದ್ವೀಪಾಧಿಪತ್ಯವೂ, ಸ್ವರ್ಗಲೋಕವ್ಯಾಪಿಯಾದ ಅವನ ಕೀರ್ತಿಯೂ, ದೇವತೆಗಳಿಗಾದರೂ ಆಸೆಯನ್ನು ಹುಟ್ಟಿಸದೆ ಬಿಡುತ್ತಿರಲಿಲ್ಲ! ಹೀಗಿದ್ದರೂ ಕ್ಷುಧಹಸಿದು ಬಂದವರಿಗೆ ಅನ್ನದಲ್ಲಿ ಹೊರತು ಸ್ರಕ್ಚಂದನಾದಿಗಳೊಂದರಲ್ಲಿಯೂ ತೃಪ್ತಿಯುಂಟಾಗದಂತೆ, ಕೃಷ್ಣಧ್ಯಾನಾಸಕ್ತನಾದ ಆ ಧರ್ಮರಾಜನಿಗೆ, ಆ ಧ್ಯಾನವೊಂದು ಹೊರತು ಬೇರೊಂದೂ ಸಂತೋಷವನ್ನುಂಟುಮಾಡಲಾರದೆ ಹೋದವು. ಶೌನಕಾ! ಹೀಗೆ ಕೆಲವು ಕಾಲವು ಕಳೆಯುವಷ್ಟರಲ್ಲಿ, ಉತ್ತರೆಯ ಗರ್ಭದಲ್ಲಿ ಬೆಳೆಯುತಿದ್ದ ಶಿಶುವು, ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ದಗ್ಧವಾಗುತ್ತಿರುವಾಗ, ಅದಕ್ಕೆ ಹೆಬ್ಬೆರಳಿನ ಪ್ರಮಾಣವುಳ್ಳ ಒಂದು ದಿವ್ಯಪುರುಷಾಕೃತಿಯು ಕಣ್ಣಿಗೆ ಗೋಚರಿಸಿತು! ಬಹಳ ಶುದ್ಧವಾದ ಆ ಸ್ವರೂಪವು, ತಲೆಯಲ್ಲಿ ರತ್ನಖಚಿತವಾದ ಸುವರ್ಣಕಿರೀಟದಿಂದಲೂ, ಶ್ಯಾಮಲವಾದ ಮೈಬಣ್ಣದಿಂದಲೂ, ಮಿಂಚಿನಂತೆ

ಹೊಳೆಯುವ ಪೀತಾಂಬರದಿಂದಲೂ ಶೋಭಿಸುತ್ತ ನೋಡುವವರಿಗೆ ಅತ್ಯಾಶೆಯನ್ನು ಹುಟ್ಟಿಸುವಂತಿದ್ದಿತು. ಮತ್ತು ಆ ವ್ಯಕ್ತಿಯು, ಕಂದಿಕುಂದದ ಕಾಂತಿಯಿಂದಲೂ, ಉದ್ದವಾಗಿ ಕಾಂತಿಯುಕ್ತಗಳಾದ ನಾಲ್ಕುತೋಳುಗಳಿಂದಲೂ, ಕಿವಿಯಲ್ಲಿ ಸುವರ್ಣ ಕುಂಡಲಗಳಿಂದಲೂ, ರಕ್ತದಂತೆ ಕೆಂಪಾದ ಕಣ್ಣುಗಳಿಂದಲೂ, ಕೈಯಲ್ಲಿ ಗದಾದಂಡದಿಂದಲೂ ಶೋಭಿತವಾಗಿದ್ದಿತು. ಆ ಪುರುಷಸ್ವರೂಪವು ಅಗ್ನಿಸಮಾನವಾದ ಆ ಗದೆಯನ್ನು ಆ ಗರ್ಭಶಿಶುವಿನ ಸುತ್ತಲೂ ನಾನಾಕಡೆ ತಿರುಗಿಸುತ್ತ, ಸೂರ್ಯನ ಮಂಜನ್ನಡಗಿಸುವಂತೆ, ಅಶ್ವತ್ಥಾಮನ ಬ್ರಹ್ಮಾಸ್ತ್ರದ ವೇಗವನ್ನಡಗಿಸಿ ಅದರ ಸಮೀಪದಲ್ಲಿಯೇ ನಿಂತಿದ್ದಿತು. ಈ ಪುರುಷಾಕೃತಿಯನ್ನು ನೋಡಿ ಹತ್ತು ತಿಂಗಳು ಬೆಳೆದಿದ್ದ ಆ ಗರ್ಭಶಿಶುವು, ಆ ಪುರುಷನಾರೆಂಬುದನ್ನು ಪರೀಕ್ಷಿಸುವಷ್ಟರಲ್ಲಿ, ಅಪ್ರಮೇಯಸ್ವರೂಪವುಳ್ಳ ಆ ವ್ಯಕ್ತಿಯು, ಆ ಶಿಶುವು ನೋಡುತಿದ್ದ ಹಾಗೆಯೇ ಅಸ್ತ್ರದ ಶಕ್ತಿಯನ್ನಡಗಿಸಿ ಅಲ್ಲಿಯೇ ಕಣ್ಮರೆಯಾಯಿತು. ಆಮೇಲೆ ಇತ್ತಲಾಗಿ ಗ್ರಹಗಳೆಲ್ಲವೂ ಉಚ್ಚಸ್ಥಿತಿಯಲ್ಲಿರುವಾಗ ಸಮಸ್ತ ಶುಭಲಕ್ಷಣಗಳಿಂದ ಕೂಡಿದ ಒಂದು ಶುಭಲಗ್ನದಲ್ಲಿ, ಪಾಂಡುರಾಜನಿಗೆ ಸಮಾನನಾಗಿಯೂ, ಪಾಂಡವವಂಶೋದ್ಧಾರಕನಾಗಿಯೂ ಇರುವ ಪುತ್ರನ ಹುಟ್ಟಿದನು. ಇದನ್ನು ಕೇಳಿ ಧರ್ಮರಾಜನು ಬಹಳ ಸಂತೋಷಗೊಂಡು ಧೌಮ್ಯರು, ಕೃಪಾಚಾರ್ಯರು, ಮೊದಲಾದ ಬ್ರಾಹ್ಮಣೋತ್ತಮರಿಂದ ಸ್ವಸ್ತಿವಾಚನಗಳನ್ನು ಮಾಡಿಸಿ, ಜಾತಕರ್ಮವನ್ನು ನಡೆಸಿದನು. ಈ ಪುತ್ರೋತ್ಸವನಿಮಿತ್ತವಾಗಿ ಅನೇಕ ಬ್ರಾಹ್ಮಣರನ್ನು ಕರೆಯಿಸಿ, ಯಥೇಷ್ಟವಾಗಿ ಸುವರ್ಣವನ್ನೂ, ಗೋವುಗಳನ್ನೂ, ಭೂಮಿಯನ್ನೂ, ಗ್ರಾಮಗಳನ್ನೂ ಸರ್ವೋತ್ತಮಗಳಾದ ಆನೆಕುದುರೆಗಳನ್ನೂ ಬೇರೆಬೇರೆಯಾಗಿ ಪಾತ್ರವರಿತು ದಾನಮಾಡಿದನು. ಅನೇಕ ಬ್ರಾಹ್ಮಣರನ್ನು ಅನ್ನದಾನದಿಂದ ತೃಪ್ತಿಪಡಿಸಿದನು. ತೃಪ್ತರಾದ ಬ್ರಾಹ್ಮಣರೆಲ್ಲರೂ ವಿನಯದಿಂದ ನಿಂತಿರುವ ಧರ್ಮರಾಜನನ್ನು ನೋಡಿ, "ಎಲೈ ಧರ್ಮಪುತ್ರನೆ! ಪೂರುವಂಶಜರಾದ ನಿಮಗೆ ಸಂತಾನಾಭಿವೃದ್ಧಿಗಾಗಿ ಹುಟ್ಟಿದ ಈ ಗರ್ಭಪಿಂಡವು, ಅಶ್ವತ್ಥಾಮನ ಕ್ರೂರಾಸ್ತ್ರದಿಂದ ನಷ್ಟವಾಗುತಿದ್ದ ಸಂದರ್ಭದಲ್ಲಿ, ಸರ್ವಸಮರ್ಥನಾದ ಮಹಾವಿಷ್ಣುವು ಉತ್ತರೆಯ ಗರ್ಭದಲ್ಲಿ ಪ್ರವೇಶಿಸಿ, ವಾತ್ಸಲ್ಯದಿಂದ ಅದನ್ನು ರಕ್ಷಿಸಿರುವನು. ಗರ್ಭದಲ್ಲಿಯೇ ಈತನು ಆ ಮಹಾವಿಷ್ಣುವಿನ ಕೃಪಾಬಲದಿಂದ ರಕ್ಷಿತನಾದುದರಿಂದ, ಈತನಿಗೆ ಲೋಕದಲ್ಲಿ ವಿಷ್ಣುರಾತನೆಂಬ ಹೆಸರು ಪ್ರಸಿದ್ಧವಾಗಲಿ! ಧರ್ಮರಾಜಾ! ಇದನ್ನು ಸಾಮಾನ್ಯಶಿಶುವೆಂದೆಣಿಸಬೇಡ! ಈ ಬಾಲನು ಮುಂದೆ ಪರಮಭಾಗವತೋತ್ತಮನೆಂದೆನಿಸಿ ಪುಣ್ಯಕೀರ್ತಿಯನ್ನು ಹೊಂದುವನು" ಎಂದರು. ಆಗ ಧರ್ಮರಾಜನು ಬ್ರಾಹ್ಮಣ

ರನ್ನು ಕುರಿತು "ಓ ವಿಪ್ರೋತ್ತಮರೆ ! ಇದುವರೆಗೆ ನಮ್ಮ ವಂಶದಲ್ಲಿ ಹುಟ್ಟಿದವ ರೆಲ್ಲರೂ ಬಹಳ ಯಶಸ್ವಿಗಳಾಗಿ, ದಯಾನಿಧಿಗಳಾಗಿ, ರಾಜರ್ಷಿಗಳೆಂದು ಪ್ರಸಿದ್ಧಿ ಯನ್ನು ಪಡೆದರು ಅದರಂತೆ ಈ ಬಾಲನೂಕೂಡ ಮುಂದೆ ಖ್ಯಾತಿವಂತನಾಗಿ, ವಿಷ್ಣುಭಕ್ತನಾಗಿ, ಚಿರಜೀವಿಯಾಗಿ, ತನ್ನ ಹಿರಿಯರ ಕೀರ್ತಿಯನ್ನು ಮುಂದಕ್ಕೆ ತರುವನೇ, ಇಲ್ಲವೇ, ಎಂಬುದನ್ನು ನೀವು ಚೆನ್ನಾಗಿ ಯೋಚಿಸಿ ತಿಳಿಸಬೇಕು" ಎಂದನು. ಆಗ ಬ್ರಾಹ್ಮಣರು "ಎಲೈ ರಾಜೇಂದ್ರನೆ ! ಇದಕ್ಕೆ ಸಂದೇಹವೇನು ? ಈ ಬಾಲನು ವೈವಸ್ವತಪುತ್ರನಾದ ಇಕ್ಷ್ವಾಕುವಂತೆ ಧರ್ಮದಿಂದ ಪ್ರಜೆಗಳನ್ನು ರಕ್ಷಿಸುವನು. ದಶರಥಪುತ್ರನಾದ ಶ್ರೀರಾಮನಂತೆ ಬ್ರಾಹ್ಮಣ ಭಕ್ತಿಯುಳ್ಳವನಾಗಿ ಯೂ, ಸತ್ಯಸಂಧನಾಗಿಯೂ ಇರುವನು. ಶಿಬಿಚಕ್ರವರ್ತಿಯಂತೆ ಆಶ್ರಿತರಕ್ಷಣ ದಲ್ಲಿಯೂ, ಔದಾರ್ಯದಲ್ಲಿಯೂ ಖ್ಯಾತಿಹೊಂದುವನು. ದುಷ್ಯಂತಪುತ್ರನಾದ ಭರತ ನಂತೆ ಯಾಗಶೀಲರ ಯಶಸ್ಸನ್ನು ಪ್ರಕಾಶಗೊಳಿಸುವನು. ಧನುರ್ವಿದ್ಯೆಯಲ್ಲಿ ಅರ್ಜುನನನ್ನೂ, ಕಾರ್ತವೀರ್ಯಾರ್ಜುನನನ್ನೂ ಹೋಲುವನು. ಅಗ್ನಿಯಂತೆ ಶತ್ರು ಗಳಿಂದ ಸಹಿಸಲಸಾಧ್ಯವಾದ ಪ್ರತಾಪವುಳ್ಳವನಾಗುವನು. ಅಪಾರಪಾರಾವಾರ ದಂತೆ ಗಂಭೀರ ಸ್ವಭಾವವುಳ್ಳವನಾಗಿಯೂ, ದುಸ್ತರನಾಗಿಯೂ ಇರುವನು. ಸಿಂಹ ದಂತೆ ಪರಾಕ್ರಮಶಾಲಿ ! ಹಿಮವಂತನಂತೆ ಸಕಲಾಶ್ರಯನಾಗಿಯೂ ಬೆಳಗುವನು. ತಾಳ್ಮೆಯಲ್ಲಿ ಭೂದೇವಿಗೆ ಸಮಾನನೆನಿಸುವನು. ಇತರರ ತಪ್ಪನ್ನು ಮನ್ನಿಸುವುದ ರಲ್ಲಿ ತಂದೆತಾಯಿಗಳಂತೆ ಸಹನಗುಣಗಳನ್ನು ತೋರಿಸುವನ. ಬ್ರಹ್ಮನಂತೆ ಭೂತಸಮನಾಗಿಯೂ, ರುದ್ರನಂತೆ ಆಶ್ರಿತರಕ್ಷಕನಾಗಿಯೂ, ವಿಷ್ಣುವಿನಂತೆ ಸರ್ವಭೂತಾಶ್ರಯನಾಗಿಯೂ, ಶ್ರೀಕೃಷ್ಣನಂತೆ ಸಮಸ್ತ ಸದ್ಗುಣಾಶ್ರಯನಾಗಿ ಯೂ ಇರುವನು. ಮತ್ತು ಈ ಬಾಲನು, ಔದಾರ್ಯದಲ್ಲಿ ರಂತಿದೇವನಿಗೂ, ಧರ್ಮ ಗುಣದಲ್ಲಿ ಯಯಾತಿಗೂ, ಧೈರ್ಯದಲ್ಲಿ ಬಲಿಚಕ್ರವರ್ತಿಗೂ, ಹರಿಭಕ್ತಿಯಲ್ಲಿ ಪ್ರಹ್ಲಾ ದನಿಗೂ ಸಾಟಿಯೆನಿಸುವನು. ಮತ್ತು ಈ ಕುಮಾರನು ಮುಂದೆ ಅನೇಕಾಶ್ವಮೇಧ ಗಳನ್ನು ನಡೆಸುವನು. ವೃದ್ಧರನ್ನು ಸೇವಿಸುವನು. ತನಗೆ ಸಮಾನನಾದ ಪುತ್ರನನ್ನೇ ಪಡೆಯುವನು. ಉನ್ಮಾರ್ಗದಲ್ಲಿ ಪ್ರವರ್ತಿಸುವವರನ್ನು ಶಿಕ್ಷಿಸುವನು ತಾನು ಸನ್ಮಾರ್ಗವನ್ನು ಬಿಟ್ಟುಹೋಗತಕ್ಕವನಲ್ಲ. ಭೂಮಿಯಲ್ಲಿ ಧರ್ಮವನ್ನು ಸ್ಥಾಪಿಸುವುದಕ್ಕಾಗಿ ಕಲಿಯನ್ನು ಜಯಿಸುವನು. ಕೊನೆಗೆ ಈತನು ದೈವಯೋಗ ದಿಂದ ಬ್ರಾಹ್ಮಣಶಾಪಕ್ಕೆ ಪಾತ್ರನಾಗಿ, ತನಗೆ ತಕ್ಷಕನಿಂದ ಮೃತ್ಯುವುಂಟಾಗುವು ದನ್ನು ತಿಳಿದು, ಸರ್ವಸಂಗಪರಿತ್ಯಾಗ ಮಾಡಿ, ವಿಷ್ಣುಭಕ್ತಿಪರಾಯಣನಾಗಿ, ಗಂಗಾ ತೀರದಲ್ಲಿ ಪ್ರಾಯೋಪವೇಶವನ್ನು ಮಾಡುವನು. ಈ ಸಮಯದಲ್ಲಿ ಶುಕಮಹ

ರ್ಷಿಯು ಈತನಿಗೆ ತತ್ವಜ್ಞಾನವನ್ನುಪದೇಶಿಸುವನು. ತತ್ವಜ್ಞಾನವು ಹುಟ್ಟಿದೊಡನೆ ಈತನು ದೇಹವನ್ನು ತೊರೆದು ವಿಷ್ಣುಸ್ಥಾನವನ್ನು ಹೊಂದುವನು” ಎಂದರು. ಹೀಗೆ ಬ್ರಾಹ್ಮಣರೆಲ್ಲರೂ ಪರೀಕ್ಷಿದ್ರಾಜನ ಜಾತಕವನ್ನುನೋಡಿ, ಈ ಭವಿಷ್ಯದ್ವೃತ್ತಾಂತಗಳನ್ನು ತಿಳಿಸಿದೊಡನೆ, ಧರ್ಮರಾಜನು ಅವರೆಲ್ಲರನ್ನೂ ಬಹುಮಾನಗಳಿಂದ ಗೌರವಿಸಿದನು ಆ ಬ್ರಾಹ್ಮಣರೆಲ್ಲರೂ ಧರ್ಮಪುತ್ರನ ಅನುಮತಿಯನ್ನು ಪಡೆದು, ತಮ್ಮತಮ್ಮ ಸ್ಥಾನಗಳಿಗೆ ಹೋದರು. ಅವರಿಂದಾಚೆಗೆ ಇತ್ತಲಾಗಿ ಉತ್ತರೆಯ ಗರ್ಭದಲ್ಲಿ ಹುಟ್ಟಿದ ಈ ಕುಮಾರನು, ತನಗೆ ತಾಯಿಯ ಗರ್ಭದಲ್ಲಿ ಗೋಚರಿಸಿದ ಪುರುಷನಾರೆಂದು ತನ್ನಲ್ಲಿ ತಾನೇ ಧ್ಯಾನಿಸುತ್ತ, ಆಗ ಕಾಣಿಸಿದ ದಿವ್ಯಪುರುಷನು ಇನ್ನೂ ಈ ಲೋಕದಲ್ಲಿರುವನೇ, ಇಲ್ಲವೇ, ಎಂಬುದನ್ನು ಪರೀಕ್ಷಿಸುವ ಪ್ರಯತ್ನದಲ್ಲಿಯೇ ದೃಢಪ್ರಯತ್ನವನ್ನು ಮಾಡುತಿದ್ದುದರಿಂದ, ಆತನಿಗೆ ಪರೀಕ್ಷಿತ್ತೆಂದೇ ಪ್ರಸಿದ್ಧಿಯುಂಟಾಯಿತು ಈ ರಾಜಕುಮಾರನು ತನ್ನ ಪಿತೃದ ಜನಗಳಿಂದ ಸುಖವಾಗಿ ಪೋಷಿಸಲ್ಪಡುತ್ತ, ಶುಕ್ಲಪಕ್ಷದಲ್ಲಿ ಮೇಲೆಮೇಲೆ ಕಳೆಗಳಿಂ ತುಂಬಿ ಬರುವ ಚಂದ್ರನಂತೆ, ದಿನದಿನಕ್ಕೆ ವೃದ್ಧಿ ಹೊಂದುತ್ತ ಬಂದನು. ಇಷ್ಟರಲ್ಲಿ ಧರ್ಮರಾಜನಿಗೆ, ತನ್ನ ಜ್ಞಾತಿಗಳನ್ನು ಕೊಂದ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ಅಶ್ವಮೇಧಯಾಗವನ್ನು ಮಾಡಬೇಕೆಂಬ ಬುದ್ಧಿ ಹುಟ್ಟಿತು. ಈ ಯಜ್ಞವನ್ನು ನಡೆಸುವುದಕ್ಕಾಗಿ ಬಹಳ ಧನವು ಬೇಕಾಯಿತು. ಪ್ರಜೆಗಳಲ್ಲಿ ತೆರಗೆಗಳನ್ನೂ, ದಂಡನೆಗಳನ್ನೂ ಹೆಚ್ಚಿಸಿದ ಹೊರತು, ಬೇರೆವಿಧದಿಂದ ಅಷ್ಟೊಂದು ಧನವನ್ನು ಸಂಗ್ರಹಿಸಲು ಸಾಧ್ಯವಿಲ್ಲದುದರಿಂದ, ಮನಸ್ಸಿನಲ್ಲಿ ಬಹಳವಾಗಿ ಚಿಂತಿಸುತಿದ್ದನು. ಆಗ ಕೃಷ್ಣನಿಂದ ಪ್ರೇರಿತರಾದ ಭೀಮಾರ್ಜುನಾದಿಗಳೆಲ್ಲರೂ ದಿಗ್ವಿಜಯಾರ್ಥವಾಗಿ ಉತ್ತರದಿಕ್ಕಿಗೆ ಹೊರಟು, ಅನೇಕ ರಾಜರನ್ನು ಜಯಿಸಿ, ಬೇಕಾದಷ್ಟು ದ್ರವ್ಯವನ್ನು ತಂದು ಧರ್ಮರಾಜನ ಪಾದಗಳಿಗೊಪ್ಪಿಸಿದರು. ಆಗ ಧರ್ಮರಾಜನು ಬಹಳಸಂತೋಷಗೊಂಡವನಾಗಿ ಯಜ್ಞಸಂಭಾರಗಳೆಲ್ಲವನ್ನೂ ಸಿದ್ಧಪಡಿಸಿ, ಮಂತ್ರತಂತ್ರಾದಿಗಳಿಗೆ ಲೋಪವಿಲ್ಲದಂತೆ ಬಹಳ ಭಯಭಕ್ತಿಗಳಿಂದ ಯಜ್ಞಕಾರ್ಯವನ್ನಾರಂಭಿಸಿ, ಮೂರಾವರ್ತಿ ಅಶ್ವಮೇಧವನ್ನು ನಡೆಸಿ ಶ್ರೀಕೃಷ್ಣನನ್ನಾರಾಧಿಸಿದನು. ಈ ಯಜ್ಞಕ್ಕಾಗಿ ಬಂದಿದ್ದ ಕೃಷ್ಣನು ಆತನಿಂದ ಯಜ್ಞಕಾರ್ಯಗಳನ್ನು ಮುಗಿಸಿದ ಮೇಲೆಯೂ, ಪಾಂಡವರ ಸಂತೋಷಾರ್ಥವಾಗಿ ಕೆಲವುತಿಂಗಳವರೆಗೆ ಅಲ್ಲಿಯೇ ಇರುತಿದ್ದು, ಆಮೇಲೆ ಧರ್ಮರಾಜಾದಿಗಳ ಅನುಮತಿಯನ್ನು ಪಡೆದು, ಅರ್ಜುನನನ್ನೂ ಕರೆದುಕೊಂಡು ತನ್ನ ಬಂಧುಮಿತ್ರಪರಿವಾರಗಳೊಡನೆ, ಹಿಂತಿರುಗಿ ದ್ವಾರಕೆಗೆ ಬಂದು ಸೇರಿದನು. ಇದು ಹನ್ನೆರಡನೆಯ ಅಧ್ಯಾಯವು.

---

ವಿದುರನು ಹಸ್ತಿನಾಪುರಕ್ಕೆ ಬಂದು ಧೃತರಾಷ್ಟ್ರನಿಗೆ ಹಿತವನ್ನು ಹೇಳಿದುದು. ಧೃತರಾಷ್ಟ್ರನಿರ್ಗಮನವು ನಾರದಾಗಮನವು.

"ಓ ಶೌನಕಾ! ಇನ್ನು ಹಸ್ತಿನಾಪುರವೃತ್ತಾಂತವನ್ನು ಹೇಳುವೆನು ಕೇಳು. ಬಹುದಿನಗಳ ಹಿಂದೆ ತೀರ್ಥಯಾತ್ರೆಗಾಗಿ ಹೋಗಿದ್ದ ವಿದುರನು, ಸಮಸ್ತ ತೀರ್ಥಗಳನ್ನೂ ಸೇವಿಸಿ ಬರುವಾಗ, ಮಾರ್ಗವಶದಿಂದ ಒಂದಾನೊಂದು ಕಡೆಯಲ್ಲಿ ತಪಸ್ಸು ಮಾಡುತಿದ್ದ ಮೈತ್ರೇಯಮಹರ್ಷಿಯನ್ನು ಕಂಡನು. ಅವನಿಂದ ತತ್ವಜ್ಞಾನವನ್ನು ಹೊಂದಿ ಕೃತಕೃತ್ಯನಾಗಿ ಹಿಂತಿರುಗಿ ಹಸ್ತಿನಾಪುರಕ್ಕೆ ಬಂದು ಸೇರಿದನು. ವಿದುರನು ಕೇಳಿದ ಪ್ರಶ್ನೆಗಳಲ್ಲಿ ಕೆಲವಕ್ಕೆ ಮಾತ್ರ ಮೈತ್ರೇಯನು ಪ್ರತ್ಯುತ್ತರವನ್ನು ಕೊಡುವಷ್ಟರಲ್ಲಿಯೇ ವಿದುರನಿಗೆ ಭಗವಂತನಲ್ಲಿ ಅನನ್ಯಪ್ರಯೋಜನವಾದ ಭಕ್ತಿಯು ಹುಟ್ಟಿತು. ಉಳಿದ ಪ್ರಶ್ನೆಗಳಿಗೆ ಉತ್ತರವನ್ನು ಕೇಳಬೇಕಾದ ಅವಶ್ಯವೇ ಇಲ್ಲವೆಂದು ವಿದುರನು ಅಷ್ಟರಲ್ಲಿ ಸುಮ್ಮನಾದನು. ಆತ್ಮಜ್ಞಾನದಿಂದ ಕೃತಕೃತ್ಯನಾದ ವಿದುರನು ಬರುವ ಸಂಗತಿಯನ್ನು ತಿಳಿದು, ಧರ್ಮರಾಜನು ತನ್ನ ತಮ್ಮಂದಿರೊಡನೆ ಅವನನ್ನಿದಿರುಗೊಂಡು ಹೋದನು. ಹಾಗೆಯೇ ಧೃತರಾಷ್ಟ್ರನೂ, ಯುಯುತ್ಸುವೂ, ಸಂಜಯನೂ, ಕೃಷ್ಣನೂ, ಕುಂತಿ, ಗಾಂಧಾರಿ, ದ್ರೌಪದಿ, ಸುಭದ್ರೆ, ಉತ್ತರೆ, ಕೃಪಿ, ಮೊದಲಾದ ಸ್ತ್ರೀಯರೂ, ಇನ್ನೂ ಪಾಂಡುರಾಜನ ಇತರ ಬಂಧುಗಳೂ ಕೂಡ ಪರಮಸಂತೋಷಭರಿತರಾಗಿ, ಹೋದ ಪ್ರಾಣವು ತಿರುಗಿ ಬಂತೆಂದು ಭಾವಿಸಿ, ಅವನನ್ನಿದಿರುಗೊಂಡು ಹೋದರು. ಇವರೆಲ್ಲರೂ ತಮ್ಮತಮ್ಮ ಪ್ರೀತಿಗೌರವಗಳಿಗೆ ತಕ್ಕಂತೆ ಆಲಿಂಗನಗಳಿಂದಲೂ, ನಮಸ್ಕಾರಗಳಿಂದಲೂ, ಅವನನ್ನು ಯಥೋಚಿತವಾಗಿ ಮನ್ನಿಸಿ, ಆನಂದಬಾಷ್ಪಗಳಿಂದ ತಮ್ಮ ಪ್ರೇಮಾತಿಶಯವನ್ನು ಹೊರಪಡಿಸಿದರು. ಆ ಮೇಲೆ ಧರ್ಮರಾಜನು ವಿದುರನನ್ನು ತನ್ನ ಅರಮನೆಗೆ ಕರೆದುಕೊಂಡು ಹೋಗಿ, ಆತನನ್ನು ಯಥಾವಿಧಿಯಾಗಿ ಸತ್ಕರಿಸಿ, ಉಚಿತಾಸನವನ್ನು ಕೊಟ್ಟು, ಷಡ್ರಸೋಪೇತಗಳಾದ ಭೋಜನಗಳಿಂದ ತೃಪ್ತಿಪಡಿಸಿದನು. ವಿಶ್ರಾಂತಿಯನ್ನು ತೆಗೆದುಕೊಂಡು ಸುಖಾಸೀನನಾಗಿ ಕುಳಿತಮೇಲೆ, ಧರ್ಮರಾಜನು ಅವನನ್ನು ಕುರಿತು ಪ್ರಶ್ನೆಮಾಡಿದನು. "ಎಲೈ ಪುರುಷಶ್ರೇಷ್ಠನೆ! ನೀನು ನಮ್ಮನ್ನೂ ನಮ್ಮ ತಾಯಿಯಾದ ಕುಂತಿಯನ್ನೂ, ಶತ್ರುಗಳಿಂದ ಪ್ರಯೋಗಿಸಲ್ಪಟ್ಟ ವಿಷಾಗ್ನಿ ಮೊದಲಾದ ವಿಪತ್ತುಗಳಿಂದ ತಪ್ಪಿಸಿ, ನಿಮ್ಮ ಮನೆಯಲ್ಲಿಟ್ಟು ಇದುವರೆಗೆ ಪೋಷಿಸಿದೆ. ನಿನ್ನಿಂದ ರಕ್ಷಿತರಾದ ನಮ್ಮನ್ನು ಚಿರಕಾಲಕ್ಕೆ ಒಂದಾವರ್ತಿ

ಯಾದರೂ ಸ್ಮರಿಸುತ್ತಿರುವೆಯಲ್ಲವೆ? ಎಲೈ ಮಹಾತ್ಮನೆ! ತೀರ್ಥಯಾತ್ರೆಗಾಗಿ ನೀನು ಭೂಮಿಯನ್ನು ಸಂಚರಿಸುತ್ತಿರುವಾಗ, ಯಾವ ಯಾವ ಕ್ರಮದಿಂದ ಆ ಯಾತ್ರೆಯನ್ನು ನಡೆಸುತಿದ್ದೆ? ಈ ಭೂತಲದಲ್ಲಿರುವ ಭಗವತ್‌ಕ್ಷೇತ್ರಗಳಲ್ಲಿ ಮುಖ್ಯವಾದುವಾವುವು? ಇದುವರೆಗೆ ನೀನು ಸೇವಿಸಿ ಬಂದ ತೀರ್ಥಗಳೆಷ್ಟು? ಎಲೈ ಪ್ರಭುಶ್ರೇಷ್ಠನೆ! ನಿನ್ನಂತೆ ಭಗವದ್ಭಕ್ತರು ಸಹಜವಾಗಿಯೇ ಶುದ್ಧರಾದುದರಿಂದ, ನಿಮ್ಮಂತವರು ಈ ತೀರ್ಥಯಾತ್ರೆಗಳಿಂದ ಪವಿತ್ರತೆಯನ್ನು ಸಂಪಾದಿಸಬೇಕಾದ ಅವಶ್ಯಕತೆಯಿಲ್ಲ. ಆದರೆ ಗಂಗಾದಿನದಿಗಳು ಸಹಜವಾಗಿಯೇ ಪವಿತ್ರವೆನಿಸಿಕೊಂಡಿದ್ದರೂ, ಪಾಪಾತ್ಮರು ಬಂದು ಅದರಲ್ಲಿ ತಮ್ಮ ಪಾಪಗಳನ್ನು ಪರಿಹರಿಸಿಕೊಂಡು ಹೋಗುವುದರಿಂದ, ಆ ಪುಣ್ಯತೀರ್ಥಗಳಲ್ಲಿ ಅವರ ಸಂಬಂಧದಿಂದುಂಟಾದ ಪಾಪಗಳನ್ನು ಪರಿಹರಿಸಿ ಆ ತೀರ್ಥಗಳನ್ನು ಪವಿತ್ರೀಕರಿಸುವುದಕ್ಕಾಗಿಯೇ ನಿಮ್ಮಂತವರು ಆ ಪುಣ್ಯತೀರ್ಥಗಳಿಗೆ ಹೋಗಬೇಕಲ್ಲದೆ ಬೇರೆಯಲ್ಲ. ಪಾಪನಿವಾರಕನಾದ ಶ್ರೀಹರಿಯು ನಿಮ್ಮಂತವರ ಹೃದಯದಲ್ಲಿ ಯಾವಾಗಲೂ ನೆಲೆಸಿರುವುದರಿಂದ, ನಿಮ್ಮ ಸಂಬಂಧವು ಪುಣ್ಯತೀರ್ಥಗಳಿಗೂ ಪವಿತ್ರತೆಯನ್ನುಂಟುಮಾಡುವುದು. ತಾತಾ! ಶ್ರೀಕೃಷ್ಣನನ್ನೇ ಪರದೇವತೆಯೆಂದು ಭಾವಿಸಿ ಅವನನ್ನೇ ನಂಬಿರುವ ನಮ್ಮ ಬಂಧುಗಳಾದ ಯಾದವರನ್ನು ನೀನು ನೋಡಿ ಬಂದೆಯಷ್ಟೆ? ದ್ವಾರಕೆಯಲ್ಲಿ ಅವರೆಲ್ಲರೂ ಕ್ಷೇಮದಿಂದಿರುವರೇ?' ಎಂದು ಪ್ರಶ್ನೆಮಾಡಿದನು. ಧರ್ಮರಾಜನ ವಾಕ್ಯವನ್ನು ಕೇಳಿ ವಿದುರನು, ಪರಮಸಂತೋಷಭರಿತನಾಗಿ, ತಾನು ಅಲ್ಲಲ್ಲಿ ನೋಡಿ ಬಂದ ಪುಣ್ಯಸ್ಥಳಗಳ ಮಾಹಾತ್ಮ್ಯವನ್ನೂ, ಅಲ್ಲಲ್ಲಿ ತಾನು ಕೇಳಿದ ವಿಶೇಷವೃತ್ತಾಂತಗಳನ್ನೂ ಯಥಾಕ್ರಮವಾಗಿ ವಿವರಿಸುತ್ತಬಂದನು. ಆದರೆ ಯದುಕುಲವು ನಾಶಹೊಂದಿದ ವೃತ್ತಾಂತವೊಂದನ್ನು ಮಾತ್ರ ಧರ್ಮರಾಜನಿಗೆ ತಿಳಿಸದೆ ಮರೆಸಿಟ್ಟನು. ಈ ಯದುವಂಶಕ್ಷಯವನ್ನು ಕೇಳಿದ ಪಕ್ಷದಲ್ಲಿ ಧರ್ಮರಾಜನಿಗೆ ವಿಶೇಷವಾದ ದುಃಖವುಂಟಾಗಬಹುದೆಂದೆಣಿಸಿ ಅದನ್ನು ಮಾತ್ರ ತನ್ನಲ್ಲಿಯೇ ಅಡಗಿಸಿಬಿಟ್ಟನು. ಶೌನಕಾ! ಮಹಾತ್ಮರ ಸುಸ್ವಭಾವವನ್ನು ನೋಡಿದೆಯಾ? ಸತ್ಪುರುಷರು ಇತರರ ದುಃಖವನ್ನು ಸ್ವಲ್ಪಮಾತ್ರವೂ ಸಹಿಸಲಾರರು. ಪಾಂಡವರ ವ್ಯಸನವನ್ನು ನೋಡಿ ಸಹಿಸಲಾರದುದಕ್ಕಾಗಿಯೇ, ವಿದುರನು ಈ ವೃತ್ತಾಂತವನ್ನೆತ್ತದೆ ಬಿಟ್ಟುಬಿಟ್ಟನು. ವಿದುರನು ಹೀಗೆ ಧರ್ಮರಾಜಾದಿಗಳಿಗೆ ಪುಣ್ಯತೀರ್ಥಮಹಿಮೆಗಳನ್ನು ತಿಳಿಸಿ, ಅವರಿಂದ ಪೂಜಿತನಾಗಿ, ಅಲ್ಲಿನ ಪುರವಾಸಿಗಳೆಲ್ಲರಿಗೂ ಸಂತೋಷವುಂಟಾಗುವಂತೆ, ಹಸ್ತಿನಾಪುರದಲ್ಲಿ ಕೆಲವು ದಿನಗಳ ವರೆಗೆ ಸುಖದಿಂದಿರುತಿದ್ದನು. ಈ ಕಾಲದಲ್ಲಿ ತನ್ನಣ್ಣನಾದ ಧೃತ

ರಾಷ್ಟ್ರನಿಗೆ ಅನೇಕ ತತ್ತ್ವಗಳನ್ನೂ ತಿಳಿಸಿದನು. ಅವನಿಗೆ ಮರಣಕಾಲವು ಸಮೀಪಿಸಿರುವುದನ್ನು ಸೂಚಿಸಿ ಮುಂದೆ ಅವನು ಹಿಡಿಯಬೇಕಾದ ಮೋಕ್ಷೋಪಾಯವನ್ನೂ ತಿಳಿಸುತಿದ್ದನು. ಶೌನಕಾ! ಶೂದ್ರಯೋನಿಯಲ್ಲಿ ಹುಟ್ಟಿದ ವಿದುರನಿಗೆ ಧೃತರಾಷ್ಟ್ರನ ಮರಣಕಾಲವನ್ನು ತಿಳಿಯುವ ಶಕ್ತಿಯು ಹೇಗೆಂದು ನೀನು ಶಂಕಿಸಬಹುದು. ಮುನೀಂದ್ರಾ! ವಿದುರನ ವಿಷಯದಲ್ಲಿ ಮಾತ್ರ ಈ ವಿಧವಾದ ಶಂಕೆಗೆ ಅವಕಾಶವಿಲ್ಲ. ಆ ವಿದುರನನ್ನು ಯಾರೆಂದು ತಿಳಿದಿರುವೆ! ಸಮಸ್ತ ಪ್ರಾಣಿಗಳ ಮೃತ್ಯುಕಾಲವನ್ನೂ ತಿಳಿದಿರುವ ಸಾಕ್ಷಾತ್ ಯಮಧರ್ಮರಾಜನೇ ಆತನೆಂದು ತಿಳಿ! ಈತನು ಪೂರ್ವದಲ್ಲಿ ಮಾಂಡವ್ಯನ ಶಾಪದಿಂದ ನೂರುವರ್ಷಗಳವರೆಗೆ ಶೂದ್ರಜನ್ಮದಲ್ಲಿರಬೇಕಾಯಿತು. ಆಗ ತನ್ನ ಅಧಿಕಾರವನ್ನು ಸೂರ್ಯನಿಗೆ ಕೊಟ್ಟು, ಹೀಗೆ ವಿದುರನಾಗಿ ಹುಟ್ಟಿದನು. ಆದುದರಿಂದ ಈತನಿಗೆ ಧೃತರಾಷ್ಟ್ರನ ಮರಣಕಾಲವು ತಿಳಿದುದೇನೂ ಆಶ್ಚರ್ಯವಲ್ಲ. ಅದು ಹಾಗಿರಲಿ! ಇತ್ತಲಾಗಿ ಧರ್ಮರಾಜನು ರಾಜ್ಯವನ್ನು ನಡೆಸುತ್ತ, ವಂಶೋದ್ಧಾರಕನಾದ ಮೊಮ್ಮಗನನ್ನು ಪಡೆದಮೇಲೆ ರಾಜ್ಯವನ್ನು ವಿಶೇಷವಾಗಿ ವಿಸ್ತರಿಸಿ, ಲೋಕಪಾಲರಿಗೆ ಸಮಾನರಾದ ತಮ್ಮಂದಿರೊಡನೆ ಸಾಮ್ರಾಜ್ಯಲಕ್ಷ್ಮೀವಿಶಿಷ್ಟನಾಗಿ ಸಂತೋಷದಿಂದ ರಾಜ್ಯವನ್ನಾಳುತಿದ್ದನು. ಶೌನಕಾ! ಲೋಕದಲ್ಲಿ ಸಂಸಾರಸುಖವನ್ನಪೇಕ್ಷಿಸಿ, ಅದರಿಂದ ಸ್ಮೃತಿತಿಳಿಯದೆ ಮತ್ತರಾದವರಿಗೆ, ಕಾಲವೆಂಬುದು ತಿಳಿಯದ ಹಾಗೆಯೇ ಮೇಲೆ ಬಂದು ಬೀಳುವುದು. ಅಹಾ! ಆ ಕಾಲವನ್ನು ಮೀರುವುದು ಯಾರಿಗೆ ತಾನೇ ಸಾಧ್ಯವು? ದುರ್ಲಂಘ್ಯವಾದ ಈ ಕಾಲವು ಧೃತರಾಷ್ಟ್ರನನ್ನು ಸಮೀಪಿಸಿದಾಗ, ವಿದುರನೊಬ್ಬನಿಗೆ ಹೊರತು ಬೇರೆ ಯಾರಿಗೆ ತಾನೇ ಅದರ ನಿಜಸ್ಥಿತಿಯನ್ನು ಕಂಡುಕೊಳ್ಳಲು ಸಾಧ್ಯವಾಯಿತು? ವಿದುರನು ಕಾಲಜ್ಞನಾದುದರಿಂದ, ಈ ಸಂಗತಿಯನ್ನು ಮೊದಲೇ ತಿಳಿದು ಧೃತರಾಷ್ಟ್ರನನ್ನು ಕುರಿತು ಹೇಳುವನು "ರಾಜಾ! ಇನ್ನು ನೀನು ತಡಮಾಡದೆ, ಈಗಲೇ ಈ ಪಟ್ಟಣವನ್ನು ಬಿಟ್ಟು, ಅಡವಿಗೆ ಹೋಗಿ ತಪಸ್ಸಿನಲ್ಲಿರುವುದುಚಿತವು. ಇದೋ! ಈಗ ನಮ್ಮಮೇಲೆ ಕವಿದು ಬರುತ್ತಿರುವ ಮಹಾಭಯವನ್ನು ನೋಡು! ಇಷ್ಟೊಂದು ಸಾಮ್ರಾಜ್ಯಭೋಗಗಳೆಲ್ಲವನ್ನೂ ಒಮ್ಮೆಯೇ ತೊರೆದು ಹೋಗುವುದು ಹೇಗೆಂದು ನೀನು ಶಂಕಿಸಬಹುದು! ಕೌರವೇಂದ್ರಾ! ಹಾಗೆಣಿಸಬೇಡ: ಎಲ್ಲಿಯೂ ಯಾವವಿಧದಿಂದಲೂ ಪ್ರತೀಕಾರವಿಲ್ಲದ ಪೂಜ್ಯವಾದ ಕಾಲವು, ಇದೋ! ನಮ್ಮೆಲ್ಲರನ್ನೂ ಮೇಲೆ ಬಿದ್ದು ಹಿಡಿಯುವುದಕ್ಕೆ ಕಾದಿರುವುದು! ಇಂತಹ ಮೃತ್ಯುಕಾಲವು ಸಮೀಪಿಸಿದಾಗ, ನಮಗೆ ಪರಮಪ್ರೇಮಪಾತ್ರಗಳಾಗಿ, ನಮ್ಮೊಡನೆ

ಸೇರಿರುವ ಪ್ರಾಣಗಳನ್ನೇ ನಾವು ಅದಕ್ಕೊಪ್ಪಿಸಬೇಕಾಗಿರುವಾಗ, ನಡುವೆ ಆಗಂತುಕವಾಗಿ ಬಂದ ರಾಜ್ಯಧನಾದಿಗಳನ್ನು ಬಿಟ್ಟುಕೊಡಬೇಕಾದುದೊಂದು ಹೆಚ್ಚೇ? ಓ ಪ್ರಭೂ! ಇನ್ನುಮೇಲೆ ಇವುಗಳಿಂದ ನಿನಗೇನಾಗಬೇಕಾಗಿದೆ? ನಿನ್ನ ಪುತ್ರಮಿತ್ರಬಂಧುಪರಿವಾರಾದಿಗಳೆಲ್ಲರೂ ಸತ್ತರು! ನಿನ್ನ ಯೌವನ ಕಾಲವೂ ಕಳೆದುಹೋಯಿತು! ನಿನ್ನ ದೇಹವೆಲ್ಲವೂ ಜರೆಯಿಂದ ಜೀರ್ಣವಾಯಿತು! ಈ ಸ್ಥಿತಿಯಲ್ಲಿಯೂ ನಿನಗೆ, ನಿನ್ನ ದಾಯಾದರ ಕೈಕೆಳಗಾದರೂ ಬದುಕಿರ ಬೇಕೆಂಬ ಆಸೆಯೆ? ಆಹಾ! ಲೋಕದಲ್ಲಿ ಪ್ರಾಣಿ ಗಳಿಗೆ ಜೀವದಾಸೆಯೆಂಬುದು ಮಾತ್ರ ಎಂದೆಂದಿಗೂ ಬಿಡತಕ್ಕುದಲ್ಲ. ಆ ಜೀವದಾಸೆಯಿಂದಲ್ಲವೇ ಈಗಲೂ ನೀನು ಪಾಂಡವರ ಮನೆಯಲ್ಲಿ ಸೇರಿಕೊಂಡು ಭೀಮನು ತಂದಿಕ್ಕಿದ ಕೈಕೂಳನ್ನು ತಿಂದು, ನಾಯಿಯ ಹಾಗೆ ಜನ್ಮವನ್ನು ಹೊರೆಯುತ್ತಿರುವೆ? ರಾಜೇಂದ್ರಾ! ಪೂರ್ವವೃತ್ತಾಂತವನ್ನು ಯೋಚಿಸಿನೋಡು! ಪಾಂಡವರಿಗೆ ನಿನ್ನಲ್ಲಿ ಸ್ವಲ್ಪಮಾತ್ರ ವಾದರೂ ಅನುರಾಗವಿರುವುದೆಂದೆಣಿಸಬೇಡ! ಅವರು ನಿನಗೆ ಅನ್ನವನ್ನಿಕ್ಕುವಾಗ ಮನಸ್ಸಿನಿಂದಾದರೂ ನಿನ್ನನ್ನು ಮೂದಲಿಸದೆ ಬಿಡಲಾರರು! ಹಿಂದೆ ನಿನ್ನ ಮಕ್ಕಳು ಅವರು ಮಲಗಿದ್ದ ಮನೆಗೆ ಬೆಂಕಿಯಿಟ್ಟರು! ವಿಷಾನ್ನವನ್ನು ತಿನ್ನಿಸಿದರು! ಅವರ ಕೈಹಿಡಿದ ಹೆಂಡತಿಯಾದ ದ್ರೌಪದಿಗೆ ಮಹಾಸಭೆಯಲ್ಲಿ ಮಾನಭಂಗವನ್ನು ಮಾಡಿದರು! ಅವರ ಧನವನ್ನೂ, ರಾಜ್ಯವನ್ನೂ ಕಿತ್ತುಕೊಂಡು ಅರಣ್ಯಕ್ಕಟ್ಟಿ ದರು! ನಿನ್ನ ಮಕ್ಕಳು ಇಷ್ಟೊಂದು ಮಹಾಪರಾಧವನ್ನು ಮಾಡಿದಾಗಲೂ, ನೀನು ಅವರನ್ನು ತಡೆಯದೆ ಸುಮ್ಮನಿದ್ದೆಯಲ್ಲವೆ? ಇದರಿಂದ ನೀನೂ ಅವರ ವಿಷಯದಲ್ಲಿ ವೈರಬುದ್ಧಿಯನ್ನೇ ತೋರಿಸಿದಂತಾಯಿತಲ್ಲವೆ? ಅವರಿಗೂ ನಿನ್ನ ವಿಷಯದಲ್ಲಿ ಈ ದುರಭಿಪ್ರಾಯವಿರುವುದರಲ್ಲಿ ಸಂದೇಹವಿಲ್ಲ. ಈ ಸ್ಥಿತಿಯಲ್ಲಿ ನೀನು ಅವರ ಕೈಕೂಳನ್ನು ತಿಂದಾದರೂ ಬದುಕಿ ಮಾಡಬೇಕಾದುದೇನು? ಅದ್ದಾ! ಅದೂ ಹಾಗಿರಲಿ! ಒಂದುವೇಳೆ ನಿನಗೆ ಇನ್ನೂ ಈ ನೀಚಜೀವನದಲ್ಲಿಯೇ ಬದು ಕಿರಬೇಕೆಂಬ ಆಸೆಯಿದ್ದರೂ ಇರಬಹುದು! ಈ ದೇಹತ್ಯಾಗವನ್ನು ಮಾಡುವು ದಕ್ಕೆ ನಿನಗಾಗಿ ಇಷ್ಟವಿಲ್ಲದಿದ್ದರೂ, ಜರೆಯಿಂದಾವೃತವಾದ ಈ ನಿನ್ನದೇಹವು, ಜೀರ್ಣವಸ್ತ್ರದಂತೆ ಕ್ರಮಕ್ರಮವಾಗಿ ನಶಿಸುತ್ತ ಬರುವುದರಲ್ಲಿ ಸಂದೇಹವಿಲ್ಲ. ಮುಖ್ಯವಾಗಿ ಲೋಕದಲ್ಲಿ ಯಾವ ಮನುಷ್ಯನು, ಈ ದೇಹಾದಿಗಳೆಲ್ಲವೂ ಅನಿತ್ಯ ವೆಂಬುದನ್ನು ತಿಳಿದು, ಸಂಸಾರಸಂಬಂಧವನ್ನು ತೊರೆದು, ವಿರಕ್ತನಾಗಿ, ತಾಪಸ ವೃತ್ತಿಯನ್ನವಲಂಬಿಸಿ, ಅಡವಿಗೆ ಹೋಗಿ, ಬೇರೊಬ್ಬರಿಗೆ ತನ್ನ ಸ್ಥಿತಿಗತಿಯೇ ತಿಳಿಯದ ಹಾಗೆ ದೇಹತ್ಯಾಗವನ್ನು ಮಾಡುವನೋ, ಅಂತವನೇ ಧೀರನು!

ಅವನೇ ಯೋಗಿಯು! ಮತ್ತು ಯಾವನು ತನ್ನಷ್ಟಕ್ಕೆ ತಾನೇ ಆಗಲಿ, ಪರೋಪ ದೇಶದಿಂದಾಗಲಿ, ತತ್ವಜ್ಞಾನವನ್ನವಲಂಬಿಸಿ, ವಿರಕ್ತನಾಗಿ, ಶ್ರೀಕೃಷ್ಣನನ್ನು ಹೃದಯದಲ್ಲಿ ನಿಲ್ಲಿಸಿ, ಮನೆಯನ್ನು ಬಿಟ್ಟು ಅಡವಿಗೆ ಹೋಗುವನೋ ಅವನೇ ನರೋತ್ತಮನು! ಆದುದರಿಂದ ಅಣ್ಣಾ! ಇನ್ನು ನೀನು ಮನಸ್ಸಿನಲ್ಲಿ ಧೈರ್ಯವನ್ನ ವಲಂಬಿಸು! ಮೋಹಪಾಶವನ್ನು ತೊರೆದುಬಿಡು! ವಿರಕ್ತಿಮಾರ್ಗವನ್ನಂಗೀಕರಿಸು! ಮುಂದೆಮುಂದೆ ಕಾಲವೆಂಬುದು ಪ್ರಾಣಿಗಳ ಧೈರ್ಯಾದಿಗುಣಗಳನ್ನು ಬಹಳವಾಗಿ ಕೆಡಿಸುವುದು! ಆದುದರಿಂದ ಈಗಲೇ ನೀನು ನಿನ್ನ ಜ್ಞಾತಿಗಳಾದ ಧರ್ಮರಾಜಾದಿ ಗಳಿಗೂ ತಿಳಿಯದಂತೆ ಇಲ್ಲಿಂದ ಉತ್ತರದಿಕ್ಕಿಗೆ ಹೊರಡು! ಇನ್ನು ಮೇಲೆ ನೀನು ಇದುವರೆಗಿನಂತೆ ನಡೆಯಬಾರದು!" ಎಂದನು. ಆಗ ಧೃತರಾಷ್ಟ್ರನು ತನ್ನ ತಮ್ಮನಾದ ವಿದುರನು ಹೇಳಿದ ಈ ಹಿತೋಪದೇಶವನ್ನು ಕೇಳಿ ಪರಮ ಸಂತುಷ್ಟನಾಗಿ, ಜ್ಞಾನದೃಷ್ಟಿಯನ್ನವಲಂಬಿಸಿ, ಪಾಂಡವರಲ್ಲಿ ತನ್ನವರೆಂಬ ಸ್ನೇಹಪಾಶವನ್ನು ತೊರೆದು, ದೃಢಮನಸ್ಸುಳ್ಳವನಾಗಿ, ವಿದುರನು ತೋರಿಸಿದ ದಾರಿಯನ್ನೇ ಹಿಡಿದು, ತಾಪಸವೃತ್ತಿಯಿಂದ ಪ್ರಯಾಣೋದ್ಯುಕ್ತನಾದನು. ಇದನ್ನು ನೋಡಿ ಮಹಾಪತಿವ್ರತೆಯಾದ ಗಾಂಧಾರಿಯೂ ಕೂಡ, ತನ್ನ ಪತಿಯಾದ ಧೃತರಾಷ್ಟ್ರನನ್ನೇ ಹಿಂಬಾಲಿಸಿ ಹೊರಟಳು. ಸರ್ವ ಭೂತಸುಹೃತ್ತುಗಳೆನಿಸಿದ ಯೋಗಿಗಳಿಗೂ ಸಂತೋಷಕರವಾದ ಹಿಮವತ್ಪರ್ವತ ದ ಕಡೆಗೆ ಧೃತರಾಷ್ಟ್ರನು ಹೋಗುತ್ತಿದ್ದಾಗ, ಪತಿವ್ರತಾಮಣಿಯಾದ ಗಾಂಧಾರಿಯೂ ಕೂಡ, ಅರಣ್ಯಸಂಚಾರಶ್ರಮವನ್ನು ಸ್ವಲ್ಪಮಾತ್ರವೂ ಲಕ್ಷೀಕರಿಸದೆ, ಪತಿಶುಶ್ರೂಷಾಪರಾಯಣೆಯಾಗಿ, ಅವನೊಡನೆಯೇ ಬರುತಿದ್ದಳು. ಶೌನಕಾ! ಹೀಗೆ ಗಾಂಧಾರೀಧೃತರಾಷ್ಟ್ರರಿಬ್ಬರೂ ವಿರಕ್ತರಾಗಿ ವನಕ್ಕೆ ಹೊರ ಟುದು, ವಿವೇಕಿಗಳಾದ ಇತರ ಮನುಷ್ಯರಿಗೆಲ್ಲ ವಿರಕ್ತಿಯನ್ನುಪದೇಶಿಸುವಂತಾ ಯಿತು. ಈ ದಂಪತಿಗಳಿಬ್ಬರೂ ವಿದುರನೊಡಗೂಡಿ, ವನಕ್ಕೆ ಹೊರಟ ಮರು ದಿನವೇ, ಇತ್ತಲಾಗಿ ಧರ್ಮರಾಜನು, ಎಂದಿನಂತೆ ಪ್ರಾತಃಕಾಲದಲ್ಲಿ ಹಾಸಿಗೆ ಯಿಂದೆದ್ದು, ಸಂಧ್ಯಾವಂದನಾದಿಗಳನ್ನು ನಡೆಸಿ, ನಿತ್ಯಹೋಮಕಾರ್ಯವನ್ನೂ ತೀರಿಸಿಕೊಂಡು, ಬ್ರಾಹ್ಮಣರನ್ನು ಕರೆಸಿ, ಗೋದಾನಭೂದಾನಗಳೇ ಮೊದಲಾದ ನಿತ್ಯದಾನಗಳಿಂದ ಅವರನ್ನು ತೃಪ್ತಿಪಡಿಸಿ, ಅವರ ಆಶೀರ್ವಾದಗಳನ್ನೂ ಹೊಂದಿ, ದಿನಕ್ರಮದಂತೆ ತಂದೆತಾಯಿಗಳನ್ನು ನಮಸ್ಕರಿಸುವುದಕ್ಕಾಗಿ ಗಾಂಧಾರೀಧೃತ ರಾಷ್ಟ್ರರ ಮನೆಗೆ ಬಂದನು. ಅಲ್ಲಿ ಧೃತರಾಷ್ಟ್ರನಾಗಲಿ, ಗಾಂಧಾರಿಯಾಗಲಿ, ವಿದುರನಾಗಲಿ ಯಾರೂ ಕಾಣಿಸಲಿಲ್ಲ. ಆಗ ಧರ್ಮರಾಜನ ಮನಸ್ಸಿನಲ್ಲಿ ಬಹಳ

ಚಿಂತೆಯೂ ಭಯವೂ ಹುಟ್ಟಿತು. ಹೀಗೆ ಚಿಂತಾಗ್ರಸ್ತನಾದ ಧರ್ಮರಾಜನು, ಅಲ್ಲಿ ಏಕಾಕಿಯಾಗಿ ಕುಳಿತಿದ್ದ ಸಂಜಯನನ್ನು ನೋಡಿ 'ಸಂಜಯಾ! ಇದೇನು? ನಮ್ಮ ತಂದೆಯಾದ ಧೃತರಾಷ್ಟ್ರನೋ ಕೇವಲವೃದ್ಧನು! ಇದರಮೇಲೆ ಕಣ್ಣಿಲ್ಲದ ವನು! ಇದುವರೆಗೆ ಮನೆಯನ್ನು ಬಿಟ್ಟು ಕ್ಷಣಮಾತ್ರವೂ ಕದಲಿದವನಲ್ಲ! ಈಗ ಈಸ್ಥಲವನ್ನು ಬಿಟ್ಟು ಹೋಗಲು ಕಾರಣವೇನು? ಎಲ್ಲಿಗೆ ಹೋಗಿರುವನು? ಪುತ್ರಶೋಕಪೀಡಿತೆಯಾಗಿ ಇಲ್ಲಿಯೇ ಕುಳಿತಿದ್ದ ಗಾಂಧಾರಿಯೂ ಕಾಣಿಸುವುದಿಲ್ಲ! ನಮ್ಮಲ್ಲಿ ಪರಮಪ್ರೇಮವುಳ್ಳವನಾಗಿ, ನಮ್ಮ ಚಿಕ್ಕತಂದೆಯಾಗಿಯೂ ಇರುವ ವಿದುರನಾದರೂ ಇಲ್ಲಿ ಕಾಣಿಸುವುದಿಲ್ಲ. ಇವರೆಲ್ಲರೂ ಎಲ್ಲಿಗೆ ಹೋಗಿರುವರು? ಒಂದುವೇಳೆ ನಾನು ಅವರ ಬಂಧುಗಳೆಲ್ಲರನ್ನೂ ಕೊಲ್ಲಿಸಿದೆನೆಂಬ ದುಃಖದಿಂದ, ವಿವೇಕಶೂನ್ಯನಾದ ನನ್ನ ಸಹವಾಸವನ್ನೇ ಮಾಡಲಾರದೆ, ನನ್ನ ತಂದೆಯಾದ ಧೃತ ರಾಷ್ಟ್ರನು ತನ್ನ ಭಾರ್ಯೆಯೊಡನೆ ಗಂಗಾನದಿಯಲ್ಲಿ ಬಿದ್ದು ಪ್ರಾಣವನ್ನು ಬಿಟ್ಟಿರಬ ಹುದೇ? ಹಾಗೇನೂ ನಡೆದಿಲ್ಲವಷ್ಟೆ? ಅಯ್ಯೋ! ನಮ್ಮಬಾಲ್ಯದಲ್ಲಿ ಹೆತ್ತ ತಂದೆ ಯಾದ ಪಾಂಡುರಾಜನು ಮೃತಿಹೊಂದಿದಮೇಲೆ. ಅನಾಥರಾದ ನಮ್ಮನ್ನು, ಧೃತ ರಾಷ್ಟ್ರ ವಿದುರರಿಬ್ಬರೂ ಎಷ್ಟೋ ಪ್ರೇಮದಿಂದ ಪೋಷಿಸುತ್ತ ಬಂದರು. ಅವ ರಿಬ್ಬರೂ ಈಗ ಇದ್ದಕ್ಕಿದ್ದ ಹಾಗೆ ನಮ್ಮನ್ನು ಬಿಟ್ಟುಹೋಗಲು ಕಾರಣವೇನೋ ತಿಳಿಯಲಿಲ್ಲವಲ್ಲಾ! ಸಂಜಯಾ! ಅವರು ಈಸ್ಥಳವನ್ನು ಬಿಟ್ಟು ಬೇರೆಲ್ಲಿಗೆ ಹೋಗಿ ರಬಹುದು?' ಎಂದು ದೈನ್ಯದಿಂದ ಕೇಳಿದನು. ಇದನ್ನು ಕೇಳಿ ಸಂಜಯನು, ತನಗೆ ಧೃತರಾಷ್ಟ್ರನಲ್ಲಿರುವ ಮರುಕದಿಂದಲೂ, ಸ್ನೇಹದಿಂದಲೂ, ಆತನ ವಿರಹ ದುಃಖವನ್ನು ಸಹಿಸಲಾರದೆ, ಬಹಳವಾಗಿ ಕೊರಗುತ್ತ, ತನಗೂ ಧೃತರಾಷ್ಟ್ರಾ ದಿಗಳ ಸ್ಥಿತಿಗತಿಗಳೊಂದೂ ತಿಳಿಯದುದರಿಂದ, ಯಾವ ಪ್ರತ್ಯುತ್ತರವನ್ನೂ ಹೇಳ ಲಾರದೆ, ಸ್ವಲ್ಪಕಾಲದವರೆಗೆ ಮೌನವನ್ನುವಹಿಸಿ ಕಣ್ಣೀರುಬಿಡುತಿದ್ದನು. ಕೊನೆಗೆ ಮನಸ್ಸಿನಲ್ಲಿದ್ದ ದುಃಖವನ್ನು ಧೈರ್ಯದಿಂದ ತಡೆದುಕೊಂಡು, ತನ್ನ ಕೈಗಳಿಂದಲೇ ಕಣ್ಣೀರನ್ನೊರೆಸಿಕೊಳ್ಳುತ್ತ, ಪ್ರಭುವಾದ ಧೃತರಾಷ್ಟ್ರನ ಪಾದಗಳನ್ನು ಮನಸ್ಸಿ ನಲ್ಲಿ ಧ್ಯಾನಿಸಿ, ಧರ್ಮರಾಜನಿಗೆ ಉತ್ತರವನ್ನು ಹೇಳುವನು. 'ಧರ್ಮಪುತ್ರಾ! ನಿನ್ನ ತಾತಂದಿರಾದ ವಿದುರಧೃತರಾಷ್ಟ್ರರ ಉದ್ದೇಶವೇನೆಂಬುದನ್ನು ನಾನೂ ಕಾ ಣೆನು! ಗಾಂಧಾರಿಯೆಲ್ಲಿರುವಳೆಂಬುದೂ ನನಗೆ ತಿಳಿಯದು! ಮಹಾತ್ಮರಾದ ಆ ಮೂವರೂ ನನ್ನನ್ನೂ ವಂಚಿಸಿ ಹೊರಟುಹೋಗಿರುವರು! ಇನ್ನು ನಾನು ಅವರ ವೃತ್ತಾಂತವನ್ನು ನಿನಗೆ ಹೇಗೆಂದು ತಿಳಿಸಲಿ!' ಎಂದು ದುಃಖಿಸುತಿ ದ್ದನು. ಈ ಸಮಯಕ್ಕೆ ಸರಿಯಾಗಿ ತುಂಬುರು, ನಾರದರಿಬ್ಬರೂ ಆ ಸ್ಥಳಕ್ಕೆ

ಬಂದು ಸೇರಿದರು. ಆಗ ಧರ್ಮರಾಜನು ತನ್ನ ತಮ್ಮಂದಿರೊಡಗೂಡಿ, ಆ ಮಹಾತ್ಮರಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿ, ಅವರನ್ನು ಯಥೋಕ್ತವಾಗಿ ಪೂಜಿಸಿ ನಾರದನನ್ನು ನೋಡಿ 'ಎಲೈಮಹಾತ್ಮನೆ! ನಮ್ಮ ಚಿಕ್ಕಪ್ಪದೊಡ್ಡಪ್ಪಂದಿರಾದ ವಿದುರ ಧೃತರಾಷ್ಟ್ರರಿಬ್ಬರೂ ಇದ್ದಕ್ಕಿದ್ದ ಹಾಗೆ ಈ ಸ್ಥಳವನ್ನು ಬಿಟ್ಟು ಹೊರಟುಹೋಗಿರುವರು. ಅವರೆಲ್ಲಿಗೆ ಹೋಗಿರುವರೋ ತಿಳಿಯಲಿಲ್ಲ! ಪುತ್ರಮರಣದಿಂದುಂಟಾದ ವ್ಯಸನದಿಂದ ಅನವರತವೂ ಕೊರಗುತ್ತ ಬಹಳ ಶೋಚನೀಯಾವಸ್ಥೆಯಲ್ಲಿದ್ದ ನಮ್ಮ ಮಾತೆಯಾದ ಗಾಂಧಾರಿಯಾದರೂ ಎಲ್ಲಿ ಹೋಗಿರುವಳೋ ತಿಳಿಯಲಿಲ್ಲ! ಅವರ ಸ್ಥಿತಿಗತಿಗಳೇನೆಂದು ತಿಳಿಯದೆ, ನಾವು ಅಪಾರದುಃಖಸಮುದ್ರದಲ್ಲಿ ಮುಳುಗಿಹೋಗುತ್ತಿರುವ ಸಮಯಕ್ಕೆ ಸರಿಯಾಗಿ, ಆ ದುಃಖಸಮುದ್ರವನ್ನು ದಾಟಿಸತಕ್ಕ ನಾವಿಕನಂತೆ ದೈವಾನುಗ್ರಹದಿಂದ ನೀನು ಗೋಚರಿಸಿದೆ! ಅವರ ನಿಜಸ್ಥಿತಿಯನ್ನು ನಮಗೆ ತಿಳಿಸಬೇಕು" ಎಂದನು. ಆಗ ಪೂಜ್ಯನಾದ ನಾರದಮಹರ್ಷಿಯು ಧರ್ಮರಾಜನನ್ನು ಕುರಿತು "ಧರ್ಮಪುತ್ರಾ! ಅವರಿಗಾಗಿ ನೀನೇಕೆ ಚಿಂತಿಸುವೆ? ಮನುಷ್ಯನು ಲೋಕದಲ್ಲಿ ಯಾವುದಕ್ಕೂ ಚಿಂತಿಸಬೇಕಾದ ಕಾರಣವಿಲ್ಲ! ಪ್ರಪಂಚವ್ಯಾಪಾರವೆಲ್ಲವೂ ಈಶ್ವರನೊಬ್ಬನಿಗೆ ಮಾತ್ರವೇ ಅಧೀನವಾಗಿ ನಡೆಯುವುದು. ಲೋಕಪಾಲಕರು ಮೊದಲಾಗಿ ಸಮಸ್ತಪ್ರಪಂಚವೂ ಆತನಿಗೆ ಕಿಂಕರಭೂತವಾಗಿ ಅವನ ಸೇವೆಯಲ್ಲಿ ವರ್ತಿಸುತ್ತಿರುವುದು. ಆ ಈಶ್ವರನೇ ಒಮ್ಮೊಮ್ಮೆ ಪಂಚಭೂತಗಳನ್ನು ಸೇರಿಸಿಡುವನು. ಅವನೇ ಮತ್ತೊಮ್ಮೆ ಅವುಗಳನ್ನಗಲಿಸುವನು. ಹಸುಗಳಿಗೆ ಮೂಗುದಾರವನ್ನು ಬೀರಿ, ಹಗ್ಗದಿಂದೆಳೆದು ಕಂಬಕ್ಕೆ ಬಿಗಿದಿಡುವಂತೆ, ಭಗವಂತನು ವರ್ಣಾಶ್ರಮಸಂಬಂಧಸೂಚಕಗಳಾದ ನಾಮರೂಪಗಳೆಂಬ ದಾರಗಳಿಂದ ಮನುಷ್ಯರನ್ನು ಬಿಗಿದು, ವೇದವಾಕ್ಯಗಳೆಂಬ ಹೊರಜಿಗೆ ತಗುಲಿಸಿ ಕಟ್ಟಿರುವನು. ಮಕ್ಕಳು ಸ್ವೇಚ್ಛೆಯಿಂದ ಆಟವಾಡುವಾಗ ಆ ಆಟದ ವಸ್ತುಗಳನ್ನು ಸಮಯೋಚಿತವಾಗಿ ಸೇರಿಸಿ, ಆಮೇಲೆ ಇಷ್ಟಬಂದಾಗ ಅವುಗಳನ್ನು ಕದಲಿಸಿ ಬಿಡುವಂತೆ, ಈಶ್ವರನೂಕೂಡ ತನ್ನ ಸ್ವೇಚ್ಛೆಯಿಂದ ಮನುಷ್ಯರಿಗೆ ಪರಸ್ಪರಸಂಯೋಗವಿಯೋಗಗಳನ್ನುಂಟುಮಾಡುವನು. ಅಷ್ಟೇಕೆ? ಧರ್ಮಪುತ್ರಾ! ನೀನು ಈ ಲೋಕವನ್ನು ಸತ್ಯವೆಂದೆಣಿಸುವೆಯಾ? ಅಲ್ಲವೇ ಅಸತ್ಯವೆಂದೆಣಿಸುವೆಯಾ? ಅಥವಾ ಇದಕ್ಕೆ ಸತ್ಯತ್ವಾಸತ್ಯತ್ವಗಳೆರಡನ್ನೂ ಕಲ್ಪಿಸುವೆಯಾ? ಹೇಗೆಣಿಸಿದರೂ ನೀನು ದುಃಖಿಸಬೇಕಾದ ಕಾರಣವಿಲ್ಲ! ಸತ್ಯವೆಂದೆಣಿಸುವ ಪಕ್ಷದಲ್ಲಿ ನೀನು ಯಾವನ ವಿಯೋಗದಿಂದ, ಈಗ ದುಃಖಿಸುತ್ತಿರುವೆಯೋ, ಅವನಿಗೆ ಎಂದೆಂದಿಗೂ ನಾಶವಿಲ್ಲದುದರಿಂದ ನೀನು ದುಃಖಿಸ

ಬೇಕಾದ ಕಾರಣವೇ ಇಲ್ಲ. ಅಸ್ಥಿರವೆಂದೆಣಿಸುವ ಪಕ್ಷದಲ್ಲಿ, ಎಂದಿದ್ದರೂ ನಾಶ ಹೊಂದತಕ್ಕ ದೇಹಾದಿಗಳನ್ನು ಕುರಿತು ದುಃಖಿಸಿ ಫಲವಿಲ್ಲ. ಸ್ಥಿರತ್ವಾಸ್ಥಿರತ್ವಗ ಳೆರಡನ್ನೂ ಹೇಳುವುದಾದರೆ, ಲೋಕದಲ್ಲಿ ಪರಸ್ಪರ ವಿರುದ್ಧಗಳಾದ ಈ ಎರಡು ಗುಣಗಳೂ ಒಂದರಲ್ಲಿರುವುದಕ್ಕೆ ಸಂಭವವಿಲ್ಲ. ಆದುದರಿಂದ ಈ ನಿನ್ನ ದುಃಖಕ್ಕೆ ನಿನ್ನಲ್ಲಿರುವ ಮೋಹವಲ್ಲದೆ ಬೇರೆ ಕಾರಣವಿಲ್ಲ! ಅಜ್ಞಾನಸಂಬಂಧದಿಂದ ದೇಹದಲ್ಲಿ ಆತ್ಮಬುದ್ಧಿಯನ್ನಾರೋಪಿಸಿದಾಗ ಮಾತ್ರ ಆ ದೇಹಾದಿಗಳಲ್ಲಿ ಅನುರಾಗವು ಹೆಚ್ಚುತ್ತಿರುವುದು. ಆ ಅನುರಾಗವು ಹೆಚ್ಚುವುದರಿಂದ ವಿಯೋಗಕಾಲದಲ್ಲಿ ದುಃಖವನ್ನೂ ಹೆಚ್ಚಿಸುವುದು. ಈ ದುಃಖವೆಂಬುದು ದೇಹಾತ್ಮಭ್ರಮರೂಪ ವಾದುದಲ್ಲದೆ ಬೇರೆಯಲ್ಲ. ಆದುದರಿಂದ ಎಲೈ ರಾಜೇಂದ್ರನೆ! ಅಜ್ಞಾನಜನ್ಯ ವಾದ ಈ ದುಃಖವನ್ನು ಬಿಟ್ಟುಬಿಡು! "ನನ್ನನ್ನು ಬಿಟ್ಟುಹೋದಮೇಲೆ ಧೃತ ರಾಷ್ಟ್ರಾದಿಗಳಿಗೆ ಬೇರೆ ದಿಕ್ಕಾರು? ಅವರು ಅನಾಥರಾಗಿ ಹೇಗೆ ಜೀವಿಸ ಬಲ್ಲರು?" ಎಂದು ನೀನು ಶಂಕಿಸಬಹುದು! ಅವರಿಗೆ ನೀನೇ ರಕ್ಷಕನೆಂಬ ಭ್ರಾಂತಿಯನ್ನು ಬಿಟ್ಟುಬಿಡು! ಈ ದೇಹವೆಂಬುದು ಕಾಲಕ್ಕೂ, ಪಾಪಪುಣ್ಯ ಕರ್ಮಗಳಿಗೂ, ಸತ್ವಾದಿಗುಣಗಳಿಗೂ ಅಧೀನವಾಗಿ, ಪಂಚಭೂತಾತ್ಮಕವಾಗಿರು ವುದು ಲೋಕದಲ್ಲಿರುವ ಪ್ರತಿಯೊಂದು ಪ್ರಾಣಿಗೂ ಈ ದೇಹಬಂಧವು ಬಿಟ್ಟು ದಲ್ಲ! ಹಾವಿನ ಬಾಯಲ್ಲಿ ಸಿಕ್ಕಿದ್ದು ತನ್ನನ್ನೇ ತಾನು ಕಾಪಾಡಿಕೊಳ್ಳಲಾರದ ದುಃಸ್ಥಿತಿಯಲ್ಲಿರುವವನು, ಮತ್ತೊಬ್ಬರನ್ನು ಕಾಪಾಡಬಲ್ಲನೇ? ಅದರಂತೆಯೇ ನಿನ್ನ ದೇಹವನ್ನೇ ನೀನು ರಕ್ಷಿಸಿಕೊಳ್ಳುವುದಕ್ಕೆ ಶಕ್ತನಲ್ಲದಿರುವಾಗ, ಬೇರೆಯ ವರಿಗೆ ನೀನು ರಕ್ಷಕನೆಂಬ ಭಾವವನ್ನಿಟ್ಟುಕೊಳ್ಳಬಹುದೆ? ಆದುದರಿಂದ ಲೋಕ ದಲ್ಲಿ ಒಬ್ಬೊಬ್ಬರೂ ಕರ್ಮಾದ್ಯಧೀನವಾದ ದೇಹದಲ್ಲಿ ಸಿಕ್ಕಿಬಿದ್ದಿರುವಾಗ, ಒಬ್ಬರು ಮತ್ತೊಬ್ಬರನ್ನು ರಕ್ಷಿಸುವರೆಂಬ ಮಾತು ಸುಳ್ಳು! ಒಬ್ಬರನ್ನೊಬ್ಬರು ರಕ್ಷಿಸುವ ರೆಂಬ ಈ ಭ್ರಾಂತಿಯೂ ಹಾಗಿರಲಿ! ಒಬ್ಬರನ್ನೊಬ್ಬರು ಭಕ್ಷಿಸದೆ ಬಿಟ್ಟರೆ ಸಾಕಲ್ಲ ವೆ? ಲೋಕದಲ್ಲಿ ನೋಡು! ಕೈ ಮೊದಲಾದ ಅನುಕೂಲ ಸಾಧನಗಳುಳ್ಳ ಮನು ಷ್ಯರು ಕೈಯಿಲ್ಲದ ಮೃಗಗಳನ್ನು ಹೊಡೆದು ಭಕ್ಷಿಸುವರು. ಕಾಲಿರತಕ್ಕ ಜಂತು ಗಳಿಗೆ ಕಾಲಿಲ್ಲದ ಕೆಲವು ಜಂತುಗಳು ಆಹಾರವಾಗುವುವು. ಕಾಲಿಲ್ಲದ ಅಜಗರಾ ದಿಗಳಾದ ದೊಡ್ಡಪ್ರಾಣಿಗಳಿಗೂ ಕ್ಷುದ್ರಜಂತುಗಳು ಆಹಾರವಾಗುವುವು. ಮುಖ್ಯವಾಗಿ ಒಂದು ಜೀವವು ಮತ್ತೊಂದು ಜೀವವನ್ನು ತಿಂದೇ ಬದುಕಬೇಕಲ್ಲದೆ ಬೇರೆಯಲ್ಲ! ಎಲೈ ಧರ್ಮಪುತ್ರನೆ! ಕಾಡಿನಲ್ಲಿದ್ದರೂ, ಮನೆಯಲ್ಲಿದ್ದರೂ, ಸರ್ವಾತ್ಮಕ ನಾದ ಆ ಭಗವಂತನೇ ರಕ್ಷಿಸಬೇಕಲ್ಲದೆ, ಮನುಷ್ಯನನ್ನು ಮನುಷ್ಯನು ಬದುಕಿಸುವ

ನೆಂಬ ಮಾತು ಸುಳ್ಳು! ಈಗ ನಮಗೆ ಕಾಣುತ್ತಿರುವ ಚಿದಚಿದಾತ್ಮಕವಾದ ಈ ಸಮಸ್ತಪ್ರಪಂಚವೂ ಆ ಭಗವಂತನೊಬ್ಬನ ರೂಪವಲ್ಲದೆ ಬೇರೆಯಲ್ಲ! ಆತನು ಸತ್ವಾದಿಗುಣಗಳ ಮೂಲಕವಾಗಿ, ದೇವಮನುಷ್ಯಾದಿ ಭೇದಗಳನ್ನು ಕಲ್ಪಿಸಿ, ಆಯಾಭೂತಗಳಲ್ಲಿ ತಾನೂ ಅಂತರಾತ್ಮನಾಗಿ ಪ್ರವೇಶಿಸಿ, ಅವುಗಳಿಗೆ ತಾನೇ ನಿಯಾಮಕನಾಗಿಯೂ, ಧಾರಕನಾಗಿಯೂ ಇರುವನು ಅವನು ಸ್ವಾತ್ಮ ಯಾಥಾತ್ಮ್ಯವನ್ನು ತಿಳಿದವನು. ಆದುದರಿಂದ ಅವನಿಗೆ ತಾನು ಸೇರಿದ ವಸ್ತುಗಳಲ್ಲಿರುವ ದೋಷವು ಸಂಬಂಧಿಸಲಾರದು. ಆತನು ಸಮಸ್ತಪ್ರಪಂಚದ ಒಳಗೂ ಹೊರಗೂ ವರ್ತಿಸುತ್ತಿರುವನು. ಒಬ್ಬನಾಗಿರುವ ಭಗವಂತನಿಗೆ ಈ ವಿಧವಾದ ನಾನಾತ್ವವು ಹೇಗೆ ಬಂದಿತೆಂದು ನೀನು ಶಂಕಿಸಬಹುದು! ದೇವಮನುಷ್ಯಾದಿಭೇದದಿಂದ ಪರಿಣಮಿಸುವ ಪ್ರಕೃತಿಯಿಂದಲೇ ಭಗವಂತನು ನಾನಾತ್ವವನ್ನು ಹೊಂದಿದಂತೆ ಕಾಣುವನು. ಇಷ್ಟೇ ಹೊರತು ಲೋಕದಲ್ಲಿ ಆ ಭಗವಂತನನ್ನು ಬಿಟ್ಟು ಬೇರೆ ವಸ್ತುವಿಲ್ಲ. ಹೀಗೆ ಸಕಲಜಗದಂತರ್ಯಾಮಿಯಾಗಿ, ಸಮಸ್ತ ಲೋಕವನ್ನೂ ವಶೀಕರಿಸಿಕೊಂಡು, ಕಾಲಸ್ವರೂಪದಿಂದಿರುವ ಸರ್ವೇಶ್ವರನೇ ಈಗ ದುಷ್ಟರಾಕ್ಷಸನಾಶನಾರ್ಥನಾಗಿ ದ್ವಾರಕೆಯಲ್ಲಿ ಕೃಷ್ಣನಾಗಿ ಅವತರಿಸಿರುವನು. ಅವನು ಇದುವರೆಗೆ ದೇವತೆಗಳ ಕಾರ್ಯವನ್ನು ಬಹಳಮಟ್ಟಿಗೆ ನೆರವೇರಿಸಿ ಬಿಟ್ಟನು. ಮುಂದೆ ನಡೆಸಬೇಕಾದ ಕಾರ್ಯವು ಸ್ವಲ್ಪಮಾತ್ರವೇ ಉಳಿದಿರುವುದು. (ಯಾದವಕುಲ ವಿನಾಶರೂಪವಾದ) ಒಂದು ಕಾರ್ಯವನ್ನು ನಡೆಸುವುದಕ್ಕಾಗಿ ಕಾದಿರುವನು. ಆ ಕಾರ್ಯವು ತೀರಿದೊಡನೆ ಈ ಲೋಕವನ್ನು ಬಿಟ್ಟು ಹೊರಡುವನು. ಧರ್ಮರಾಜಾ! ಭಗವಂತನಾದ ಆ ಶ್ರೀಕೃಷ್ಣನು ಈ ಲೋಕದಲ್ಲಿರುವ ವರೆಗೆ ಮಾತ್ರ ನೀವೂ ಇಲ್ಲಿ ನಿರೀಕ್ಷಿಸುತ್ತಿದ್ದು, ಆಮೇಲೆ ನಿಮ್ಮ ತಂದೆಯ ದಾರಿಯನ್ನೇ ನೀವು ಹಿಡಿಯಬೇಕು. ರಾಜೇಂದ್ರಾ! ಈಗ ಧೃತರಾಷ್ಟ್ರಾದಿಗಳೆಲ್ಲರೂ ಎಲ್ಲಿರುವರೆಂದು ಕೇಳಿದೆಯಲ್ಲವೆ? ಹೇಳುವೆನು ಕೇಳು! ಈಗ ಧೃತರಾಷ್ಟ್ರನು ವಿದುರಗಾಂಧಾರಿಯರೊಡನೆ ಹಿಮಾಲಯದ ದಕ್ಷಿಣದಲ್ಲಿ, ಸಪ್ತಸ್ರೋತಸ್ಸೆಂದು ಪ್ರಸಿದ್ಧವಾದ ಒಂದು ಪುಣ್ಯಾಶ್ರಮದಲ್ಲಿರುವನು. ಆ ಸ್ಥಲವು ಬಹಳ ಪವಿತ್ರವಾದುದು. ತ್ರೈಲೋಕ್ಯಪಾವನೆಯಾದ ಗಂಗಾನದಿಯು ಅಲ್ಲಿ ಸಪ್ತರ್ಷಿಗಳ ಪ್ರೀತಿಗಾಗಿ ಏಳು ಭಾಗವಾಗಿ ಪ್ರವಹಿಸಿರುವದು ಇದಕ್ಕಾಗಿಯೇ ಅದಕ್ಕೆ ಸಪ್ತಸ್ರೋತಸ್ಸೆಂಬ ಪ್ರಸಿದ್ಧಿಯುಂಟಾಯಿತು ಅಂತಹ ಸಿದ್ಧಾಶ್ರಮದಲ್ಲಿ ಸೇರಿದ ಧೃತರಾಷ್ಟ್ರನು, ಆ ಮಹಾನದಿಯಲ್ಲಿ ಸ್ನಾನಮಾಡುತ್ತ, ತ್ರಿಸಂಧ್ಯಾಕಾಲಗಳಲ್ಲಿಯೂ ಅಗ್ನಿಹೋತ್ರಾದಿಕಾರ್ಯಗಳನ್ನು ನಡೆಸಿ, ಆ ನದೀ

ಜಲವನ್ನೊಂದನ್ನೇ ಆಹಾರವಾಗಿ ತೆಗೆದುಕೊಂಡು ಮನಸ್ಸಿನಲ್ಲಿದ್ದ ಕಾಮಾದಿದುರ್ಗು ಣಗಳನ್ನು ನಿಶ್ಶೇಷವಾಗಿ ನೀಗಿ, ದಾರೇಷಣ, ಧನೇಷಣ, ಪುತ್ರೇಷಣಗಳೆಂಬ ಈಷಣತ್ರಯಗಳನ್ನೂ ತ್ಯಜಿಸಿ, ಶುದ್ಧಮನಸ್ಕನಾಗಿರುವನು. ಮತ್ತು ಆತನು ಎಷ್ಟು ಕಾಲವಾದರೂ ನಿಶ್ಚಲವಾಗಿ ಕುಳಿತಿರತಕ್ಕ ಆಸನಶಕ್ತಿಯನ್ನೂ, ಶ್ವಾಸ ಧಾರಣ ಶಕ್ತಿಯನ್ನೂ ಸ್ವಾಧೀನಪಡಿಸಿಕೊಂಡು, ಷಡಿಂದ್ರಿಯಗಳನ್ನೂ ನಿಗ್ರ ಹಿಸಿರುವನು. ಶ್ರೀಹರಿಧ್ಯಾನವೊಂದರಲ್ಲಿಯೇ ಮನಸ್ಸಿಟ್ಟು, ಅದರ ಬಲದಿಂದ ಸತ್ವಾದಿಗುಣಕಾರ್ಯಗಳಾದ ಕಾಮಾದಿಗಳನ್ನೂ, ಮುಕ್ತಿಗೆ ಪ್ರತಿಬಂಧಕಗಳಾದ ಕರ್ಮಕಲಾಪಗಳನ್ನೂ ನೀಗಿರುವನು. ಮತ್ತು ಈಗ ಧೃತರಾಷ್ಟ್ರನು, ಇಂದ್ರಿಯ ಗಳು ಮನಸ್ಸನ್ನಾಕರ್ಷಿಸದಂತೆ ಅವುಗಳನ್ನು ವಿಜ್ಞಾನಸ್ವರೂಪನಾದ ಕ್ಷೇತ್ರ ಜ್ಞನಲ್ಲಿ ಸೇರಿಸಿ, ಘಟವು ನಷ್ಟವಾದಮೇಲೆ ತದಂತರ್ಗತವಾದ ಆಕಾಶವು ಮಹಾ ಕಾಶದೊಡನೆ ಸಾಮ್ಯವನ್ನು ಹೊಂದುವಂತೆ, ಆ ಕ್ಷೇತ್ರಜ್ಞನಿಗೆ ಉಪಾಧಿ ಭೂತ ವಾದ ದೇಹಸಂಬಂಧವನ್ನು ಬಿಡಿಸಿದಮೇಲೆ ಅದಕ್ಕಾಧಾರಭೂತವಾದ ಪರ ಬ್ರಹ್ಮನೊಡನೆ ಸಮಾನಾಕಾರತ್ವವುಂಟಾಗುವುದೆಂಬ ತತ್ವಜ್ಞಾನವನ್ನು ಹೊಂದಿ ನಿರಾಹಾರನಾಗಿ, ರಜಸ್ಸು ಮೊದಲಾದ ಮಾಯಾಗುಣಗಳಿಂದ ಹುಟ್ಟ ತಕ್ಕ ರಾಗದ್ವೇಷಾದಿಗಳೊಂದಕ್ಕೂ ಅವಕಾಶಕೊಡದೆ, ಇಂದ್ರಿಯಚಾಪಲ್ಯಗ ಳೆಲ್ಲವನ್ನೂ ತಡೆದು, ಮರದ ತುಂಡಿನಂತೆ ನಿಶ್ಚೇಷ್ಟನಾಗಿರುವನು. ಹೀಗೆ ಕರ್ಮ ಸಂಬಂಧವನ್ನೇ ತ್ಯಜಿಸಿ, ದೃಢನಿಶ್ಚಯದಿಂದಿರುವ ಆತನ ಸಮಾಧಿಗೆ ಮಾತ್ರ ನೀನು ಎಷ್ಟು ಮಾತ್ರವೂ ವಿಘ್ನವನ್ನುಂಟುಮಾಡಬಾರದು! ರಾಜೇಂದ್ರ! ಇಲ್ಲಿಂದ ಐದನೆಯ ದಿನಕ್ಕೆ ಆತನು ತನ್ನ ದೇಹವನ್ನು ತನ್ನ ಯೋಗಾಗ್ನಿಯಿಂದಲೇ ಭಸ್ಮ ಮಾಡುವನು. ಹೀಗೆ ಧೃತರಾಷ್ಟ್ರನ ದೇಹವು ಅವನ ಯೋಗಾಗ್ನಿಯಿಂದ ಪರ್ಣಶಾಲಾಸಮೇತವಾಗಿ ದಗ್ಧವಾಗುತ್ತಿರುವುದನ್ನು ನೋಡಿ ಗಾಂ ಧಾರಿಯೂ ಅದೇ ಅಗ್ನಿಯಲ್ಲಿ ಪ್ರವೇಶಿಸಿ ದೇಹತ್ಯಾಗವನ್ನು ಮಾಡುವಳು, ಈ ಆಶ್ಚರ್ಯವನ್ನು ನೋಡಿ ವಿದುರನೂ ಕೂಡ, ದುಃಖಹರ್ಷಗಳಿಂದ ಕದಲಿದ ಮನಸ್ಸುಳ್ಳವನಾಗಿ, ಒಡನೆಯೇ ಆ ಸ್ಥಳವನ್ನು ಬಿಟ್ಟು, ತೀರ್ಥಯಾತ್ರಾರ್ಥವಾಗಿ ಹೊರಟು ಬಿಡುವನು.'' ಎಂದು ನಾರದನು, ಧರ್ಮರಾಜನಿಗೆ ಮುಂದಿನ ವೃತ್ತಾಂತ ವನ್ನು ತಿಳಿಸಿ, ತುಂಬುರುಸಹಿತನಾಗಿ ಆಗಲೇ ಅಂತರಿಕ್ಷಕ್ಕೆ ಹಾರಿದನು. ಇತ್ತ ಲಾಗ ಧರ್ಮರಾಜನೂ ಕೂಡ ನಾರದನು ಹೇಳಿದ ವೃತ್ತಾಂತವನ್ನು ಕೇಳಿ, ಅದನ್ನೇ ಮನಸ್ಸಿನಲ್ಲಿ ದೃಢವಾಗಿಟ್ಟುಕೊಂಡು, ತನಗಿದ್ದ ಮನೋವ್ಯಥೆಯನ್ನು ನೀಗಿ ನಿಶ್ಚಿಂತನಾಗಿದ್ದನು. ಇಲ್ಲಿಗೆ ಹದಿಮೂರನೆಯ ಅಧ್ಯಾಯವು.

---

## ಧರ್ಮರಾಜನು ದುಶ್ಶಕುನಗಳನ್ನು ಕಂಡು ಚಿಂತಾಕುಲನಾಗಿದುದ್ದು. ಅರ್ಜುನಾಗಮನವು.

ಹಿಂದೆ ಅರ್ಜುನನು ದ್ವಾರಕೆಯಲ್ಲಿ ತನ್ನ ಬಂಧುಗಳನ್ನು ನೋಡಬೇಕೆಂದೂ, ಶ್ರೀಕೃಷ್ಣನ ಅದ್ಭುತಚಾರಿತ್ರಗಳನ್ನು ತಿಳಿಯಬೇಕೆಂದೂ, ಶ್ರೀ ಕೃಷ್ಣನೊಡನೆ ಅಲ್ಲಿಗೆ ಹೋದಮೇಲೆ, ಅಲ್ಲಿಯೇ ಕೆಲವು ತಿಂಗಳವರೆಗೆ ನಿಂತು ಬಿಟ್ಟನು ಇಷ್ಟರಲ್ಲಿ ಇತ್ತಲಾಗಿ ಧರ್ಮರಾಜನಿಗೆ ಕೆಲವು ದುಶ್ಶಕುನಗಳು ಕಂಡು ಬಂದುವು. ಅರ್ಜುನನು ಬಹುಕಾಲದವರೆಗೆ ಹಿಂತಿರುಗಿ ಬಾರದಿದ್ದುದನ್ನೂ, ಇತ್ತಲಾಗಿ ದುರ್ನಿಮಿತ್ತಗಳು ತಲೆದೋರುತ್ತಿರುವುದನ್ನೂ ನೋಡಿ ಧರ್ಮರಾಜನಿಗೆ ಮನಸ್ಸಿನಲ್ಲಿ ಚಿಂತೆಯು ಹುಟ್ಟಿತು. ಕಾಲಸ್ಥಿತಿಯೂ ಕ್ರೂರವಾಗಿ ಪರಿಣಮಿಸುತ್ತ ಬಂದಿತು. ಋತುಧರ್ಮಗಳೆಲ್ಲವೂ ವ್ಯತ್ಯಸ್ತವಾಗಿ ಕಂಡುಬಂದುವು. ಮನುಷ್ಯರೆಲ್ಲರೂ ಕ್ರೋಧಲೋಭಾದಿದುರ್ಗುಣಗಳಲ್ಲಿಯೇ ವಿಶೇಷಾಸಕ್ತಿಯುಳ್ಳವರಾಗಿ, ದುಷ್ಕಾರ್ಯಗಳಲ್ಲಿ ಪ್ರವರ್ತಿಸುತ್ತಿದ್ದರು ವ್ಯವಹಾರಗಳೆಲ್ಲವೂ ಮೋಸದಿಂದಲೇ ನಡೆಯುತ್ತಿದ್ದುವು. ಮಿತ್ರವರ್ಗದಲ್ಲಿ ಕೂಡ ಪರಸ್ಪರವಂಚನೆಗಳು ಹೆಚ್ಚಿಹೋದುವು. ತಂದೆತಾಯಿಗಳಿಗೆ ಮಕ್ಕಳಲ್ಲಿ ವಾತ್ಸಲ್ಯವು ತಪ್ಪಿತು. ಮಿತ್ರರಲ್ಲಿಯೂ, ಸಹೋದರರಲ್ಲಿಯೂ, ದಂಪತಿಗಳಲ್ಲಿಯೂ ಪರಸ್ಪರಕಲಹವು ಹೆಚ್ಚಿತು. ತಂದೆತಾಯಿಗಳು ಕನ್ಯಾವಿಕ್ರಯದಲ್ಲಿ ಪ್ರವರ್ತಿಸುತ್ತಿದ್ದರು. ಮಕ್ಕಳು ವೃದ್ಧರಾದ ತಂದೆತಾಯಿಗಳನ್ನು ಪೋಷಿಸದೆ ನಿರಾಕರಿಸುತ್ತಿದ್ದರು. ಬ್ರಾಹ್ಮಣರು ವೇದಾಧ್ಯಯನಗಳನ್ನು ಬಿಟ್ಟುಬಿಟ್ಟರು ಶೂದ್ರರು ವೇದಪಠನಕ್ಕೆ ತೊಡಗಿದರು. ಇವೆಲ್ಲವನ್ನೂ ನೋಡಿ ಧರ್ಮರಾಜನಿಗೆ ಮನಸ್ಸಿನಲ್ಲಿ ಬಹಳವಾದ ಚಿಂತೆಯು ಹುಟ್ಟಿತು. ಅಧರ್ಮ ಪ್ರಚುರಗಳಾದ ಈ ದುರ್ನಿಮಿತ್ತಗಳೆಲ್ಲವೂ ಕಾಲವೈಪರೀತ್ಯದಿಂದಲೇ ತಲೆದೋರುತ್ತಿರುವುವೆಂದು ತಿಳಿದು, ಧರ್ಮರಾಜನು ತನ್ನ ತಮ್ಮನಾದ ಭೀಮನನ್ನು ಕರೆದು, "ವತ್ಸ ಭೀಮಾ! ಅರ್ಜುನನು ಬಂಧುಗಳನ್ನು ನೋಡಿ ಬರುವುದಕ್ಕಾಗಿಯೂ, ಶ್ರೀಕೃಷ್ಣನ ಅದ್ಭುತಚರಿತ್ರಗಳನ್ನು ತಿಳಿಯುವುದಕ್ಕಾಗಿಯೂ ದ್ವಾರಕೆಗೆ ಹೋಗಿ ಇದುವರೆಗೆ ಪೂರ್ಣವಾಗಿ ಏಳು ತಿಂಗಳುಗಳು ಕಳೆದುಹೋದುವು. ಇಷ್ಟುದಿನಗಳಾದರೂ ಅವನು ಹಿಂತಿರುಗಿ ಬಾರದಿರುವುದಕ್ಕೆ ಕಾರಣವೇನೆಂದು ತಿಳಿಯಲಿಲ್ಲ. ಯೋಚಿಸಿ ನೋಡಿದರೆ ದೇವರ್ಷಿಯಾದ ನಾರದನು ನಮಗೆ ಸೂಚಿಸಿ ಹೋದ ಕಾಲವು ಈಗಲೇ ತಲೆದೋರಿರುವಂತೆ ಕಾಣುವುದು. ಹಾಗಿದ್ದರೆ ಪೂಜ್ಯನಾದ ಶ್ರೀಕೃಷ್ಣನು ಲೀಲಾರ್ಥವಾಗಿ ಗ್ರಹಿಸಿದ ತನ್ನ ದೇಹವನ್ನು ಬಿಟ್ಟುಹೋಗುವ ಪ್ರಯತ್ನದಲ್ಲಿರಬೇಕಲ್ಲವೆ? ಭೀಮಾ! ನಮಗೆ ಈ ರಾಜ್ಯ

ಸಂಪತ್ತೂ, ಈ ರಾಜ್ಯವೂ, ಈ ಪತ್ನಿಯರೂ, ಈ ನಮ್ಮ ಪ್ರಾಣಗಳೂ, ಕುಲವೂ, ಪ್ರಜೆಗಳೂ ಇದುವರೆಗೆ ನಮಗುಂಟಾದ ಶತ್ರುಜಯವೂ, ನಮಗೆಮುಂದೆ ಉತ್ತಮ ಲೋಕಪ್ರಾಪ್ತಿಗೆ ಬೇಕಾದ ಯಜ್ಞಯಾಗಾದಿಗಳನ್ನು ನಡೆಸತಕ್ಕ ಸಾಮರ್ಥ್ಯವೂ, ಆ ಶ್ರೀಕೃಷ್ಣನ ಪರಮಾನುಗ್ರಹಬಲದಿಂದ ಬಂದುದಲ್ಲದೆ ಬೇರೆಯಲ್ಲ. ಆ ಶ್ರೀ ಕೃಷ್ಣನಿಗೆ ಅಪಾಯವೇನಾದರೂ ಉಂಟಾಗಿರಬಹುದೋ ಎಂದು ನನ್ನ ಮನಸ್ಸು ಬಹಳವಾಗಿ ತತ್ತಳಿಸುತ್ತಿರುವುದು. ವತ್ಸ ಭೀಮಾ! ಇದೋ! ಆಕಾಶದಲ್ಲಿಯೂ, ಭೂಮಿಯಲ್ಲಿಯೂ, ಆಗಾಗ ನನ್ನ ದೇಹದಲ್ಲಿಯೂ, ತಲೆದೋರುತ್ತಿರುವ ಭಯಂಕರಗಳಾದ ದುರ್ನಿಮಿತ್ತಗಳನ್ನು ನೋಡಿದೆಯಾ? ಇವೆಲ್ಲವೂ ನನ್ನ ಬುದ್ಧಿಯನ್ನು ಬಹಳವಾಗಿ ಕಳವಳಹೊಂದಿಸುತ್ತಿರುವುವು. ಇದೋ ನೋಡು! ಈ ನನ್ನ ಎಡಗಣ್ಣು, ಎಡತೋಳು, ಎಡದ ತೊಡೆ, ಇವೆಲ್ಲವೂ ಕ್ಷಣಕ್ಷಣಕ್ಕೂ ಅದುರುತ್ತಿರುವುವು. ಇದಲ್ಲದೆ ಹಾಗೆ ನನ್ನ ಹೃದಯವು ನಡುಗುತ್ತಿರು ವುದು. ಇವೆಲ್ಲವನ್ನೂ ನೋಡಿದರೆ ಶೀಘ್ರದಲ್ಲಿಯೇ ನಮಗೆ ಏನೋ ಒಂದು ಮಹಾವಿಪತ್ತು ಸಂಭವಿಸಬಹುದೆಂದೆಣಿಸಬೇಕಾಗಿದೆ. ಅದೋ! ಅತ್ತಲಾಗಿ ನೋಡು! ಒಂದು ನರಿಯು ಸೂರ್ಯನಿಗಿದಿರಾಗಿ ನಿಂತು ಬಾಯಿಂದ ಬೆಂಕಿಯುರಿ ಯನ್ನು ಕಕ್ಕುತ್ತ, ಅತಿಭಯಂಕರಧ್ವನಿಯಿಂದ ಅರಚುತ್ತಿರುವುದು! ಇತ್ತಲಾಗಿ ಒಂದು ನಾಯಿಯು ನಿರ್ಭಯವಾಗಿ ಬಂದು ನನ್ನ ಮುಂದೆ ನಿಂತು ಗೋಳಿಡುವು ದನ್ನು ನೋಡಿದೆಯಾ? ಗೋವು ಮೊದಲಾದ ಪ್ರಶಸ್ತಮೃಗಗಳೆಲ್ಲವೂ ನನ್ನನ್ನು ಅಪ್ರದಕ್ಷಿಣವಾಗಿ ಸುತ್ತುತ್ತಿರುವುವು! ಆನೆ, ಕುದುರೆ ಮೊದಲಾದ ನಮ್ಮ ವಾಹನ ಗಳೆಲ್ಲವೂ ಏನೋ ದುಃಖದಿಂದ ಗೋಳಿಡುವಂತೆ ಕಣ್ಣುಗಳಲ್ಲಿ ನೀರನ್ನು ತುಳು ಕಿಸುತ್ತಿರುವುವು. ಇತ್ತಲಾಗಿ ಒಂದು ಪಾರಿವಾಳವು ಯಮದೂತನಂತೆ ಮುಂದೆ ಬಂದು, ಆರ್ತಧ್ವನಿಯಿಂದ ಕೂಗುತ್ತ ನನ್ನ ಮನಸ್ಸನ್ನು ನಡುಗಿಸುತ್ತಿರುವುದು. ಇದೋ! ಇಲ್ಲಿ ಎರಡು ಗೂಬೆಗಳು ಹಗಲಲ್ಲಿಯೂ ನಿದ್ರೆ ಮಾಡದೆ, ಇದಿರಾಗಿ ಕುಳಿತು, ಒಂದಾದ ಮೇಲೆ ಮತ್ತೊಂದು ಕ್ರೂರಧ್ವನಿಯಿಂದ ಊಳಿಡುತ್ತಿರು ವುದನ್ನು ನೋಡಿದೆಯಾ? ಇವೆರಡೂ ಸೇರಿ ಈ ನಮ್ಮ ದೇಶವನ್ನು ಹಾಳುಮಾಡುವು ದಕ್ಕಾಗಿ ಒಂದಕ್ಕೊಂದು ಮಾತಾಡಿಕೊಳ್ಳುವಂತೆ ತೋರುವುದು. ದಿಕ್ಕುಗಳೆಲ್ಲವೂ ಕೆಂಧೂಳಿಯಿಂದ ಕವಿದಿರುವುವು ನೋಡು! ಸಮಸ್ತಕುಲಪರ್ವತಗಳೊಡನೆ ಭೂಮಿಯು ನಡುಗುತ್ತಿರುವುದು! ಅಕಾಲಮೇಘಸಮೂಹಗಳೊಡನೆ ಕ್ರೂರ ವಾದ ಸಿಡಿಲು ಬೀಳುತ್ತಿರುವುದು ನೋಡು! ಸೂರ್ಯನ ಸುತ್ತಲೂ ಪರಿವೇಷವು ಕಾಣುವುದನ್ನು ನೋಡು! ಗಾಳಿಯು ಅತಿಕ್ರೂರವಾಗಿ ಬೀಸುತ್ತ, ನೆಲದ

ಧೂಳನ್ನೆಬ್ಬಿಸಿ, ಅಂತರಿಕ್ಷವೆಲ್ಲವನ್ನೂ ಕತ್ತಲೆ ಕವಿದಂತೆ ಮಾಡುತ್ತಿರುವುದು ನೋಡು! ಮೇಘಗಳು ಸುತ್ತಲೂ ಭಯಂಕರವಾದ ರಕ್ತಧಾರೆಯನ್ನು ವರ್ಷಿಸುತ್ತಿರುವುವು. ಸೂರ್ಯನು ಕಾಂತಿಗುಂದುತ್ತಿರುವನು. ಆಕಾಶದಲ್ಲಿ ಗ್ರಹಗಳು ಒಂದಕ್ಕೊಂದು ಹೋರಾಡುತ್ತಿರುವುವು. ಭೂಮ್ಯಾಕಾಶಗಳೆರಡೂ ಅಲ್ಲಲ್ಲಿ ಗುಂಪುಗಟ್ಟಿದ ಪಿಶಾಚಗಣಗಳಿಂದ ದಹಿಸಲ್ಪಡುವಂತೆ ಕಾಣುವುವು ನೋಡು! ನದೀನದಗಳೂ ಸರೋವರಗಳೂ, ಪ್ರಾಣಿಗಳ ಮನಸ್ಸೂ ಬಹಳವಾಗಿ ಕಲಗಿರುವುವು. ಅಗ್ನಿಕಾರ್ಯಗಳಲ್ಲಿ ಆಜ್ಯದಿಂದ ಹೋಮ ಮಾಡಿದಾಗಲೂ ಅಗ್ನಿಯು ಜ್ವಲಿಸುವುದಿಲ್ಲ. ಆಹಾ! ಕಾಲಗತಿಯು ಹೇಗಿರುವುದೋ ತಿಳಿಯಲಿಲ್ಲವಲ್ಲಾ! ಎಳಗರುಗಳು ತಾಯಿಯ ಮೊಲೆಯನ್ನು ಕುಡಿಯಲೊಲ್ಲವು! ಹಸುಗಳು ತಮ್ಮ ಕರುಗಳಿಗೆ ಹಾಲನ್ನು ಸೊರೆಬಿಡದೆ ಒದೆದು ನೂಕುವುವು. ಗೋವುಗಳು ಕಣ್ಣೀರು ಬಿಟ್ಟು ಅಳುತ್ತಿರುವುವು. ವೃಷಭಗಳು ಮಂದೆಯಲ್ಲಿಯೂ ಸಂತೋಷವಿಲ್ಲದೆ ಕೊರಗುವಂತೆ ಕಾಣುವುವು. ದೇವಾಲಯಗಳಲ್ಲಿರುವ ದೇವತಾಪ್ರತಿಮೆಗಳೂ ಕೂಡ ಕಣ್ಣೀರು ಬಿಡುವಂತೆಯೂ, ಮೈಯಲ್ಲಿ ಬೆವರನ್ನು ಸುರಿಸುವಂತೆಯೂ ಇದ್ದಕ್ಕಿದ್ದ ಹಾಗೆ ಮೇಲೆ ಹಾರುವಂತೆಯೂ ಕಾಣುತ್ತಿರುವುವು. ಇದೋ! ಈ ನಮ್ಮ ಜನಪದಗಳೂ ಗ್ರಾಮಗಳೂ, ಪಟ್ಟಣಗಳೂ, ಉದ್ಯಾನವನಗಳೂ ಸರೋವರಗಳೂ, ಋಷ್ಯಾಶ್ರಮಗಳೂ, ಗಣಿಗಳೂ, ಎಂದಿನಂತೆ ಉಲ್ಲಾಸವಿಶಿಷ್ಟವಾಗಿಲ್ಲದೆ ಕೇವಲ ಕಾಂತಿಹೀನವಾಗಿರುವುವು. ನಮಗೆ ಯಾವ ಅನರ್ಥಕ್ಕಾಗಿ ಈ ದುರ್ನಿಮಿತ್ತಗಳಿಲ್ಲವೂ ಕಾಣುವುವೋ ತಿಳಿಯಲಿಲ್ಲ! ಇಷ್ಟೊಂದು ಭಯಂಕರದುರ್ನಿಮಿತ್ತಗಳನ್ನು ನೋಡಿದರೆ, ಅಸಾಧಾರಣ ಶುಭಲಕ್ಷಣಗಳುಳ್ಳ ಆ ಶ್ರೀಕೃಷ್ಣನ ಪಾದಪದ್ಮಗಳಿಂದ ತುಳಿಯಲ್ಪಡುವ ಭಾಗ್ಯವು ಇನ್ನುಮೇಲೆ ಈ ಭೂಮಿದೇವಿಗೆ ಲಭಿಸಲಾರದೆಂದೇ ಎಣಿಸಬೇಕಾಗಿದೆ" ಎಂದನು. ಹೀಗೆ ಧರ್ಮಪುತ್ರನು ಮಹೋತ್ಪಾತಗಳನ್ನು ನೋಡಿದ ಭಯದಿಂದ ತತ್ತಳಿಸುತ್ತಿರುವ ಸಮಯಕ್ಕೆ ಸರಿಯಾಗಿ ದ್ವಾರಕೆಯಿಂದ ಅರ್ಜುನನು ಹಿಂತಿರುಗಿ ಬಂದು, ಧರ್ಮರಾಜನ ಪಾದಗಳನ್ನು ಹಿಡಿದು ನಮಸ್ಕರಿಸಿದನು. ಆದರೆ ಆಗ ಅರ್ಜುನನ ಸ್ಥಿತಿಯು ಎಂದಿನಂತೆ ಹರ್ಷೋನ್ಮುಖವಾಗಿರಲಿಲ್ಲ. ಏನೋ ಬಹಳದುಃಖಾತುರನಾದಂತೆ ಧರ್ಮರಾಜನ ಮುಂದೆ ತಲೆಯನ್ನು ತಗ್ಗಿಸಿ, ಪಳಪಳನೆ ಕಣ್ಣೀರು ಬಿಡುತ್ತ ನಿಂತಿದ್ದನು. ಹೀಗೆ ತನ್ನ ಪ್ರಿಯಸಹೋದರನಾದ ಅರ್ಜುನನು ಕಳೆಗುಂದಿದ ಮುಖದಿಂದ ದುಃಖಾಕುಲನಾಗಿ ನಿಂತಿರುವುದನ್ನು ನೋಡಿದೊಡನೆ, ಧರ್ಮರಾಜನಿಗೆ ಹಿಂದೆ ನಾರದನು ಹೇಳಿ ಹೋದ ಮಾತು ನೆನಪಿಗೆ ಬಂದಿತು. ಆತನ ಮನಸ್ಸಿಗೂ ಕಳವಳವು ಹುಟ್ಟಿತು.

ಹೀಗೆಚಿಂತಾಕುಲನಾದ ಧರ್ಮಪುತ್ರನು ತನ್ನ ಮಿತ್ರಮಂಡಲಿಯೆಲ್ಲವೂ ಕೇಳು ತ್ತಿರುವ ಹಾಗೆ ಅರ್ಜುನನನ್ನು ಕುರಿತು ಪ್ರಶ್ನೆಮಾಡುವನು. 'ವತ್ಸ ಅರ್ಜುನಾ! ಇದೇನಿದು! ನೀನು ಇಷ್ಟು ದುಃಖಾಕುಲನಾಗಿರುವುದಕ್ಕೆ ಕಾರಣವೇನು? ದ್ವಾರಕೆ ಯಲ್ಲಿ ನಮ್ಮ ಬಂಧುಗಳೆಲ್ಲರೂ ಕ್ಷೇಮದಿಂದಿರುವರಷ್ಟೆ? ಮಧುಗಳು, ಭೋ ಜರು, ದಾಶಾರ್ಹರು, ಸಾತ್ವತರು, ಅಂಧಕರು, ವೃಷ್ಣಿಗಳು, ಇವರೆಲ್ಲರೂ ಸುಖ ದಿಂದಿರುವರಷ್ಟೆ? ನಮ್ಮ ಮಾತಾಮಹನಾದ ಶೂರನಿಗೆ ಕ್ಷೇಮವಷ್ಟೆ? ನಮ್ಮ ಸೋದರಮಾವನಾದ ವಸುದೇವನು, ದೇವಭಾಗನೇ ಮೊದಲಾದ ಒಂಭತ್ತು ಮಂದಿ ಸಹೋದರರೊಡನೆ ಕ್ಷೇಮದಿಂದಿರುವನಷ್ಟೆ? ಉಗ್ರಸೇನನ ತಂಗಿಯ ರಾಗಿಯೂ, ನಮಗೆ ಸೋದರತ್ತೆಯಾಗಿಯೂ ಇರುವ ದೇವಕಿ ಮೊದಲಾದ ವಸುದೇವನ ಏಳುಮಂದಿ ಪತ್ನಿಯರೂ ತಮ್ಮ ಮಕ್ಕಳೊಡನೆಯೂ, ಸೊಸೆಯ ರೊಡನೆಯೂ ಕ್ಷೇಮದಿಂದಿರುವರಷ್ಟೆ? ದುರಾತ್ಮನಾದ ಕಂಸನನ್ನು ಪುತ್ರ ನನ್ನಾಗಿ ಪಡೆದು ದುಃಖಕ್ಕೀಡಾದ ಉಗ್ರಸೇನನೂ, ಅವನ ತಮ್ಮನಾದ ದೇವಕನೂ ಜೀವಿಸಿರುವನಷ್ಟೆ? ಹೃದಿಕಪುತ್ರನಾದ ಅಕ್ರೂರನೂ, ಜಯಂತಾದಿಗಳೂ, ವಸು ದೇವಕುಮಾರರಾದ ಶತ್ರುಜಿತ್ತು ಮೊದಲಾದವರೆಲ್ಲರೂ ಸುಖವಾಗಿರುವರಷ್ಟೆ? ಅರ್ಜುನಾ! ಯಾದವಪ್ರಭುವಾದ ಬಲರಾಮನಿಗೂ, ಯಾದವವೀರರಲ್ಲಿ ಮಹಾ ರಥನೆನಿಸಿದ ಪ್ರದ್ಯುಮ್ನನಿಗೂ, ಅನಿರುದ್ಧನಿಗೂ ಕ್ಷೇಮವಷ್ಟೆ? ಜಾಂಬವತೀಪುತ್ರ ನಾದ ಸಾಂಬನೂ, ಸುಷೇಣನೂ, ಚಾರುಧೇಷ್ಣನೂ ಕುಶಲಿಗಳಷ್ಟೆ? ಕೃಷ್ಣಪುತ್ರ ರಲ್ಲಿ ಮುಖ್ಯರಾದ ಋಷಭಾದಿಗಳೆಲ್ಲರೂ ತಮ್ಮತಮ್ಮ ಮಕ್ಕಳೊಡನೆ ಸುಖ ದಿಂದಿರುವರಷ್ಟೆ? ಭಗವಂತನಾದ ಕೃಷ್ಣನಿಗೆ ಅನುಚರರಾಗಿ ವರ್ತಿಸುತ್ತಿರುವ ಉದ್ಧವಶ್ರುತದೇವರೂ, ಯಾದವೋತ್ತಮರಾದ ಸುನಂದನಂದಾದಿಗಳೂ ಕುಶಲಿಗ ಳಷ್ಟೆ? ಶ್ರೀಕೃಷ್ಣ ಬಲರಾಮರ ಬಾಹುಬಲಾಶ್ರಯದಿಂದ ಹೆಮ್ಮೆಗೊಂಡ ಯಾದವ ರೆಲ್ಲರೂ ಸುಖದಲ್ಲಿರುವರಷ್ಟೆ? ವತ್ಸನೆ! ಅವರೆಲ್ಲರೂ ನಮ್ಮಲ್ಲಿ ಒಂದೇವಿಧವಾದ ಪ್ರೇಮವನ್ನಿಟ್ಟು, ಆಗಾಗ ನಮ್ಮ ಕ್ಷೇಮವನ್ನು ವಿಚಾರಿಸುತ್ತಿರುವರೆ? ಕಿರೀಟೀ! ಮುಖ್ಯವಾಗಿ ಈ ವೃತ್ತಾಂತವನ್ನು ಮೊದಲು ತಿಳಿಸು! ಬ್ರಾಹ್ಮಣಕುಲಕ್ಕೆ ಹಿತ ನಾಗಿಯೂ, ಭಕ್ತವತ್ಸಲನಾಗಿಯೂ ಇರುವ ಭಗವಂತನಾದ ಶ್ರೀಕೃಷ್ಣನು, ಸುಧ ರ್ಮೆಯಲ್ಲಿ ತನ್ನ ಮಿತ್ರವರ್ಗದೊಡನೆ ಸಂತೋಷದಿಂದಿರುವನಷ್ಟೆ? ಸಮಸ್ತ ಲೋಕಕ್ಕೂ ಕ್ಷೇಮವನ್ನೂ, ಸುಖವನ್ನೂ, ಅಭ್ಯುದಯವನ್ನೂ ಕೈಗೂಡಿಸುವು ದಕ್ಕಾಗಿಯೇ ಆದಿಪುರುಷನಾದ ಆ ಮಹಾತ್ಮನು ಬಲರಾಮಸಹಿತನಾಗಿ ಯದು ಕುಲಾಂಭೋಧಿಯಲ್ಲಿ ಅವತರಿಸಿರುವನು; ಯಾವನ ಭುಜದಂಡದಿಂದ ರಕ್ಷಿತವಾದ

ದ್ವಾರಕೆಯಲ್ಲಿರುವುದರಿಂದಲೇ, ಯಾದವರೆಲ್ಲರೂ ಲೋಕಪೂಜ್ಯರೆನಿಸಿ, ಯಕ್ಷರಂತೆ ಪರಮಾನಂದವಿಶಿಷ್ಟರಾಗಿ ಮೆರೆಯುತ್ತಿರುವರೋ, ಯಾವ ಮಹಾತ್ಮನ ಪಾದಸೇವೆಯೊಂದೇ ತಮಗೆ ಮುಖ್ಯಕರ್ಮವೆಂದು ನಂಬಿದುದರಿಂದ, ಸತ್ಯಭಾಮೆ ಮೊದಲಾದ ಅಷ್ಟಮಹಿಷಿಯರೂ, ಹದಿನಾರುಸಾವಿರಮಂದಿ ಗೋಪಿಯರೂ, ಆ ಭಗವಂತನು ಯುದ್ಧದಲ್ಲಿ ದೇವತೆಗಳನ್ನು ಜಯಿಸಿ ತಂದ ಪಾರಿಜಾತಾದಿಗಳಿಂದ, ವಜ್ರಧಾರಿಯಾದ ಮಹೇಂದ್ರನ ಪತ್ನಿಯರಿಗೆ ಯೋಗ್ಯಗಳಾದ ಅಭೀಷ್ಟವಸ್ತುಗಳೆಲ್ಲವನ್ನೂ ಪಡೆಯುತ್ತಿರುವರೋ, ಯಾವ ಪುರುಷೋತ್ತಮನ ಭುಜಬಲಾಶ್ರಯದಿಂದ ಯಾದವರು ದೇವತೆಗಳನ್ನು ಜಯಿಸಿ ಬಲಾತ್ಕಾರದಿಂದ ಸಾಗಿಸಿ ತಂದ ದೇವಯೋಗ್ಯವಾದ ಸುಧರ್ಮಾಸಭೆಯನ್ನು ಆಗಾಗ ತಮ್ಮ ಪಾದಗಳಿಂದ ನಿರ್ಭಯವಾಗಿ ತುಳಿದು ನಿಲ್ಲುವರೋ, ಅಂತಹ ಶ್ರೀಕೃಷ್ಣಮೂರ್ತಿಯು ಕ್ಷೇಮದಿಂದಿರುವನಷ್ಟೆ? ವತ್ಸಾ! ದ್ವಾರಕೆಯಲ್ಲಿ ನೀನೂ ಇದುವರೆಗೆ ಕ್ಷೇಮದಿಂದಿದ್ದೆಯಷ್ಟೆ? ನಿನ್ನ ಮುಖವು ಹೇಗೋ ಕಳೆಗುಂದಿದಂತೆ ತೋರುವುದು ಈಗ ನಿನ್ನ ಮುಖದಲ್ಲಿ ಮೊದಲಿದ್ದ ತೇಜಸ್ಸೇ ಕಾಣುವುದಿಲ್ಲ! ಅಲ್ಲಿದ್ದಾಗ ನಿನ್ನ ದೇಹಕ್ಕೆ ಆಲಸ್ಯವೇನೂ ಉಂಟಾಗಲಿಲ್ಲವಷ್ಟೆ? ಅರ್ಜುನಾ! ನೀನು ಇಷ್ಟುದೀರ್ಘಕಾಲದವರೆಗೆ ಅಲ್ಲಿ ನಿಂತುದೇ ಸರಿಯಲ್ಲ! ಈ ಚಿರಪರಿಚಯದಿಂದ ಅಲ್ಲಿ ನಿನಗೆ ಯಾರಾದರೂ ತಕ್ಕ ಗೌರವವನ್ನು ಕೊಡದೆ ಅವಮಾನಪಡಿಸಿರುವರೇನು? ಅದೇನೂ ಇಲ್ಲವಷ್ಟೆ? ನಿನ್ನ ಮುಖವೇನೋ ಬಹಳವಾಗಿ ಕಳೆಗೆಟ್ಟಿರುವುದು! ನಮ್ಮ ಯೋಗ್ಯತೆಗೆ ಉಚಿತಗಳಲ್ಲದ ಶಬ್ದಾದಿವಿಷಯಗಳಲ್ಲಿ ನೀನು ಸಿಕ್ಕಿಬಿದ್ದವನಲ್ಲವಷ್ಟೆ? ಯಾರಿಗಾದರೂ ಯಾಚಕರಿಗೆ ನೀನು, ಮೊದಲು ಆಸೆಯನ್ನು ತೋರಿಸಿ, ಆಮೇಲೆ ತಪ್ಪಿ ನಡೆಯಲಿಲ್ಲವಷ್ಟೆ? ಆಶ್ರಿತರಕ್ಷಣೆಯಲ್ಲಿ ಪ್ರಸಿದ್ಧಿಗೊಂಡ ನೀನು ನಿನ್ನಲ್ಲಿಗೆ ಶರಣಾರ್ಥಿಗಳಾಗಿ ಬಂದ ಬಾಲಕರನ್ನಾಗಲಿ, ಗೋಬ್ರಾಹ್ಮಣರನ್ನಾಗಲಿ, ರೋಗಿಗಳನ್ನಾಗಲಿ, ಸ್ತ್ರೀಯರನ್ನಾಗಲಿ ರಕ್ಷಿಸದೆ ನಿರಾಕರಿಸಲಿಲ್ಲವಷ್ಟೆ? ಅಪರಿಗ್ರಾಹ್ಯಳಾದ ಸ್ತ್ರೀಯನ್ನು ಪರಿಗ್ರಹಿಸುವುದಕ್ಕಾಗಲಿ, ಪರಿಗ್ರಾಹ್ಯಳಾದ ಹೆಂಗಸನ್ನು ನಿರಾಕರಿಸುವುದಕ್ಕಾಗಲಿ ನೀನು ಪ್ರಯತ್ನಿಸಲಿಲ್ಲವಷ್ಟೆ? ನೀನು ದ್ವಾರಕೆಯಿಂದ ಹೊರಟುಬರುವಾಗ ದಾರಿಯಲ್ಲಿ, ನಿನಗಿಂತಲೂ ಮೇಲೆನಿಸಿದವರಿಂದಾಗಲಿ ಹೀನಜನದಿಂದಾಗಲಿ ಪರಾಜಿತನಾಗಿ ಅವಮಾನಪಟ್ಟು ಬಂದೆಯೋನು? ಅರ್ಜುನಾ! ಒಂದುವೇಳೆ ನೀನು ತಿನ್ನೊಡನೆ ಸಹಭೋಜನಕ್ಕೆ ಯೋಗ್ಯರಾದ ಬಾಲರನ್ನಾಗಲಿ, ವೃದ್ಧರನ್ನಾಗಲಿ ಅನಾದರಿಸಿ ಏಕಾಕಿಯಾಗಿ ಭುಜಿಸಿದೆಯೋನು? ಅಥವಾ ನಮ್ಮ ಕುಲಕ್ಕೆ ಯೋಗ್ಯವಲ್ಲದ ಹೀನಕಾರ್ಯವನ್ನೇನಾದರೂ ನಡೆಸಿಬಿಟ್ಟೆಯೋನು?

ಅಥವಾ ಇದೊಂದೂ ಇಲ್ಲದೆ ಪರಮಾಪ್ತನಾದ ಆ ಶ್ರೀಕೃಷ್ಣನನ್ನಗಲಿ ಬಂದು ದಕ್ಕಾಗಿಯೇ ಹೀಗೆ ದುಃಖಿಸುತ್ತಿರುವೆಯಾ? ಹಾಗಿಲ್ಲದ ಪಕ್ಷದಲ್ಲಿ ನೀನು ಹೀಗೆ ಕಳೆಗುಂದಿರುವುದಕ್ಕೆ ಕಾರಣವಿಲ್ಲ! ವತ್ಸಾ! ಇದರ ಕಾರಣವೇನೆಂಬುದನ್ನು ಯಥಾಸ್ಥಿತವಾಗಿ ತಿಳಿಸು!" ಎಂದನು. ಇದು ಹದಿನಾಲ್ಕನೆಯ ಅಧ್ಯಾಯವು.

---

{ಅರ್ಜುನನು ದ್ವಾರಕಾಪುರವೃತ್ತಾಂತವನ್ನು ಧರ್ಮ ರಾಜನಿಗೆ ತಿಳಿಸಿದುದು. ಪಾಂಡವಸ್ವರ್ಗಮನವು}

ಹೀಗೆ ತನ್ನಣ್ಣನಾದ ಧರ್ಮರಾಜನು ನಾನಾವಿಧವಿಕಲ್ಪಾಸ್ಪದವಾದ ತನ್ನ ರೂಪವನ್ನು ನೋಡಿ ಆತುರದಿಂದ ಪ್ರಶ್ನೆಮಾಡಲು, ಕೃಷ್ಣಸಖನಾದ ಅರ್ಜುನನು ಆಕೃಷ್ಣನನ್ನಗಲಿದ ದುಃಖದಿಂದಕೃಶನಾಗಿ ಪ್ರತ್ಯುತ್ತರವನ್ನು ಹೇಳಲಾರದೆ ಸುಮ್ಮ ನಿದ್ದನು. ದುಃಖಾತಿಶಯದಿಂದ ಬಾಯಾರಿ, ಎದೆಯೊಣಗಿ, ಕಾಂತಿಗುಂದಿದ್ದ ಅರ್ಜು ನನು ತನ್ನ ಪ್ರಭುವಾದ ಕೃಷ್ಣನನ್ನೇ ಧ್ಯಾನಿಸುತ್ತ ಸಂಕಟದಿಂದ ಕೊರಗುತ್ತಿದ್ದು ಕೊನೆಗೆ ತನ್ನ ದುಃಖವನ್ನು ಪ್ರಯತ್ನಪೂರ್ವಕವಾಗಿ ತಡೆದಿಟ್ಟುಕೊಂಡು, ಕೈಯಿಂ ದ ಕಣ್ಣೀರನ್ನೊರಸಿಕೊಳ್ಳುತ್ತ ಪರೋಕ್ಷದಲ್ಲಿರುವಾಗಲೂ, ಆಕೃಷ್ಣನಲ್ಲಿ ತನ ಗಿರುವ ಉತ್ಕಟವಾದ ಸ್ನೇಹದಿಂದಲೂ, ಆತನ ವಿರಹವನ್ನು ಸಹಿಸಲಾರದ ಕಷ್ಟ ದಿಂದಲೂ ತತ್ತಳಿಸುತ್ತಿದ್ದನು. ಆಶ್ರೀಕೃಷ್ಣನು ಹಿಂದೆ ತನಗೆ ಸಾರಥ್ಯಾದಿಕಾರ್ಯಗ ಳನ್ನು ನಡೆಸಿದಾಗ ಆತನು ತನ್ನಲ್ಲಿ ತೋರಿಸುತಿದ್ದ ಸಲಿಗೆಯನ್ನೂ, ಪ್ರೇಮವನ್ನೂ, ಹಿತೈಷಿತ್ವವನ್ನೂ ಬಾರಿಬಾರಿಗೂ ಸ್ಮರಿಸಿಕೊಂಡು ಶೋಕಿಸುತಿದ್ದನು. ಕೊನೆಗೆ ದುಃಖಬಾಷ್ಪವು ಬಂದೊತ್ತುವುದರಿಂದ ಗದ್ಗದಸ್ವರವುಳ್ಳವನಾಗಿ, ಅಣ್ಣನಾದ ಧರ್ಮರಾಜನನ್ನು ನೋಡಿ ಹೀಗೆಂದು ಪ್ರತ್ಯುತ್ತರವನ್ನು ಹೇಳತೊಡಗಿದನು. "ಅಣ್ಣಾ! ನಾನೇನು ಹೇಳಲಿ! ನಮಗೆ ಬಂಧುರೂಪದಿಂದಿದ್ದ ಕೃಷ್ಣನು ನಮ್ಮನ್ನು ವಂಚಿಸಿ ಹೊರಟು ಹೊದನು. ಬ್ರಹ್ಮಾದಿಗಳಿಗೂ ಆಶ್ಚರ್ಯವನ್ನುಂಟುಮಾಡುತಿದ್ದ ನನ್ನ ತೇಜಸ್ಸನ್ನೂ ಅಪಹರಿಸಿಕೊಂಡು ಹೋದನು. ಪ್ರಾಣವಿಲ್ಲದ ದೇಹವು ಶವವೆನಿಸುವಂತೆ ಆ ಮಹಾತ್ಮನ ಕ್ಷಣವಿಯೋಗಮಾತ್ರದಿಂದಲೇ ಮನುಷ್ಯನು ಅಪ್ರಿಯದರ್ಶನವುಳ್ಳವನಾಗುವನು. ಅಣ್ಣಾ! ಈಗ ನಾನು ಜೀವಚ್ಛವದಂತೆ ಕಾಣುವುದಕ್ಕೆ, ಆ ಕೃಷ್ಣಮೂರ್ತಿಯ ವಿಯೋಗವೇ ಕಾರಣವು! ಯಾವ ಮಹಾನು

ಧಾವನ ಆಶ್ರಯಬಲದಿಂದ ಹಿಂದೆ ನಾನು ದ್ರುಪದನಗರಿಯಲ್ಲಿ ದ್ರೌಪದಿಗೆ ಸ್ವಯಂವರವು ನಡೆದಾಗ ಕಾಮಾತುರದಿಂದ ಕೊಬ್ಬಿ ಕಲಹಕ್ಕೆ ನಿಂತ ಅನೇಕದುಷ್ಟರಾಜರ ವೀರ್ಯವನ್ನಡಗಿಸಿ, ನಾಣೇರಿಸಿದ ಧನುಸ್ಸಿನಿಂದ ಮತ್ಸ್ಯಯಂತ್ರವನ್ನು ಭೇದಿಸಿ, ದ್ರೌಪದಿಯನ್ನು ಸಾಧಿಸಿ ತಂದೆನೋ ಅಂತಹ ಮಹಾತ್ಮನು ಈಗ ನಮ್ಮನ್ನು ಬಿಟ್ಟುಹೋದನು. ಯಾವ ಮಹಾತ್ಮನ ಆಶ್ರಯಬಲದಿಂದಲೇ ನಾನು, ಅನೇಕ ದೇವಗಣಸಹಿತನಾದ ಇಂದ್ರನನ್ನು ಜಯಿಸಿ, ಖಾಂಡವವನವನ್ನು ಅಗ್ನಿದೇವನಿಗೊಪ್ಪಿಸಿದೆನೋ, ಯಾವ ಪುರುಷೋತ್ತಮನ ಕೃಪಾಬಲದಿಂದಲೇ ನಮಗೆ ಆತ್ಯಾಶ್ಚರ್ಯಕರವಾದ ಶಿಲ್ಪಚಾತುರ್ಯವುಳ್ಳ ಮಯನಿರ್ಮಿತವಾದ ಸಭೆಯು ಲಭಿಸಿತೋ, ಯಾವನ ಕೃಪಾಬಲದಿಂದಲೇ ನಿನ್ನ ರಾಜಸೂಯಯಾಗದಲ್ಲಿ ದಿಕ್ಕುದಿಕ್ಕಿನಿಂದಲೂ ಅನೇಕರಾಜರು ನಿನಗೆ ಕಾಣಿಕೆಗಳನ್ನು ತಂದೊಪ್ಪಿಸಿದರೋ, ಆ ಕೃಷ್ಣನು ಈಗ ನಮ್ಮನ್ನು ಬಿಟ್ಟು ಹೊರಟುಹೋದನು. ಯಾವನ ತೇಜೋಬಲದಿಂದ ಹತ್ತುಸಾವಿರಾನೆಯ ಬಲವುಳ್ಳ ಆರ್ಯನಾದ ಭೀಮನು, ಯಜ್ಞಕ್ಕೆ ಮೊದಲು ದಿಗ್ವಿಜಯಕ್ಕೆ ಹೊರಟಾಗ, ಜರಾಸಂಧನ ತಲೆಕಾಲುಗಳನ್ನು ಕತ್ತರಿಸಿ, ಆತನು ಭೈರವಬಲಿಗಾಗಿ ತಂದು ಸೆರೆಯಲ್ಲಿಟ್ಟಿದ್ದ ಅನೇಕರಾಜರನ್ನು ಬಿಡಿಸಿ, ಅದಕ್ಕಾಗಿ ಅವನು ಸಂಗ್ರಹಿಸಿದ್ದ ಅನೇಕದ್ರವ್ಯರಾಶಿಗಳನ್ನೂ ನಿನ್ನ ಯಜ್ಞಕ್ಕೆ ಕಾಣಿಕೆಯಾಗಿ ತಂದೊಪ್ಪಿಸುವಂತೆ ಮಾಡಿದನೋ, ಆ ಕೃಷ್ಣನು ಈಗ ನಮ್ಮನ್ನಗಲಿ ಹೋದನು. ಹಿಂದೆ ದುರಾತ್ಮರಾದ ದುಶ್ಶಾಸನಾದಿಗಳು, ಯಾಗದಲ್ಲಿ ಮಂತ್ರಪೂತವಾದ ಜಲಾಭಿಷೇಕದಿಂದ ಪವಿತ್ರವಾಗಿಯೂ, ಸುಂದರವಾಗಿಯೂ ಇದ್ದ ನಿನ್ನ ಪತ್ನಿಯ ತಲೆತುರುಬನ್ನು ಹಿಡಿದು ಸಭೆಗೆಳೆದು ತಂದು, ಅವಳು ದೈನ್ಯದಿಂದ ಕಣ್ಣೀರುಬಿಟ್ಟು ಕಾಲಿಗೆ ಬಿದ್ದು ಪ್ರಾರ್ಥಿಸಿದರೂ ಬಿಡದೆ, ಅವಳಿಗೆ ಮಾನಭಂಗ ಮಾಡಿದುದನ್ನು ನೋಡಿ ಸಹಿಸಲಾರದೆ, ಯಾವ ಮಹಾತ್ಮನು ತನ್ನ ವೀರ್ಯಬಲದಿಂದಲೇ ಅವರನ್ನು ಕೊಲ್ಲಿಸಿ, ಅವರ ಪತ್ನಿಯರ ತಲೆಕೂದಲನ್ನು ಬಿಚ್ಚಿಸಿದನೋ, ಆ ಪುರುಷೋತ್ತಮನು ಈಗ ನಮ್ಮನ್ನಗಲಿ ಹೋದನು. ಹಿಂದೆ ನಮ್ಮ ಶತ್ರುವಾದ ದುರ್ಯೋಧನನ ಪ್ರೇರಣೆಯ ಮೇಲೆ, ಸುಲಭಕೋಪಿಯಾದ ದುರ್ವಾಸನು ನಮ್ಮಲ್ಲಿಗೆ ಬಂದು, ನಾವಿದ್ದ ನಿರ್ಜನವಾದ ಅಡವಿಯಲ್ಲಿ ದಶಸಹಸ್ರಬ್ರಾಹ್ಮಣರಿಗೆ ಭೋಜನವನ್ನೊದಗಿಸಬೇಕೆಂದು ನಿರ್ಬಂಧಿಸಿದಾಗ, ಯಾವ ಮಹಾತ್ಮನು ನಾವು ತಿಂದುಳಿಸಿದ ಶಾಕಾನ್ನದಗುಳನ್ನು ತಿಂದು ಆ ದುರ್ವಾಸನನ್ನು ಮಾತ್ರವಲ್ಲದೆ ಮೂರುಲೋಕವನ್ನೂ ತೃಪ್ತಿಪಡಿಸಿ, ಆ ಮಹರ್ಷಿಯ ಶಾಪದಿಂದ ನಮಗುಂಟಾಗುತಿದ್ದ ಮಹಾವಿಪತ್ತನ್ನು ತಪ್ಪಿಸಿದನೋ, ಆ

ಕೃಷ್ಣನು ಈಗ ನಮ್ಮನ್ನಗಲಿಹೋದನು. ಅಣ್ಣಾ! ಹಿಂದೆ ನಾನು ಯುದ್ಧದಲ್ಲಿ ರುದ್ರನಿಗೂ ಆಶ್ಚರ್ಯವನ್ನುಂಟುಮಾಡತಕ್ಕ ಮಹಾವೀರ್ಯವನ್ನು ತೋರಿಸಿ, ಅವನಿಂದ ಪಾಶುಪತಾಸ್ತ್ರವನ್ನು ಪಡೆದು ಬಂದುದೂ, ದೇವಾದಿದೇವತೆಗಳಿಗೂ ಆಶ್ಚರ್ಯವುಂಟಾಗುವಂತೆ ಇದೋ! ಈಗ ಕಾಣುವ ಈ ದೇಹದಿಂದಲೇ ಹಿಂದೆ ನಾನು ಆ ದೇವೇಂದ್ರನ ಅರ್ಧಾಸನವನ್ನೇರಿ ಕುಳಿತಿದ್ದುದೂ, ಆ ಶ್ರೀಕೃಷ್ಣನು ನಿಜತೇಜಸ್ಸನ್ನು ನನ್ನಲ್ಲಿರಿಸಿದ್ದುದರಿಂದಲೇ ಹೊರತು ಬೇರೆಯಲ್ಲ! ಹಿಂದೆ ನಾನು ದೇವಲೋಕದಲ್ಲಿ ವಿಹರಿಸುತಿದ್ದಾಗ, ದೇವತೆಗಳೆಲ್ಲರೂ ಕಾಲಕೇಯವಧಕ್ಕಾಗಿ, ಗಾಂಡೀವಯುಕ್ತವಾದ ನನ್ನ ಈ ಬಾಹುಯುಗ್ಮವನ್ನಾಶ್ರಯಿಸಿದುದೂ ಕೂಡ ಆ ಶ್ರೀಕೃಷ್ಣನು ನನ್ನ ತೋಳುಗಳಲ್ಲಿ ತನ್ನ ವೀರ್ಯಲೇಶವನ್ನಿರಿಸಿದ್ದುದರಿಂದಲ್ಲದೆ ಬೇರೆಯಲ್ಲ! ಅಂತಹ ಕೃಷ್ಣನು ಈಗ ನಮ್ಮನ್ನಗಲಿ ನಿಜಲೋಕವನ್ನು ಸೇರಿಬಿಟ್ಟನು. ಎಲೈ ಆರ್ಯನೆ! ಮುಖ್ಯವಾಗಿ ಹಿಂದಿನಿಂದಲೂ ನಾನು ನಡೆಸಿದ ಒಂದೊಂದು ಕಾರ್ಯವೂ ಆ ಕೃಷ್ಣ ಸಹಾಯದಿಂದಲ್ಲದೆ ಬೇರೆಯಲ್ಲ. ಹಿಂದಿನ ಯುದ್ಧದಲ್ಲಿ ಅತಿದುಸ್ತರವಾಗಿದ್ದ ಕೌರವಸೈನ್ಯವೆಂಬ ಮಹಾಸಮುದ್ರವನ್ನು ದಾಟಿದುದು, ಶತ್ರುರಾಜ್ಯಗಳಿಂದ ಬಹುದ್ರವ್ಯವನ್ನು ಸಂಗ್ರಹಿಸಿ ತಂದುದು, ವೈರಿರಾಜರ ಅಮೂಲ್ಯ ಶಿರೋರತ್ನಗಳನ್ನು ಕಿತ್ತು ತಂದುದು, ಇವೆಲ್ಲಕ್ಕೂ ಆ ಶ್ರೀಕೃಷ್ಣನ ಸಹಾಯಬಲವೇ ಕಾರಣವು. ಅಂತಹ ಕೃಷ್ಣನು ಈಗ ನನ್ನ ಹೃದಯವನ್ನೆಳೆದುಕೊಂಡು ನನ್ನನ್ನಗಲಿ ಹೋದನು. ಹಿಂದಿನ ಯುದ್ಧದಲ್ಲಿ ಮಹಾರಥರಾದ ಅನೇಕ ವೀರಕ್ಷತ್ರಿಯರ ರಣಗಳಿಂದಲಂಕೃತವಾಗಿದ್ದ, ಭೀಷ್ಮ, ದ್ರೋಣ, ಕರ್ಣ, ಶಲ್ಯಾದಿ ಮಹಾವೀರರ ಸೈನ್ಯಗಳಲ್ಲಿ ಯಾವ ಮಹಾತ್ಮನು ನನಗೆ ಮುಂದಾಗಿ ನಿಂತು, ನಾನು ಬಾಣಪ್ರಯೋಗವನ್ನು ಮಾಡುವುದಕ್ಕೆ ಮೊದಲು ತನ್ನ ದೃಷ್ಟಿಯಿಂದಲೇ ಆ ಶತ್ರುವೀರರ ಮನಸ್ಸನ್ನೂ, ತೇಜಸ್ಸನ್ನೂ, ಅವರ ಆಯುಸ್ಸನ್ನೂ ಅಪಹರಿಸಿ, ಮೃತಪ್ರಾಯರನ್ನಾಗಿ ಮಾಡುತಿದ್ದನೋ, ಆ ಕೃಷ್ಣನು ಈಗ ನನ್ನ ಹೃದಯವನ್ನಪಹರಿಸಿಕೊಂಡು ಹೋದನು. ಹಿಂದಿನ ಯುದ್ಧದಲ್ಲಿ ಭೀಷ್ಮ, ದ್ರೋಣ, ಕರ್ಣ, ಅಶ್ವತ್ಥಾಮ, ಶಲ್ಯ, ಸೈಂಧವ, ತ್ರಿಗರ್ತ, ಬಾಹ್ಲೀಕಾದಿ ಕುರುವೀರರು ನನ್ನಮೇಲೆ ಪ್ರಯೋಗಿಸಿದ ಮಹಾಪ್ರಭಾವವುಳ್ಳ ಬಾಣಗಳೆಲ್ಲವೂ, ಹಿರಣ್ಯಕಶಿಪುವಿನ ಶಸ್ತ್ರಘಾತಗಳು ನೃಸಿಂಹಭಕ್ತನಾದ ಪ್ರಹ್ಲಾದನನ್ನು ಮುಟ್ಟದಂತೆ ಯಾವ ಮಹಾತ್ಮನ ಭುಜಾಶ್ರಯದಿಂದಲೇ ನನ್ನನ್ನು ಸ್ಪರ್ಶಿಸಲಾರದೆ ಹೋದುವೋ ಆ ಕೃಷ್ಣನು ಈಗ ನನ್ನ ಹೃದಯವನ್ನೂ ಎಳೆದುಕೊಂಡು. ನನ್ನನ್ನು ಬಿಟ್ಟು ಹೋದನು. ಸಾಧುಗಳು ಮೋಕ್ಷಾಪೇಕ್ಷೆಯಿಂದ ಯಾವನ

ಪಾದಕಮಲಗಳನ್ನು ಭಜಿಸುತ್ತಿರುವರೋ, ಯಾವನು ಆಶ್ರಿತರಿಗಾಗಿ ತನ್ನನ್ನೇ ಒಪ್ಪಿಸಿಡುವಷ್ಟು ಮಹೋದಾರಸ್ವಭಾವವುಳ್ಳವನೋ, ಅಂತಹ ಮಹಾತ್ಮನನ್ನು ಕುತ್ಸಿತಬುದ್ಧಿಯಾದ ನಾನು ನನಗೆ ಬಂಡಿಯಾಳನ್ನಾಗಿ ನಿಯಮಿಸಿದೆನು. ಈ ನನ್ನ ಮಹಾಪರಾಧವನ್ನೂ ಮನಸ್ಸಿಗೆ ತಂದುಕೊಳ್ಳದೆ ಯಾವ ಪುರುಷೋತ್ತಮನು, ಹಿಂದಿನ ಯುದ್ಧಕಾಲದಲ್ಲಿ ನನ್ನ ರಥಾಶ್ವಗಳು ಬಳಲಿ ನಾನು ನೆಲದ ಮೇಲೆ ನಿಂತಾಗ, ಶತ್ರುವೀರರು ನನ್ನನ್ನು ಹೊಡೆಯದಹಾಗೆ ಅವರ ಮನಸ್ಸಿಗೆ ಮೋಹವನ್ನು ಕವಿಸಿ, ನನ್ನನ್ನು ರಕ್ಷಿಸಿದನೋ, ಆ ಶ್ರೀಕೃಷ್ಣನು ಈಗ ನನ್ನ ಹೃದಯವನ್ನಪಹರಿಸಿದನು. ಅಹಾ! ಪುಣ್ಯಶ್ಲೋಕನಾದ ಆ ಶ್ರೀಕೃಷ್ಣನು, ಆಗಾಗ ಮಂದಹಾಸವಿಶಿಷ್ಟಗಳಾದ ಪರಿಹಾಸವಾಕ್ಯಗಳನ್ನಾಡುತ್ತ, "ಓ ಪಾರ್ಥಾ! ಓ ಅರ್ಜುನಾ! ಓ ಪ್ರಿಯಸಖಾ! ಓ ಕುರುನಂದನಾ!" ಎಂದು ಬಾಯಿತುಂಬ ನನ್ನನ್ನು ಕೂಗಿ ಕರೆಯುತಿದ್ದಾಗ, ಆತನ ಬಾಯಿಂದ ಹೊರಟ ಮಧುರಾಕ್ಷರಗಳು ಈಗಲೂ ನನ್ನ ಮನಸ್ಸಿನಲ್ಲಿ ದೃಢವಾಗಿ ನಾಟಿರುವುವು. ಈಗ ಅವುಗಳನ್ನು ನೆನಸಿಕೊಂಡ ಮಾತ್ರಕ್ಕೆ ನನ್ನ ಹೃದಯವು ಹೊರಳುತ್ತಿರುವುದು. ಹಿಂದೆ ನಿದ್ರಾಹಾರ ವಿಹಾರ ಸಂಚಾರಗಳೇ ಮೊದಲಾದ ಒಂದೊಂದು ಕಾರ್ಯದಲ್ಲಿಯೂ ನಾನು ಆ ಮಹಾತ್ಮನೊಡನೆ ಸಮಭಾವದಿಂದ ವರ್ತಿಸುತಿದ್ದಾಗ, ಅಜ್ಞತೆಯಿಂದ ನಾನು ಎಷ್ಟೆಷ್ಟೋ ತಪ್ಪುಗಳನ್ನು ನಡೆಸಿ, ಅವನನ್ನು ತಿರಸ್ಕರಿಸಿದ್ದರೂ ಕೂಡ, ಸುರಲೋಕನಾಥನಾದ ಆ ಪುರುಷೋತ್ತಮನು ಮಹಾಮಹಿಮೆಯುಳ್ಳವನಾದುದರಿಂದ, ಮಿತ್ರನ ತಪ್ಪನ್ನು ಮಿತ್ರನೂ, ಮಕ್ಕಳ ತಪ್ಪನ್ನು ತಂದೆಯೂ ಮನ್ನಿಸುವಂತೆ ನನ್ನ ಮಹಾಪರಾಧಗಳೆಲ್ಲವನ್ನೂ ಮನ್ನಿಸುತಿದ್ದನು. ಅಂತಹ ಕೃಷ್ಣನು ಈಗ ನನ್ನ ಹೃದಯವನ್ನಪಹರಿಸಿಕೊಂಡು ಹೋದನು. ಅಹಾ! ಇನ್ನು ಹೆಚ್ಚುಮಾತಿನಿಂದೇನು? ಮುಖ್ಯವಾಗಿ ನಮಗೆ ಸರ್ವವಿಧದಲ್ಲಿಯೂ ಹಿತೈಷಿಯಾಗಿ, ಮಿತ್ರನಾಗಿ, ಪರಮಪ್ರಿಯನಾಗಿ, ಸರ್ವಥಾ ನನ್ನ ಹೃದಯದಲ್ಲಿ ಸೇರಿದ್ದ ಪುರುಷೋತ್ತಮನಾದ ಶ್ರೀಕೃಷ್ಣನು ಈಗ ನನ್ನನ್ನಗಲಿ ಹೋದನು. ಆ ಮಹಾತ್ಮನು ನನ್ನನ್ನು ಬಿಟ್ಟು ನಿಜಲೋಕಕ್ಕೆ ಹೋದ ಮೇಲೆ, ನಾನು ಆ ಕೃಷ್ಣನ ಭಾರ್ಯಾಜನವನ್ನು ರಕ್ಷಿಸುತ್ತ, ದ್ವಾರಕೆಯಿಂದ ಹೊರಟು ಈ ಕಡೆಗೆ ಬರುತ್ತಿರುವಾಗ, ದಾರಿಯಲ್ಲಿ ದುರ್ಜನರಾದ ಕೆಲವು ಗೋಪಾಲಕರು ನನ್ನನ್ನು ತಡೆದು ನಿಂತರು. ಅಬಲೆಯಾದ ಹೆಂಗಸಿನಂತೆ ನಾನು ಅವರಿಂದ ನಿಮಿಷಮಾತ್ರದಲ್ಲಿ ಜಯಿಸಲ್ಪಟ್ಟೆನು. ಅಹಾ! ಆ ಮಹಾತ್ಮನ ಮಾಯೆಯನ್ನು ನೋಡಿದೆಯಾ?' ಇದೋ! ಹಿಂದಿದ್ದ ಗಾಂಡೀವಧನುಸ್ಸೇ

ಈಗಲೂ ನನ್ನ ಕೈಯಲ್ಲಿರುವುದು. ಈಗಲೂ ಅದೇ ಬಾಣಗಳನ್ನು ಹಿಡಿದಿರುವೆನು. ರಥವೂ ರಥಾಶ್ವಗಳೂ ಅವೇ! ಹಿಂದೆ ಅನೇಕ ರಾಜಮಂಡಲಿಯಿಂದ ಮಹಾರಥನೆಂದು ಗೌರವಿಸಲ್ಪಡುತಿದ್ದ ಆಗಿನ ಅರ್ಜುನನೇ ನಾನಲ್ಲದೆ ಹೊಸಬನೆಲ್ಲ! ಏನಿದ್ದರೇನು? ಆಗಿದ್ದ ಶ್ರೀಕೃಷ್ಣಸಾನ್ನಿಧ್ಯವೊಂದು ತಪ್ಪಿದುದರಿಂದ, ಇತರ ಸಹಾಯಸಂಪತ್ತುಗಳೆಲ್ಲವೂ, ಊಷರಕ್ಷೇತ್ರದಲ್ಲಿ ಬಿತ್ತಿದ ಬೀಜದಂತೆಯೂ, ಬೂದಿಯಲ್ಲಿ ಮಾಡಿದ ಹೋಮದಂತೆಯೂ, ಅಸತ್ಪಾತ್ರದಲ್ಲಿ ಕೊಟ್ಟ ದಾನದಂತೆಯೂ ಕ್ಷಣಮಾತ್ರದಲ್ಲಿ ನಿರರ್ಥಕಗಳಾದುವು. ಅಣ್ಣಾ! ದ್ವಾರಕೆಯಲ್ಲಿ ನಮ್ಮ ಯಾದವಬಂಧುಗಳ ಕ್ಷೇಮವನ್ನು ಕೇಳಿದೆಯಲ್ಲವೆ? ಆ ವೃತ್ತಾಂತವನ್ನೂ ತಿಳಿಸಿಬಿಡುವೆನು ಕೇಳು! ಈ ನಡುವೆ ಒಂದಾನೊಂದು ದಿನದಲ್ಲಿ, ಯಾದವವೀರರೆಲ್ಲರೂ ಮೈತಿಳಿಯದೆ ಕಂಠಪೂರ್ತಿಯಾಗಿ ಮದ್ಯವನ್ನು ಕುಡಿದು, ಪ್ರಜ್ಞೆತಪ್ಪಿ, ಮೈತಿಳಿಯದೆ, ತಮ್ಮಲ್ಲಿಯೇ ತಾವು ಒಬ್ಬರನ್ನೊಬ್ಬರು ಮುಷ್ಟಿಗಳಿಂದ ಹೊಡೆದಾಡಿ ಸತ್ತರು. ಹೀಗೆ ಯಾದವರು ಮೈತಿಳಿಯದೆ ಹೊಡೆದಾಡಿ ಸಾಯುವುದಕ್ಕೆ ಹಿಂದೆ ಅವರಿಗೆ ತಗುಲಿದ ಬ್ರಾಹ್ಮಣಶಾಪವೇ ಕಾರಣವು. ಈಗ ಯಾದವರಲ್ಲಿ ನಾಲ್ಕೈದುಮಂದಿ ಮಾತ್ರವೇ ಉಳಿದಿರುವರು. ಅಣ್ಣಾ! ಇವೆಲ್ಲವೂ ಆ ಸರ್ವೇಶ್ವರನ ವ್ಯಾಪಾರಗಳಲ್ಲದೆ ಬೇರೆಯಲ್ಲ! ಯಾವನ ಸಂಕಲ್ಪದಿಂದ ಸಮಸ್ತಭೂತಗಳೂ ವೃದ್ಧಿಹೊಂದುವುವೋ, ಆ ಭಗವಂತನ ಸಂಕಲ್ಪದಿಂದಲೇ ಇವೆಲ್ಲವೂ ನಶಿಸುವುವು. ಯಾದವಕುಲನಾಶಕ್ಕೂ ಅತನ ಸಂಕಲ್ಪವೇ ಮೂಲವು. ಎಲೈ ರಾಜೇಂದ್ರನೆ! ಅಷ್ಟೇಕೆ? ದೊಡ್ಡ ಮೀನು ಸಣ್ಣ ಮೀನುಗಳನ್ನು ಹೇಗೆ ನುಂಗುವುದೋ, ಪ್ರಬಲಜಂತುಗಳು ದುರ್ಬಲಜಂತುಗಳನ್ನು ಹೇಗೆ ಕೊಂದು ತಿನ್ನುವುವೋ, ಪ್ರಬಲಜಂತುಗಳೇ ಆಗಾಗ ಒಂದಕ್ಕೊಂದು ಹೋರಾಡಿ ಹೇಗೆ ಸಾಯುವುವೋ, ಹಾಗೆಯೇ ಶ್ರೀಕೃಷ್ಣನು ಮೊದಲು ಬಲಿಷ್ಠರಾದ ಯಾದವರಿಂದ, ದುರ್ಬಲರಾದ ಇತರರನ್ನು ಕೊಲ್ಲಿಸಿ, ಆಮೇಲೆ ಆ ಯಾದವರ ಕೈಯಿಂದಲೇ ಯಾದವರನ್ನು ಕೊಲ್ಲಿಸಿ, ಭೂಭಾರವನ್ನು ಪರಿಹರಿಸಿಬಿಟ್ಟನು. ಆ ಭಗವಂತನ ಉದ್ದೇಶವನ್ನು ಹೀಗೆಂದು ನಿರ್ಣಯಿಸುವುದು ಯಾರಿಗೂ ಸಾಧ್ಯವಲ್ಲ! ಅಣ್ಣಾ! ಏನಾದರೇನು? ಹಿಂದೆ ಶ್ರೀಕೃಷ್ಣನು ನನ್ನೊಡನೆ ಕಲೆತಿದ್ದಾಗ, ಕಾಲದೇಶಕ್ಕೆ ತಕ್ಕ ಪ್ರಯೋಜನಗಳನ್ನು ತೋರಿಸುವಂತೆಯೂ, ಎಂತಹ ಹೃದಯದುಃಖವನ್ನಾದರೂ ಅಡಗಿಸಿ ಆನಂದವನ್ನುಂಟುಮಾಡುವಂತೆಯೂ ಅವನು ನನಗೆ ಉಪದೇಶಿಸುತಿದ್ದ ವಾಕ್ಯಗಳು, ಈಗಲೂ ನನ್ನ ನೆನಪಿಗೆ ಬಂದ ಹಾಗೆಲ್ಲಾ ನನ್ನ ಮನಸ್ಸನ್ನು ಸೆಳೆಯುತ್ತಿರುವುವು." ಎಂದನು. ಅರ್ಜುನನು ತನ್ನಣ್ಣನಾದ ಧರ್ಮರಾಜನಿಗೆ

ಹೀಗೆಂದು ಹೇಳಿ, ಆ ಕೃಷ್ಣನಲ್ಲಿ ತನಗಿದ್ದ ದೃಢವಾದ ಸ್ನೇಹದಿಂದ ಆತನ ಪಾದಕಮಲಗಳನ್ನು ಬಿಡದೆ ಧ್ಯಾನಿಸುತ್ತ ಸ್ವಲ್ಪಕಾಲದವರೆಗೆ ಮೌನದಿಂದಿದ್ದನು. ಈ ಕೃಷ್ಣಧ್ಯಾನದಿಂದಲೇ ಅವನ ಮನಸ್ಸಿನ ರಾಗಾದಿಕಲ್ಮಷಗಳೆಲ್ಲವೂ ಬಿಟ್ಟು, ಅವನ ಬುದ್ಧಿಯಲ್ಲಿ ತಿಳಿವುಂಟಾಯಿತು. ವಾಸುದೇವನ ಪಾದಪದ್ಮಗಳನ್ನು ಎಡೆಬಿಡದೆ ಧ್ಯಾನಿಸುತಿದ್ದುದರಿಂದ ಭಕ್ತ್ಯಾವೇಶವೂ ಹೆಚ್ಚಿತು. ಕಾಮಕ್ರೋಧಾದಿ ದುರ್ಗುಣಗಳೊಂದೂ ತಲೆಯೆತ್ತದಂತಾಯಿತು. ಹೀಗೆ ನಿಷ್ಕಲ್ಮಷವಾದ ಬುದ್ಧಿಯುಳ್ಳ ಅರ್ಜುನನು, ಹಿಂದೆ ರಣಾಗ್ರದಲ್ಲಿ ಭಗವಂತನು ತನಗುಪದೇಶಿಸಿದ ಗೀತಾರ್ಥವನ್ನು ತನ್ನಲ್ಲಿ ಮನನಮಾಡಿಕೊಂಡನು. ತಾನು ಆ ಗೀತಾರ್ಥವನ್ನು ಕೇಳಿ ಬಹಳ ದಿನಗಳು ಕಳೆದು ಹೋದುದರಿಂದಲೂ, ಆದರಿಂದೀಚೆಗೆ ತಾನು ಬೇರೆಬೇರೆ ಕಾರ್ಯಾಂತರಗಳಲ್ಲಿದ್ದುದರಿಂದಲೂ, ತಮೋಗುಣಪ್ರಾಬಲ್ಯದಿಂದಲೂ, ಹಿಂದೆ ತನಗೆ ಪ್ರಾಪ್ತವಾಗಿದ್ದ ಜ್ಞಾನವು ಕ್ರಮವಾಗಿ ಕುಂದುತ್ತ ಬಂದಿದ್ದರೂ, ಗ್ರಹಣಧಾರಣಗಳಲ್ಲಿ ಸಮರ್ಥನಾದ ಅರ್ಜುನನು, ಅವೆಲ್ಲವನ್ನೂ ತಿರುಗಿ ತನ್ನ ಭಾವನೆಗೆ ತಂದುಕೊಂಡನು. ಹೀಗೆ ತನಗುಂಟಾದ ಬ್ರಹ್ಮಜ್ಞಾನದಿಂದ ಅರ್ಜುನನು, ಜೀವಾತ್ಮನಿಗೆ ಬೇರೆ ಬೇರೆದೇಹಗಳ ಸಂಬಂಧದಿಂದ ತೋರುವ್ವಭೇದ ಭ್ರಾಂತಿಯನ್ನು ತೊಲಗಿಸಿಕೊಂಡು ತನಗಿರುವ ಸ್ಥೂಲದೇಹದ ಮತ್ತು ಸೂಕ್ಷ್ಮಪ್ರಕೃತಿಯ ಸಂಬಂಧವೆರಡೂ ನೀಗಿದ ಮೇಲೆ, ಸತ್ವಾದಿಗುಣತ್ರಯಸಂಪರ್ಕವಿಲ್ಲದಂತಾಗುವ ನಿಜಸ್ಥಿತಿಯನ್ನೂ ತನ್ನಲ್ಲಿ ತಾನು ಅನುಸಂಧಾನ ಮಾಡಿಕೊಂಡನು. ಇದರಿಂದ ಅವನಿಗೆ ಪುನರ್ಜನ್ಮಸಂಬಂಧವು ನೀಗಿತು. ಅಪಹತಪಾಪ್ಮತ್ವವೇ ಮೊದಲಾಗಿ ಮುಕ್ತರಲ್ಲಿರುವ ಎಂಟು ಗುಣಗಳೂ ಅವನಲ್ಲಿ ನೆಲೆಗೊಂಡುವು. ಇತ್ತಲಾಗಿ ಧರ್ಮರಾಜನೂ ಕೂಡ ಅರ್ಜುನನಿಂದ ಯದುಕುಲನಾಶವನ್ನೂ ಮತ್ತು ಕೃಷ್ಣನಿರ್ಯಾಣವನ್ನೂ ಕೇಳಿದೊಡನೆ, ಹಿಂದೆ ನಾರದನು ಸೂಚಿಸಿ ಹೋಗಿದ್ದ ಸಂಗತಿಯನ್ನು ಸ್ಮರಿಸಿ, ತನ್ನ ಮನಸ್ಸನ್ನು ದೃಢಪಡಿಸಿಕೊಂಡು. ಮುಂದೆ ತನ್ನ ಸದ್ಗತಿಗಾಗಿ ತಾನು ಪ್ರಯತ್ನಿಸುತಿದ್ದನು. ಇಷ್ಟರಲ್ಲಿ ಕುಂತೀದೇವಿಯೂ ಕೂಡ, ಅರ್ಜುನನಿಂದ ಶ್ರೀಕೃಷ್ಣನ ವೃತ್ತಾಂತವನ್ನೂ, ಯದುಕುಲನಾಶನವನ್ನೂ ಕೇಳಿದಮೇಲೆ, ಅನನ್ಯಪ್ರಯೋಜನವಾದ ಭಕ್ತಿಯಿಂದ ಶ್ರೀಕೃಷ್ಣನ ಪಾದಕಮಲದಲ್ಲಿ ತನ್ನ ಮನಸ್ಸನ್ನು ನಿಲ್ಲಿಸಿ, ಆಗಲೇ ಸಂಸಾರದಲ್ಲಿ ಮೋಹವನ್ನು ತ್ಯಜಿಸಿ ವೈರಾಗ್ಯವನ್ನೂ ವಹಿಸಿದಳು. ಓ ಶೌನಕಾ! ಕಾಲಿಗೆ ಹೊಕ್ಕ ಮುಳ್ಳನ್ನು ಬೇರೆ ಮುಳ್ಳಿನಿಂದಲೇ ತೆಗೆದು, ಅವೆರಡನ್ನೂ ಹೊರಗೆ ಬಿಸಾಡುವಂತೆ, ಭಗವಂತನು ಯದುವಂಶದಲ್ಲಿ ಕೃಷ್ಣರೂಪದಿಂದ

ವತರಿಸಿ ಲೋಕಕಂಟಕರಾದ ದುರ್ಮಾರ್ಗರೆಲ್ಲರನ್ನೂ ಕೊಲ್ಲಿಸಿ, ಭೂಭಾರವನ್ನು ತಗ್ಗಿಸಿದಮೇಲೆ, ಅದಕ್ಕಾಗಿ ತಾನು ಗ್ರಹಿಸಿ ಬಂದಿದ್ದ ಲೀಲಾಮಾನುಷವಿಗ್ರಹವನ್ನು ಇಲ್ಲಿಯೇ ಬಿಟ್ಟು, ತನ್ನ ನಿಜಸ್ವರೂಪದಿಂದ ನಿಜಲೋಕಕ್ಕೆ ಸೇರಿಬಿಟ್ಟನು. ಭಗವಂತನಿಗೆ ಈ ತನ್ನ ಶರೀರವನ್ನು ಧರಿಸುವುದೂ ಬಿಡಿಸುವುದೂ ಜನನವಲ್ಲದೆ ಇವುಗಳಲ್ಲಿ ತಾರತಮ್ಯವೇನೂ ಇಲ್ಲ! ಸಹಜಸ್ವರೂಪವನ್ನೂ ಬಿಡದೆ ಆಗಾಗ ಮೇಲಿನ ವೇಷವನ್ನು ಮಾತ್ರ ಬದಲಾಯಿಸುತ್ತಿರುವ ನಟನಂತೆ ಭಗವಂತನೂ ಕೂಡ, ತನಗೆ ಆವಶ್ಯಕತೆಯುತ್ತೇರಿದಾಗ ಮತ್ಸ್ಯಾದ್ಯವತಾರಗಳನ್ನು ಧರಿಸಿ ಬಂದು ತಾನು ನಡೆಸಬೇಕಾದ ಕಾರ್ಯಗಳನ್ನು ನಡೆಸಿದಮೇಲೆ ಆ ಶರೀರವನ್ನು ನೀಗಿಬಿಡುವನು. ಆದುದರಿಂದ ಈಗಲೂ ಕೃಷ್ಣನು ಭೂಭಾರಪರಿಹರಣವಾದ ತನ್ನ ಕಾರ್ಯವನ್ನು ಮುಗಿಸಿದಮೇಲೆ ಆ ಶರೀರವನ್ನು ನೀಗಿರುವನು. ಶೌನಕಾ! ಪುಣ್ಯಕೀರ್ತನವುಳ್ಳ ಶ್ರೀಕೃಷ್ಣನು ಯಾವ ದಿನದಲ್ಲಿ, ತನ್ನ ಅಸಾಧಾರಣದಿವ್ಯಮಂಗಳವಿಗ್ರಹದೊಡನೆ ಈ ಭೂಮಿಯನ್ನು ಬಿಟ್ಟು ವೈಕುಂಠಕ್ಕೆ ತೆರಳಿದನೋ, ಆ ದಿನವೇ ಇತ್ತಲಿಂದ ಅಧರ್ಮಹೇತುವಾದ ಕಲಿಯು ಈ ಭೂಮಿಗೆ ಕಾಲಿಟ್ಟಿತು. ಆಮೇಲೆ ಧರ್ಮರಾಜನು ಈ ಕಲಿಪ್ರವೇಶದಿಂದ ತನ್ನ ದೇಶದಲ್ಲಿ ಪ್ರತಿಗೃಹದಲ್ಲಿಯೂ, ಪ್ರತಿಮನುಷ್ಯರಲ್ಲಿಯೂ, ಲೋಭ, ಹಿಂಸೆ, ಸುಳ್ಳು, ಮೋಸ ಮೊದಲಾದ ದುರ್ಗುಣಗಳು ಹೆಚ್ಚಿ ಬರುತಿದ್ದುದನ್ನು ನೋಡಿ, ಇನ್ನು ಈ ಲೋಕದಲ್ಲಿರುವುದಕ್ಕೆ ಇಷ್ಟವಿಲ್ಲದೆ ಸ್ವರ್ಗಾರೋಹಣಕ್ಕಾಗಿ ನಿಶ್ಚಯಿಸಿಕೊಂಡನು ಈ ನಿಶ್ಚಯವು ಹುಟ್ಟಿದೊಡನೆ ಧರ್ಮರಾಜನು, ಅತಿವಿನೀತನಾಗಿಯೂ, ಗುಣಗಳಲ್ಲಿ ತನಗೆ ಸಮಾನನಾಗಿಯೂ ಇದ್ದ ತನ್ನ ಮುಮ್ಮಗನಾದ ಪರೀಕ್ಷಿದ್ರಾಜನನ್ನು ಕರೆತರಿಸಿ, ತನ್ನ ರಾಜ್ಯವನ್ನಾತನ ವಶಕ್ಕೊಪ್ಪಿಸಿ, ಹಸ್ತಿನಾವತಿಯಲ್ಲಿ ಪಟ್ಟಾಭಿಷೇಕವನ್ನೂ ನಡೆಸಿಬಿಟ್ಟನು. ಅನಿರುದ್ಧಕುಮಾರನಾದ ವಜ್ರನೆಂಬವನನ್ನು ಕರೆದು, ಅವನಿಗೆ ಶೂರಸೇನದೇಶಾಧಿಪತ್ಯವನ್ನು ಕೊಟ್ಟು ಮಥುರಾಪುರಿಯಲ್ಲಿ ಅವನಿಗೂ ಪಟ್ಟಾಭಿಷೇಕವನ್ನು ನಡೆಸಿದನು! ಆಮೇಲೆ ಪ್ರಾಜಾಪತ್ಯವೆಂಬ ಒಂದು ಇಷ್ಟಿಯನ್ನು ಮಾಡಿ, ಆಹವನೀಯಾದ್ಯಗ್ನಿಗಳನ್ನು ಆತ್ಮಾರೋಪಣಮಾಡಿಕೊಂಡನು. ತಾನು ಧರಿಸಿದ್ದ ಉಡಿಗೆತೊಡಿಗೆಗಳೆಲ್ಲವನ್ನೂ ತಾನಿದ್ದ ಮನೆಯಲ್ಲಿಯೇ ತೆಗೆದು ಬಿಸುಟನು. ಅಹಂಕಾರ, ಮಮಕಾರಗಳನ್ನು ನಿಶ್ಶೇಷವಾಗಿ ನೀಗಿ ಸಮಸ್ತವಿಧಗಳಾದ ಪ್ರೇಮಾನುಬಂಧಗಳೆಲ್ಲವನ್ನೂ ತ್ಯಜಿಸಿದನು. ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳೆರಡನ್ನೂ ಆಯಾವಿಷಯಗಳಿಂದ ತಪ್ಪಿಸಿ, ಅದರ ವ್ಯಾಪಾರಗಳೆಲ್ಲವೂ ಮನೋಧೀನವೆಂದೂ, ಆ ಮನಸ್ಸು ಪ್ರಾಣಾಧೀನವೆಂದೂ ಭಾವಿಸಿ, ಅದರಂತೆಯೇ ಅವುಗಳನ್ನು ತತ್ತದಧೀನವಾಗಿ ಮಾಡಿ

ನಿಲ್ಲಿಸಿದನು. ಹಾಗೆಯೇ ಆ ಪ್ರಾಣವನ್ನು ಅಪಾನದಲ್ಲಿಯೂ, ಅಪಾನವನ್ನು ವ್ಯಾನದಲ್ಲಿಯೂ, ವ್ಯಾನವನ್ನು ಉದಾನದಲ್ಲಿಯೂ, ಆ ಉದಾನವನ್ನು ಮೃತ್ಯುಸಂಜ್ಞಕವಾದ ಸಮಾನದಲ್ಲಿಯೂ, ಆ ಸಮಾನವನ್ನು ಪ್ರಾಣಾದಿಪಂಚಕಕ್ಕೆ ಕಾರಣವಾದ ವಾಯುವಿನಲ್ಲಿಯೂ ಲಯಹೊಂದಿಸಿದನು. ಹೀಗೆ ಇಂದ್ರಿಯ ವರ್ಗಗಳನ್ನೂ, ಪ್ರಾಣಗಳನ್ನೂ, ಅವುಗಳ ವ್ಯಾಪಾರವನ್ನೂ ನಿರೋಧಿಸಿ, ವಾಯುವಿನಲ್ಲಿ ಲಯಹೊಂದಿಸಿದ ಮೇಲೆ, ಆ ವಾಯುಸಹಿತಗಳಾದ ಪಂಚಭೂತಗಳೂ. ಅಹಂಕಾರ ಕಾರ್ಯವೆಂಬುದಕ್ಕಾಗಿ, ಇವೆರಡನ್ನೂ ಸಾತ್ವಿಕ ರಾಜಸ ತಾಮಸಗಳೆಂಬ ತ್ರಿವಿಧವಾದ ಅಹಂಕಾರದಲ್ಲಿ ಲೀನಮಾಡಿದನು. ಈ ತ್ರಿವಿಧಾಹಂಕಾರವನ್ನೂ ಮಹತ್ತತ್ವಮೂಲಕವಾಗಿ ಪ್ರಕೃತಿಯೊಂದರಲ್ಲಿ ಲಯಹೊಂದಿಸಿದನು. ಅಚೇತನವಾದ ಈ ಪ್ರಕೃತಿಯೂ ಕೂಡ ಚೇತನಾಧೀನವೆಂಬುದನ್ನು ತಿಳಿದು, ವಾಕ್ಕು ಮೊದಲಾಗಿ ಪ್ರಕೃತಿಪರ್ಯಂತವಾದ ಇವೆಲ್ಲವನ್ನೂ ಜೀವಾತ್ಮನಲ್ಲಿ ಲೀನಮಾಡಿದನು. ಆ ಜೀವಾತ್ಮನು ಪರಮಾತ್ಮನಿಗಧೀನವಾದ ವ್ಯಾಪಾರವುಳ್ಳವನಾದುದರಿಂದ, ಆ ಜೀವನನ್ನು ಅಕ್ಷಯವಾದ ಆ ಪರಬ್ರಹ್ಮನಲ್ಲಿ ಐಕ್ಯಹೊಂದಿಸಿಬಿಟ್ಟನು. ಹೀಗೆ ಧರ್ಮರಾಜನು ತತ್ವಜ್ಞಾನಾನುಸಂಧಾನಕ್ಕಾಗಿ ನಾರುಬಟ್ಟೆಗಳನ್ನುಟ್ಟು, ಆಹಾರವನ್ನು ಬಿಟ್ಟು, ಮೌನವನ್ನು ವಹಿಸಿ, ಜಟಾಧಾರಿಯಾಗಿ ತಲೆಯನ್ನು ಕೆದರಿ, ಮೂಕನಂತೆಯೂ, ಹುಚ್ಚನಂತೆಯೂ, ಪಿಶಾಚಗ್ರಸ್ತನಂತೆಯೂ ಕಾಣುತ್ತ, ತನ್ನ ಸಹೋದರರನ್ನೂ ನಿರೀಕ್ಷಿಸದೆ, ಕಿವುಡನಂತೆ ಬೇರೆಯವರು ಕರೆದರೂ ಕಿವಿಗೆ ಹಾಕಿಕೊಳ್ಳದೆ ತನ್ನ ಮನೆಯನ್ನು ಬಿಟ್ಟು ಹೊರಟನು ಹಿಂದೆ ತನ್ನ ತಂದೆಯಾದ ಧೃತರಾಷ್ಟ್ರನು ಹೋದ ದಾರಿಯನ್ನೇ ಹಿಡಿದು ಉತ್ತರ ದಿಕ್ಕನ್ನು ಕುರಿತು ಹೊರಟನು. ಹೀಗೆ ಧರ್ಮರಾಜನು ತನ್ನ ಹೃದಯದಲ್ಲಿ ಆ ಪರಬ್ರಹ್ಮಸ್ವರೂಪವೊಂದನ್ನೇ ಅನುಸಂಧಾನ ಮಾಡುತ್ತ, ಕೂಗಿದರೂ ಪ್ರತ್ಯುತ್ತರವನ್ನು ಕೊಡದೆ ಉತ್ತರದಿಕ್ಕಿಗಭಿಮುಖವಾಗಿ ಹೋಗುತ್ತಿರುವುದನ್ನು ಅತನಸಹೋದರರೆಲ್ಲರೂ ನೋಡಿದರು. ಅತ್ತಲಾಗಿ ಕಲಿಪ್ರವೇಶದಿಂದ ಪ್ರಜೆಗಳೆಲ್ಲರೂ ಪಾಪಕರ್ಮಗಳಾಗಿರುವುದನ್ನೂ ನೋಡಿದರು. ಇದರಿಂದ ಅವರ ಮನಸ್ಸಿಗೂ ವಿರಕ್ತಿಯು ಹುಟ್ಟಿತು. ಅವರಿಗೆ ಲೋಕದಲ್ಲಿರುವ ಸಮಸ್ತ ಪದಾರ್ಥಗಳೂ ಕೇವಲ ಹೀನವೆಂಬ ನಿಶ್ಚಯವುಂಟಾಯಿತು. ತಮ್ಮ ದೇಹಾವಸಾನಕ್ಕೂ ಸಮಯವು ಸಮೀಪಿಸಿತೆಂದು ತಿಳಿದುಕೊಂಡರು. ಈ ನಿಶ್ಚಯವು ಹುಟ್ಟಿದೊಡನೆ, ಅವರೆಲ್ಲರೂ ಶ್ರೀಮನ್ನಾರಾಯಣನ ಪಾದಾರವಿಂದಗಳನ್ನು ತಮ್ಮ ಹೃದಯದಲ್ಲಿ ದೃಢವಾಗಿಟ್ಟು ಧ್ಯಾನಿಸುತ್ತ, ತಮ್ಮಣ್ಣನಾದ ಧರ್ಮರಾಜನನ್ನೇ ಹಿಂಬಾಲಿಸಿ

ಹೊರಟುಬಿಟ್ಟರು. ಈ ವಿಧವಾದ ಭಗವದ್ಧ್ಯಾನದಿಂದ ಪರಿಪಕ್ವವಾದ ಭಕ್ತಿ ವಿಶೇಷದಿಂದ ನಿಷ್ಕಲ್ಮಷವಾದ ಬುದ್ಧಿಯುಳ್ಳವರಾಗಿ, ಈ ಭಕ್ತಿವಿಶೇಷದಿಂದಲೇ ಭಗವತ್ಪ್ರಾಪ್ತಿಗೆ ಪ್ರತಿಬಂಧಕಗಳಾಗಿದ್ದ ಪುಣ್ಯಪಾಪಕರ್ಮಗಳ ಸಂಬಂಧವನ್ನೂ ನಿಶ್ಶೇಷವಾಗಿ ನೀಗಿ ಪರಮಪುರುಷನೊಬ್ಬನಲ್ಲಿಯೇ ಬುದ್ಧಿಯನ್ನು ದೃಢವಾಗಿ ನೆಲೆಗೊಳಿಸಿದರು. ಇದರಿಂದ ರಜಸ್ತಮೋಗುಣ ರಹಿತವಾದ ಶುದ್ಧಸ್ವರೂಪ ವನ್ನು ಪಡೆದು, ಕೇವಲ ಭಗವದ್ಭಕ್ತರಿಗಲ್ಲದೆ ವಿಷಯಾಭಿಲಾಷೆಯಲ್ಲಿ ಸಿಕ್ಕಿದ ವರಿಗೆ ದುರ್ಲಭವಾದ ಉತ್ತಮಗತಿಯನ್ನು ಹೊಂದಿದರು. ಆಮೇಲೆ ವಿದುರನು ಇತ್ತಲಾಗಿ ಪ್ರಭಾಸತೀರ್ಥದಲ್ಲಿ ಕೆಲವು ಕಾಲದವರೆಗೆ ವಾಸಿಸುತಿದ್ದು, ತನ್ನ ಮನಸ್ಸನ್ನು ಶ್ರೀಮನ್ನಾರಾಯಣನಲ್ಲಿ ನೆಲೆಗೊಳಿಸಿ ಅಲ್ಲಿಯೇ ದೇಹತ್ಯಾಗವನ್ನು ಮಾಡಿದನು. ಋಷಿಶಾಪದಿಂದ ಪಿತೃಪತಿಯಾದ ಆತನಿಗೆ ಪ್ರಾಪ್ತನಾಗಿದ್ದ ಅನೀಚ ದೇಹದ ಸಂಬಂಧವು ಬಿಟ್ಟೊಡನೆ, ಅವನು ತನ್ನ ಪೂರ್ವಸ್ವರೂಪವನ್ನು ಹೊಂದಿ ಪಿತೃದೇವತೆಗಳಿಂದ ಪರಿವೃತನಾಗಿ ತನ್ನ ಲೋಕವನ್ನು ಸೇರಿದನು. ಆಮೇಲೆ ದ್ರೌಪ ದಿಯೂ ಕೂಡ, ತನ್ನ ಪತಿಗಳು ಈಲೋಕವ್ಯಾಪಾರದಲ್ಲಿ ವಿರಕ್ತರಾಗಿಹೋದುದನ್ನು ತಿಳಿದು ಶ್ರೀಹರಿಯಲ್ಲಿ ತನ್ನ ಮನಸ್ಸನ್ನು ದೃಢವಾಗಿ ನೆಲೆಗೊಳಿಸಿ ಪರಮಪದ ವನ್ನು ಹೊಂದಿದಳು. ಓ ಶೌನಕಾ! ಶ್ರೀಕೃಷ್ಣನಿರ್ಯಾಣ, ಪಾಂಡವಪ್ರಯಾಣ ವೆಂಬ ಈ ಸತ್ಕಥೆಯನ್ನು ಯಾವನು ಶ್ರದ್ಧೆಯಿಂದ ಪಠಿಸುವನೋ, ಅಥವಾ ಭಕ್ತಿ ಯಿಂದ ಕೇಳುವನೋ, ಅವನು ಸಮಸ್ತ ಶುಭಗಳಿಗೂ ಭಾಗಿಯಾಗಿ, ಕೊನೆಗೆ ವಿಷ್ಣುಭಕ್ತಿವಿಶಿಷ್ಟನಾಗಿ, ಸಂಸಾರಬಂಧವನ್ನು ತೊಲಗಿಸಿ, ಮುಕ್ತಿಯನ್ನು ಹೊಂದುವನು. ಇದು ಹದಿನೈದನೆಯ ಅಧ್ಯಾಯವು.

---

## ಪರೀಕ್ಷಿದ್ರಾಜನ ವೃತ್ತಾಂತವು

ಧರ್ಮರಾಜಾದಿಗಳು ತನಗೆ ಪಟ್ಟವನ್ನು ಕಟ್ಟಿ ರಾಜ್ಯವನ್ನು ಬಿಟ್ಟು ಹೋದಮೇಲೆ, ಇತ್ತಲಾಗಿ ಪರೀಕ್ಷಿದ್ರಾಜನು, ಹಿಂದೆ ತನ್ನ ಜನನಕಾಲದಲ್ಲಿ ಜ್ಯೋತಿಶ್ಶಾಸ್ತ್ರ ನಿಪುಣರು ಹೇಳಿದ್ದರೀತಿಯಲ್ಲಿಯೇ ಬ್ರಾಹ್ಮಣೋತ್ತಮರ ಉಪ ದೇಶದಿಂದ ಪರಮಭಾಗವತನೆನಿಸಿ, ಸದ್ಗುಣ ಶೀಲನೆಂಬ ಪ್ರಸಿದ್ಧಿಯನ್ನು ಪಡೆದು, ಧರ್ಮದಿಂದ ರಾಜ್ಯವನ್ನಾಳುತಿದ್ದನು. ಈತನು ರಾಜ್ಯಕ್ಕೆ ಬಂದಮೇಲೆ ಉತ್ತರನ

ಮಗಳಾದ ಇರಾವತಿಯೆಂಬ ಕನ್ಯೆಯನ್ನು ಮದುವೆಯಾಗಿ, ಅವಳಲ್ಲಿ ಜನಮೇಜಯನೇ ಮೊದಲಾದ ನಾಲ್ಕುಮಂದಿ ಪುತ್ರರನ್ನು ಪಡೆದನು. ಈತನು ತನ್ನ ರಾಜ್ಯಭಾರಕಾಲದಲ್ಲಿ ಕೃಪಾಚಾರ್ಯರನ್ನು ಗುರುವಾಗಿಟ್ಟುಕೊಂಡು, ಗಂಗಾತೀರದಲ್ಲಿ ಭೂರಿದಕ್ಷಿಣೆಯುಳ್ಳ ಮೂರು ಅಶ್ವಮೇಧಯಾಗಗಳನ್ನು ಮಾಡಿದನು. ಈ ಯಾಗದಲ್ಲಿ ದೇವತೆಗಳು ಸ್ವಸ್ವರೂಪದಿಂದ ಪ್ರತ್ಯಕ್ಷವಾಗಿಯೇ ಬಂದು ಹವಿರ್ಭಾಗಗಳನ್ನು ಸ್ವೀಕರಿಸುತಿದ್ದರು. ಒಮ್ಮೆ ಈತನು ದಿಗ್ವಿಜಯಕ್ಕಾಗಿ ಹೊರಟು, ಸಮಸ್ತದಿಕ್ಕುಗಳನ್ನೂ ಕ್ರಮವಾಗಿ ಜಯಿಸುತ್ತ ಬರುವಾಗ, ದಾರಿಯಲ್ಲಿ ಒಂದಾನೊಂದುಕಡೆಯಲ್ಲಿ ರಾಜಲಕ್ಷಣಗಳಿಂದ ಕೂಡಿದ ಶೂದ್ರನೊಬ್ಬನು ಗೋಮಿಥುನವನ್ನು ಕಾಲಿನಿಂದೊದೆಯುತಿದ್ದುದನ್ನು ಕಂಡನು ಅವನೇ ಕಲಿಪುರುಷನೆಂಬುದನ್ನು ತಿಳಿದು, ಪರೀಕ್ಷಿದ್ರಾಜನು ಆ ಕ್ಷಣವೇ ಅತನನ್ನು ನಿಗ್ರಹಿಸಿ ಬಂದನು." ಎಂದು ಸೂತಪೌರಾಣಿಕನು ಹೇಳಿದುದನ್ನು ಕೇಳಿ, ಶೌನಕನು ತಿರುಗಿ "ಸೂತಾ! ಪರೀಕ್ಷಿದ್ರಾಜನು ದಿಗ್ವಿಜಯಕಾಲದಲ್ಲಿ ಕಲಿಯನ್ನು ನಿಗ್ರಹಿಸಲು ಕಾರಣವೇನು? ರಾಜಲಕ್ಷಣವನ್ನು ಧರಿಸಿ ಗೋವನ್ನು ಕಾಲಿಂದೊದೆದ ಆ ಶೂದ್ರನಾವನು? ಆ ವೃತ್ತಾಂತವು ಭಗವಂತನ ಪುಣ್ಯಕಥೆಯಿಂದ ಮಿಶ್ರವಾಗಿದ್ದರೆ, ಅಥವಾ ಆ ಭಗವಂತನ ಪಾದಕಮಲಸಂಬಂಧವಾದ ಮಕರಂದವನ್ನಾಸ್ವಾದಿಸತಕ್ಕ ಭಕ್ತರ ಸಚ್ಚರಿತ್ರದಿಂದ ಕೂಡಿದುದಾಗಿದ್ದರೆ, ಅದನ್ನು ನೀನು ಅವಶ್ಯವಾಗಿ ನಮಗೆ ತಿಳಿಸಬೇಕು! ಹೀಗಲ್ಲದೆ ಅಲ್ಪಾಯುಸ್ಸುಳ್ಳವರಾಗಿಯೂ, ಕರ್ಮಫಲಾಭಿಲಾಷೆಯಲ್ಲಿ ತೊಳಲುವವರಾಗಿಯೂ, ಮರಣಶೀಲರಾಗಿಯೂ ಇರುವ ದುರ್ಜನರ ಸಂಬಂಧವಾದ ಅಸತ್ಕಥೆಗಳನ್ನು ಕೇಳುವುದರಿಂದ ಅಮೂಲ್ಯವಾದ ಆಯುಃಕಾಲವನ್ನು ವ್ಯರ್ಥವಾಗಿ ಕಳೆದಂತಾಗುವುದೇ ಹೊರತು ಬೇರೆಯಲ್ಲ! ಓ ಮಹಾತ್ಮಾ! ಈ ನಮ್ಮ ದೇಹವಾದರೋ ನಿತ್ಯವಲ್ಲ! ಹೀಗೆ ಅಲ್ಪಾಯುಸ್ಸುಳ್ಳವರಾಗಿ ಹುಟ್ಟಿ ಮೋಕ್ಷಾಪೇಕ್ಷೆಯಲ್ಲಿರುವ ನಮಗೆ, ಅತ್ಯಲ್ಪವಾದ ಆ ನಮ್ಮ ಆಯುಃಕಾಲವನ್ನೂ ವ್ಯರ್ಥವಾಗಿ ಮಾಡತಕ್ಕ ಬೇರೆ ವಿಧಗಳಾದ ಅಸತ್ಕಥೆಗಳಿಂದ ಫಲವೇನು? ಆದರೆ ಅಲ್ಪಾಯುಷ್ಯವುಳ್ಳ ನಮ್ಮ ಜೀವವು ಈಗ ನಿನ್ನಿಂದ ಈ ಕಥೆಗಳೆಲ್ಲವನ್ನೂ ಕೇಳಿ ಮುಗಿಸುವವರೆಗೆ ನಿಲ್ಲುವುದೆಂಬ ನಿಶ್ಚಯವೇನೆಂದು ನೀನು ಶಂಕಿಸಬೇಡ! ಇದೋ ನೋಡು! ಈಗ ಈ ನೈಮಿಶಕ್ಷೇತ್ರದಲ್ಲಿ ಮಹರ್ಷಿಗಳು ನಡೆಸುತ್ತಿರುವ ಹರಿಕಥಾಶ್ರವಣಮಿಶ್ರವಾದ ಈ ಸತ್ರಯಾಗದಲ್ಲಿ, ಮರಣಾಧಿದೇವತೆಯಾದ ಯಮನೂ ಕೂಡ ಮಹರ್ಷಿಗಳಿಂದ ಇಲ್ಲಿಗೆ ಕರೆಸಲ್ಪಟ್ಟಿರುವನು. ಆ ಮೃತ್ಯುದೇವನು ಇಲ್ಲಿರುವವರೆಗೂ ಇಲ್ಲಿ ಯಾರಿಗೂ ಮರಣವೆಂಬುದೇ ಇಲ್ಲ.

ಇದಕ್ಕಾಗಿಯೇ ಮಹರ್ಷಿಗಳು ಅವನನ್ನು ಇಲ್ಲಿಗೆ ಕರೆಸಿಟ್ಟುಕೊಂಡಿರುವರು. ಈಗ ಪ್ರಾರಂಭಿಸಲ್ಪಟ್ಟಿರುವ ಯಾಗವು ಸಮಾಪ್ತಿ ಹೊಂದುವವರೆಗೆ, ಯಮನೂ ಕೂಡ ವಿಷ್ಣುಕಥಾಶ್ರವಣಪರನಾಗಿ ಇಲ್ಲಿಯೇ ಇರುವುದರಿಂದ, ಅದುವರೆಗೆ ಇಲ್ಲಿ ಯಾರಿಗೂ ಮರಣಭಯವಿಲ್ಲ, ಅಹಾ! ಮನುಷ್ಯಲೋಕದಲ್ಲಿ ಹುಟ್ಟಿದಮೇಲೆ ಬುದ್ಧಿವಂತರಾದವರು ಹರಿಕಥಾಮೃತವನ್ನು ಅತ್ಯವಶ್ಯವಾಗಿ ಪಾನಮಾಡಿಯೇ ತೀರಬೇಕು! ಅಂತವರೇ ಪರಮಧನ್ಯರು. ಕೇವಲಮಂದ ಬುದ್ಧಿಯುಳ್ಳ ಸೋಮಾರಿಗಳು, ತಾವು ಪಡೆದು ಬಂದಿರುವ ಈ ಅತ್ಯಲ್ಪವಾದ ಆಯುಸ್ಸನ್ನೂ ಕೂಡ ವ್ಯರ್ಥವಾಗಿ ಕಳೆದುಬಿಡುವರು. ರಾತ್ರಿಯೆಲ್ಲವನ್ನೂ ನಿದ್ರೆಯಿಂದ ಕಳೆಯುವರು! ಕುಟುಂಬಭರಣಕ್ಕೆ ಬೇಕಾದ ಕೃತ್ಯಗಳಿಂದ ಹಗಲನ್ನು ಕಳೆದುಬಿಡುವರು. ಹೀಗೆ ಅವರ ಆಯುಃಕಾಲವೆಲ್ಲವೂ ವ್ಯರ್ಥವಾಗಿಯೇ ಕಳೆದು ಹೋಗುವುದಲ್ಲವೆ?" ಎಂದನು. ಅದಕ್ಕಾ ಸೂತನು ಶೌನಕನನ್ನು ಕುರಿತು, "ಶೌನಕಾ! ಕೇಳು! ಹಿಂದೆ ಪರೀಕ್ಷಿದ್ರಾಜನು ಕುರುಜಾಂಗಲ ದೇಶಗಳಲ್ಲಿದ್ದಾಗ, ತನ್ನ ಆಳ್ವಿಕೆಗೊಳಪಟ್ಟ ದೇಶದಲ್ಲಿ ಕಲಿಯು ಪ್ರವೇಶಿಸಿದನೆಂಬ ಅಪ್ರಿಯವಾರ್ತೆಯು ಅತನ ಕಿವಿಗೆ ಬಿದ್ದಿತು. ಈ ವಾರ್ತೆಯನ್ನು ಕೇಳಿದೊಡನೆ ಯುದ್ಧಕುತೂಹಲಿಯಾದ ಆ ರಾಜನು, ತನ್ನ ಮಹಾಧನುಸ್ಸನ್ನು ಕೈಗೆತ್ತಿಕೊಂಡು, ಕರೀಕುದುರೆಗಳಿಂದ ಕಟ್ಟಿದ ಸಿಂಹಧ್ವಜವುಳ್ಳ ಮತ್ತು ಸರ್ವಾಲಂಕಾರ ಭೂಷಿತವಾದ ರಥವನ್ನೇರಿ, ತನ್ನ ರಾಜಧಾನಿಯಿಂದ ಹೊರಟುಬಿಟ್ಟನು. ರಥಗಜತುರಗಪದಾತಿಗಳೆಂಬ ಚತುರಂಗಸೈನ್ಯವನ್ನೂ ಸೇರಿಕೊಂಡು ದಿಗ್ವಿಜಯಕ್ಕಾಗಿ ಬಂದನು. ಈ ನೆವದಿಂದಲೇ ಸಮುದ್ರಾಂತವಾದ ಸಮಸ್ತಭೂಮಿಯನ್ನೂ ಜಯಿಸಿ ಬರಬೇಕೆಂಬ ಕುತೂಹಲದಿಂದ, ಆ ಪರೀಕ್ಷಿದ್ರಾಜನು, ಭದ್ರಾಶ್ವ, ಕೇತುಮಾಲ, ಭಾರತ, ಕಿಂಪುರುಷವೇ ಮೊದಲಾದ ವರ್ಷ (ಭೂಭಾಗ) ಗಳೆಲ್ಲವನ್ನೂ. ಉತ್ತರಕುರುದೇಶಗಳನ್ನೂ ಜಯಿಸಿ, ಅಲ್ಲಲ್ಲಿ ಶತ್ರುರಾಜರಿಂದ ಅಮೂಲ್ಯಗಳಾದ ಕಪ್ಪಗಳನ್ನು ಸಂಗ್ರಹಿಸುತ್ತ ಬಂದನು. ದೇಶದೇಶದ ಜನರಿಂದ ತನ್ನ ಪಿತಾಮಹರಾದ ಪಾಂಡವರ ಚರಿತ್ರೆಯು ಕೀರ್ತಿಸಲ್ಪಡುತ್ತಿರಲು, ಶ್ರೀಕೃಷ್ಣನ ಮಹಾಮಹಿಮೆಯನ್ನು ಸೂಚಿಸತಕ್ಕ ಆ ಕಥೆಗಳೆಲ್ಲವನ್ನೂ ಆದರಿಸಿ ಕೇಳುತ್ತಬಂದನು. ತಾನು ತಾಯಿಯ ಗರ್ಭದಲ್ಲಿರುವಾಗ ಅಶ್ವತ್ಥಾಮನ ಬ್ರಹ್ಮಾಸ್ತ್ರತೇಜಸ್ಸಿನಿಂದ ಕೃಷ್ಣನು ತನ್ನನ್ನು ರಕ್ಷಿಸಿದ ಕ್ರಮವನ್ನೂ, ಪಾಂಡವರಿಗೂ ಯಾದವರಿಗೂ ಹೇಗೆ ಸ್ನೇಹವುಂಟಾಯಿತೆಂಬುದನ್ನೂ, ಅವರಿಗೆ ಕೃಷ್ಣನಲ್ಲಿರುವ ಭಕ್ತಿಯನ್ನೂ ಕೇಳಿ ಪರಮಸಂತೋಷಗೊಂಡು, ಆಯಾಕಥೆಗಳನ್ನು

ಹೇಳುತಿದ್ದ ಮಹನೀಯರೆಲ್ಲರನ್ನೂ ಪ್ರೀತಿವಿಕಸಿತವಾದ ನೇತ್ರದಿಂದ ನೋಡಿ ಮನ್ನಿಸುತ್ತ, ತನ್ನ ಔದಾರ್ಯಕ್ಕೆ ತಕ್ಕಂತೆ ಅವರಿಗೆ ಬೇಕಾದಷ್ಟು ಧನವನ್ನೂ, ವಸ್ತ್ರಗಳನ್ನೂ, ಹಾರಾದ್ಯಾಭರಣಗಳನ್ನೂ ಕೊಟ್ಟು ವಿಶೇಷವಾಗಿಬಹುಮಾನಿಸುತ್ತ ಬಂದನು. ಮತ್ತು ಭಕ್ತವತ್ಸಲವಾದ ಶ್ರೀಕೃಷ್ಣನು ಪಾಂಡವರಲ್ಲಿರುವ ಪ್ರೇಮಾತಿಶಯದಿಂದ, ಕಾಲೋಚಿತವಾಗಿ ಅವರಿಗೆ ಸಾರಥಿಯಾಗಿಯೂ, ಮಂತ್ರಿಯಾಗಿಯೂ, ಸಭಾಧ್ಯಕ್ಷನಾಗಿಯೂ, ದೂತನಾಗಿಯೂ, ಅನುಚರನಾಗಿಯೂ ಇದ್ದು, ಆಯಾ ಸಂದರ್ಭಕ್ಕೆ ತಕ್ಕಂತೆ ರಾಜಾನುವರ್ತನದಿಂದಲೂ, ಸ್ತೋತ್ರದಿಂದಲೂ, ನಮಸ್ಕಾರಗಳಿಂದಲೂ ಅವರನ್ನು ವಶೀಕರಿಸಿ, ಸನ್ಮಾರ್ಗಕ್ಕೆಳೆಯುತಿದ್ದುದನ್ನು ನೆನೆಸಿಕೊಂಡು ತಾನೂ ಪಾಂಡವರಂತೆಯೇ ಶ್ರೀಕೃಷ್ಣಾನುಗ್ರಹಕ್ಕೆ ಪಾತ್ರನಾಗಬೇಕೆಂಬ ಉದ್ದೇಶದಿಂದ, ಆ ಶ್ರೀಕೃಷ್ಣನ ಪಾದಾರವಿಂದಗಳನ್ನು ಅನವರತವೂ ತನ್ನ ಹೃದಯದಲ್ಲಿಟ್ಟು ಧ್ಯಾನಿಸುತಿದ್ದನು. ಹೀಗೆ ಪರೀಕ್ಷಿದ್ರಾಜನು ತನ್ನ ತಾತಂದಿರಾದ ಧರ್ಮರಾಜಾದಿಗಳ ಮಾರ್ಗವನ್ನೇ ಹಿಡಿದು, ಅದರಂತೆಪ್ರವರ್ತಿಸುತಿದ್ದ ಕಾಲದಲ್ಲಿ, ಆತನ ಕಣ್ಣಿದಿರಿಗೆ ಒಂದಾಶ್ಚರ್ಯವೃತ್ತಾಂತವು ನಡೆಯಿತು ಅದನ್ನೂ ಹೇಳುವೆನು ಕೇಳು! ಧರ್ಮಪುರುಷನು ವೃಷಭರೂಪವನ್ನು ಧರಿಸಿ ಒಂದೇಕಾಲಿನಿಂದ ನಡೆಯುತ್ತ ಬರುವಾಗ, ಸಮೀಪದಲ್ಲಿ ತನ್ನಂತೆಯೇ ಗೋರೂಪವನ್ನು ಧರಿಸಿದ ಭೂಮಿಯು, ಕರುವನ್ನು ಕಳೆದುಕೊಂಡ ಹಸುವಿನಂತೆ ಕಾಂತಿಗುಂದಿ ಕಣ್ಣೀರು ಬಿಡುತಿದ್ದುದನ್ನು ಕಂಡನು. ಹೀಗೆ ದುಃಖಿತೆಯಾದ ಭೂದೇವಿಯನ್ನು ಕಂಡು ಧರ್ಮಪುರುಷನು ಪ್ರಶ್ನೆಮಾಡುವನು. "ಅಮ್ಮಾ! ಏನಿದು? ನಿನ್ನ ದೇಹವು ಆರೋಗ್ಯದಲ್ಲಿರುವುದಷ್ಟೆ? ನಿನ್ನ ಮುಖವು ಬಹಳವಾಗಿ ಬಾಡಿ ಹೀಗೆ ಕಾಂತಿಗೆಟ್ಟಿರುವುದೇಕೆ? ನಿನ್ನ ಕಣ್ಣುಗಳಲ್ಲಿ ಹೀಗೆ ದುಃಖಬಾಷ್ಪವು ತುಳುಕುತ್ತಿರುವುದಕ್ಕೆ ಕಾರಣವೇನು? ನಿನ್ನ ಮನಸ್ಸಿನಲ್ಲಿ ಏನೋ ಒಂದು ಮಹಾವ್ಯಸನವು ಬಾಧಿಸುತ್ತಿರುವಂತೆ ತೋರುವುದು! ಯಾರಾದರೂ ಪ್ರಿಯಬಂಧುಗಳನ್ನಗಲಿದುದಕ್ಕಾಗಿ ಹೀಗೆ ದುಃಖಿಸುತ್ತಿರುವೆಯಾ? ನಾನು ಒಂದೇ ಕಾಲಿನಿಂದ ಹೀಗೆ ನಡೆಯುತ್ತಿರುವುದನ್ನು ನೋಡಿ ಈ ನನ್ನ ದುಃಸ್ಥಿತಿಗಾಗಿ ನೀನು ದುಃಖಿಸುತ್ತಿರುವೆಯಾ? ಅಥವಾ ಇನ್ನು ಮುಂದೆ ನೀನು ಶೂದ್ರಪ್ರಾಯರಾದ ಸಂಕರಜಾತಿಯವರ ಆಳ್ವಿಕೆಗೊಳಪಟ್ಟಿರಬೇಕಾಗುವುದೆಂದು ನಿನ್ನ ದುರವಸ್ಥೆಗಾಗಿಯೇ ನೀನು ಚಿಂತಿಸುತ್ತಿರುವೆಯಾ? ಇಲ್ಲವೇ ಇನ್ನುಮುಂದೆ ಕಲಿದೋಷದಿಂದ, ದೇವತೆಗಳಿಗೆ ಸಲ್ಲಬೇಕಾದ ಹವಿರ್ಭಾಗಗಳೆಲ್ಲವೂ ರಾಕ್ಷಸರ ಪಾಲಾಗುವುದೆಂದು ವಿಲಪಿಸುತ್ತಿರುವೆಯಾ? ಅಥವಾ ಇನ್ನು ಮುಂದೆ ಕಾಲಕಾಲಕ್ಕೆ ಮಳೆಯು ಸುರಿಯದೆ ಹೋಗು

ವುದರಿಂದ ನಿನ್ನನ್ನಾಶ್ರಯಿಸಿರುವ ಪ್ರಜೆಗಳೆಲ್ಲರೂ ಅನ್ನವಿಲ್ಲದೆ ದುರ್ಭಿಕ್ಷದ ಬಾಧೆಯಿಂದ ಸಾಯಬೇಕಾಗಿ ಬರುವುದೆಂದು ನೀನು ದುಃಖಿಸುತ್ತಿರುವೆಯಾ? ಎಲೆ ದೇವಿ! ಇನ್ನು ಮುಂದೆ ಪ್ರಜೆಗಳಿಗೆ ತಕ್ಕ ರಕ್ಷಣೆಯಿಲ್ಲದೆ, ಅಬಲೆಯರಾದಸ್ತ್ರೀಯರೂ, ಬಾಲಕರೂ, ಅನಾಥರಾಗಿ, ರಾಕ್ಷಸಪ್ರಾಯರಾದ ದುಷ್ಟಜನರಿಂದ ಬಾಧಿಸಲ್ಪಡುವರೆಂದು ವ್ಯಸನಪಡುತ್ತಿರುವೆಯೇನ? ಅಥವಾ ಬ್ರಾಹ್ಮಣರೆಲ್ಲರೂ ಮುಂದೆಮುಂದೆ ಕುತ್ಸಿತಕರ್ಮಗಳಲ್ಲಿ ಪ್ರವರ್ತಿಸುತ್ತ ಬರುವುದರಿಂದ, ವೇದಗಳಿಗೆ ದಿಕ್ಕಿಲ್ಲದೆಹೋಗುವುದೆಂದು ಚಿಂತಿಸುವೆಯಾ? ಇಲ್ಲವೇ ಮುಂದೆಮುಂದೆರಾಜರುದುರ್ಬುದ್ಧಿಯುಳ್ಳವರಾಗಿ ಬ್ರಾಹ್ಮಣಜಾತಿಯ ರಕ್ಷಣೆಯಲ್ಲಿ ಅಕ್ಕರೆಯಿಲ್ಲದೆ ಹೋಗುವುದರಿಂದ ಬ್ರಾಹ್ಮಣರು ಅನಾಥರಾಗುವರೆಂದು ದುಃಖಿಸುವೆಯಾ? ಕಲಿದೋಷದಿಂದ ಕೆಟ್ಟು ಹೋಗಿರುವ ಆ ಕ್ಷತ್ರಿಯಕುಲವನ್ನೇ ಕುರಿತು ಶೋಕಿಸುವೆಯಾ? ಇಲ್ಲವೇ ದುರಾತ್ಮರಾದ ರಾಜರು ರಾಷ್ಟ್ರಗಳಿಗೆ ಉಪದ್ರವವನ್ನುಂಟುಮಾಡುವರೆಂಬುದಕ್ಕಾಗಿ ಕೊರಗುತ್ತಿರುವೆಯಾ? ಈ ರಾಜರ ಬಾಧೆಯಿಂದ ಪ್ರಜೆಗಳಿಗೆ ಒಂದು ಕಡೆಯಲ್ಲಿಯೂ ನೆಮ್ಮದಿಯಿಲ್ಲದೆ, ಅವರವರು ದೇಶಭ್ರಷ್ಟರಾಗಿ ಹೋಗಿ, ನಿಷಿದ್ಧದೇಶಗಳಲ್ಲಿ ಸೇರಿ, ಅನ್ನಪಾನಗಳನ್ನೂ, ಬಟ್ಟೆಬರೆಗಳನ್ನೂ ಸಂಗ್ರಹಿಸುವುದರಲ್ಲಿಯೇ ಆತುರವುಳ್ಳವರಾಗಿ ವರ್ಣಾಶ್ರಮಧರ್ಮಗಳನ್ನು ಬಿಟ್ಟು, ನಿದ್ರಾಹಾರಮೈಥುನಗಳಲ್ಲಿಮಾತ್ರ ಕಾಲವನ್ನು ಕಳೆಯುವರೆಂಬುದಕ್ಕಾಗಿ ದುಃಖಿಸುವೆಯಾ? ಅಥವಾ ನಿನಗೆ ಕಂಟಕಪ್ರಾಯರಾದ ದುರಾತ್ಮರನ್ನು ಸಂಹರಿಸಿ, ನಿನ್ನ ಭಾರವನ್ನಿಳಿಸಿ, ನಿನಗೆ ಕ್ಷೇಮವನ್ನುಂಟುಮಾಡುವುದಕ್ಕಾಗಿ ಮನುಷ್ಯರೂಪದಿಂದವತರಿಸಿದ್ದ ಶ್ರೀಕೃಷ್ಣರೂಪಿಯಾದ ಭಗವಂತನು ಈಗ ನಿನ್ನನ್ನು ಬಿಟ್ಟುಹೋದುದರಿಂದ, ಇದುವರೆಗೆ ಆಮಹಾತ್ಮನು ನಡೆಸಿದ ಮೋಕ್ಷದಾಯಕಗಳಾದ ಚರಿತ್ರೆಗಳನ್ನು ನೆನೆಸಿಕೊಂಡು, ಅವನ ವಿಯೋಗವನ್ನು ಸಹಿಸಲಾರದೆ ದುಃಖಿಸುವೆಯಾ? ಅಮ್ಮ ಭೂದೇವಿ! ನೀನು ಇಷ್ಟೊಂದು ದುಃಖದಿಂದ ಕೊರಗುವುದಕ್ಕೆ ಕಾರಣವೇನು ಹೇಳು! ಅಹಾ! ಕಾಲವೆಂಬುದು ಮಹಾಬಲಾಢ್ಯರಿಗಿಂತಲೂ ಬಲಾಢ್ಯವೆನಿಸಿರುವುದು? ಸರ್ವಲೋಕಸ್ಪೃಹಣೀಯವಾಗಿ, ದೇವತೆಗಳಿಂದಲೂ ಗೌರವವಿಸಲ್ಪಡತಕ್ಕ ನಿನ್ನ ಸೌಂದರ್ಯಕ್ಕೆ ಕಾಲವಶದಿಂದಲೇ ಈ ವಿಧವಾದ ಕೊರತೆಯುಂಟಾಯಿತೇನು? ನನ್ನಲ್ಲಿ ಕೃಪೆಯಿಟ್ಟು ನಿನ್ನ ದುಃಖಕಾರಣವನ್ನು ತಿಳಿಸಬೇಕು! ಯಾವ ದುರಾತ್ಮನಿಂದ ನಿನಗೆ ಈ ವ್ಯಸನವುಂಟಾಯಿತು?" ಎಂದನು. ಹೀಗೆ ಬಹಳ ನಿರ್ಬಂಧಿಸಿ ಪ್ರಶ್ನೆ ಮಾಡುತ್ತಿರುವ ಧರ್ಮಪುರುಷನನ್ನರಿತು ಭೂದೇವಿಯು ಧರ್ಮಪುರುಷಾ! ನಿನಗೆ ತಿಳಿಯದ ಸಂಗತಿಯೇನಿರುವುದು? ನನ್ನನ್ನು ನೀನು ಹೊಸದಾಗಿ ಕೇಳಬೇಕಾದುದೇನು?

ಎಲ್ಲವನ್ನೂ ನೀನೇ ಬಲ್ಲೆ. ಮೊದಲು ನೀನು ಲೋಕಸುಖಾಸ್ಪದಗಳಾದ ಈ ನಿನ್ನ ನಾಲ್ಕು ಪಾದಗಳನ್ನೂ ನೆಲದಲ್ಲಿಟ್ಟು ನಿರಾಯಾಸವಾಗಿ ಸಂಚರಿಸುತಿದ್ದವನಲ್ಲವೇ? ಈಗ ನೀನು ಆ ಸ್ಥಿತಿಯನ್ನು ಬಿಟ್ಟು ಒಂದೇ ಕಾಲಿನಿಂದ ನಡೆಯುತ್ತಿರುವುದೇಕೆ? ಯಾವಕಾರಣದಿಂದ ನಿನಗೆ ಈ ಸ್ಥಿತಿಯುಂಟಾಯಿತೋ, ಅದೇ ನನ್ನ ದುಃಖಕ್ಕೂ ಕಾರಣವಲ್ಲದೆ ಬೇರೆಯಲ್ಲ. ಇದಕ್ಕಿಂತಲೂ ನಮಗೆ ಸಂಭವಿಸಬೇಕಾದ ಹೆಚ್ಚು ಕಷ್ಟವೇನಿರುವುದು? ಯಾವ ಕೃಷ್ಣಪರಮಾತ್ಮನಲ್ಲಿ ಸತ್ಯ, ಶುಚಿತ್ವ, ದಯೆ, ಶಾಂತಿ, ಪೂರ್ಣಕಾಮನಾದುದರಿಂದ ಆಶಾತ್ಯಾಗ, ನಿತ್ಯಸಂತೋಷ, ಕಪಟವಲ್ಲದ ಋಜುಸ್ವಭಾವ, ಮನಸ್ಸನ್ನೂ ಬಾಹ್ಯೇಂದ್ರಿಯಗಳನ್ನೂ ತಡೆಯತಕ್ಕ ಶಕ್ತಿ, ಪ್ರಪಂಚಕಾರ್ಯಾಲೋಚನೆ, ಹಸಿವು, ಬಾಯಾರಿಕೆ ಮೊದಲಾದ ಬಾಧೆಗಳಿಲ್ಲದೆ ಸರ್ವದಾ ಸಮಸ್ಥಿತಿಯಿಂದಿರುವುದು, ಸುಖದುಃಖಾದಿ ದ್ವಂದ್ವಗಳಿಗೆ ಈಡಾಗದಿರುವುದು, ವ್ಯರ್ಥಕಾರ್ಯಗಳಲ್ಲಿ ವೈಮುಖ್ಯ, ಶಾಸ್ತ್ರದತತ್ವಜ್ಞಾನ, ವಿಷಯವೈರಾಗ್ಯ, ಆಶ್ರಿತರಕ್ಷಣೋಚಿತನಾದ ತಿಳುವಳಿಕೆ, ಸರ್ವಾಧಿಪತ್ಯ, ಶೌರ್ಯ, ತೇಜಸ್ಸು, ಬಲ, ಉಪಕಾರಸ್ಮರಣೆ, ಇತರಾಪೇಕ್ಷೆಯಿಲ್ಲದ ಸ್ವಾತಂತ್ರ್ಯ, ಕಾರ್ಯನೈಪುಣ್ಯ, ಮಹಾದ್ಭುತಕಾಂತಿ, ಧೈರ್ಯ, ಮೃದುಸ್ವಭಾವ, ಪ್ರೌಢಿಮೆ, ದೊಡ್ಡವರಲ್ಲಿ ವಿನಯ, ಸುಶೀಲತೆ, ಕಷ್ಟಸಹಿಷ್ಣುತ್ವ, ಅನ್ಯಾದಿಗಳಿಂದುಂಟಾಗತಕ್ಕ ಶಕ್ತಿ, ಧಾರಣಸಾಮರ್ಥ್ಯ, ಜ್ಞಾನಾದ್ಯತಿಶಯ ಗಾಂಭೀರ್ಯಸ್ಥೈರ್ಯಗಳು, ಶಾಸ್ತ್ರಾರ್ಥಗಳಲ್ಲಿ ನಂಬಿಕೆ, ಯಶಸ್ಸು, ಪೂಜಾರ್ಹತೆ, ಅಹಂಕಾರಮಮಕಾರಗಳಿಲ್ಲದಿರುವಿಕೆ, ಇವೇ ಮೊದಲಾಗಿ ಮಹತ್ತ್ವಕಾರಣಗಳಾದ ಇನ್ನೂ ಅನೇಕಮಹಾಗುಣಗಳು ಯಾವನಲ್ಲಿ ಕ್ಷಣಮಾತ್ರವೂ ಅಗಲದೆ ನಿತ್ಯವಾಗಿ ನೆಲೆಗೊಂಡಿದ್ದುವೋ, ಲಕ್ಷ್ಮೀನಿವಾಸನಾದ ಆ ಶ್ರೀಕೃಷ್ಣಮೂರ್ತಿಯು, ಈಗ ನನ್ನನ್ನು ಬಿಟ್ಟು ಅಗಲಿಹೋದನು. ಇದೇ ಸಮಯವನ್ನು ನಿರೀಕ್ಷಿಸುತಿದ್ದ ಕಲಿಯೂ ಈ ಲೋಕದಲ್ಲಿ ಕಾಲಿಟ್ಟನು, ಲೋಕವೆಲ್ಲವೂ ಆ ಕಲಿಯಿಂದ ಪ್ರೇರಿತವಾಗಿ ಕೇವಲಪಾಪಪ್ರಚುರವಾಗಿರುವುದು. ಈ ಸ್ಥಿತಿಯನ್ನು ನೋಡಿ ನಾನು ಹೇಗೆ ತಾನೇ ಸಹಿಸಲಿ! ಮುಖ್ಯವಾಗಿ ಆ ಶ್ರೀಕೃಷ್ಣವಿಯೋಗವೇ ನನ್ನದುಃಖಕ್ಕೆ ಮೂಲಕಾರಣವು. ಈ ಅನರ್ಥಗಳೆಲ್ಲಕ್ಕೂ ಅದೇಮೂಲವು! ಎಲೈ ಭದ್ರನೆ! ನನ್ನೊಬ್ಬಳಿಗಾಗಿ ಮಾತ್ರ ನಾನು ದುಃಖಿಸುವೆನೆಂದೆಣಿಸಬೇಡ! ಮುಂದೆಮುಂದೆ ಕಲಿದೋಷದಿಂದ ನನಗಾಗಲಿ, ನಿನಗಾಗಲಿ, ದೇವತೆಗಳಿಗಾಗಲಿ, ಪಿತೃಗಳಿಗಾಗಲಿ, ಮಹರ್ಷಿಗಳಿಗಾಗಲಿ, ಇತರ ಸಾಧುಜನರಿಗಾಗಲಿ. ವರ್ಣಾಶ್ರಮಧರ್ಮನಿರತರಿಗಾಗಲಿ, ಯಾರಿಗೂ ಕಷ್ಟವು ತಪ್ಪಿದುದಲ್ಲ! ಈ ನಮ್ಮೆಲ್ಲರ ಸ್ಥಿತಿಗಾಗಿಯೇ ನಾನು ಬಹಳವಾಗಿ ಕೊರಗುತ್ತಿರುವೆನು! ಎಲೈ ಮಹಾತ್ಮನೆ!

ಹೆಚ್ಚಾಗಿ ಹೇಳಿದುದರಿಂದೇನು? ಬ್ರಹ್ಮಾದಿದೇವತೆಗಳೂ ಕೂಡ, ಯಾವಮಹಾ ಪುರುಷನ ಕೃಪಾಕಟಾಕ್ಷಕ್ಕೆ ಪಾತ್ರರಾಗುವುದಕ್ಕಾಗಿ ದೀರ್ಘತಪಸ್ಸನ್ನು ನಡೆಸಿರುವರೋ, ಶ್ರೀಮಹಾಲಕ್ಷ್ಮಿಯು ತನಗೆ ವಾಸಸ್ಥಳವಾದ ಕಮಲವನದಲ್ಲಿಯೂ ಆಸೆಯನ್ನು ಬಿಟ್ಟು ಯಾವ ಭಗವಂತನ ಪಾದಕಮಲಗಳನ್ನು ಪರಮಾನುರಾಗದಿಂದ ಹಿಡಿದು ಸೇವಿಸುತ್ತಿರುವಳೋ ಅಂತಹ ಕೃಷ್ಣನು, ಧ್ವಜಕಮಲವಜ್ರಾಂಕುಶಾದಿ ಶುಭರೇಖೆಗಳಿಂದ ಕೂಡಿದ ತನ್ನ ಪಾದಗಳನ್ನೊತ್ತಿ ನನ್ನನ್ನಲಂಕರಿಸುತಿದ್ದನು. ಇದುವರೆಗೆ ಆ ಮಹಾಭಾಗ್ಯವು ನನಗಿದ್ದುದರಿಂದ ಮೂರುಲೋಕಕ್ಕೂ ನಾನೇ ಮೇಲೆಂಬ ಹೆಮ್ಮೆಯಿಂದಿದ್ದೆನು. ಆ ಭಗವಂತನು ಈಗ ನನ್ನನ್ನಗಲಿ ಹೋದುದರಿಂದ ಆ ನನ್ನ ಹೆಮ್ಮೆಯೆಲ್ಲವೂ ಅಡಗಿಹೋಯಿತು. ಎಲೆ ಮಹಾತ್ಮಾ! ಯಾವನು ಯದುವಂಶದಲ್ಲಿ ಹುಟ್ಟಿ, ದುಷ್ಟಕ್ಷತ್ರಿಯರನ್ನಡಗಿಸಿ, ನನ್ನ ಭಾರವನ್ನಿಳಿಸಿದನೋ, ಯಾವನು ಎರಡೇಕಾಲುಗಳಲ್ಲಿ ನಿಂತಿದ್ದ ನಿನ್ನನ್ನು ಇದುವರೆಗೆ ನಾಲ್ಕುಕಾಲುಗಳಿಂದ ನಡೆಸುತಿದ್ದನೋ. ಅಂತಹ ಮಹಾನುಭಾವನಾದ ಶ್ರೀಕೃಷ್ಣನು, ಈಗ ನಮ್ಮನ್ನಗಲಿ ಹೋದುದಕ್ಕಾಗಿಯೇ ನಾನು ಬಹಳವಾಗಿ ವಿಲಪಿಸುತ್ತಿರುವೆನು. ಓ ಧರ್ಮಪುರುಷಾ! (ಆ ವಿಧವಾದ ಪ್ರೇಮವೂ, ಆ ದಯಾರಸವೂ ಆ ಮಂದಹಾಸವೂ, ಆ ಮನೋಹರಗಮನವೂ, ಆ ಮೃದುವಾದವಾಕ್ಯವೂ, ಶ್ರೀಕೃಷ್ಣಮೂರ್ತಿಗೊಬ್ಬನಿಗೆ ಹೊರತು ಬೇರೊಬ್ಬರಿಗುಂಟೆ? ಅಂತಹ ಶ್ರೀಕೃಷ್ಣನ ವಿಯೋಗವನ್ನು ಜಿತೇಂದ್ರಿಯರಾದ ಯೋಗಿಗಳೇ ಸಹಿಸಲಾರರು! ಇನ್ನು ನಮ್ಮಂತವರ ಪಾಡೇನು?) ಪುರುಷೋತ್ತಮನಾದ ಯಾವನ ಪ್ರೇಮಪೂರ್ವಕವಾದ ನೋಟವೂ, ಸುಂದರವಾದ ಮಂದಹಾಸವೂ, ಇಂಪಾದ ನುಡಿಗಳೂ, ಯಾದವಸ್ತ್ರೀಯರ ಮನೋಧೈರ್ಯವನ್ನು ಕದಲಿಸಿತೋ ಅಂತಹ ಕೃಷ್ಣನ ವಿರಹವನ್ನು ಯಾರು ತಾನೇ ಸಹಿಸಬಲ್ಲರು? ಮತ್ತು ಆ ಶ್ರೀಕೃಷ್ಣನು ನನ್ನಮೇಲೆ ಕಾಲೂರಿ ನಡೆಯುತಿದ್ದವರೆಗೂ ನಾನು ಅವನ ಪಾದಸ್ಪರ್ಶದಿಂದ ರೋಮಾಂಚಿತೆಯಾದಂತೆ ಸಮಸ್ತಸಸ್ಯಸಮೃದ್ಧಿಯಿಂದ ಶೋಭಿಸುತಿದ್ದೆನು. ಇನ್ನು ನನಗೆ ಆ ಭಾಗ್ಯವೆಲ್ಲಿ?" ಎಂದಳು. ಹೀಗೆ ಪ್ರಭಾಸತೀರ್ಥದಲ್ಲಿ ಭೂದೇವಿಯೂ, ಧರ್ಮಪುರುಷನೂ ಸಂಭಾಷಿಸುತಿದ್ದ ಕಾಲದಲ್ಲಿಯೇ ರಾಜರ್ಷಿಯಾದ ಪರೀಕ್ಷಿನ್ಮಹಾರಾಜನು ಆ ಸ್ಥಳದ ಸಮೀಪಕ್ಕೆ ಅಕಸ್ಮಾತ್ತಾಗಿ ಬಂದು ಸೇರಿದನು. ಇದು ಹದಿನಾರನೆಯ ಅಧ್ಯಾಯವು.

---

## ಕಲಿಪುರುಷನು ಧರ್ಮದೇವತೆಯನ್ನು ಕಾಲಿಂದೊದೆದುದು

ಪರೀಕ್ಷಿದ್ರಾಜನು ಅಲ್ಲಿಗೆ ಬಂದು ಸೇರುವ ಸಮಯಕ್ಕೆ ಸರಿಯಾಗಿ, ಅಲ್ಲಿ ರಾಜಚಿಹ್ನವುಳ್ಳ ಶೂದ್ರನೊಬ್ಬನು ಕೈಯಲ್ಲಿ ದಂಡಧಾರಿಯಾಗಿ ನಿಂತಿರುವುದನ್ನೂ, ಎರಡು ಗೋವುಗಳು ಅವನ ಪ್ರಹಾರಕ್ಕೆ ಸಿಕ್ಕಿ, ದಿಕ್ಕಿಲ್ಲದೆ ಗೋಳಿಡುತ್ತಿರುವುದನ್ನೂ ಕಂಡನು. ತಾವರೆಯ ದಂಟಿನಂತೆ ಶುಭ್ರವಾದ ದೇಹಕಾಂತಿಯುಳ್ಳ ವೃಷಭವು, ಆ ಶೂದ್ರನ ಪ್ರಹಾರದಿಂದ ಬಹಳವಾಗಿ ನೊಂದು, ಒಂದೇ ಕಾಲಿನಲ್ಲಿ ನಿಂತು ಮೂತ್ರಸ್ರಾವವಾಗುವಂತೆ ಭಯದಿಂದ ನಡುಗುತಿದ್ದಿತು. ಕರುವಿಲ್ಲದೆ ಏಕಾಕಿಯಾಗಿದ್ದ ಆ ಧೇನುವನ್ನೂ ಕೂಡ, ಆ ಶೂದ್ರನು ತನ್ನ ಎಡಗಾಲಿನಿಂದ ಬಾರಿಬಾರಿಗೂ ಒದೆಯುತ್ತಿರಲು, ಅದು ದೈನ್ಯದಿಂದ ಕಣ್ಣೀರು ಬಿಡುತ್ತ, ಹಸಿವಿನಿಂದಲೂ ಬಹಳ ಬಳಲಿ ಕೃಶವಾಗಿ ಕೂಗಿಡುತಿತ್ತು. ಇದನ್ನು ನೋಡಿ ಪರೀಕ್ಷಿದ್ರಾಜನು ಸುವರ್ಣಾಲಂಕೃತವಾದ ರಥದಲ್ಲಿ ಕುಳಿತಿದ್ದ ಹಾಗೆಯೇ ಮುಂದೆ ಬಂದು, ತನ್ನ ಧನುಸ್ಸಿಗೆ ನಾಣೇರಿಸಿ ಸಿದ್ಧವಾಗಿ ಹಿಡಿದು, ಮೇಘದಂತೆ ಗಂಭೀರಧ್ವನಿಯಿಂದ ಹೀಗೆಂದು ಹೇಳುವನು! ಎಸೆಲೊ ದುರಾತ್ಮಾ! ಕ್ರೂರಾ! ಯಾರು ನೀನು? ಈ ಸಮಸ್ತಲೋಕವೂ ನನ್ನ ರಕ್ಷಣೆಗೊಳಪಟ್ಟಿರುವುದನ್ನು ಕಾಣೆಯಾ? ದೇಹಬಲವಿರುವುದೆಂಬ ಕೊಬ್ಬಿನಿಂದ ದುರ್ಬಲಪ್ರಾಣಿಗಳನ್ನು ಬಲಾತ್ಕಾರದಿಂದ ಹಿಂಸಿಸುವೆಯಾ? ವೇಷದಲ್ಲಿಮಾತ್ರ ರಾಜನಂತೆ ಕಾಣುತ್ತಿರುವೆ? ಈ ನಿನ್ನ ಕೃತ್ಯವನ್ನು ನೋಡಿದರೆ ಶೂದ್ರಜಾತಿಯವನೆಂದೆಣಿಸಬೇಕಾಗಿದೆ. ಎಲೆಲ ದುರಾತ್ಮಾ! ಆ ಶ್ರೀಕೃಷ್ಣನು ಅರ್ಜುನಸಮೇತನಾಗಿ ಈ ಭೂಮಿಯನ್ನು ಬಿಟ್ಟು ಹೋದುದರಿಂದ, ನೀನು ಮದೋನ್ಮತ್ತನಾಗಿ, ನಿರಪರಾಧಿಗಳಾದ ಈ ಸಾಧುಜಂತುಗಳನ್ನು ಪೀಡಿಸಲಾರಂಭಿಸಿದೆಯಾ? ನಿಷ್ಕಾರಣವಾಗಿ ಹೀಗೆ ಸಾಧುಪ್ರಾಣಿಗಳನ್ನು ಪೀಡಿಸಿದ ನಿನಗೆ ನನ್ನ ಕೈಯಿಂದ ತುಳಣದಂಡನವಲ್ಲದೆ ಬೇರೇಪ್ರಾಯಶ್ಚಿತ್ತವಿಲ್ಲ!" ಎಂದು ಹೇಳಿ, ಆಮೇಲೆ ಆ ವೃಷಭವನ್ನು ನೋಡಿ "ಎಲೈ ವೃಷಭರಾಜನೆ? ತಾವರೆದಂಟಿನಂತೆ ಶುಭ್ರದೇಹವುಳ್ಳ ನೀನುಯಾರು? ನಿನ್ನ ನಾಲ್ಕುಕಾಲುಗಳಲ್ಲಿ ಒಂದೇ ಕಾಲನ್ನು ನೆಲದ ಮೇಲೂರಿ ನಿಂತಿರುವುದಕ್ಕೆ ಕಾರಣವೇನು! ನೀನು ಈ ವೃಷಭರೂಪದಿಂದ ಚರಿಸುವ ಯಾವನೋ ಒಬ್ಬ ದೇವಾಂಶಪುರುಷನೆಂದೇ ನನಗೆ ತೋರುವುದು. ಈ ನಿನ್ನ ದುರ್ದಶೆಯನ್ನು ನೋಡಿ ನನಗೆ ಬಹಳ ವ್ಯಸನವುಂಟಾಗುತ್ತಿರುವುದು. ಕುರುವಂಶಜರಾದ ನಮ್ಮಿಂದ ಈ ಭೂಮಿಯು ರಕ್ಷಿಸಲ್ಪಡುತ್ತಿರುವಾಗ, ಇದುವರೆಗೆ ಒಂದು ಪ್ರಾಣಿಯಾದರೂ ಇತರರ ಬಾಧೆಯಿಂದ ಕಣ್ಣೀರು ಬಿಟ್ಟುದಿಲ್ಲ. ಇಂತಹ

ಸ್ಥಿತಿಯಲ್ಲಿಯೂ ನಿನ್ನ ಕಣ್ಣುಗಳಲ್ಲಿ ದುಃಖಬಾಷ್ಪವು ಬೀಳುವುದುಂಟೆ? ಎಲೈ ವೃಷಭವೆ! ಈಗಲೂ ಚಿಂತೆಯಿಲ್ಲ! ನೀನು ಎಷ್ಟುಮಾತ್ರವೂ ಭಯಪಡಬೇಕಾದುದಿಲ್ಲ! ಇದೋ! ಈಗಲೇ ನಾನು ದುರಾತ್ಮನಾದ ಈ ಶೂದ್ರನನ್ನು ನನ್ನ ತೀಕ್ಷ್ಣಬಾಣಗಳಿಂದ ಭೇದಿಸಿ, ಇನ್ನುಮೇಲೆ ನಿನ್ನನ್ನು ಈ ಭೂಮಿಯಲ್ಲಿ ನಾಲ್ಕುಕಾಲುಗಳಿಂದಲೇ ನಡೆಯುವಂತೆ ಮಾಡುವೆನು ನೋಡು! ದುಷ್ಟರನ್ನಡಗಿಸುವುದಕ್ಕಾಗಿಯೇ ಕಂಕಣವನ್ನು ಕಟ್ಟಿ ನಿಂತಿರುವ ನಾನಿರುವಾಗ ನೀನು ಕಣ್ಣೀರುಬಿಟ್ಟು ದುಃಖಿಸುವುದೇಕೆ? ಯಾವ ರಾಜನು ತನ್ನ ರಾಜ್ಯದಲ್ಲಿ ಪ್ರಜೆಗಳು ದುಷ್ಟರಿಂದ ಬಾಧಿಸಲ್ಪಡುವುದನ್ನು ತಿಳಿಯದೆ ಮದೋನ್ಮತ್ತನಾಗಿ ಸುಮ್ಮನಿರುವನೋ, ಆ ರಾಜನ ಆಯುಸ್ಸು, ಕೀರ್ತಿ, ರಾಜ್ಯಲಕ್ಷ್ಮಿ, ಇವೆಲ್ಲವೂ ಕ್ಷಣಕ್ಷಣಕ್ಕೂ ಕ್ಷೀಣಿಸಿ ಹೋಗುವುವು. ಸಜ್ಜನರಿಗೆ ದುರ್ಜನರಿಂದುಂಟಾಗುವ ಬಾಧೆಯನ್ನು ತಪ್ಪಿಸುವುದೇ ನಮ್ಮಂತಹ ರಾಜರಿಗೆ ಮುಖ್ಯವಾದ ಧರ್ಮವು. ಆ ಕಾರ್ಯವನ್ನು ನಡೆಸದಿದ್ದ ಮೇಲೆ ನಮ್ಮ ಜನ್ಮವೇಕೆ? ಆದುದರಿಂದ ಎಲೆ ದೇವಿ! ಈ ದುರಾತ್ಮನನ್ನು ಈಗಲೇ ನಾನು ನಿಗ್ರಹಿಸಿ, ನನ್ನ ಕ್ಷತ್ರಿಯಜನ್ಮವನ್ನು ಸಾರ್ಥಕಪಡಿಸುವೆನು. "ಎಲೈ ವೃಷಭೇಂದ್ರನೆ! ಯಾವ ದುರಾತ್ಮನು ಈ ನಿನ್ನ ಮೂರುಪಾದಗಳನ್ನು ಕಟ್ಟಿರುವನೋ ಅದನ್ನು ಮೊದಲು ನನಗೆ ಹೇಳು! ಆಹಾ! ವಿಷ್ಣುಭಕ್ತರಾದ ನಮ್ಮಂತಹ ರಾಜರ ಆಳ್ವಿಕೆಯಲ್ಲಿ, ನಿಮ್ಮಂತಹ ಸಾಧುಗಳು ಹೀಗೆ ದುಃಖಿಸುವುದೆಂದರೇನು! ಇನ್ನು ನಿನಗೆ ಶುಭವಾಗಲಿ! ನಿನಗೆ ಈ ಕಷ್ಟವನ್ನುಂಟುಮಾಡಿದವನು ಪಾಂಡವರ ಕೀರ್ತಿಯನ್ನೇ ಕೆಡಿಸುವುದಕ್ಕಾಗಿ ಪ್ರಯತ್ನಿಸಿರುವನೆಂದು ಹೇಳಬೇಕಲ್ಲದೆ ಬೇರೆಯಲ್ಲ. ಆ ದುರಾತ್ಮನಾರೆಂಬುದನ್ನು ನೀನು ತಿಳಿಸಿದರೆ, ಈಗಲೇ ನಾನು ಅವನನ್ನುಕೊಂದು ಬರುವೆನು. ನಿರಪರಾಧಿಗಳನ್ನು ಬಾಧಿಸುವವನಿಗೆ ನನ್ನಿಂದ ಭಯವು ತಪ್ಪದು. ಅಂತವನು ದೇವೇಂದ್ರನಾಗಿದ್ದರೂ ನಾನು ಅತನ ಭುಜಗಳನ್ನು ತೋಳ್ಬಳೆಗಳೊಡನೆಯೇ ಕತ್ತರಿಸದೆ ಬಿಡುವವನಲ್ಲ! ಈ ವಿಧದಿಂದ ಧರ್ಮಸ್ಥಾಪನವನ್ನು ಮಾಡುವುದೇ ನಮ್ಮಂತಹ ರಾಜರಿಗೆ ಕುಲಧರ್ಮವು. ದುಷ್ಟರನ್ನು ನಿಗ್ರಹಿಸುವುದು, ದುಃಖಿತರನ್ನು ಕಾಪಾಡುವುದು, ಇವೆರಡೇ ನಮ್ಮಂತಹ ರಾಜರಿಗೆ ಮುಖ್ಯಕರ್ತವ್ಯಗಳು!" ಎಂದನು. ಅದಕ್ಕಾ ವೃಷಭರಾಜನು ಪರೀಕ್ಷಿತ್ತನ್ನು ನೋಡಿ "ಎಲೈ ಮಹಾರಾಜನೆ! ಪಾಂಡವಕುಲದಲ್ಲಿ ಹುಟ್ಟಿದ ನಿಮ್ಮಂತವರಿಗೆ ಹೀಗೆ ದುಃಖಿತರನ್ನು ನೋಡಿ ಅಭಯಪ್ರದಾನವನ್ನು ಮಾಡುವುದು ಸಹಜವಾಗಿಯೇ ಇರುವುದು! ಈ ಗುಣಗಳನ್ನು ನೋಡಿಯೇ ಅಲ್ಲವೇ ಭಗವಂತನಾದ ಶ್ರೀಕೃಷ್ಣನೂ ಕೂಡ

ಅವರಿಗೆ ದೂತನಾಗಿ ನಿಂತು ಕಾರ್ಯವನ್ನು ನಡೆಸುತಿದ್ದನು! ಎಲೈ ರಾಜೇಂದ್ರನೆ! ಈಗ ನೀನು ಈ ನನ್ನ ಕಷ್ಟಕ್ಕೆ ಕಾರಣವೇನೆಂದು ಕೇಳಿದೆಯಲ್ಲವೆ? ಲೋಕದಲ್ಲಿ ಪ್ರಾಣಿಗಳ ವಿಪತ್ತಿಗೆ ಒಬ್ಬೊಬ್ಬರು ಒಂದೊಂದು ವಿಧವಾದ ಕಾರಣಗಳನ್ನು ಹೇಳುತ್ತಿರುವರು. ಈ ವಾಕ್ಯಭೇದಗಳಿಂದ ನಮಗೆ ಇದೇ ದುಃಖಕಾರಣವೆಂದು ನಿಶ್ಚಯವಾಗಿ ತಿಳಿಯುವುದು ಸಾಧ್ಯವಲ್ಲ. ಆದುದರಿಂದ ನಮಗೆ ಯಾವನಿಂದ ಈ ದುಃಖವು ಪ್ರಾಪ್ತವಾಯಿತೋ ಆ ಪುರುಷನನ್ನು ನಾವು ಕಾಣಲಾರೆವು. ಕೆಲವರು ನಾನಾವಿಧ ವಿಕಲ್ಪಗಳಿಂದ ದುಃಖಕಾರಣವೇನೆಂಬುದನ್ನೂಹಿಸಿ, ತನ್ನ ದುಃಖಕ್ಕೆ ಸ್ವಾತ್ಮವೇ ಕಾರಣವೆಂದು ಹೇಳುವರು. ಬೇರೆ ಕೆಲವರು ಅದೃಷ್ಟವು ಕಾರಣವೆನ್ನುವರು. ಮತ್ತೆ ಕೆಲವರು ಪೂರ್ವಕರ್ಮಗಳೇ ದುಃಖಕಾರಣವೆನ್ನುವರು. ಇನ್ನು ಕೆಲವರು ಪ್ರಕೃತಿಪರಿಣಾಮರೂಪವಾದ ಸ್ವಭಾವವೇ ಕಾರಣವೆಂದೂ, ಮತ್ತೂ ಕೆಲವರು ಈಶ್ವರನೇ ಕಾರಣವೆಂದೂ ಹೇಳುವರು. ಇನ್ನು ಬೇರೆ ಕೆಲವರು, ಊಹಿಸುವುದಕ್ಕಾಗಲಿ, ಬಾಯಿಂದ ಹೇಳುವುದಕ್ಕಾಗಲಿ ಸಾಧ್ಯವಲ್ಲದ ಒಂದಾನೊಂದು ಕಾರಣದಿಂದ ಈ ದುಃಖಗಳುಂಟಾಗುವುವೆಂದು ಹೇಳುವರು. ಇವುಗಳಲ್ಲಿ ಯಾವುದು ನಿಶ್ಚಯವೆಂಬುದನ್ನು ನಾವು ನಿರ್ಧರಿಸಿ ತಿಳಿಯಲಾರೆವು. ಅವರವರ ನಂಬಿಕೆಯಿದ್ದಂತೆಯೇ ನಿಶ್ಚಯಿಸಿಕೊಳ್ಳಬೇಕಾಗಿದೆ. ಆದುದರಿಂದ ಎಲೈ ರಾಜನೆ! ಈಗ ನಮಗೆ ಸಂಭವಿಸಿರುವ ಈ ಕಷ್ಟಕ್ಕೆ ಕಾರಣವೇನೆಂಬುದನ್ನು ನೀನೇ ನಿನ್ನ ಬುದ್ಧಿಯಿಂದಾಲೋಚಿಸಿ ತಿಳಿದುಕೊಂಡು, ತಕ್ಕ ಪ್ರತಿಕ್ರಿಯೆಯನ್ನು ಮಾಡು'' ಎಂದನು. ಈ ಮಾತನ್ನು ಕೇಳಿ ಪರೀಕ್ಷಿದ್ರಾಜನು, ಆ ವಾಕ್ಯದ ಅಭಿಪ್ರಾಯವೇನೆಂಬುದನ್ನು ತನ್ನಲ್ಲಿ ತಾನು ನಿಶ್ಚಲವಾದ ಬುದ್ಧಿಯಿಂದ ಸ್ವಲ್ಪ ಹೊತ್ತಿನವರೆಗೆ ಆಲೋಚಿಸಿ, ಅದರ ಅಭಿಪ್ರಾಯವನ್ನು ತಿಳಿದುಕೊಂಡು, ತನಗಿದ್ದ ಮನೋವ್ಯಥೆಯನ್ನು ಬಿಟ್ಟು, ಸಂತೋಷಯುಕ್ತನಾಗಿ ತಿರುಗಿ ಆ ವೃಷಭವನ್ನು ಕುರಿತು ಹೇಳುವನು. ''ಎಲೈ ವೃಷಭರಾಜನೆ! ನೀನು ಸಮಸ್ತಧರ್ಮಗಳನ್ನೂ ಬಲ್ಲವನು. ಈ ನಿನ್ನ ಮಾತುಗಳನ್ನು ನೋಡಿದರೆ ವೃಷಭರೂಪದಿಂದಿರುವ ಧರ್ಮಪುರುಷನೇ ನೀನೆಂದು ನಿಶ್ಚಿತವಾಗುವುದು. ನೀನು ಧರ್ಮಪುರುಷನಾದುದರಿಂದಲೇ ಇಂತಹ ಆಪತ್ತಿನಲ್ಲಿಯೂ ದುಃಖಕಾರಣರಾರೆಂಬುದನ್ನು ತಿಳಿಸದೆ ಮರೆಸಿಟ್ಟಿರುವೆ! ಓ ಮಹಾತ್ಮಾ! ನಿನ್ನ ಅಭಿಪ್ರಾಯವೇನೆಂಬುದು ನನಗೆ ಚೆನ್ನಾಗಿ ತಿಳಿಯಿತು. "ಮಾಡಿದವರ ಪಾಪವು ಆಡಿದವರ ಬಾಯಲ್ಲಿ'' ಎಂಬ ನಾಣ್ಣುಡಿಯಂತೆ, ಅಧರ್ಮವನ್ನು ನಡೆಸಿದವನು ಸಮೀಪದಲ್ಲಿದ್ದರೂ, ಅವನನ್ನು ನಿರ್ದೇಶಿಸಿ, ಅವನ ಪಾಪಕಾರ್ಯವನ್ನು ಬಾಯಿಂದ ನಿರೂಪಿಸಿ ಹೇಳಿದ ಪಕ್ಷದಲ್ಲಿ, ಧರ್ಮಶೀಲರಿಗೂ

ಕೂಡ ಆ ಪಾಪವುಬಂದು ತಗುಲುವುದು. ಈ ಧರ್ಮಸೂಕ್ಷ್ಮವನ್ನು ನೀನು ಬಲ್ಲವನಾದುದರಿಂದಲೇ ಅದರ ಕಾರಣವನ್ನು ತಿಳಿದರೂ ಬಾಯಿಂದ ಹೇಳದೆ ಮರೆಸಿಟ್ಟಿರುವೆ. ಇದಲ್ಲದೆ ಪ್ರಾಣಿಗಳಿಗೆ ಭಗವತ್ಸಂಕಲ್ಪವು ಹೇಗೆಂಬುದನ್ನು ಮನಸ್ಸಿನಿಂದಾಗಲಿ, ಮಾತಿನಿಂದಾಗಲಿ ನಿರ್ಧರಿಸುವುದಕ್ಕೆ ಸಾಧ್ಯವಲ್ಲ! ಆದುದರಿಂದ ನಿನ್ನ ಮಾತುಗಳನ್ನು ನೋಡಿದರೆ ಮತ್ತೊಬ್ಬನನ್ನು ಕುರಿತು, ಈತನೇ ಅಧರ್ಮಕಾರಿಯೆಂದು ನಿರೂಪಿಸಿ ಹೇಳುವುದೇ ಅಧರ್ಮವೆಂದೂ ವ್ಯಕ್ತವಾಗುವುದು. ವೃಷಭರೂಪದಿಂದಿರುವ ಧರ್ಮಪುರುಷನೇ ನೀನೆಂಬುವರಲ್ಲಿ ಏನೇನೂ ಸಂದೇಹವಿಲ್ಲ. ನಿನಗೆ ತಪಸ್ಸು, ಶೌಚ, ದಯೆ, ಸತ್ಯ, ಎಂಬಿವು ನಾಲ್ಕೂ ನಾಲ್ಕು ಪಾದಗಳಾಗಿರುವುವು. ಇವುಗಳಲ್ಲಿ ಮೊದಲನೆಯ ಮೂರುಪಾದಗಳೂ ಕ್ರಮವಾಗಿ ಈಗಿನ ಕಾಲದೋಷದಿಂದ ಶಕ್ತಿಗುಂದಿರುವುವು. ಹೆಮ್ಮೆಯಿಂದ ತಪಸ್ಸೂ, ದುಸ್ಸಂಗದಿಂದ ಶುಚಿತ್ವವೂ, ಮದದಿಂದ ದಯೆಯೂ ಕ್ರಮಕ್ರಮವಾಗಿ ಕುಂದುತ್ತ ಬರುವುದು ಸಹಜವು. ಅಧರ್ಮಾಂಗಗಳಾದ ಈ ಮೂರುದೋಷಗಳಿಂದ ಸತ್ಯಾದಿರೂಪಗಳಾದ ನಿನ್ನ ಮೂರುಪಾದಗಳಿಗೂ ಭಂಗವುಂಟಾಗಿರುವುದು ಎಲೈ ಧರ್ಮಪುರುಷನೆ! ಈಗ ನೀನು ಸತ್ಯವೆಂಬ ಒಂದೇ ಕಾಲಿನಿಂದ ನಿಂತಿರುವೆ! ಅಧರ್ಮಸ್ವರೂಪನಾದ ಕಲಿಪುರುಷನು ಲೋಕದಲ್ಲಿ ಅನೃತವನ್ನು ಪೆಚ್ಚಿಸಿ, ಈ ನಿನ್ನ ಒಂದು ಪಾದವನ್ನೂ ಮುರಿದುಬಿಡಬೇಕೆಂದು ಪ್ರಯತ್ನಿಸುತ್ತಿರುವನು. ಗೋರೂಪವನ್ನು ಧರಿಸಿರುವ ಈ ಭೂದೇವಿಯೂ ಕೂಡ, ಇದುವರೆಗೆ ಭೂಭಾರೋತ್ತಾರಣಾರ್ಥವಾಗಿ ಅವತರಿಸಿದ್ದ ದಯಾಳುವಾದ ಆ ಭಗವಂತನ ಶುಭಲಕ್ಷಣವಿಶಿಷ್ಟಗಳಾದ ಪಾದಗಳ ಸಂಬಂಧದಿಂದ ಸಂತೋಷಗೊಂಡಿದ್ದಳು. ಆ ಶ್ರೀಕೃಷ್ಣನೂ ಈಗ ತನ್ನನ್ನು ಬಿಟ್ಟು ಹೋದುದರಿಂದ ಪರಮಸಾಧ್ವೀಮಣಿಯಾದ ಈಕೆಯು, ಭಾಗ್ಯಹೀನೆಯಾಗಿ ದಿಕ್ಕಿಲ್ಲದವಳಂತೆ ದುಃಖದಿಂದ ಕಣ್ಣೀರು ಬಿಟ್ಟು ವಿಲಪಿಸುತ್ತಿರುವಳು. ಇನ್ನು ಮೇಲೆ ತಾನು ಬ್ರಾಹ್ಮಣಕುಲಕ್ಕೆ ವಿರೋಧಿಗಳಾಗಿ, ವ್ಯಾಜಮಾತ್ರಕ್ಕೆ ರಾಜರೆನಿಸಿಕೊಂಡ ಶೂದ್ರರ ಕೈಯಲ್ಲಿ ಸಿಕ್ಕಿಬಿದ್ದು, ಅವರಿಗೆ ಭೋಗ್ಯಳಾಗಿರಬೇಕಾದ ಸಂಭವವುಂಟಾಗುವುದೆಂದು ಈಕೆಯು ಬಹಳವಾಗಿ ಕೊರಗುವಂತಿದೆ!" ಎಂದನು. ಹೀಗೆ ಪರೀಕ್ಷಿದ್ರಾಜನು ಧರ್ಮಪುರುಷನನ್ನೂ, ಭೂದೇವಿಯನ್ನೂ ಸಾಂತ್ವವಾಕ್ಯಗಳಿಂದ ಸಮಾಧಾನಪಡಿಸಿ, ಇವರ ಕಷ್ಟಕ್ಕೆ ಕಾರಣನಾದ ಕಲಿಪುರುಷನನ್ನು ಆಕ್ಷಣವೇ ಕೊಂದುಬಿಡಬೇಕೆಂದೂ ನಿಶ್ಚಯಿಸಿ, ತನ್ನ ತೀಕ್ಷ್ಣವಾದ ಖಡ್ಗವನ್ನು ಒರೆಯಿಂದ ಕಿತ್ತುಕೊಂಡನು. ಆಗ ಕಲಿಪುರುಷನು ತನ್ನನ್ನು

ಕೊಲ್ಲುವುದಕ್ಕಾಗಿ ಕತ್ತಿಯನ್ನೆಳೆದು ನಿಂತಿರುವ ಪರೀಕ್ಷಿದ್ರಾಜನನ್ನು ನೋಡಿ ಭಯದಿಂದ ನಡುಗುತ್ತ, ತಾನು ಧರಿಸಿದ್ದ ರಾಜವೇಷವನ್ನು ಆ ಕ್ಷಣವೇ ತೆಗೆದು ಬಿಸುಟು, ಆ ರಾಜನ ಪಾದಗಳಲ್ಲಿ ಬಿದ್ದು ನಮಸ್ಕರಿಸಿ ಶರಣಾಗತಿಯನ್ನು ಮಾಡಿದನು. ಆಗ ದೀನವತ್ಸಲನಾದ ಪರೀಕ್ಷಿದ್ರಾಜನು, ಕಾಲಿನಮೇಲೆ ಬಿದ್ದು ಶರಣಾಗತನಾಗಿ ರಕ್ಷಣೆಯನ್ನು ಬೇಡುತ್ತಿರುವ ಕಲಿಪುರುಷನನ್ನು ನೋಡಿ, ಅವನಲ್ಲಿ ಕರುಣೆಗೊಂಡು, ಅವನನ್ನು ಕೊಲ್ಲುವುದಕ್ಕಿಷ್ಟವಿಲ್ಲದೆ, ಮಂದಹಾಸಪೂರ್ವಕವಾಗಿ ಹೇಳುವನು. “ಎಲೈ! ಇನ್ನು ನೀನು ಭಯಪಡಬೇಡ! ನನ್ನ ಪಿತಾಮಹನಾದ ಅರ್ಜುನನ ಕೀರ್ತಿಯನ್ನು ಮುಂದಕ್ಕೆ ತರಬೇಕೆಂಬುದೇ ಆ ವಂಶಜರಾದ ನಮ್ಮ ಮುಖ್ಯಕೃತ್ಯವಾದುದರಿಂದ, ಕೈಜೋಡಿಸಿ ನಿಂತವರನ್ನು ನಾವು ಕೊಲ್ಲಲಾರೆವು. ಆದರೆ, ನೀನು ಕೇವಲ ಪಾಪಪ್ರಿಯನು. ಆದುದರಿಂದ ಇನ್ನು ಮೇಲೆ ನೀನು ನನ್ನ ಆಳ್ವಿಕೆಗೊಳಪಟ್ಟ ದೇಶಗಳಲ್ಲಿ ಮಾತ್ರ ಕಾಲಿಡಕೂಡದು. ಈ ಕ್ಷಣವೇ ನೀನು ಈ ಸ್ಥಳವನ್ನು ಬಿಟ್ಟು ಬೇರೆಲ್ಲಿಗಾದರೂ ಹೋಗಬೇಕು! ನೀನು ರಾಜರ ದೇಹದಲ್ಲಿ ವರ್ತಿಸುವಾಗ, ನಿನ್ನನ್ನನುಸರಿಸಿಯೇ ಅವರಲ್ಲಿ ಅಧರ್ಮಗಳೆಲ್ಲವೂ ಕಾಲೂರಿ ನಿಲ್ಲುವುವು. ಅಂತವರಲ್ಲಿ ಲೋಭವೂ, ಅಸತ್ಯವೂ, ಚೌರ್ಯವೂ, ಹೆಮ್ಮೆಯೂ, ದುಸ್ಸ್ವಭಾವವೂ, ದುರಾಚಾರವೂ, ರಾಗದ್ವೇಷಾದಿಗಳಿಂದ ಹುಟ್ಟುವ ಕಲಹವೂ, ವಂಚನೆಯೂ, ಮೇಲೆಮೇಲೆ ತಲೆಯೆತ್ತುತ್ತಿರುವುವು. ಈ ನಮ್ಮ * ಬ್ರಹ್ಮಾವರ್ತವೆಂಬ ಕ್ಷೇತ್ರವಾದರೋ ಇದುವರೆಗೆ ಸರ್ವಧರ್ಮಗಳಿಗೂ ನೆಲೆಯೆನಿಸಿಕೊಂಡಿರುವುದು. ಮತ್ತು ಈ ದೇಶದಲ್ಲಿ ಯಜ್ಞಾನುಷ್ಠಾನಪರರಾದ ಮಹರ್ಷಿಗಳು ಯಜ್ಞೇಶ್ವರನಾದ ಭಗವಂತನನ್ನು ಅನವರತವೂ ಯಜ್ಞಗಳಿಂದಾರಾಧಿಸುತ್ತಿರುವರು. ಇಲ್ಲಿ ಆ ಶ್ರೀಹರಿಯು, ಯಜ್ಞಾರಾಧ್ಯರಾದ ಇಂದ್ರಾದಿದೇವತೆಗಳ ಶರೀರದಲ್ಲಿ ತಾನೇ ಪ್ರವೇಶಿಸಿದ್ದು, ಅವರವರ ಯಜ್ಞಕಾರ್ಯಗಳಿಂದ ಪ್ರಸನ್ನನಾಗಿ ಕೋರಿಕೆಗಳನ್ನು ಕೈಗೂಡಿಸುತ್ತಿರುವನು. ಅವರೆಲ್ಲರಿಗೂ ಸರ್ವವಿಧದಲ್ಲಿಯೂ ಕ್ಷೇಮವನ್ನುಂಟುಮಾಡುತ್ತಿರುವನು. ಮುಖ್ಯವಾಗಿ ಆ ಭಗವಂತನು ಸ್ಥಾವರಜಂಗಮಾತ್ಮಕಗಳಾದ ಸಮಸ್ತ ಪ್ರಪಂಚದ ಒಳಗೂ, ಹೊರಗೂ ತಾನೊಬ್ಬನೇ ವಾಯುವಿನಂತೆ ವ್ಯಾಪಿಸಿ, ತಾನೇ ಅವುಗಳಿಗೆ ಆಧಾರನಾಗಿಯೂ, ನಿಯಾಮಕನಾಗಿಯೂ ಇರುವನು. ಆದುದರಿಂದ ಇಂತಹ ಪುಣ್ಯಕ್ಷೇತ್ರದಲ್ಲಿ ನೀನು ಕ್ಷಣಮಾತ್ರವೂ ಕಾಲಿಟ್ಟು ನಿಲ್ಲಕೂಡದು.” ಎಂದನು. ಹೀಗೆ

---

* ಸರಸ್ವತೀ ಮತ್ತು ದೃಷದ್ವತೀನದಿಗಳ ನಡುವೆ ಇರುವ ಪ್ರದೇಶವು ಬ್ರಹ್ಮಾವರ್ತವೆನಿಸುವುದು.

ಪರೀಕ್ಷಿದ್ರಾಜನು ನಿಯಮಿಸಿದೊಡನೆ ಕಲಿಯು, ದಂಡಪಾಣಿಯಾದ ಯಮನಂತೆ ತನ್ನ ಮುಂದೆ ಖಡ್ಗಧಾರಿಯಾಗಿ ನಿಂತಿದ್ದ ಆ ರಾಜನನ್ನು ನೋಡಿ, ಭಯದಿಂದ ನಡುಗುತ್ತ ವಿಜ್ಞಾಪಿಸುವನು, "ಎಲೈ ರಾಜೇಂದ್ರನೆ! ನಿನ್ನಾಜ್ಞೆಯಂತೆಯೇ ನಾನು ಬೇರೆಲ್ಲಿಗಾದರೂ ಹೋಗುವುದರಲ್ಲಿ ಸಂದೇಹವಿಲ್ಲ. ಆದರೆ ನಾನು ಎಲ್ಲೆಲ್ಲಿಗೆ ಹೋದರೂ ಧನುರ್ಬಾಣಗಳನ್ನು ಹಿಡಿದಿರತಕ್ಕ ಈ ನಿನ್ನ ಸ್ವರೂಪವು ನನ್ನ ಮನಸ್ಸನ್ನು ಬಿಟ್ಟು ಹೋಗಲಾರದು! ನಿನ್ನಲ್ಲಿ ನನಗುಂಟಾಗಿರುವ ಭೀತಿಯಿಂದ ಎಲ್ಲಿದ್ದರೂ ನನಗೆ ಈ ನಿನ್ನ ರೂಪವೇ ಕಾಣಿಸುವಂತಾಗಿರುವುದು. ಆದುದರಿಂದ ನಾನು ನಿರ್ಭಯವಾಗಿ ನಿಲ್ಲತಕ್ಕ ಕೆಲವು ಸ್ಥಳಗಳನ್ನು ನೀನೇ ನನಗೆ ತೋರಿಸಿ ಕೊಟ್ಟರೆ, ನಿನ್ನ ಆಜ್ಞಾಧೀನನಾಗಿ ನಾನು ಆ ಸ್ಥಳಗಳಲ್ಲಿ ನಿಯತವಾಗಿ ವಾಸಮಾಡುತ್ತಿರುವೆನು ಎಂದನು. ಅದಕ್ಕಾ ರಾಜನು ಕಲಿಪುರುಷನನ್ನು ಕುರಿತು 'ಎಲೈ! ಹಾಗಿದ್ದರೆ ನೀನು ಇನ್ನು ಮೇಲೆ ಜೂಜು, ಮದ್ಯಪಾನ, ಪರಸ್ತ್ರೀಸಂಗಮ, ಪ್ರಾಣಹಿಂಸೆ, ಇವು ನಡೆಯತಕ್ಕ ಸ್ಥಳಗಳಲ್ಲಿ ನಿರ್ಭಯವಾಗಿ ಸೇರಬಹುದು. ಇವು ನಾಲ್ಕೂ ನಿನಗೆ ನಿತ್ಯನಿವಾಸವಾಗಿರಲಿ!" ಎಂದನು. ಕಲಿಯು ಇನ್ನೂ ಕೆಲವು ಸ್ಥಳಗಳನ್ನು ತೋರಿಸಬೇಕೆಂದು ಪ್ರಾರ್ಥಿಸಲು, ಸುವರ್ಣವನ್ನೂ ಒಂದು ಸ್ಥಳವಾಗಿ ತೋರಿಸಿಕೊಟ್ಟನು ಅಷ್ಟಕ್ಕೂ ತೃಪ್ತಿಯಿಲ್ಲದೆ ಕಲಿಯು ಮತ್ತೆ ಕೆಲವು ಸ್ಥಳಗಳನ್ನು ಯಾಚಿಸಲು, ಸುಳ್ಳು, ಮದ, ಕಾಮ, ಕ್ರೋಧ, ವೈರಗಳೆಂಬ ಈ ಐದು ಬಗೆಯ ಅಧರ್ಮಗಳಿರತಕ್ಕ ಸ್ಥಳಗಳನ್ನು ತೋರಿಸಿ, ಈ ಸ್ಥಳಗಳು ಹೊರತು, ಬೇರೆಲ್ಲಿಯೂ ಪ್ರವರ್ತಿಸಕೂಡದೆಂದು ಕಠಿನಶಾಸನವನ್ನು ಮಾಡಿದನು. ಈ ರಾಜಾಜ್ಞೆಯನ್ನು ಶಿರಸಾವಹಿಸಿ ಕಲಿಪುರುಷನು ಆ ಸ್ಥಳಗಳಲ್ಲಿ ಮಾತ್ರವೇ ನಿವಸಿಸುತ್ತಿರುವನು. ಎಲೈ ಮಹರ್ಷಿಗಳೆ! ಈ ಮೇಲೆ ಹೇಳಿದುವೆಲ್ಲವೂ ಕಲಿನಿವಾಸಸ್ಥಾನಗಳಾದುದರಿಂದ, ಆತ್ಮೋಜ್ಜೀವನವನ್ನಪೇಕ್ಷಿಸತಕ್ಕವರು ಎಂದಿಗೂ ಇಂತಹ ವಿಷಯಗಳಲ್ಲಿ ವರ್ತಿಸಕೂಡದು. ಅದರಲ್ಲಿಯೂ ಮುಖ್ಯವಾಗಿ ಪ್ರಜಾಪಾಲನವನ್ನು ಮಾಡತಕ್ಕ ರಾಜರು ಈ ಸ್ಥಳಗಳನ್ನು ಕಣ್ಣೆತ್ತಿಯೂ ನೋಡಬಾರದು. ರಾಜನಾದವನು ಯಾವಾಗಲೂ ಧರ್ಮಶೀಲನಾಗಿರಬೇಕಾದುದತ್ಯವಶ್ಯವು. ರಾಜನೇ ದಾರಿತಪ್ಪಿ ನಡೆದರೆ ಪ್ರಜೆಗಳೂ ಅದೇ ದಾರಿಯನ್ನು ಹಿಡಿದು ಕೆಟ್ಟುಹೋಗುವರು. ಒಬ್ಬನ ಅವಿವೇಕದಿಂದ ಮೊತ್ತಕ್ಕೆ ರಾಜ್ಯವೇ ಕೆಡುವುದು" ಎಂದನು. ಹೀಗೆ ಪರೀಕ್ಷಿದ್ರಾಜನು ಕಲಿಯನ್ನು ನಿಗ್ರಹಿಸಿ ಕಳುಹಿಸಿ, ಧರ್ಮಪುರುಷನಿಗೆ ತಪಶ್ಶೌಚದಯಾರೂಪಗಳಾದ ಮೂರುಕಾಲುಗಳನ್ನೂ ತಿರುಗಿ ದೃಢಪಡಿಸಿಕೊಟ್ಟನು. ಭೂದೇವಿಗೂ ಮನಸ್ಸಂತೋಷವನ್ನುಂಟುಮಾಡಿ ಅತ್ಯ

ದರದಿಂದ ಪೋಷಿಸಿದನು. ಹೀಗೆ ಪರೀಕ್ಷಿದ್ರಾಜನು, ತನ್ನ ಪಿತಾಮಹನಾದ ಧರ್ಮಪುತ್ರನು ಅರಣ್ಯಕ್ಕೆ ಹೋಗುವ ಕಾಲದಲ್ಲಿ ತನಗೆ ಕೊಟ್ಟು ಹೋದ ಸಾಮ್ರಾಜ್ಯ ಸಿಂಹಾಸನವನ್ನೇರಿ, ರಾಜ್ಯಲಕ್ಷ್ಮೀವಿಶಿಷ್ಟನಾಗಿ, ವಿಶಾಲವಾದ ಕೀರ್ತಿಯನ್ನು ಹರಡಿ, ಮೊನ್ನೆಯ ವರೆಗೂ ಹಸ್ತಿನಾಪುರದಲ್ಲಿರುತಿದ್ದನು. ಮಹಾನುಭಾವನಾದ ಆ ಪರೀಕ್ಷಿದ್ರಾಜನ ಆಜ್ಞೆಯು ಇನ್ನೂ ನಡೆಯುತ್ತಿರುವುದರಿಂದಲೇ, ನೀವೂ ಇಲ್ಲಿ ಸತ್ರಯಾಗವನ್ನಾರಂಭಿಸಿ, ನಿರ್ವಿಘ್ನವಾಗಿ ನಡೆಸುತ್ತಿರುವಿರಿ! ಇಲ್ಲದ ಪಕ್ಷದಲ್ಲಿ ನಿಮ್ಮ ಯಾಗಕಾರ್ಯವೂ ಕೂಡ ಕಲಿಬಾಧೆಯಿಂದ ಆಗಲೇ ನಷ್ಟವಾಗುತಿದ್ದಿತು." ಎಂದನು. ಇಲ್ಲಿಗೆ ಹದಿನೇಳನೆಯ ಅಧ್ಯಾಯವು.

---

ಪರೀಕ್ಷಿದ್ರಾಜನು ಬೇಟೆಗೆ ಹೋದುದು. ಶೃಂಗಿಶಾಪವು

ಎಲೈ ಮಹರ್ಷಿಗಳೆ! ಯಾವ ಮಹಾತ್ಮನು ತಾಯಿಯ ಗರ್ಭದಲ್ಲಿ ಬೆಳೆಯುವಾಗ ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ದಗ್ಧನಾಗುತಿದ್ದರೂ, ಕೃಷ್ಣಾನುಗ್ರಹದಿಂದ ಸಾಯದೆ ಬದುಕಿದನೋ, ಯಾವ ಮಹಾನುಭಾವನು ಶ್ರೀಹರಿಯಲ್ಲಿ ನಟ್ಟ ಮನಸ್ಸುಳ್ಳವನಾಗಿ, ಬ್ರಾಹ್ಮಣಶಾಪಪ್ರೇರಿತನಾದ ತಕ್ಷಕನೆಂಬ ಕ್ರೂರಸರ್ಪವು ತನ್ನನ್ನು ಕೊಲ್ಲುವುದಕ್ಕಾಗಿ ಬಂದಾಗಲೂ, ಹೆದರದೆ ಧೈರ್ಯದಿಂದಿದ್ದನೋ ಆ ಪರೀಕ್ಷಿದ್ರಾಜನು ತನ್ನ ದೇಹದಲ್ಲಿಯೂ, ತದನುಬಂಧಿಗಳಲ್ಲಿಯೂ ಆಸೆಯನ್ನು ಬಿಟ್ಟು, ಶುಕಮುನಿಗೆ ಶಿಷ್ಯನಾಗಿ, ಭಗವಂತನಲ್ಲಿ ದೃಢವಾದ ನಿಷ್ಠೆಯನ್ನು ಹಿಡಿದು, ಗಂಗಾತೀರದಲ್ಲಿ ತನ್ನ ದೇಹವನ್ನು ಕಳೆದುಬಿಟ್ಟನು. ಎಲೈ ಶೌನಕಾದಿಗಳೆ! ಭಗವಂತನಲ್ಲಿ ನಿಷ್ಠೆಯುಳ್ಳವನಿಗೆ ಮೋಹವೆಂಬುದು ಎಷ್ಟುಮಾತ್ರಕ್ಕೂ ಉಂಟಾಗದು ಶ್ರೀಹರಿಯ ಕಥಾಮೃತವನ್ನು ಪಾನಮಾಡತಕ್ಕವರಿಗೂ ಆತನನ್ನು ಸ್ಮರಿಸತಕ್ಕವರಿಗೂ, ಅವಸಾನಕಾಲದಲ್ಲಿ ಯಾದರೂ ಧೈರ್ಯವು ಕದಲದು. ಕಲಿಯು ಈ ಭೂಮಿಯಲ್ಲಿ ಪ್ರವೇಶಿಸಿದ್ದರೂ ಕೂಡ, ಪರೀಕ್ಷಿತ್ತು ರಾಜ್ಯವನ್ನಾಳುತ್ತಿದ್ದವರೆಗೆ, ಮತ್ತು ಆತನಾಜ್ಞೆಯು ಲೋಕದಲ್ಲಿ ನಡೆಯುತ್ತಿದ್ದವರೆಗೆ, ಕಲಿಯ ಪ್ರಾಬಲ್ಯಕ್ಕೆ ಎಳ್ಳಷ್ಟಾದರೂ ಅವಕಾಶವಾಗಲಿಲ್ಲ! ಶ್ರೀಕೃಷ್ಣನು ಈ ಭೂಮಿಯನ್ನು ಬಿಟ್ಟ ಕ್ಷಣವೇ ಅಧರ್ಮಕಾರಣನಾದ ಕಲಿಯು ಈ ಲೋಕದಲ್ಲಿ ತಲೆಯಿಕ್ಕಿದನು. ಕಲಿಯು ವಿಶೇಷಪಾಪಕಾರಣನಾಗಿದ್ದರೂ, ಪರೀಕ್ಷಿದ್ರಾಜನು ಅವನನ್ನು ಕೊಲ್ಲದೆ ಬಿಟ್ಟು

ದಕ್ಕೆ ಕೆಲವು ಕಾರಣಗಳುಂಟು! ಕಲಿಯುಗದಲ್ಲಿ ಭಗವತ್ಕೀರ್ತನಗಳೇ ಮೊದಲಾಗಿ ಬಹಳ ಸುಲಭಸಾಧ್ಯಗಳಾದ ಪುಣ್ಯಕರ್ಮಗಳೂ ಕೂಡ, ಬಹುಶೀಘ್ರಕಾಲದಲ್ಲಿಯೇ ಫಲವನ್ನು ಕೈಗೂಡಿಸುವುವು. ಪಾಪಕಾರ್ಯಗಳು ಬೇಗನೇ ಫಲವನ್ನು ತೋರಿಸ ಲಾರವು. ಪರೀಕ್ಷಿದ್ರಾಜನು ಈ ಗುಣಾಂಶವನ್ನು ಚೆನ್ನಾಗಿ ಬಲ್ಲವನಾದುದರಿಂದ, ಕಲಿಪ್ರವೇಶವಾದ ಮಾತ್ರಕ್ಕೆ ಅಷ್ಟಾಗಿ ನಷ್ಟವೇನೂ ಇಲ್ಲವೆಂದೆಣಿಸಿ ಪುಷ್ಪಗ ಳನ್ನು ಕದಲಿಸದೆ ಅವುಗಳೊಳಗಿನ ಮಕರಂದವನ್ನು ಕುಡಿಯುವ ಭ್ರಮರದಂತೆ, ಕಲಿಪುರುಷನನ್ನು ಸಂಪೂರ್ಣವಾಗಿವಧಿಸದೆ, ಆತನ ಗರ್ವವನ್ನುಮಾತ್ರ ಮುರಿದು ಬಿಟ್ಟನು. ಕಲಿಪುರುಷನೂ ಕೂಡ ಈಗ ಜನರಲ್ಲಿ ನಿರ್ಭಯವಾಗಿ ಪ್ರವರ್ತಿಸ ಲಾರನು. ಅಲ್ಲಲ್ಲಿ ಹೊಂಚುಹಾಕುತಿದ್ದು ಕುರಿಗಳಮೇಲೆ ಬೀಳುವ ತೋಳನಂತೆ, ಕಲಿಯೂ ಅಲ್ಲಲ್ಲಿ ನಿರೀಕ್ಷಿಸುತಿದ್ದು, ಎಚ್ಚರ ತಪ್ಪಿದ ಮನುಷ್ಯರನ್ನು ಹಿಡಿಯುವ ನೇ ಹೊರತು, ಸ್ಥಿರಮನಸ್ಸುಳ್ಳ ಪಂಡಿತರನ್ನು ಕಂಡರೆ ಹೆದರಿ ಪಲಾಯನಮಾಡು ವನು. ಅದು ಹಾಗಿರಲಿ! ಎಲೈ ಮಹರ್ಷಿಗಳೆ! ನೀವು ಪರೀಕ್ಷಿದ್ರಾಜನ ಚರಿತ್ರ ವನ್ನು ವಿವರಿಸಬೇಕೆಂದು ಕೇಳಿದಿರಲ್ಲವೆ? ನಿಮ್ಮ ಕೋರಿಕೆಯಂತೆಯೇ ಭಗವತ್ಕಥಾ ಮಿಶ್ರಿತವಾದ ಆ ರಾಜನ ಚರಿತ್ರವನ್ನು ನಿಮಗೆ ತಿಳಿಸಿರುವೆನು. ಆತ್ಮೋಜ್ಜೀವನ ವನ್ನಪೇಕ್ಷಿಸುವವರೊಬ್ಬೊಬ್ಬರೂ ಹೀಗೆ ಭಗವದ್ವಿಷಯಕಗಳಾದ ಪುಣ್ಯಚರಿತ್ರ ಗಳನ್ನು ಕೇಳಿ ತಿಳಿಯಬೇಕಾದುದೇ ಅತ್ಯವಶ್ಯವು" ಎಂದನು. ಈ ಮಾತನ್ನು ಕೇಳಿ ತಿರುಗಿ ಶೌನಕಾದಿಮಹರ್ಷಿಗಳು ಸೂತನನ್ನು ಕುರಿತು, "ಎಲೈ ಮಹಾತ್ಮನೆ! ನಿನ್ನಿಂದ ನಾವು ಧನ್ಯರಾದೆವು. ಅಸ್ಥಿರವಾದ ಮನುಷ್ಯಜನ್ಮವನ್ನೆತ್ತಿದ ನಮಗೆ, ನೀನು ಕರ್ಣಾಮೃತಪ್ರಾಯಗಳಾದ ಆ ಭಗವಂತನ ಪುಣ್ಯಚರಿತ್ರಗಳನ್ನು ತಿಳಿಸು ವುದರಿಂದ ನಮ್ಮನ್ನು ಕೃತಾರ್ಥರನ್ನಾಗಿ ಮಾಡಿದೆ! ಇದಕ್ಕಾಗಿ ನಾವು ನಿನಗೆ ಯಾವವಿಧವಾದ ಪ್ರತ್ಯುಪಕಾರವನ್ನು ಮಾಡಬಲ್ಲೆವು? ಇದೋ! ನಿನ್ನನ್ನು ಆಶೀರ್ವದಿಸುವೆವು! ಇದೇ ನಾವು ಮಾಡತಕ್ಕ ಪ್ರತ್ಯುಪಕಾರವು! ನೀನು ಹೀಗೆಯೇ ಅನೇಕಸಂವತ್ಸರಗಳವರೆಗೆ ಬದುಕಿದ್ದು ಲೋಕೋಪಕಾರವನ್ನು ಮಾಡುತ್ತಿರಬೇಕೆಂಬುದೇ ನಮ್ಮ ಕೋರಿಕೆ! ಓ ಮಹಾತ್ಮಾ! ಈಗ ನಾವು ಬಹಳ ಶ್ರಮಸಾಧ್ಯವಾದ ಸತ್ರಯಾಗವನ್ನಾರಂಭಿಸಿರುವೆವಷ್ಟೆ? ಈ ಹೋಮ ಕಾರ್ಯದಲ್ಲಿ ಅನವರತವೂ ಹೊಗೆಯನ್ನು ಕುಡಿದು ಕುಡಿದು ಬೇಸರಗೊಂಡಿರುವ ನಮಗೆ, ನಡುನಡುವೆ ನೀನು ಆ ಭಗವಂತನ ಪಾದಪದ್ಮಸಂಬಂಧವಾದ ಮಧು ವನ್ನು ಕುಡಿಸಿ ನಮ್ಮ ಬೇಸರಿಕೆಯನ್ನಾರಿಸುತ್ತಿರುವೆ! ಓ ಸೂತಾ! ನಾವೇ ಪರಮ ಧನ್ಯರು! ಹೆಚ್ಚುಮಾತಿನಿಂದೇನು? ಸ್ವರ್ಗಸುಖವಾಗಲಿ, ಕೊನೆಗೆ ಮೋಕ್ಷವಾ

ಗಲಿ, ನಿನ್ನಂತಹ ಭಾಗವತೋತ್ತಮರ ಸಹವಾಸಕ್ಕೆ ಲೇಶಮಾತ್ರವೂ ಸಾಟಿಯಾಗಲಾರದು. ಇನ್ನು ಲೋಕದಲ್ಲಿ ಮನುಷ್ಯರಿಗೆ ದುರಾಸೆಯನ್ನು ಹೆಚ್ಚಿಸತಕ್ಕ ಅರ್ಥಕಾಮಾದಿಗಳನ್ನು ಅದಕ್ಕೆ ಸರಿ ಹೋಲಿಸುವುದು ಬರೀ ಹುಚ್ಚುತನವಲ್ಲವೆ? ಮಹಾತ್ಮರಿಗೆ! ಪ್ರಾಪ್ಯಸ್ಥಾನವಾಗಿಯೂ, ಪ್ರಾಪಕನಾಗಿಯೂ, ಆಧಾರನಾಗಿಯೂ ಇರುವ ಆ ಭಗವಂತನ ಗುಣಗಳನ್ನು ಕೇಳುವುದರಲ್ಲಿ, ರಸಜ್ಞನಾದ ಯಾವ ಮನುಷ್ಯನಿಗೆ ತಾನೇ ತೃಪ್ತಿಯುಂಟಾಗುವುದು? ಬ್ರಹ್ಮಾದಿ ದೇವತೆಗಳಾಗಲಿ, ಪರಮಯೋಗಿಗಳಾಗಲಿ, ಆ ಭಗವಂತನ ಕಲ್ಯಾಣಗುಣಗಳೆಂಬ ಮಹಾಸಮುದ್ರದ ಪಾರವನ್ನು ಕಂಡು ಹಿಡಿಯಲಾರರು. ಇನ್ನು ನಮ್ಮಂತಹ ಸಾಮಾನ್ಯಜನರು ಆ ಭಗವಚ್ಚರಿತ್ರಗಳ ಪಾರವನ್ನು ಕಂಡು ತೃಪ್ತರಾಗುವುದೆಂದರೇನು? ಎಲೈ ಮಹಾತ್ಮನೆ! ನೀನು ಆ ಭಗವದ್ಗುಣಗಳ ತತ್ವವನ್ನು ಚೆನ್ನಾಗಿ ಬಲ್ಲವನು. ಆ ಭಗವಂತನೊಬ್ಬನೇ ಮುಖ್ಯಾಶ್ರಯನೆಂದು ನಂಬಿದವನು. ಆದುದರಿಂದ ನೀನು, ಶ್ರದ್ಧೆಯಿಂದ ಕೇಳಬೇಕೆಂದಿರುವ ನಮಗೆ ಲೋಕಪಾವನಗಳಾದ ಆ ಭಗವತ್ಕಥೆಗಳನ್ನೇ ವಿಸ್ತಾರವಾಗಿ ತಿಳಿಸಬೇಕು! ಭಾಗವತೋತ್ತಮನಾಗಿಯೂ, ಧೀಮಂತನಾಗಿಯೂ ಇರುವ ಪರೀಕ್ಷಿದ್ರಾಜನು, ಶುಕಮುನಿಯಿಂದುಪದೇಶಿಸಲ್ಪಟ್ಟ ಪುರಾಣವನ್ನು ಕೇಳಿ, ಅದರಿಂದುಂಟಾದ ಜ್ಞಾನದಿಂದ ಶ್ರೀಮನ್ನಾರಾಯಣನ ಪಾದಮೂಲವನ್ನು ಸೇರಿದುದಾಗಿ ಹೇಳಿದೆಯಷ್ಟೆ? ಆ ಪುರಾಣವನ್ನೇ ನಮಗೆ ನೀನು ಉಪದೇಶಿಸಬೇಕು. ಆ ಪುರಾಣಶ್ರವಣದಿಂದಲೂ, ಅದನ್ನು ಪಠಿಸುವುದರಿಂದಲೂ ನಿರತಿಶಯವಾದ ಪುಣ್ಯವು ಲಭಿಸುವುದು. ಅದಕ್ಕೆ ಸಮಾನವಾದ ಬೇರೆ ಪುರಾಣವಿಲ್ಲವು. ಮುಮುಕ್ಷುಗಳಿಗೆ ತಿಳಿಯಬೇಕಾದ ವಿಷಯಗಳೆಲ್ಲವೂ ಅದರಲ್ಲಿ ಸ್ಪಷ್ಟವಾಗಿ ತಿಳಿಸಲ್ಪಡುವುವು. ಅದರ ಶ್ರವಣಪಠನಗಳಿಂದ ಅತ್ಯದ್ಭುತವಾದ ಭಕ್ತಿಯೋಗವೂ ಪ್ರಾಪ್ತವಾಗುವುದು. ಭಗವಚ್ಚರಿತ್ರಗಳಿಂದ ಕೂಡಿ, ಭವದ್ಭಕ್ತರಿಗೆ ವಿಶೇಷಾದರಣೀಯವಾದ ಆ ಪುರಾಣವನ್ನೇ ನೀನು ನಮ್ಮಲ್ಲಿ ಪೂರ್ಣಾನುಗ್ರಹವನ್ನಿಟ್ಟು ತಿಳಿಸಬೇಕು" ಎಂದು ಪ್ರಾರ್ಥಿಸಿದರು. ಹೀಗೆ ಭಗವತ್ಕಥೆಯನ್ನು ಹೇಳುವುದಕ್ಕಾಗಿ ಪ್ರೇರಿಸುತ್ತಿರುವ ಶೌನಕಾದಿಗಳ ವಾಕ್ಯವನ್ನು ಕೇಳಿ, ಸೂತನು ಪರಮಹರ್ಷಯುಕ್ತನಾಗಿ, ಅವರನ್ನು ಕುರಿತು, "ಎಲೈ ಮಹರ್ಷಿಗಳೆ! ಇದಲ್ಲವೇ ನನ್ನ ಪರಮಭಾಗ್ಯವು! ನಾವು ಕೇವಲ ಸಂಕರವರ್ಣದಲ್ಲಿ ಹುಟ್ಟಿದ ಹೀನಜಾತಿಯವರಾಗಿದ್ದರೂ, ಜ್ಞಾನದಿಂದಲೂ ವಯಸ್ಸಿನಿಂದಲೂ ವೃದ್ಧರಾದ ನೀವು ನಮ್ಮನ್ನು ಇಷ್ಟುದೂರಕ್ಕೆ ಗೌರವಿಸಿ, ನಮ್ಮಿಂದ ಭಗವತ್ಕಥೆಯನ್ನು ಕೇಳುವುದಕ್ಕಾಗಿ ಅನುವರ್ತಿಸುತ್ತಿರುವುದರಿಂದ, ಈಗ ನಮ್ಮ

ಜನ್ಮವೇ ಪ್ರಶಸ್ತವೆನಿಸಿತು. ಪರಮಪೂಜ್ಯರಾದ ನಿಮಗೆ ಭಗವತ್ಕಥೆಯನ್ನು ಕೇಳುವ ಭಾಗ್ಯವು ಲಭಿಸಿದುದರಿಂದ, ನಮಗೆ ದುಷ್ಕುಲದಲ್ಲಿ ಹುಟ್ಟಿದೆವೆಂಬ ಮನೋವ್ಯಾಧಿಯೂ ನಿಶ್ಶೇಷವಾಗಿ ಬಿಟ್ಟುಹೋಯಿತು. ಮಹನೀಯರಾದ ನಿಮ್ಮೊಡನೆ ಸಂಭಾಷಣವೇ ನಮಗೆ, ಹೀನಜಾತಿಯಲ್ಲಿ ಹುಟ್ಟಿದೆವೆಂಬ ಕೊರತೆ ಯನ್ನು ನೀಗಿಸಿ ಗೌರವವನ್ನುಂಟುಮಾಡುತ್ತಿರುವಾಗ, ನಿಮ್ಮಂತಹ ಮಹನೀ ಯರಿಗೂ ಪ್ರಾಪ್ಯನಾಗಿಯೂ, ಪ್ರಾಪಕನಾಗಿಯೂ, ಆಧಾರನಾಗಿಯೂ ಇರುವ ಆ ಭಗವಂತನ ನಾಮಗಳನ್ನುಚ್ಚರಿಸುವ ಸಂಭವವುಂಟಾದ ಮೇಲೆ ನಮ್ಮ ಭಾಗ್ಯಕ್ಕೆಣೆಯುಂಟೆ? ಆ ಶ್ರೀಮನ್ನಾರಾಯಣನೋ ಅಪಾರಶಕ್ತಿಯುಳ್ಳವನು. ಜ್ಞಾನಾದಿಷಾಡ್ಗುಣ್ಯಪರಿಪೂರ್ಣನು. ಲೋಕದಲ್ಲಿ ಅವನಿಗಿಂತಲೂ ಉತ್ತಮ ರಾಗಲಿ, ಆತನಿಗೆ ಸಮಾನರಾಗಲಿ ಬೇರೊಬ್ಬರಿಲ್ಲವು. ಇನ್ನು ಚೆನ್ನಾಗಿ ಹೇಳಿದು ದರಿಂದೇನು? ಬ್ರಹ್ಮಾದಿದೇವತೆಗಳೆಲ್ಲರೂ ತನ್ನನ್ನು ವಿಶೇಷವಾಗಿ ಪ್ರಾರ್ಥಿಸು ತಿದ್ದರೂ ಲಕ್ಷ್ಯಮಾಡದೆ, ಲಕ್ಷ್ಮೀದೇವಿಯು ವಿಷ್ಣುವು ತನ್ನನ್ನಪೇಕ್ಷಿಸದಿದ್ದರೂ ತಾನಾಗಿಯೇ ಬಂದು ಆತನ ಪಾದರೇಣುವನ್ನು ಸೇವಿಸುತ್ತಿರುವಳು. ಆ ಭಗವಂತನಲ್ಲಿರುವ ಎಣೆಯಿಲ್ಲದ ಗುಣಗಳನ್ನೂ, ಆತನ ಸರ್ವಾಧಿಪತ್ಯವನ್ನೂ ಸ್ಥಿರಪಡಿಸುವದಕ್ಕೆ ಇದಕ್ಕಿಂತಲೂ ಬೇರೆ ನಿದರ್ಶನವೇಕೆ? ಇದಲ್ಲದೆ ಪೂರ್ವದಲ್ಲಿ ಚತುರ್ಮುಖಬ್ರಹ್ಮನು ವಿಷ್ಣುವಿನ ಪಾದ್ಯಕ್ಕಾಗಿ ಸಮರ್ಪಿಸಿದ ಪೂಜಾಜಲವು, ಆತನ ಎಡಗಾಲಿನ ಅಂಗುಷ್ಠದಿಂದ ಪ್ರವಹಿಸಿದ ಮಾತ್ರಕ್ಕೆ ಪರಮಪಾವನೆಯಾದ ಗಂಗಾನದಿಯೆನಿಸಿಕೊಂಡು, ರುದ್ರಾದಿಲೋಕಪಾಲಕರಿಂದ ಕೂಡಿದ ಸಮಸ್ತ ಪ್ರಪಂಚವನ್ನೂ ಪುನೀತವನ್ನಾಗಿ ಮಾಡುವುದು. ಇಂತಹ ಮಹಾಮಹಿಮೆ ಯುಳ್ಳ ಶ್ರೀವಿಷ್ಣುವನ್ನು ಬಿಟ್ಟರೆ, ಲೋಕದಲ್ಲಿ ಭಗವಚ್ಛಬ್ದಕ್ಕೆ ಭಾಗಿಯಾಗ ತಕ್ಕವನು ಬೇರೆ ಯಾವನುಂಟು? ಮತ್ತು ಆ ಶ್ರೀಹರಿಯಲ್ಲಿ ಅನುರಾಗವನ್ನು ತೋರಿಸಿದ ಮಾತ್ರದಿಂದಲೇ ಪ್ರಾಜ್ಞರಾದವರು, ಇಂದ್ರಿಯಗಳನ್ನು ಜಯಿಸಿ, ದೇಹಾದಿಗಳಲ್ಲಿ ಬೇರೂರಿದ ಮೋಹಸಂಬಂಧವನ್ನೂ ತೊರೆದು, ಅಹಿಂಸೆ, ಶಾಂತಿ, ದಾಂತಿ, ಮೊದಲಾದ ಸದ್ಗುಣಗಳನ್ನುಂಟುಮಾಡತಕ್ಕ ಪರಮಹಂಸತ್ವವೆಂಬ ನಾಲ್ಕನೆಯ ಆಶ್ರಮವನ್ನು ಹೊಂದುವರು. ಎಲೈ ಮುನಿಶ್ರೇಷ್ಠರೆ! ಅಂತಹ ಮಹಾಮಹಿಮೆಯುಳ್ಳ ಭಗವಂತನ ಗುಣಗಳನ್ನು ವಿವರಿಸುವುದಕ್ಕೆ ನಾನು ಶಕ್ತನೆ? ಆದರೆ ಜ್ಞಾನಾಧಿಕರಾದ ನೀವೇ ಈ ವಿಷಯದಲ್ಲಿ ನನ್ನನ್ನು ಬಹಳವಾಗಿ ನಿರ್ಬಂಧಿಸುತ್ತಿರುವುದರಿಂದ, ನನ್ನ ಬುದ್ಧಿಗೆ ತೋರಿದಷ್ಟನ್ನು ಮಾತ್ರ ವಿವರಿಸ ಬಲ್ಲೆನು. ಪಕ್ಷಿಗಳು ತಮ್ಮ ರೆಕ್ಕೆಗಳಲ್ಲಿರುವ ಬಲಕ್ಕನುಸಾರವಾಗಿ ಆಕಾಶದಲ್ಲಿ

ಹಾರಿ, ಆ ಬಲವು ತಗ್ಗಿದೊಡನೆ ಹಿಂತಿರುಗುವಂತೆ, ಪಂಡಿತರಾದವರೂ ಕೂಡ, ತಮ್ಮ ತಮ್ಮ ಬುದ್ಧಿಬಲಕ್ಕೆ ತಕ್ಕಂತೆ ಭಗವದ್ಗುಣಗಳನ್ನು ವರ್ಣಿಸುತ್ತ, ಆ ಬುದ್ಧಿ ಬಲವು ತಗ್ಗಿದೊಡನೆ ಆ ವಿಷಯದಿಂದ ಹಿಂತಿರುಗುವರು. ರೆಕ್ಕೆಗಳಲ್ಲಿ ಬಲವಿಲ್ಲದುದಕ್ಕಾಗಿ ಪಕ್ಷಿಗಳು ವಿಮುಖವಾಗಬೇಕೇ ಹೊರತು, ಆಕಾಶದಲ್ಲಿ ಅವಕಾಶವು ಸಾಲದೆಂದು ಹಿಂತಿರುಗುವುವಲ್ಲ. ಹಾಗೆಯೇ ಭಗವದ್ಗುಣಗಳನ್ನು ವರ್ಣಿಸುವಾಗಲೂ, ಬುದ್ಧಿಕ್ಷಯದಿಂದ ಅದರಲ್ಲಿ ವಿಮುಖರಾಗಬೇಕೇ ಹೊರತು, ಆತನ ಗುಣಗಳಿಗೆ ಮಾತ್ರ ಕೊನೆಯೆಂಬುದೇ ಇಲ್ಲವು. ಈ ವಿಚಾರವು ಹಾಗಿರಲಿ! ಇನ್ನು ಪರೀಕ್ಷಿದ್ರಾಜನ ವೃತ್ತಾಂತವನ್ನು ಕೇಳಿರಿ! ಒಮ್ಮೆ ಪರೀಕ್ಷಿದ್ರಾಜನು ಬೇಟೆಯಾಡಬೇಕೆಂಬ ಕುತೂಹಲದಿಂದ ಧನುರ್ಬಾಣಗಳನ್ನು ಧರಿಸಿ ಕಾಡಿಗೆ ಹೋದನು. ಅಲ್ಲಲ್ಲಿ ಬೇಟೆಯಾಡುತ್ತ ಮೃಗಗಳನ್ನು ಬೆನ್ನಟ್ಟಿ ಹೋಗುವಾಗ, ಮಾರ್ಗಾಯಾಸದಿಂದಲೂ, ಹಸಿವು, ಬಾಯಾರಿಕೆಗಳಿಂದಲೂ ಪೀಡಿತನಾಗಿ, ಜಲಾಶಯವನ್ನು ಹುಡುಕುತ್ತ ಬಂದನು. ಎಲ್ಲೆಲ್ಲಿ ಸುತ್ತಿದರೂ ಸರೋವರವನ್ನು ಕಾಣದೆ, ಕೊನೆಗೆ ಶಮೀಕನೆಂಬ ಒಬ್ಬ ಮಹರ್ಷಿಯ ಪುಣ್ಯಾಶ್ರಮವನ್ನು ಪ್ರವೇಶಿಸಿದನು. ಆ ಆಶ್ರಮಮಧ್ಯದಲ್ಲಿ ಶಮೀಕಮುನಿಯು ಶಾಂತನಾಗಿ, ಕಣ್ಣುಮುಚ್ಚಿ ತಪೋನಿರತನಾಗಿ ಕುಳಿತಿದ್ದುದನ್ನು ಕಂಡನು. ಆ ಮಹರ್ಷಿಯು ತನ್ನ ಸರ್ವೇಂದ್ರಿಯಗಳನ್ನೂ, ಪ್ರಾಣವನ್ನೂ, ಮನಸ್ಸನ್ನೂ, ಬುದ್ಧಿಯನ್ನೂ ತಡೆದಿಟ್ಟುಕೊಂಡು, ಬಾಹ್ಯವ್ಯಾಪಾರಗಳೊಂದೂ ಇಲ್ಲದೆ, ಜಾಗ್ರತ್ಸ್ವಪ್ನಸುಷುಪ್ತಿಗಳೆಂಬ ಅವಸ್ಥಾತ್ರಯಗಳಿಂದಲೂ ಬೇರೆಯಾದ ಆತ್ಮಾನುಸಂಧಾನದಿಂದ ಕೇವಲ ಬ್ರಹ್ಮವಿಷಯಕವಾದ ಭಾವನೆಯೊಂದರಲ್ಲಿಯೇ ನಿರತನಾಗಿದ್ದನು ಮತ್ತು ವಿಕಾರಶೂನ್ಯನಾಗಿ, ಕೆದರಿದ ಜಟಾಭಾರದಿಂದ ಮುಚ್ಚಿದ ಮೈಯುಳ್ಳವನಾಗಿ ಮೃಗಚರ್ಮವನ್ನು ಧರಿಸಿ ಕೇವಲ ಧ್ಯಾನಪರನಾಗಿ ಕುಳಿತಿದ್ದನು. ದಾಹದಿಂದೊಣಗಿದ ದವಡೆಗಳುಳ್ಳ ಪರೀಕ್ಷಿದ್ರಾಜನು, ಆ ಸ್ಥಿತಿಯಲ್ಲಿದ್ದ ಋಷಿಯನ್ನು ಕಂಡು, ದಾಹಶಾಂತಿಗಾಗಿ ತನಗೆ ಸ್ವಲ್ಪ ಪಾನಜಲವನ್ನು ಕೊಡಬೇಕೆಂದು ಯಾಚಿಸಿದನು. ಹೀಗೆ ಯಾಚಿಸುವಾಗಲೂ ಆ ಮಹರ್ಷಿಯು ಯಾವ ಪ್ರತ್ಯುತ್ತರವನ್ನೂ ಹೇಳದೆ, ಕುಶಲಪ್ರಶ್ನವನ್ನೂ ಮಾಡದೆ, ಕೇವಲಧ್ಯಾನದಲ್ಲಿಯೇ ಇದ್ದುಬಿಟ್ಟನು. ಆಗ ಪರೀಕ್ಷಿದ್ರಾಜನು ತನಗೆ ಕುಳ್ಳಿರುವುದಕ್ಕೆ ಆಸನವನ್ನಾಗಲಿ ಅರ್ಘ್ಯವನ್ನಾಗಲಿ, ಕೊಡದೆ ಆ ಮಹರ್ಷಿಯು ಕೇವಲ ಉದಾಸೀನನಾಗಿರುವುದನ್ನು ನೋಡಿ, ಆತನು ತನ್ನನ್ನವಮಾನಪಡಿಸಿದಂತೆ ತನ್ನಲ್ಲಿ ತಾನೇ ಭಾವಿಸಿಕೊಂಡನು. ಅವನಿಗೆ ಮೇಲೆಮೇಲೆಕೋಪಾವೇಶವೂ ಹೆಚ್ಚುತ್ತ ಬಂದಿತು. ಮೊದಲೇ ಈ ರಾಜನು ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿದ್ದು



171. ಪರೀಕ್ಷಿತ್ತು ಶಮೀಕನ ಕೊರಳಿಗೆ ಸತ್ತಹಾವನ್ನು ಮಾಲೆಹಾಕಿದುದು.

ದರಿಂದ, ಅವನಿಗೆ ಹಿಂದೆ ಯಾವಾಗಲೂ ಇಲ್ಲದ ವೈರವೂ, ಕೋಪವೂ, ಆ ಮಹರ್ಷಿಯ ವಿಷಯದಲ್ಲಿ ಹುಟ್ಟಿತು. ಈ ಕೋಪದಿಂದ ಪರೀಕ್ಷಿದ್ರಾಜನು ಸಮೀಪದಲ್ಲಿ ಸತ್ತುಬಿದ್ದಿದ್ದ ಒಂದು ಹಾವನ್ನು ತನ್ನ ಬಿಲ್ಲಿನ ತುದಿಯಿಂದೆತ್ತಿ, ಆ ಶಮೀಕಮುನಿಯ ಕೊರಳಿಗೆ ಮಾಲೆ ಹಾಕಿ ಪಟ್ಟಣಕ್ಕೆ ಹಿಂತಿರುಗಿದನು. ಎಲೈ ಶೌನಕಾದಿಗಳೇ! ಪರೀಕ್ಷಿದ್ರಾಜನು ಆ ಋಷಿಯ ಕೊರಳಿಗೆ ಸತ್ತ ಹಾವನ್ನು ಮಾಲೆಹಾಕಿದುದಕ್ಕೆ ಕಾರಣವನ್ನು ಹೇಳುವೆನು ಕೇಳಿರಿ! "ಆ ಮಹರ್ಷಿಯು ನಿಜವಾದ ಸಮಾಧಿಯಿಂದಲೇ ಕಣ್ಣುಗಳನ್ನು ಮುಚ್ಚಿ ಕುಳಿತಿರುವನೆ? ಅಥವಾ ತಮ್ಮಂತಹ ಕ್ಷತ್ರಿಯರಲ್ಲಿ ತುಚ್ಛೀಭಾವದಿಂದ ಮಾತಾಡುವುದಕ್ಕಿಷ್ಟವಿಲ್ಲದೆ ಕಪಟ ಸಮಾಧಿಯಿಂದ ಸುಮ್ಮನಿರುವನೇ?" ಎಂಬುದನ್ನು ಪರೀಕ್ಷಿಸಿ ತಿಳಿಯಬೇಕೆಂಬುದಕ್ಕಾಗಿಯೇ, ಆ ರಾಜನು ಈ ವಿಧವಾದ ಕಾರ್ಯವನ್ನು ಮಾಡಿ ತನ್ನ ಪಟ್ಟಣಕ್ಕೆ ಹಿಂತಿರುಗಿಬಿಟ್ಟನು. ಇಷ್ಟರಲ್ಲಿ ಆ ಮಹರ್ಷಿಯ ಪುತ್ರನಾದ ಶೃಂಗಿಯೆಂಬವನು, ತನ್ನ ಸಂಗಡಿಗರಾದ ಕೆಲವು ಋಷಿಕುಮಾರರೊಡನೆ ಅಲ್ಲಲ್ಲಿ ವಿಹರಿಸುತ್ತ, ತನ್ನ ತಂದೆಯ ಬಳಿಗೆ ಬಂದನು. ತನ್ನ ತಂದೆಯ ವಿಷಯದಲ್ಲಿ ರಾಜನು ಮಾಡಿ ಹೋದ ಮಹಾಪರಾಧವನ್ನು ದಾರಿಯಲ್ಲಿಯೇ ಕೇಳಿ, ಮನಸ್ಸಿನಲ್ಲಿ ಬಹಳವಾಗಿ ದುಃಖಿಸಿ, ಕೋಪಾವಿಷ್ಟನಾಗಿ 'ಅಹಾ! ಇದೇನಿದು! ರಾಜರಲ್ಲಿ ಇಷ್ಟೊಂದು ಅಧರ್ಮಬುದ್ಧಿಯೆ? ಛೀ! ಬಲಿಯನ್ನು ತಿಂದು ಕೊಬ್ಬಿದ ಕಾಗೆಗಳಂತೆ, ಈ ಕ್ಷತ್ರಿಯಾಧಮರು ಹಿಂದುಮುಂದು ನೋಡದೆ ಮಹಾಗರ್ವದಿಂದ ಬೀಗಿ ಬೆರೆಯುತ್ತಿರುವರು. ಕ್ಷತ್ರಿಯರು ಯಾವಾಗಲೂ ಬ್ರಾಹ್ಮಣರಿಗೆ ಕೇವಲ ದಾಸಭೂತರು! ತನ್ನ ಸ್ವಾಮಿಯ ಮನೆಬಾಗಿಲನ್ನು ಕಾದು ಬಿದ್ದಿರುವ ನಾಯಿಗಳಂತೆ, ಯಾವಾಗಲೂ ಬ್ರಾಹ್ಮಣರಿಗೆ ವಿಧೇಯರಾಗಿ ಅವರನ್ನು ರಕ್ಷಿಸುತ್ತಿರುವುದೇ ರಾಜರ ಕೃತ್ಯವು. ಹೀಗಿರುವಾಗ ಬಾಗಿಲು ಕಾಯುವ ನಾಯಿಯು ಯಜಮಾನನ ಭೋಜನಪಾತ್ರೆಗೆ ಬಾಯಿಕ್ಕಿದಂತೆ, ದಾಸಭೂತನಾದ ಯಾವನೋ ಕ್ಷತ್ರಿಯನು ಈ ಗುರುದ್ರೋಹವನ್ನು ಮಾಡಿದನೆ! ಇಂತಹ ದುರಾತ್ಮರನ್ನು ಶಿಕ್ಷಿಸುವುದಕ್ಕಾಗಿಯೇ ಅವತರಿಸಿದ ಭಗವಂತನಾದ ಕೃಷ್ಣನು ಈ ಲೋಕವನ್ನು ಬಿಟ್ಟುಹೋದುದರಿಂದಲ್ಲವೇ ಈ ನೀಚಕೃತ್ಯಗಳಿಗೆಲ್ಲವೂ ಅವಕಾಶವಾಯಿತು, ಆದರೇನು? ಇರಲಿ! ಈಗಲೂ ಚಿಂತೆಯಿಲ್ಲ. ಆ ವಿಧವಾಗಿ ಧರ್ಮವನ್ನತಿಕ್ರಮಿಸಿ ಹೋಗತಕ್ಕ ದುರಾತ್ಮರಿಗೆ ಇನ್ನು ಮೇಲೆ ನಾನೇ ಶಿಕ್ಷಕನಾಗಿ ನಿಲ್ಲುವೆನು ನನ್ನ ಅದ್ಭುತಸಾಮರ್ಥ್ಯವನ್ನು ಜಗತ್ತೆಲ್ಲಾ ನೋಡಲಿ." ಎಂದು ಹೇಳಿ, ಕೋಪದಿಂದ ಕೆಂಪೇರಿದ ಕಣ್ಣುಳ್ಳವನಾಗಿ, ಅತಿವೇಗದಿಂದ ಹೊರಟು, ಸಮೀಪದಲ್ಲಿದ್ದ ಕೌಶಿಕೀನದಿಯಲ್ಲಿಳಿದು, ಶುದ್ಧಾ

ಚಮನವನ್ನು ಮಾಡಿ ಬಂದು, ವಜ್ರಾಯುಧಕ್ಕೆ ಸಮಾನವಾದ ಈ ಶಾಪ ವಾಕ್ಯವನ್ನು ಪ್ರಯೋಗಿಸುವುದಕ್ಕೆ ತೊಡಗಿದನು "ಯಾವ ದುರಾತ್ಮನು ಹೀಗೆ ಮರ್ಯಾದೆಯನ್ನತಿಕ್ರಮಿಸಿ, ಸತ್ತ ಹಾವನ್ನು ತಂದು ನನ್ನ ತಂದೆಯಕೊರಲಿಗೆ ಸಿಕ್ಕಿಸಿ ಹೋದನೋ, ಆ ನೀಚನು ಈ ಮೊದಲು ಏಳನೆಯ ದಿನಕ್ಕೆ ತಕ್ಷಕನಿಂದ ದಷ್ಟನಾಗಿ ಸಾಯಲಿ" ಎಂದು ಶಪಿಸಿದನು. ಒಡನೆಯೇ ಶೃಂಗಿಯು ತನ್ನ ಆಶ್ರಮಕ್ಕೆಬಂದು, ತಂದೆಯ ಕೊರಲಿನಲ್ಲಿದ್ದ ಸರ್ಪದೇಹವನ್ನು ನೋಡಿ, ಭಯ ಗ್ರಸ್ತನಾಗಿ, ಬಹಳ ಗಟ್ಟಿಯಾಗಿ ಅಳುವುದಕ್ಕೆ ತೊಡಗಿದನು. ಈ ಧ್ವನಿಯನ್ನು ಕೇಳಿ ಶಮೀಕಮುನಿಯು ತನ್ನ ಸಮಾಧಿಯನ್ನು ನಿಲ್ಲಿಸಿ ಕಣ್ಣುತೆರೆದು, ತನ್ನ ಮುಂದೆ ಅಳುತ್ತಾ ನಿಂತಿದ್ದ ಬಾಲಕನನ್ನೂ, ತನ್ನ ಕೊರಲಲ್ಲಿ ಜೋಲಾಡುತಿದ್ದ ಸರ್ಪಶರೀರವನ್ನೂ ನೋಡಿ, ಆ ಸರ್ಪದೇಹವನ್ನು ತೆಗೆದು ಬಿಸಾಡಿದನು ಆಮೇಲೆ ಮಗನನ್ನು ಸಮೀಪಕ್ಕೆ ಕರೆದು, "ಎಲೈವತ್ಸನೆ ನೀನು ಅಳುವುದಕ್ಕೆ ಕಾರಣವೇನು? ನಿನಗೆ ಅಪಕಾರವನ್ನು ಮಾಡಿದವರು ಯಾರು? ಹೆದರಬೇಡ! ನಿನ್ನ ದುಃಖಕಾರಣವೇನು ಹೇಳು" ಎಂದನು. ಅದಕ್ಕಾ ಶೃಂಗಿಯು ತನ್ನ ದುಃಖವನ್ನು ತಡೆದಿಟ್ಟುಕೊಂಡು, ಯಾವನೋ ರಾಜನು ಬಂದು ಈ ಅಕೃತ್ಯ ವನ್ನು ಮಾಡಿ ಹೋದುದನ್ನೂ, ತಾನು ಅದಕ್ಕಾಗಿ ಶಾಪವನ್ನು ಕೊಟ್ಟುದನ್ನೂ ತಿಳಿಸಿದನು. ಇದನ್ನು ಕೇಳಿದ ಮೇಲೆ ಶಮೀಕಮಹರ್ಷಿಯು ತನ್ನ ಮಗನ ಕಾರ್ಯ ಕ್ಕಾಗಿ ತಾನು ಸ್ವಲ್ಪಮಾತ್ರವೂ ಸಂತೋಷವನ್ನು ತೋರಿಸದೆ "ಎಲೈ ಪುತ್ರನೆ! ನೀನು ಮಾಡಿದುದೇ ಬಹಳತಪ್ಪು! ಆ ರಾಜನು ನನ್ನ ವಿಷಯದಲ್ಲಿ ಮಾಡಿದ ಅಪ ರಾಧವು ಈ ಕ್ರೂರಶಾಪವನ್ನು ಕೊಡುವಷ್ಟು ದೊಡ್ಡದಲ್ಲ. ಅಪರಾಧದ ಬಲಾಬಲ ತಾರತಮ್ಯವನ್ನು ಯೋಚಿಸದೆ ಆತನಿಗೆ ಸರ್ಪದಷ್ಟನಾಗಿ ಸಾಯಲೆಂದು ಕ್ರೂರ ಶಾಪವನ್ನು ಕೊಟ್ಟೆಯಲ್ಲಾ! ಇಲ್ಲಿ ಬಂದಿದ್ದ ಕ್ಷತ್ರಿಯನು ಎಷ್ಟು ಧರ್ಮಾತ್ಮನೋ ಅದನ್ನೂ ನೀನು ತಿಳಿದುಕೊಳ್ಳದೆ ಹೀಗೆ ಶಾಪವನ್ನು ಕೊಡಬಹುದೆ? ಅಯ್ಯೋ! ಇನ್ನೂ ನಿನ್ನ ಬುದ್ಧಿಯು ರಾಗದ್ವೇಷಾದಿಗಳನ್ನು ಬಿಟ್ಟಿಲ್ಲವೆ? ಒಂದುವೇಳೆ ರಾಜರು ಪ್ರಜೆಗಳಿಗೆ ಅಪಕಾರವನ್ನು ಮಾಡಿದರೂ ಕೂಡ ಪ್ರಜೆಗಳುಮಾತ್ರ ರಾಜ ರ ವಿಷಯದಲ್ಲಿ ದ್ರೋಹವನ್ನೆಣಿಸಬಾರದು ರಾಜನನ್ನು ಪ್ರತ್ಯಕ್ಷವಿಷ್ಣುವೆಂದೇ ಭಾವಿಸಬೇಕು. ಪ್ರಜೆಗಳು ರಾಜರನ್ನು ಸರ್ವಥಾವಿಧದಿಂದಲೂ ಗೌರವಿಸಬೇಕು. ಪ್ರಜೆಗಳೆಲ್ಲರೂ ಶತ್ರುದುಸ್ಸಹವಾದ ಆ ರಾಜತೇಜಸ್ಸಿನಿಂದಲೇ ರಕ್ಷಿಸಲ್ಪಡುವರು. ಇವರಿಗೆ ಸಮಸ್ತಭಯವೂ ಆ ರಾಜನಿಂದಲೆ ನೀಗಿ, ಅವನಿಂದಲೇ ಸೌಖ್ಯವುಂಟಾ ಗುವುದು. ಆತನ ಪ್ರಜಾವರ್ಗದಲ್ಲಿ ಸೇರಿದ ನಾವೇ ಆತನಿಗೆ ಶಾಪಕೊಡುವುದೆಂದ

ಕೇನು? ಲೋಕಕ್ಷೇಮಕ್ಕಾಗಿಯೇ ಕಷ್ಟಪಡುತ್ತಿರುವ ರಾಜನನ್ನು,ಮರಣದಂಡನೆಗೆ ಗುರಿಮಾಡಬಹುದೆ? ಏಷ್ಟ್ವಂಶದಿಂದ ರಾಜ್ಯವಾಳುತ್ತಿರುವ ರಾಜನಿಲ್ಲದಮೇಲೆ ಪ್ರಜೆಗಳಿಗೆ ಕ್ಷೇಮವೆಲ್ಲಿ? ತೋಳಗಳ ಹಿಂಡಿನಲ್ಲಿ ಸಿಕ್ಕಿದ ಕುರಿಯ ಮಂದೆಯಂತೆ ಕ್ಷಣಮಾತ್ರದಲ್ಲಿಯೇ ನಾಶಹೊಂದುವರಲ್ಲವೆ? ವತ್ಸ! ರಾಜನಿಲ್ಲದ ರಾಜ್ಯದ ಸ್ಥಿತಿಯನ್ನು ಕೇಳಬೇಕೆ? ಪ್ರಜೆಗಳೆಲ್ಲರೂ ಚೋರಪ್ರಾಯರಾಗಿ, ಒಬ್ಬರ ಧನವನ್ನು ಮತ್ತೊಬ್ಬರು ಬಲಾತ್ಕಾರದಿಂದಲೂ, ಮೋಸದಿಂದಲೂ ಅಪಹರಿಸುವರು. ಒಬ್ಬರಿಗೊಬ್ಬರು ಹೊಡೆದಾಡಿ ಸಾಯುವರು. ಸ್ತ್ರೀಯರನ್ನೂ, ಬಲಾತ್ಕಾರದಿಂದ ವಶಪಡಿಸಿಕೊಳ್ಳುವರು. ವರ್ಣಾಶ್ರಮಾಚಾರಗಳೊಡನೆ ವೈದಿಕಕರ್ಮಗಳೆಲ್ಲವೂ ಕೆಟ್ಟುಹೋಗುವುವು. ಮನುಷ್ಯರಲ್ಲಿರುವ ಆರ್ಯಧರ್ಮಗಳೆಲ್ಲವೂ ನಶಿಸುವುವು. ಹೀಗೆ ಧರ್ಮಕ್ಕೆ ದಾರಿಯಿಲ್ಲದುದರಿಂದ ಪ್ರಜೆಗಳೆಲ್ಲರೂ ಅರ್ಥಕಾಮಗಳಲ್ಲಿಯೇ ದುರಾಸೆಯುಳ್ಳವರಾಗುವರು. ಇದರಿಂದ ಮನುಷ್ಯಜಾತಿಯೆಲ್ಲವೂ ನಾಯಿಗಳಂತೆಯೂ, ಕಪಿಗಳಂತೆಯೂ ಒಂದಾಗಿ ಕಲೆತು ಜಾತಿಭೇದಗಳಿಲ್ಲದೆ ಸಂಕೀರ್ಣವಾಗುವುದು. ಇವೆಲ್ಲಕ್ಕೂ ಅವಕಾಶಕೊಡದೆ ಪ್ರಜೆಗಳನ್ನು ಸರಿಯಾದ ದಾರಿಯಲ್ಲಿಟ್ಟು ಕಾಪಾಡುವ, ಲೋಕಕ್ಷೇಮಕರನಾದ ರಾಜನನ್ನು ಕೊಲ್ಲುವುದರಿಂದ ಮಹಾಪಾಪವು ಸಂಭವಿಸದೆ ಬಿಡದು. ಈಗ ನೀನು ಶಾಪವನ್ನು ಕೊಟ್ಟುದರಿಂದ ಆ ಪಾಪವನ್ನೆಲ್ಲಾ ನೀನೇ ಕಟ್ಟಿಕೊಂಡಂತಾಯಿತಲ್ಲವೆ? ಕುಮಾರಾ! ಈಗ ಬಂದಿದ್ದವನು ಯಾರೆಂದು ಬಲ್ಲೆ? ಪರಮಧರ್ಮಾತ್ಮನಾದ ಪರೀಕ್ಷಿದ್ರಾಜನಲ್ಲವೆ! ಅವನನ್ನು ಸಾಮಾನ್ಯರಾಜನೆಂದು ಭಾವಿಸಬೇಡ. ಉತ್ತಮವಾದ ಭರತವಂಶದಲ್ಲಿ ಹುಟ್ಟಿದವನು. ಕೆಟ್ಟುಹೋಗಿದ್ದ ವರ್ಣಾಶ್ರಮಧರ್ಮಗಳೆಲ್ಲವನ್ನೂ ತಿರುಗಿ ಸ್ಥಾಪಿಸಿದವನು. ಉದಾರಕೀರ್ತಿಯುಳ್ಳವನು. ಸಕಲರಾಜಸಾರ್ವಭೌಮನು. ವಿಧ್ಯುಕ್ತವಾಗಿ ಅನೇಕಾಶ್ವಮೇಧಗಳನ್ನು ನಡೆಸಿದವನು. ಪರಮಭಾಗವತೋತ್ತಮನು. ಅಂತಹ ಮಹಾನುಭಾವನು ದಾಹದಿಂದ ಪೀಡಿತನಾಗಿ ನೀರಿಗೋಸ್ಕರ ನಮ್ಮಾಶ್ರಮಕ್ಕೆ ಬಂದಾಗ ನಾವು ಆತನಿಗೆ ನೀರನ್ನು ಕೊಟ್ಟು ಸತ್ಕರಿಸುವುದುಚಿತವೆ? ಶಾಪವನ್ನು ಕೊಟ್ಟು ಕೊಲ್ಲುವುದುಚಿತವೆ? ನೀನೇ ಇದನ್ನು ಯೋಚಿಸು.'' ಎಂದು ಹೇಳಿ ಭಗವಂತನನ್ನು ಪ್ರಾರ್ಥಿಸುವನು. ಎಲೈ ದೇವದೇವನೆ! ಬಾಲನಾದ ನನ್ನ ಮಗನು, ವಿವೇಕಶೂನ್ಯನಾಗಿ, ತನ್ನ ಬುದ್ಧಿಚಾಪಲ್ಯದಿಂದ ತಕ್ಕಷ್ಟು ಅಪರಾಧವಿಲ್ಲದಿದ್ದರೂ ನಿನ್ನ ಭಕ್ತನನ್ನು ಶಪಿಸಿರುವನು. ಎಲೈ ದಯಾಸಮುದ್ರನೆ! ನನ್ನಲ್ಲಿ ಕೃಪೆಯಿಟ್ಟು ಈ ಬಾಲನನ್ನು ಮನ್ನಿಸಬೇಕು. ರಾಜದ್ರೋಹದಿಂದುಂಟಾಗುವ ಪಾಪವು ನಮಗೆ ಸಂಭವಿಸದಂತೆ ರಕ್ಷಿಸಬೇಕು.

ಹೇ ಕೃಷ್ಣಾ! ಹೇ ಮುಕುಂದಾ! ನಿನಗೆ ನಮಸ್ಕಾರವು. ಲೋಕದಲ್ಲಿ ಭಾಗವತೋತ್ತಮರು, ತಮ್ಮನ್ನು ಬೇರೊಬ್ಬರು ತಿರಸ್ಕರಿಸಿದರೂ, ವಂಚಿಸಿದರೂ, ನಿಂದಿಸಿದರೂ ಶಪಿಸಿದರೂ ಹೊಡೆದರೂ, ಸಹಿಸಿಕೊಳ್ಳುವರೇಹೊರತು, ಕೋಪಿಸಿ ಪ್ರತ್ಯಪಕಾರವನ್ನು ಮಾಡುವುದಕ್ಕೆ ಸಮ್ಮತಿಸರು? ಧರ್ಮವನ್ನು ಮೀರಿ ಹೋದ ನನ್ನ ಬಾಲನ ವಿಷಯದಲ್ಲಿ ಅವರಾದರೂ ದಯೆಯನ್ನು ತೋರಿಸಲಿ! ಎಂದು ದೈನ್ಯದಿಂದ ಪ್ರಾರ್ಥಿಸಿದನು. ಹೀಗೆ ಶಮೀಕಮಹರ್ಷಿಯು ತನ್ನ ಮಗನ ಕಾರ್ಯಕ್ಕಾಗಿಯೇ ತಾನು ದುಃಖಿಸುತಿದ್ದನೇ ಹೊರತು, ತನ್ನ ವಿಷಯದಲ್ಲಿ ಪರೀಕ್ಷಿದ್ರಾಜನು ಮಾಡಿದ ಅಪರಾಧಕ್ಕಾಗಿ ಸ್ವಲ್ಪವಾದರೂ ಕೋಪವನ್ನಾಗಲಿ, ಅಸಮಾಧಾನವನ್ನಾಗಲಿ ತೋರಿಸಲಿಲ್ಲ. ಎಲೈ ಶೌನಕಾದಿಗಳೆ! ಇದಲ್ಲವೇ ಸಜ್ಜನರ ಸ್ವಭಾವವು! ಸತ್ಪುರುಷರ ಮನಸ್ಸು ಎಂತಹ ಸ್ಥಿತಿಯಲ್ಲಿಯೂ ರಾಗ ದ್ವೇಷಾದಿಗಳಿಗೆ ಅವಕಾಶವನ್ನು ಕೊಡುವುದಿಲ್ಲ. ಇದರಿಂದ ಸಾಧುಗಳು ತಮಗೆ ಸುಖವುಂಟಾದಾಗ ಸಂತೋಷವನ್ನಾಗಲಿ, ದುಃಖವುಂಟಾದಾಗ ವ್ಯಥೆಯನ್ನಾಗಲಿ ಹೊಂದುವವರಲ್ಲ ಇದು ಹದಿನೆಂಟನೆಯ ಅಧ್ಯಾಯವು.

---

### ಪರೀಕ್ಷಿನ್ಮಹಾರಾಜನು ಚಿಂತಾಕುಲನಾಗಿ ದುಃಖಿಸಿದುದು

ಇತ್ತಲಾ ಪರೀಕ್ಷಿನ್ಮಹಾರಾಜನು ಪಟ್ಟಣವನ್ನು ಪ್ರವೇಶಿಸಿದ ಮೇಲೆ ತಾನು ಮಾಡಿ ಬಂದ ಕಾರ್ಯಕ್ಕಾಗಿ ಪಶ್ಚಾತ್ತಾಪಗೊಂಡು ದುಃಖಿಸುತ್ತ, ತನ್ನನ್ನು ತಾನೇ ನಿಂದಿಸಿಕೊಳ್ಳುತಿದ್ದನು. ಹೀಗೆ ಚಿಂತಾಕುಲನಾದ ರಾಜನು ತನ್ನಲ್ಲಿ ತಾನು "ಅಯ್ಯೋ! ಕೇವಲ ಶಾಂತನಾಗಿ, ತನ್ನ ತೇಜಸ್ಸನ್ನು ಗೂಢವಾಗಿಟ್ಟುಕೊಂಡು ಸಮಾಧಿಯನ್ನು ಹಿಡಿದಿದ್ದ ನಿರಪರಾಧಿಯಾದ ಆ ಮಹರ್ಷಿಯ ಕಂಠದಲ್ಲಿ ನಿಷ್ಕಾರಣವಾಗಿ ಸತ್ತ ಹಾವನ್ನು ಸಿಕ್ಕಿಸಿ ಅವಮಾನಪಡಿಸಿ ಬಂದೆನಲ್ಲಾ, ಅಕಟಾ! ನನಗೇಕೆ ಈ ದುರ್ಬುದ್ಧಿಯು ಹುಟ್ಟಿತು! ಈ ಅಕೃತ್ಯದಿಂದ ನನಗೆ ಮಹಾಪಾತಕವು ಸಂಭವಿಸದೆ ಬಿಡದು ಇದರಿಂದ ನಾನು ಆ ಬ್ರಾಹ್ಮಣನನ್ನು ಮಾತ್ರವೇ ಅವಮಾನಪಡಿಸಿದಂತಾಗಲಿಲ್ಲ. ಸಾಕ್ಷಾತ್ ಭಗವಂತನನ್ನೇ ಅವಮಾನಪಡಿಸಿ ಬಂದಂತಾಯಿತು. ಇದರಿಂದ ನನಗೆ ಶೀಘ್ರದಲ್ಲಿಯೇ ಮಹಾವಿಪತ್ತು ಬಂದೊದಗದಿರದು. ಆದರೇನು? ಪಾಪಿಯಾದ ನನಗೆ ಪ್ರಾಯಶ್ಚಿತ್ತರೂಪವಾಗಿ ಆ ದುಃಖವು ಬಂದೇ ತೀರಬೇಕು! ಅದು ನನಗೆ ಹಿತವಲ್ಲದೆ ಬೇರೆಯಲ್ಲ. ಅದರಿಂ

ದಲೇ ನನಗೆ ಪಾಪಶುದ್ಧಿಯಾಗಿ, ಇನ್ನು ಮೇಲೆಯಾದರೂ ಇಂತಹ ಪಾಪಕಾರ್ಯಗಳಿಗೆ ನನ್ನ ಬುದ್ಧಿಯು ಪ್ರವರ್ತಿಸದಂತಾಗುವುದರಿಂದ, ಯಾವ ವಿಪತ್ತು ಬಂದರೂ ಬರಲಿ! ಕುಪಿತನಾದ ಆ ಮಹರ್ಷಿಯ ಶಾಪವೆಂಬ ಕಾಲಾಗ್ನಿಯು ಈಗಲೇ ನನ್ನ ಕುಲವನ್ನೂ ನನ್ನ ರಾಜ್ಯವನ್ನೂ, ನನ್ನ ಧನವನ್ನೂ ದಹಿಸಿದರೂ ದಹಿಸಲಿ! ಇದರಿಂದಲಾದರೂ ನನ್ನ ಬುದ್ಧಿಯು ತಿರುಗಿ ಗೋಬ್ರಾಹ್ಮಣರಿಗೂ ದೇವತೆಗಳಿಗೂ ಅಪಕಾರವನ್ನು ಮಾಡುವುದರಲ್ಲಿ ಪ್ರವರ್ತಿಸದಿರಲಿ!" ಎಂದು ಮನಸ್ಸಿನಲ್ಲಿ ಚಿಂತಿಸುತಿದ್ದನು. ಇಷ್ಟರಲ್ಲಿ ಆತನಿಗೆ ಆ ಮಹರ್ಷಿಯ ಶಾಪದಿಂದ ಏಳನೆಯ ದಿನದಲ್ಲಿ ತಕ್ಷಕನ ವಿಷಾಗ್ನಿಯಿಂದ ಮರಣವು ಪ್ರಾಪ್ತವಾಗುವುದೆಂಬ ಸಂಗತಿಯು ತಿಳಿದು ಬಂದಿತು. ಇದನ್ನು ಕೇಳಿಯೂ ಕೂಡ ಪರೀಕ್ಷಿದ್ರಾಜನು ವಿಷಯಾಸಕ್ತನಾದ ತನಗೆ ಈ ವಿಪತ್ತೇ ವಿರಕ್ತಿಕಾರಣವಾಗುವುದೆಂದು ಸಂತೋಷಿಸುತ್ತಲೇ ಇದ್ದನು. ಇದನ್ನೇ ಮನಸ್ಸಿನಲ್ಲಿಟ್ಟುಕೊಂಡು ಪರೀಕ್ಷಿದ್ರಾಜನು ಇಹಲೋಕಸುಖವಾಗಲಿ, ಸ್ವರ್ಗಸುಖವಾಗಲಿ, ಅಶಾಶ್ವತಗಳೆಂದು ನಿಶ್ಚಯಿಸಿಕೊಂಡು, ಆಗಲೇ ತನ್ನ ರಾಜ್ಯವನ್ನು ಬಿಟ್ಟು ಶ್ರೀಹರಿಯ ಪಾದಭಜನವೊಂದೇ ನಿರತಿಶಯ ಪುರುಷಾರ್ಥಕ್ಕೆ ಸಾಧನವೆಂದು ನಿರ್ಧರಿಸಿ ಹೊರಟುಬಿಟ್ಟನು. ರಾಜ್ಯವನ್ನು ಬಿಟ್ಟೊಡನೆ ನೆಟ್ಟಗೆ ಗಂಗಾತೀರಕ್ಕೆ ಹೋದನು. ತುಲಸೀಮಿಶ್ರವಾದ ಶ್ರೀವಿಷ್ಣುಪಾದಧೂಳಿಯಿಂದ ಪ್ರಶಸ್ತವಾದ ಜಲಪ್ರವಾಹವುಳ್ಳದಾಗಿ, ಲೋಕಪಾಲಕರು ಮೊದಲುಗೊಂಡು ಸಮಸ್ತಜಗತ್ತನ್ನೂ ಪಾವನಮಾಡತಕ್ಕ ಗಂಗಾನದಿಯ ತೀರಕ್ಕೆ ಹೋಗಿ, ಅಲ್ಲಿ ಪ್ರಾಯೋಪವೇಶವನ್ನು ಮಾಡಬೇಕೆಂದು ನಿಶ್ಚಯಿಸಿಬಿಟ್ಟನು. ಇದೇ ಮೋಕ್ಷ ಸಾಧನವೆಂದೂ ತಿಳಿದು, ತನ್ನ ದೇಹದಲ್ಲಿಯೂ, ದೇಹಸಂಬಂಧಗಳಲ್ಲಿಯೂ ಅಭಿಲಾಷೆಯನ್ನು ಬಿಟ್ಟು, ಬೇರೆ ಯಾವ ವಸ್ತುಗಳಲ್ಲಿಯೂ ಮನಸ್ಸನಿಡದೆ, ಕೇವಲ ಮೌನದಿಂದ ಶ್ರೀಕೃಷ್ಣನ ಪಾದಾರವಿಂದಗಳನ್ನು ಧ್ಯಾನಿಸುತಿದ್ದನು. ಇಷ್ಟರಲ್ಲಿ, ತೀರ್ಥಯಾತ್ರೆಯೆಂಬ ನೆವದಲ್ಲಿ ಅನೇಕ ಪುಣ್ಯತೀರ್ಥಗಳಿಗೂ ತಮ್ಮ ಸಂಬಂಧದಿಂದ ಪವಿತ್ರತೆಯನ್ನುಂಟುಮಾಡತಕ್ಕ ಎಷ್ಟೋಮಂದಿ ಮಹರ್ಷಿಶ್ರೇಷ್ಠರು ತಮ್ಮತಮ್ಮ ಶಿಷ್ಯರೊಡಗೂಡಿ ಆ ಸ್ಥಳಕ್ಕೆ ಬಂದು ಸೇರಿದರು. ಅತ್ರಿಮುನಿ, ವಸಿಷ್ಠರು, ಚ್ಯವನರು, ಶರದ್ವಂತರು, ಅರಿಷ್ಟನೇಮಿ, ಭೃಗು ಅಂಗಿರಸ್ಸು, ಪರಾಶರರು, ಮುಂತಾದ ಮುನಿಶ್ರೇಷ್ಠರೆಲ್ಲರೂ, ಬಂದರು. ಹಾಗೆಯೇ ವಿಶ್ವಾಮಿತ್ರರು, ಪರಶುರಾಮರು ಉಚಥ್ಯ, ಇಂದ್ರಪ್ರಮದ, ಇಧ್ಮವಾಹ, ಮೇಧಾತಿಥಿ, ದೇವಲ, ಆರ್ಷ್ಟಿಷೇಣ, ಭಾರದ್ವಾಜ, ಗೌತಮ, ಪಿಪ್ಪಲಾದ, ಮೈತ್ರೇಯ, ಔರ್ವ, ಕವಷ, ಅಗಸ್ತ್ಯ, ವ್ಯಾಸ, ನಾರದರೇ ಮೊದಲಾದ ಮಹರ್ಷಿಗಳೆಲ್ಲರೂ ಬಂದು ನೆರೆದರು. ಇನ್ನೂ

ಬೇರೆಬೇರೆ ದೇವರ್ಷಿಗಳೂ, ಬ್ರಹ್ಮರ್ಷಿಗಳೂ, ರಾಜರ್ಷಿಗಳೂ, ಅರುಣಾದಿಋಷೀಶ್ವರರೂ ಆ ಪರೀಕ್ಷಿತ್ತನ್ನು ನೋಡಬೇಕೆಂಬ ಕುತೂಹಲದಿಂದ ಬಂದರು. ಇವರೆಲ್ಲರೂ ಬಂದುದನ್ನು ನೋಡಿ ಪರೀಕ್ಷಿದ್ರಾಜನು, ಅವರನ್ನಿದಿರುಗೊಂಡು ಪೂಜಾದಿಗಳಿಂದ ಸತ್ಕರಿಸಿ ನಮಸ್ಕರಿಸಿದನು. ಎಲ್ಲರೂ ಸುಖಾಸೀನರಾಗಿ ಕುಳಿತಮೇಲೆ, ಮತ್ತೊಮ್ಮೆ ಅವರೆಲ್ಲರನ್ನೂ ನಮಸ್ಕರಿಸಿ, ಆ ಮಹಾತ್ಮರ ಸಭೆಗಿದಿರಾಗಿ ಕೈಮುಗಿದು ನಿಂತು, ನಿಷ್ಕಲ್ಮಷವಾದ ಮನಸ್ಸಿನಿಂದ ತನ್ನ ಉದ್ದೇಶವನ್ನು ಅವರಲ್ಲಿ ಹೀಗೆಂದು ವಿಜ್ಞಾಪಿಸಿಕೊಳ್ಳುವನು! “ಎಲೈ ಮಹರ್ಷಿಗಳೇ! ನನ್ನ ಭಾಗ್ಯವೇ ಭಾಗ್ಯವು! ರಾಜಕುಲದಲ್ಲಿ ನಮ್ಮ ಕುಲವೇ ಧನ್ಯವು. ಹಾಗಿಲ್ಲದ ಪಕ್ಷದಲ್ಲಿ ನಿಮ್ಮಂತಹ ಮಹಾತ್ಮರ ಅನುಗ್ರಹಕ್ಕೆ ನಾವು ಪಾತ್ರರಾಗುವುದೆಂದರೇನು? ರಾಜಕುಲದವರ ಕಾರ್ಯವೇ ಬಹಳ ನಿಂದನೀಯವಾದುದು ನಿಮ್ಮಂತಹ ಬ್ರಾಹ್ಮಣೋತ್ತಮರ ಪಾದಸೇವೆಯಿಂದುಂಟಾಗತಕ್ಕ ಪರಿಶುದ್ಧಿಗೂ, ನಿಂದ್ಯವಾದ ಈ ರಾಜವಂಶಕ್ಕೂ ಪರಸ್ಪರಸಂಬಂಧವು ಲಭಿಸುವುದೇ ದುರ್ಲಭವಲ್ಲವೆ? ಆಹಾ! ಇದಲ್ಲವೇ ಆಶ್ಚರ್ಯವು. ನಾನು ಭಯಂಕರವಾದ ಸಂಸಾರಪಾಶದಲ್ಲಿ ಸಿಕ್ಕಿ, ಅದರಬಾಧೆಯನ್ನು ತಪ್ಪಿಸಿಕೊಳ್ಳಲಾರದೆ ಈ ದೇಹವನ್ನು ಬಿಡುವುದಕ್ಕೆ ತಕ್ಕ ಮಾರ್ಗವಾವುದೆಂದು ಚಿಂತಿಸುತ್ತಿರುವ ಸಮಯಕ್ಕೆ ಸರಿಯಾಗಿ ನನಗೆ ಬ್ರಾಹ್ಮಣಶಾಪವೊಂದು ಮುಕ್ತಿಕಾರಣವಾಗಿ ಬಂದೊದಗಿತು. ಅಹಂಕಾರ, ಮಮಕಾರಗಳಿಂದ ಬೀಗಿ ಮರೆಯುತಿದ್ದ ನನ್ನಲ್ಲಿ, ಆ ಶ್ರೀಹರಿಯೇ ಕರುಣಿಸಿ, ಈ ಬ್ರಾಹ್ಮಣಶಾಪವೆಂಬ ನೆವದಿಂದ ಸರ್ವಸಂಗ ಪರಿತ್ಯಾಗವಾಗುವಂತೆ ಮಾಡಿದನು. ಎಲೈ ಮಹರ್ಷಿಗಳೇ! ಶೀಘ್ರದಲ್ಲಿಯೇ ನೀವು ನನಗೆ ಅಭಯವನ್ನು ಕೊಟ್ಟು ರಕ್ಷಿಸಬೇಕು. ಮಹಾತ್ಮರಾದ ನೀವೂ, ಈ ಗಂಗಾದೇವಿಯೂ ಭಗವಂತನಲ್ಲಿಯೇ ದೃಢಮನಸ್ಸುಳ್ಳ ನನ್ನನ್ನು ನಿಮ್ಮ ಸೇವಕನನ್ನಾಗಿ ಗ್ರಹಿಸಬೇಕು. ಬ್ರಾಹ್ಮಣಶಾಪದಿಂದ ಪ್ರೇರಿತನಾದ ತಕ್ಷಕನು ತನಗಿಷ್ಟಬಂದಂತೆ ನನ್ನನ್ನು ಕಚ್ಚಿದರೂ ಕಚ್ಚಲಿ! ಅದಕ್ಕಾಗಿ ನಾನು ಹೆದರುವವನಲ್ಲ. ಆದರೆ ಅದುವರೆಗೂ ನೀವು ನನ್ನ ಕಿವಿಗೆ ಬೀಳುವಂತೆ ವಿಷ್ಣುಕಥೆಗಳನ್ನು ಗಾನಮಾಡುತ್ತ ನನ್ನನ್ನುದ್ಧರಿಸಬೇಕು. ಭಗವಂತನಲ್ಲಿ ಭಕ್ತಿಯೂ, ಆತನ ಭಕ್ತರಲ್ಲಿ ಅನುರಾಗವೂ ನನಗೆ ದೃಢವಾಗಿ ಹುಟ್ಟುವಂತೆ ಅನುಗ್ರಹಿಸಬೇಕು. ಇನ್ನು ಮುಂದಿನ ಜನ್ಮಗಳಲ್ಲಿಯೂ ನನಗೆ ಆ ಶ್ರೀವಿಷ್ಣುವಿನಲ್ಲಿ ಭಕ್ತಿಯೂ, ಆ ಶ್ರೀ ಹರಿಯ ಗುಣಕೀರ್ತನೆಗಳನ್ನು ಕೇಳುವುದರಲ್ಲಿ ಆಸಕ್ತಿಯೂ, ಆ ಪರಮಾತ್ಮನ ಪಾದಸೇವೆಯನ್ನು ಮಾಡುವ ಭಾಗ್ಯವೂ ಲಭಿಸುವಂತೆ ಅನುಗ್ರಹಿಸಬೇಕು.” ಎಂದು ಬದ್ಧಾಂಜಲಿಯಾಗಿ ಪ್ರಾರ್ಥಿಸಿ, ಗಂಗೆಯ ದಕ್ಷಿಣತೀರ

ದಲ್ಲಿ ಉತ್ತರಾಭಿಮುಖನಾಗಿ ಪೂರ್ವಾಗ್ರವಾದ ದರ್ಭಾಸನದಲ್ಲಿ ಕುಳಿತನು. ಆತನ ದೃಢನಿಶ್ಚಯವನ್ನು ಮಹರ್ಷಿಗಳೆಲ್ಲರೂ ಕೊಂಡಾಡುತಿದ್ದರು ಇದೇ ಸಮಯದಲ್ಲಿ ದೇವತೆಗಳು ಪರಮಸಂತೋಷದಿಂದ ದೇವದುಂದುಭಿಗಳನ್ನು ನುಡಿಸುತ್ತ ಆಕಾಶದಿಂದ ಪುಷ್ಪವರ್ಷಗಳನ್ನು ಕರೆದರು. ಅಲ್ಲಿ ಬಂದಿದ್ದ ಮಹರ್ಷಿಗಳೆಲ್ಲರೂ ಪರೀಕ್ಷಿದ್ರಾಜನ ಗುಣಾತಿಶಯಗಳನ್ನು ನೋಡಿ, "ಭಲೆ, ಭಲೆ" ಎಂದು ಕೊಂಡಾಡುತ್ತ, ಆತನನ್ನು ಕುರಿತು "ಎಲೈ ರಾಜಶ್ರೇಷ್ಠನೆ! ಈಗ ನೀನು ಭಗವತ್ಸಾನ್ನಿಧ್ಯವೊಂದನ್ನೇ ಅಪೇಕ್ಷಿಸಿ, ಸಮಸ್ತರಾಜರಿಗೂ ಆಸೆಯನ್ನು ಹುಟ್ಟಿಸತಕ್ಕ ಸಾರ್ವಭೌಮಸಿಂಹಾಸನವನ್ನೇ ಬಿಟ್ಟು ಬಂದೆಯಲ್ಲವೇ? ಯಾವಾಗಲೂ ಶ್ರೀಕೃಷ್ಣಪಾದಸೇವೆಯಲ್ಲಿ ನಿರತರಾದ ನಿನ್ನಂತಹ ಭಕ್ತರು ಈ ಕಾರ್ಯವನ್ನು ನಡೆಸುವದೇನೂ ಆಶ್ಚರ್ಯವಲ್ಲ" ಎಂದುಹೇಳಿ, ತಮ್ಮೊಳಗೆ ತಾವು "ಭಗವದ್ಭಕ್ತರಲ್ಲಿ ದೃಢವಿಶ್ವಾಸವುಳ್ಳ ಈತನು ಈ ದೇಹವನ್ನು ಬಿಟ್ಟು ಶುದ್ಧಸತ್ವಮಯವಾಗಿಯೂ, ಅಪಹತಪಾಪ್ಮತ್ವವೇ ಮೊದಲಾದ ಎಂಟುಬಗೆ ಗುಣಗಳ ಉತ್ಪತ್ತಿಸ್ಥಾನವಾಗಿಯೂ ಇರುವ ಪರಲೋಕವನ್ನು ಹೊಂದುವವರೆಗೆ, ನಾವೆಲ್ಲರೂ ಇವನ ಸಮೀಪದಲ್ಲಿಯೇ ಇರುವೆವು" ಎಂದರು. ನಿಷ್ಕಪಟವಾಗಿಯೂ, ಅಮೃತಪ್ರಾಯವಾಗಿಯೂ ಇರುವ ಆ ಮಹರ್ಷಿಗಳ ವಾಕ್ಯವನ್ನು ಕೇಳಿದೊಡನೆ ಪರೀಕ್ಷಿದ್ರಾಜನಿಗೆ ವಿಶೇಷವಾದ ಸಂತೋಷವು ಹುಟ್ಟಿತು. ತಿರುಗಿ ರಾಜನು ಅವರೆಲ್ಲರಿಗೂ ನಮಸ್ಕರಿಸಿ ಶ್ರೀಹರಿಚರಿತ್ರವನ್ನು ಕೇಳಬೇಕೆಂಬ ಕುತೂಹಲದಿಂದ ಹೀಗೆಂದು ಪ್ರಾರ್ಥಿಸುವನು. "ಎಲೈ ಮಹರ್ಷಿಗಳೇ! ಸತ್ಯಲೋಕದಲ್ಲಿ ಮೂರ್ತಿಮತ್ತಾದ ವೇದಸಮೂಹದಂತೆ ಪ್ರಕಾಶಿಸುವ ನೀವೆಲ್ಲರೂ ನಾನಾದಿಕ್ಕುಗಳಿಂದ ಇಲ್ಲಿಗೆ ಬಂದು ಸೇರಿರುವಿರಿ! ನಮ್ಮಂತವರನ್ನು ಅನುಗ್ರಹಿಸುವುದೇ ನಿಮಗೆ ಸ್ವಭಾವವು. ಇಷ್ಟೇ ಹೊರತು ಈ ಲೋಕದಲ್ಲಿಯಾಗಲಿ, ಪರಲೋಕದಲ್ಲಿಯಾಗಲಿ, ನಿಮಗೆ ಆಗಬೇಕಾದ ಪ್ರಯೋಜನವೇನೂ ಇಲ್ಲವು. ಆದುದರಿಂದ ನಿಮ್ಮನ್ನಾಶ್ರಯಿಸಿ ನಾನು ನಡೆಸಬೇಕಾದ ಕಾರ್ಯವೊಂದುಂಟು. ಅದನ್ನು ಪ್ರಾರ್ಥಿಸಿಕೊಳ್ಳುವೆನು. ಸಾಯುವುದಕ್ಕೆ ಸಿದ್ಧನಾದ ಮನುಷ್ಯನು, ತನ್ನ ಕರಣತ್ರಯಗಳಿಂದಲೂ ನಡೆಸಬೇಕಾದ ಕರ್ಮವಾವುದುಂಟೋ ಅದನ್ನು ನೀವು ಚೆನ್ನಾಗಿ ವಿಮರ್ಶಿಸಿ ನನಗೆ ತಿಳಿಸಬೇಕು" ಎಂದನು. ಹೀಗೆ ಪ್ರಶ್ನೆಮಾಡುತ್ತಿರುವ ಆ ಪರೀಕ್ಷಿದ್ರಾಜನಿಗೆ ತಕ್ಕ ಪ್ರತ್ಯುತ್ತರವನ್ನು ಹೇಳುವುದಕ್ಕಾಗಿ ಆ ಮಹರ್ಷಿಗಳೆಲ್ಲರೂ ಆಲೋಚಿಸುತ್ತಿರುವ ಸಮಯಕ್ಕೆ ಸರಿಯಾಗಿ, ಸ್ವೇಚ್ಛೆಯಿಂದ ಭೂಮಂಡಲವನ್ನು ಸುತ್ತುತಿದ್ದ ವ್ಯಾಸಪುತ್ರನಾದ ಶುಕಮುನಿಯು ಅಕಸ್ಮಾತ್ತಾಗಿ ಅಲ್ಲಿಗೆ ಬಂದು ಸೇರಿದನು.

ಆ ಶುಕಮಹರ್ಷಿಯು ಮಧ್ಯಯೌವನದಲ್ಲಿದ್ದರೂ ಸ್ವಲ್ಪಮಾತ್ರವೂ ವಿಷಯಾಸಕ್ತಿಯಿಲ್ಲದೆ, ಕೇವಲ ವಿರಕ್ತನಾಗಿಯೇ ತಿರುಗುತಿದ್ದವನು. ಮೈಮೇಲೆ ಆಶ್ರಮಸಂಬಂಧವಾದ ಚಿಹ್ನೆಗಳೊಂದಾದರೂ ಇಲ್ಲದೆ ಅವಧೂತವೇಷದಿಂದೊಪ್ಪುತ್ತಿದ್ದನು. ಮತ್ತು ಆತನು ಬ್ರಹ್ಮಾತ್ಮಕವಾದ ಆತ್ಮಾನುಭವದಿಂದಲೇ ಆನಂದಿಸುತ್ತಿದ್ದನು. ನೋಡಿದವರೆಲ್ಲರಿಗೂ ಅವನ ವೇಷವು ಕೇವಲಹಾಸ್ಯಾಸ್ಪದವಾದ ಸ್ಥಿತಿಯಲ್ಲಿದ್ದಿತು. ಇದಕ್ಕಾಗಿಯೇ ಅವನು ಹೋದಕಡೆಗಳಲ್ಲೆಲ್ಲಾ ಬಾಲಕರು ಅವನನ್ನು ಸುತ್ತಿಮುತ್ತಿಕೊಂಡು ಪರಿಹಾಸ್ಯಮಾಡುತ್ತಿರುವರು. ಅವನ ಕರಚರಣಾದ್ಯವಯವಗಳೆಲ್ಲವೂ ಬಹಳ ಸುಕುಮಾರಗಳಾಗಿದ್ದುವು. ಆತನು ಇನ್ನೂ ಹದಿನಾರುವಯಸ್ಸಿನ ಕುಮಾರನು. ಅತಿ ಸುಂದರವಾದ ನೆತ್ತಿಯೂ, ಅವನ ವಿಶಾಲವಾದ ಕಣ್ಣುಗಳೂ, ಉಬ್ಬಿದ ಮೂಗೂ, ಒಂದಕ್ಕೊಂದು ಸಮಾನವಾದ ಕಿವಿಗಳೂ, ಬಾಗಿದ ಹುಬ್ಬುಗಳೂ, ಲೋಕವ್ಯಾಮೋಹಕಗಳಾಗಿದ್ದುವು. ಅವನ ಕಂಠವು ಶಂಖವನ್ನು ಹೋಲುತ್ತಿರುವುದು. ಅವನ ಭುಜಗಳೆರಡೂ ಮಾಂಸದಿಂದ ತುಂಬಿ ಶೋಭಿಸುತಿದ್ದುವು. ಇವನ ಎದೆಯು ವಿಶಾಲವಾಗಿ ಉಬ್ಬಿದ್ದಿತು. ಸುಳಿಯಂತಿರುವ ನಾಭಿಯಿಂದಲೂ, ಸ್ಪಷ್ಟವಾಗಿ ಕಾಣುವ ತ್ರಿವಳಿಗಳಿಂದಲೂ ಕೂಡಿದ ಆತನ ಉದರಪ್ರದೇಶವು ಅತಿ ಸುಂದರವಾಗಿದ್ದಿತು. ಆತನು ಕಾಮಕ್ರೋಧಾದಿಗಳನ್ನು ಹೇಗೋ ಹಾಗೆ ಮೈಮೇಲಿನ ಬಟ್ಟೆಯನ್ನೂ ಬಿಟ್ಟು, ಯಥೇಚ್ಛವಾಗಿ ತಿರುಗುತಿದ್ದನು. ಆತನ ಬಿಚ್ಚಿದ ಕೇಶಪಾಶಗಳು ಮೈಯೆಲ್ಲವನ್ನೂ ಮರೆಸುವಂತೆ ಕೆದರಿದ್ದುವು. ಆತನ ಉದ್ದವಾದ ತೋಳುಗಳು ಮೊಳಕಾಲಿನ ವರೆಗೆ ನೀಡಿದ್ದುವು. ಆತನ ದಿವ್ಯತೇಜಸ್ಸು ನೋಡುವುದಕ್ಕೆ ಬಹಳ ರಮ್ಯವಾಗಿ ಕಾಣುತ್ತಿತ್ತು. ಅವನ ಸೌಂದರ್ಯವು ಸಮಸ್ತಭಾಮಿನಿಯರಿಗೂ ಮೋಹಜನಕವಾಗಿದ್ದಿತು. ಇಂತಹ ಮಹಾನುಭಾವನಾದ ಶುಕಮುನಿಯನ್ನು ಕಂಡೊಡನೆ, ಅಲ್ಲಿದ್ದ ಮಹರ್ಷಿಗಳೆಲ್ಲರೂ ತಮ್ಮತಮ್ಮ ಆಸನಗಳಿಂದ ಮೇಲೆದ್ದು ನಿಂತು, ಅವನನ್ನು ಗೌರವಿಸಿ ಬರಮಾಡಿಕೊಂಡರು. ಹಾಗೆಯೇ ಪರೀಕ್ಷಿನ್ಮಹಾರಾಜನೂ ಕೂಡ ಪ್ರತ್ಯುತ್ಥಾನಮಾಡಿ ನಮಸ್ಕರಿಸಿ, ಯಥಾವಿಧಿಯಾಗಿ ಆ ಶುಕಮುನಿಯನ್ನು ಪೂಜಾದಿಗಳಿಂದ ಸತ್ಕರಿಸಿದನು. ಎಲೈ ಶೌನಕಾದಿಗಳೇ! ಮೈಮೇಲೆ ಬಟ್ಟೆಯಿಲ್ಲದೆ, ತಲೆಕೂದಲನ್ನು ಕೆದರಿಕೊಂಡು, ಹುಚ್ಚನಂತೆ ತಿರುಗುತ್ತಿದ್ದ ಆ ಶುಕಮುನಿಯನ್ನು ಸುತ್ತಿಮುತ್ತಿಕೊಂಡು, ಆತನನ್ನು ಹಾಸ್ಯಮಾಡುತ್ತ, ಅವನ ಹಿಂದೆ ಬರುತ್ತಿದ್ದ ಅಜ್ಞರಾದ ಅನೇಕಬಾಲಕರೂ, ಸ್ತ್ರೀಯರೂ, ಅಲ್ಲಿ ಅನೇಕ ಮಹರ್ಷಿಗಳ ನಡುವೆ ಆತನಿಗುಂಟಾದ ಮಹಾಗೌರವವನ್ನೂ, ಸತ್ಕಾರಗಳನ್ನೂ ನೋಡಿದರು. ಆಮೇಲೆ, ಅವರಿಗೂ ಆತನು ಯಾರೋ ಮಹಾತ್ಮನೆಂಬ ಭಾವವು

ಹುಟ್ಟಿತು. ಒಡನೆಯೇ ಅವರೆಲ್ಲರೂ ಭಯದಿಂದ ಹಿಂತಿರುಗಿಬಿಟ್ಟರು. ಆಮೇಲೆ ಪರೀಕ್ಷಿದ್ರಾಜನು ಶುಕನಿಗೆ ಉನ್ನತಾಸನವೊಂದನ್ನು ಸಮರ್ಪಿಸಿ, ತಾನೂ ತನಗೆ ಯೋಗ್ಯವಾದ ಆಸನದಲ್ಲಿ ಕುಳಿತನು. ಮಹಾತ್ಮರಲ್ಲಿಯೂ ಮಹಾತ್ಮನಾದ ಆ ಶುಕನು, ಅನೇಕದೇವರ್ಷಿಗಳಿಂದಲೂ, ರಾಜರ್ಷಿಗಳಿಂದಲೂ, ಮಹರ್ಷಿಗಳಿಂದಲೂ ತುಂಬಿದ ಆ ಮಹಾಸಭೆಯಲ್ಲಿ ಪರೀಕ್ಷಿದ್ರಾಜನು ತನಗೆ ಕೊಟ್ಟ ಪೀಠದಲ್ಲಿ ಕುಳಿತು, ಅನೇಕ ಗ್ರಹನಕ್ಷತ್ರಗಳಿಂದ ತುಂಬಿದ ಆಕಾಶದಲ್ಲಿ ಪೂರ್ಣಕಳೆಗಳಿಂದ ಪ್ರಕಾಶಿಸುವ ಚಂದ್ರನಂತೆ ಶೋಭಿಸುತ್ತಿದ್ದನು. ಹೀಗೆ ಕೇವಲ ಶಾಂತಸ್ವರೂಪನಾಗಿಯೂ, ಅವಿದ್ಯಾಸಂಬಂಧದಿಂದುಂಟಾಗುವ ಜ್ಞಾನಸಂಕೋಚವಿಲ್ಲದೆ, ಮಹಾಧೀಮಂತನಾಗಿಯೂ ಇರುವ ಆ ಶುಕಮಹಾಮುನಿಯು ಸಭಾಮಧ್ಯದಲ್ಲಿ ಕುಳಿತಿದ್ದಾಗ, ಪರೀಕ್ಷಿದ್ರಾಜನು ವಿನಯಭಕ್ತಿಗಳಿಂದ ಮೆಲ್ಲಗೆ ಆತನ ಬಳಿಗೆ ಬಂದು, ನಮಸ್ಕರಿಸಿ, ಬದ್ಧಾಂಜಲಿಯಾಗಿ ಆವನ ಮುಂದೆ ನಿಂತು ಮೃದುಮಧುರವಾಕ್ಯಗಳಿಂದ ವಿಜ್ಞಾಪಿಸುವನು. "ಎಲೈ ಮಹಾಮುನೀಂದ್ರನೆ! ಕ್ಷತ್ರಬಂಧುಗಳಾದ ನಾವು ನಿಮ್ಮಂತವರ ಪಾದಸೇವಕರು! ನಿಮ್ಮ ದರ್ಶನದಿಂದ ಈಗ ನಾನು ಕೃತಾರ್ಥನಾದೆನು. ತಮ್ಮ ಸೇವೆಯಿಂದ ನನ್ನ ಪಾಪಗಳೆಲ್ಲವೂ ನೀಗಿದುವು. ತಮ್ಮಂತಹ ಮಹಾತ್ಮರು ನಮ್ಮಲ್ಲಿಗೆ ಅತಿಥಿಭಾವದಿಂದ ಬಂದುದು ನಮ್ಮ ಪೂರ್ವಪುಣ್ಯವಲ್ಲದೆ ಬೇರೆಯಲ್ಲ. ತಮ್ಮಂತವರನ್ನು ಸ್ಮರಿಸಿದ ಮಾತ್ರದಿಂದಲೇ ಗೃಹಸ್ಥರ ಮನೆಗಳು ಪರಮಪವಿತ್ರಗಳಾಗುವುವೆಂದು ಹೇಳಬಹುದು. ಹೀಗಿರುವಾಗ ಈಗ ನನಗೆ ತಮ್ಮ ಪ್ರತ್ಯಕ್ಷದರ್ಶನವೂ, ತಮ್ಮೊಡನೆ ಸಂಭಾಷಣವೂ, ತಮ್ಮ ಪಾದಸೇವೆಯನ್ನು ಮಾಡತಕ್ಕ ಭಾಗ್ಯವೂ ಲಭಿಸಿದ ಮೇಲೆ, ನನ್ನಂತವನ ಜನ್ಮವು ಪವಿತ್ರವಾಯಿತೆಂಬುದನ್ನು ಹೇಳಬೇಕೆ? ಶ್ರೀಮಹಾವಿಷ್ಣುವಿನ ಮುಂದೆ ರಾಕ್ಷಸರು ಹೇಗೋ ಹಾಗೆ ತಮ್ಮಂತಹ ಯೋಗೀಶ್ವರರ ಸನ್ನಿಧಿಯಲ್ಲಿ ಎಂತಹ ಮಹಾಪಾತಕಗಳಾದರೂ ತಲೆಯೆತ್ತದೆ ಅಡಗಿಹೋಗುವುವು. ಎಲೈ ಮಹಾತ್ಮನೆ! ಕೃಷ್ಣನು ಪಾಂಡವರಿಗೆ ಹಿತನಾಗಿಯೂ, ಬಂಧುವಾಗಿಯೂ ಇದ್ದು, ಸಮುದ್ರಾಂತವಾದ ಸಮಸ್ತಭೂಮಿಗೂ ಅವರನ್ನು ರಾಜರನ್ನಾಗಿ ಮಾಡಿದನಲ್ಲವೆ? ಅವರ ವಂಶದಲ್ಲಿ ಹುಟ್ಟಿದ ನನ್ನಲ್ಲಿಯೂ ಕೂಡ ಆ ಕೃಷ್ಣನು ಅದೇವಿಧವಾದ ಬಂಧುವಾತ್ಸಲ್ಯವನ್ನು ತೋರಿಸುತ್ತಿರುವನೆಂಬುದರಲ್ಲಿ ಸ್ವಲ್ಪಮಾತ್ರವೂ ಸಂದೇಹವಿಲ್ಲ. ಹಾಗಿಲ್ಲದ ಪಕ್ಷದಲ್ಲಿ ಬೇರೊಬ್ಬರಿಗೆ ತಿಳಿಯದ ಘನತೆಯುಳ್ಳ ನಿನ್ನ ದರ್ಶನವು ನಮ್ಮಂತಹ ಅಲ್ಪಮನುಷ್ಯರಿಗೆ ಲಭಿಸುವುದೆಂದರೇನು? ಮಹಾತ್ಮನಾದ ನಿನ್ನ ದರ್ಶನದಿಂದ ಈಗ ನನ್ನ ಕೋರಿಕೆಗಳೆಲ್ಲವೂ ಸಿದ್ಧಿಸಿದುವೆಂದೇ ಹೇಳಬಹುದು. ಆದರೆ ಯೋಗೀಶ್ವರರಿಗೂ ಗುರುವೆನಿಸಿ

ಕೊಂಡ! ನಿನ್ನಲ್ಲಿ ಒಂದು ವಿಷಯವನ್ನು ಮಾತ್ರ ಕೇಳಿ ತಿಳಿಯಬೇಕೆಂದಿರುವೆನು. ಈಗಲೋ, ನಾಳೆಯೋ ಸಾಯುವುದಕ್ಕೆ ಸಿದ್ಧನಾಗಿರುವ ಮನುಷ್ಯನು ಯಾವ ಉಪಾಯದಿಂದ ತನಗೆ ತಿರುಗಿ ಸಂಸಾರಸಂಬಂಧವಿಲ್ಲದಂತೆ ತಪ್ಪಿಸಿಕೊಳ್ಳ ಬಹುದು? ಅಂತವನು ಜಪಿಸಬೇಕಾದುದೇನು? ಇತರರಿಂದ ಕೇಳಬೇಕಾದುದೇನು? ಅವನು ಪಠಿಸಬೇಕಾದುದೇನು? ಯಾವುದನ್ನು ಭಜಿಸಬೇಕು? ಇವೆಲ್ಲಕ್ಕೂ ವಿರುದ್ಧವಾಗಿ ಅವನು ನಡೆಸಬಾರದ ಕೃತ್ಯಗಳಾವುವು? ಅವೆಲ್ಲವನ್ನೂ ನನಗೆ ತಿಳಿಸಬೇಕು. ಇಂದಿಗೆ ಏಳನೆಯ ದಿನದಲ್ಲಿ ನಾನು ಸಾಯುವುದಕ್ಕೆ ಸಿದ್ಧನಾಗಿರು ವೆನು. ಇಷ್ಟರೊಳಗಾಗಿ ನನಗೆ ಮೋಕ್ಷೋಪಾಯವನ್ನು ಅನುಗ್ರಹಿಸಬೇಕು. ಎಲೈ ಮಹಾತ್ಮನೆ! ನೀನು ಗೃಹಸ್ಥರ ಮನೆಗಳಲ್ಲಿ ಪ್ರವೇಶಿಸಿದರೂ ಕೂಡ, ಹಸುಗಳನ್ನು ಹಾಲು ಕರೆಯವಷ್ಟು ಕಾಲವಾದರೂ ಅವರ ಮುಂದೆ ನೆಲೆಯಾಗಿ ನಿಲ್ಲುವ ವನಲ್ಲ! ಅಂತಹ ನೀನು ಈಗ ನನಗೆ ಈ ಅವಸಾನಕಾಲದಲ್ಲಿ ದರ್ಶನವನ್ನು ಕೊಟ್ಟುದೇ ನನ್ನ ಪೂರ್ವಪುಣ್ಯವಲ್ಲವೇ'' ಎಂದನು. ಹೀಗೆ ಪ್ರಶ್ನೆಮಾಡುತ್ತಿರುವ ಪರೀಕ್ಷಿದ್ರಾಜನನ್ನು ನೋಡಿ, ಧರ್ಮಜ್ಞನಾಗಿಯೂ, ಪೂಜ್ಯನಾಗಿಯೂ ಇರುವ ಶುಕ ಮಹಾಮುನಿಯು, ಮೃದುವಾಕ್ಯದಿಂದ ಆತನಿಗೆ ಪ್ರತ್ಯುತ್ತರವನ್ನು ಕೊಡುವನು. ಇಲ್ಲಿಗೆ ಹತ್ತೊಂಭತ್ತನೆಯ ಅಧ್ಯಾಯವು.

ಪ್ರಥಮಸ್ಕಂಧವು ಸಮಾಪ್ತವು.





ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ

# ಶ್ರೀಮದ್ಭಾಗವತವು

## ದ್ವಿತೀಯಸ್ಕಂಧವು

{ ಹರಿಕೀರ್ತನ ಪ್ರಶಂಸೆ. ಖಟ್ವಾಂಗಚರಿತ್ರವು.
ಅಷ್ಟಾಂಗಯೋಗವಿವರಣೆ. ವಿರಾಡ್ರೂಪ ವರ್ಣನೆ. }

ಓ ಶೌನಕಾದಿಗಳೆ! ಪರೀಕ್ಷಿದ್ರಾಜನು ಕೇಳಿದ ಪ್ರಶ್ನೆಗಳಿಗಾಗಿ ಶುಕಮುನಿಯು ಬಹಳಸಂತೋಷಗೊಂಡು, ಆತನನ್ನು ಕುರಿತು, "ಎಲೈ ರಾಜೇಂದ್ರನೆ! ನೀನು ಕೇಳಿದ ಪ್ರಶ್ನವು ನಿನಗೆ ಮಾತ್ರವಲ್ಲದೆ ಸರ್ವಲೋಕಕ್ಕೂ ಹಿತಕರವಾದುದು; ಬಹಳ ಶ್ಲಾಘ್ಯವಾದ ಪ್ರಶ್ನವನ್ನು ಕೇಳಿದೆ! ಈ ಪ್ರಶ್ನವು ಆತ್ಮಜ್ಞಾನಿಗಳಿಗೂ ಮೆಚ್ಚತಕ್ಕುದಾಗಿರುವುದು. ನೀನು ಕೇಳಿದ ವಿಷಯವು ಶ್ರವಣಮನನಾದಿಗಳಿಗೆ ಯೋಗ್ಯಗಳಾದ ಅರ್ಥಗಳಲ್ಲಿ ಅತ್ಯುತ್ತಮವೆನಿಸಿರುವುದು. ಎಲೈ ರಾಜನೆ! ಮೋಕ್ಷಾಪೇಕ್ಷೆಯುಳ್ಳವರಿಗೆ ಪರಮಾತ್ಮತತ್ತ್ವವನ್ನು ತಿಳಿಯಬೇಕಾದುದೊಂದೇ ಕಾರ್ಯವು. ಆತ್ಮತತ್ತ್ವವನ್ನು ತಿಳಿಯಲಾರದೆ ಐಹಿಕಾಮುಷ್ಮಿಕಫಲವೊಂದರಲ್ಲಿಯೇ ಆಸಕ್ತರಾಗಿರುವ ಗೃಹಸ್ಥರಿಗೆ, ಕೇಳಿ ತಿಳಿಯಬೇಕಾದ ವಿಷಯಗಳು ಬಹಳವಾಗಿರುವುವು. ಆದರೆ ಗೃಹಸ್ಥರಾದ ಮನುಷ್ಯರು ಆತ್ಮಜ್ಞಾನಕ್ಕಾಗಿ ಲೇಶಮಾತ್ರವೂ ಪ್ರಯತ್ನಿಸದೆ ಅಹೋರಾತ್ರವೂ ವ್ಯರ್ಥವಾಗಿ ಕಾಲವನ್ನು ಕಳೆದು ಬಿಡುವರು. ರಾತ್ರಿಯ ಕಾಲಗಳನ್ನು ನಿದ್ರೆಯಿಂದಲೂ, ಮೈಥುನದಿಂದಲೂ ಕಳೆದು ಬಿಡುವರು. ಹಗಲೆಲ್ಲವೂ ಕುಟುಂಬಪೋಷಣೆಯಲ್ಲಿಯೂ, ಅರ್ಥಾರ್ಜನಚಿಂತೆಯಲ್ಲಿಯೂ ಕಳೆದು ಹೋಗುವುದು. ಇದರಿಂದ ಗೃಹಸ್ಥರಿಗೆ ಆತ್ಮಜ್ಞಾನದಲ್ಲಿ ಬುದ್ಧಿ ಹುಟ್ಟುವುದೇ ಕಷ್ಟವು. ಜೀವಾತ್ಮನು ತನಗೆ ಪರಿಕರಗಳಾದ

ದೇಹಾದಿಗಳಲ್ಲಿಯೂ, "ಹೆಂಡತಿ, ಮಕ್ಕಳು ಮೊದಲಾದ ಪರಿವಾರಗಳಲ್ಲಿಯೂ ವಿಶೇಷಾಸಕ್ತನಾಗಿ, ಅವರಲ್ಲಿರುವ ಮೋಹದಿಂದ ಮೈಮರೆತಿರುವನು. ತನ್ನ ತಂದೆ ತಾಯಿ ಮೊದಲಾದವರ ಮರಣವನ್ನು ಆಗಾಗ ತನ್ನ ಕಣ್ಣಾರೆ ತಾನೇ ನೋಡುತಿದ್ದರೂ, ತನ್ನ ದೇಹಾದಿಗಳನ್ನು ನಿತ್ಯವೆಂದೇ ನಂಬುತ್ತಿರುವನೇ ಹೊರತು, ಅವುಗಳಲ್ಲಿ ಅನಿತ್ಯವೆಂಬ ಭಾವನೆಯೇ ಆತನಿಗೆ ಹುಟ್ಟಲಾರದು. ಮನುಷ್ಯನು ಕಂಡುಕಂಡೂ ಅದರ ತತ್ತ್ವವನ್ನು ತಿಳಿದುಕೊಳ್ಳಲಾರನು. ಆದುದರಿಂದ ಒಂದು ಮುಖ್ಯಾಂಶವನ್ನು ತಿಳಿಸುವೆನು ಕೇಳು! ಸರ್ವಾಂತರ್ಯಾಮಿಯಾಗಿ, ಷಡ್ಗುಣೈಶ್ವರ್ಯ ಪರಿಪೂರ್ಣನಾಗಿ, ಆಶ್ರಿತರ ಪಾಪಗಳನ್ನು ನೀಗಿಸತಕ್ಕವನಾಗಿ, ಸರ್ವಲೋಕನಿಯಾಮಕನಾಗಿರುವ ಭಗವಂತನ ಗುಣಗಳನ್ನು ಬಾಯಿಂದ ಕೀರ್ತಿಸುವುದೂ, ಅವನ ಚರಿತ್ರೆಗಳನ್ನು ಕಿವಿಯಿಂದ ಕೇಳುವುದೂ, ಆತನ ಗುಣಗಳನ್ನು ಮನಸ್ಸಿನಿಂದ ಸ್ಮರಿಸುವುದೂ, ಇವೇ ಮೋಕ್ಷಕ್ಕೆ ಮುಖ್ಯೋಪಾಯಗಳು! ಸಂಸಾರಭಯವನ್ನು ನೀಗಬೇಕೆಂದಿರುವವರಿಗೆ ಇವೇ ಮುಖ್ಯಸಾಧನಗಳು! ಎಲೈ ರಾಜೇಂದ್ರನೆ! ಜ್ಞಾನಯೋಗದಿಂದಾಗಲಿ, ಫಲಾಪೇಕ್ಷೆಯಿಲ್ಲದೆ ನಡೆಸುವ ಕರ್ಮಯೋಗದಿಂದಾಗಲಿ, ಭಗವತ್ಪಾರತಂತ್ರ್ಯರೂಪವಾದ ಸ್ವಧರ್ಮದಿಂದಾಗಲಿ, ದೇಹಾವಸಾನಕಾಲದಲ್ಲಿ ನಾರಾಯಣಸ್ಮರಣವೊಂದೇ ಮನುಷ್ಯನಿಗೆ ಶ್ರೇಯಸ್ಸಾಧನವೆನಿಸುವುದು. ಮನುಷ್ಯಜನ್ಮವನ್ನೆತ್ತಿದುದಕ್ಕೆ ನಾರಾಯಣಸ್ಮರಣವೇ ಉತ್ತಮವಾದ ಲಾಭವು. ಅದಿಲ್ಲದಿದ್ದ ಮೇಲೆ ಆ ಜನ್ಮವೇ ನಿರರ್ಥಕವು. ಇದರಿಂದಲೇ ಸನಕಾದಿಮುನೀಶ್ವರರೆಲ್ಲರೂ ಕಾಮ್ಯಕರ್ಮವಿಷಯವಾಗಿ ವೇದಬೋಧಿತಗಳಾದ ವಿಧಿನಿಷೇಧಾದಿಗಳೊಂದಕ್ಕೂ ಈಡಾಗದೆ, ಪರಬ್ರಹ್ಮೋಪಾಸನೆ ಮಾಡಿ, ಅನವರತವೂ ಶ್ರೀಹರಿಯ ಸದ್ಗುಣಗಳನ್ನು ಕೀರ್ತಿಸುವುದರಲ್ಲಿಯೇ ಆನಂದವನ್ನನುಭವಿಸುತ್ತಿರುವರು. ಎಲೈ ರಾಜನೆ! ಈ ವಿಧಗಳಾದ ಭಗವದ್ಗುಣಗಳನ್ನು ಪ್ರಧಾನವಾಗಿ ವರ್ಣಿಸತಕ್ಕ ಭಾಗವತವೆಂಬ ಗ್ರಂಥವೊಂದುಂಟು. ಆ ಗ್ರಂಥವು ಬ್ರಹ್ಮಜ್ಞಾನಿಗಳೆಲ್ಲರಿಗೂ ಪರಮ ಸಮ್ಮತವಾದುದು. ಆ ಗ್ರಂಥವನ್ನು ಕಲಿಯುಗಾರಂಭದಲ್ಲಿ ನನ್ನ ತಂದೆಯಾದ ವ್ಯಾಸಮುನಿಯು ತಾನಾಗಿಯೇ ರಚಿಸಿ, ನನಗೆ ಅದನ್ನುಪದೇಶಿಸಿರುವನು. ನನ್ನ ಮನಸ್ಸು ಬೇರೊಂದರಲ್ಲಿ ಪ್ರವರ್ತಿಸದೆ ಕೇವಲ ಪರಬ್ರಹ್ಮವೊಂದರಲ್ಲಿಯೇ ಆಸಕ್ತವಾಗಿದ್ದರೂ, ಭಗವಲ್ಲೀಲೆಗಳು ನನ್ನ ಮನಸ್ಸನ್ನಾಕರ್ಷಿಸಿದುದರಿಂದ, ನಾನು ಆ ಉಪಾಖ್ಯಾನವನ್ನು ಭಕ್ತಿಯಿಂದಭ್ಯಸಿಸಿದೆನು. ನೀನೂ ವಿಶೇಷವಾಗಿ ಭಗವದ್ಭಕ್ತಿಯುಳ್ಳವನಾದುದರಿಂದ, ಆ ಗ್ರಂಥವನ್ನೇ ನಿನಗುಪದೇಶಿಸುವೆನು! ಆ ಗ್ರಂಥವನ್ನು ಶ್ರದ್ಧೆಯಿಂದ

ಕೇಳುವವರಿಗೆ ವಿಷ್ಣುಭಕ್ತಿಯಲ್ಲಿ ತಾನಾಗಿ ಆಸಕ್ತಿಯು ಹುಟ್ಟುವುದು. ಮೋಕ್ಷಾಪೇಕ್ಷೆಯಾದ ನಿನಗೆ ತಪ್ಪದೆ ಮೋಕ್ಷಪ್ರಾಪ್ತಿಯುಂಟಾಗುವುದು. ಆಧ್ಯಾತ್ಮಿಕಾದಿ ತಾಪತ್ರಯಗಳಲ್ಲಿ ಬೇಸರವನ್ನು ಹೊಂದಿ ಮೋಕ್ಷದಲ್ಲಿ ಆಸೆಯಿಟ್ಟು. ಫಲಾಪೇಕ್ಷೆಯಿಂದ. ಕರ್ಮಯೋಗದಲ್ಲಿ ನಿಷ್ಠರಾದವರಿಗೆ ಶ್ರೀಹರಿಯ ನಾಮಸಂಕೀರ್ತನೆಗಳೂ, ಆತನ ಸ್ವರೂಪಚಿಂತನೆಯೂ ಇವೆರಡು ಹೊರತು ಬೇರೆ ಮೋಕ್ಷಸಾಧನವಿಲ್ಲವು. "ಇನ್ನು ಆರೇಳು ದಿನಗಳೊಳಗಾಗಿ ಸಾಯುವುದಕ್ಕಿರುವ ನಾನು ಈ ಕಾರ್ಯವನ್ನು ಹೇಗೆ ಸಾಧಿಸಬಲ್ಲೆ" ನೆಂದು ನೀನು ಸಂದೇಹಿಸಬೇಕಾದುದಿಲ್ಲ. ಹೆಂಡತಿ, ಮಕ್ಕಳು ಮೊದಲಾದ ದೇಹಾನುಬಂಧಿಗಳಲ್ಲಿಯೇ ವಿಶೇಷಾಸಕ್ತನಾಗಿರುವವನು ಅನೇಕವರ್ಷಗಳವರೆಗೆ ಬದುಕಿದ್ದರೂ. ಆ ಆಯುಃಕಾಲವೆಲ್ಲವೂ ತಿಳಿಯದ ಹಾಗೆಯೇ ವ್ಯರ್ಥವಾಗಿ ಕಳೆದುಹೋಗುವುದು. ಅಂತವನು ಎಷ್ಟುಸಂವತ್ಸರಗಳವರೆಗೆ ಬದುಕಿದ್ದರೆ ತಾನೇ ಫಲವೇನು? ಕಾಲವು ವ್ಯರ್ಥವಾಗಿ ಕಳೆದು ಹೋಗುವುದೆಂಬ ಪರಿಜ್ಞಾನವಿದ್ದವನಿಗೆ ಒಂದು ಮುಹೂರ್ತಮಾತ್ರವಿದ್ದರೆ ಸಾಕು! ಆ ಒಂದು ಮುಹೂರ್ತಕಾಲದಲ್ಲಿಯೇ ಮೋಕ್ಷಸಾಧನೆಯಲ್ಲಿ ಪ್ರಯತ್ನಿಸಿ, ಸಿದ್ಧಿಯನ್ನು ಪಡೆಯಬಹುದು. ಇದಕ್ಕೆ ನಿದರ್ಶನವಾಗಿ ಒಂದು ಪೂರ್ವಕಥೆಯನ್ನು ಹೇಳುವೆನು ಕೇಳು.

ಪೂರ್ವದಲ್ಲಿ ಖಟ್ವಾಂಗನೆಂಬ ರಾಜನೊಬ್ಬನಿದ್ದನು ಆತನು ಸಪ್ತದ್ವೀಪಪರಿಮಿತವಾದ ಸಮಸ್ತಭೂಮಿಯನ್ನೂ ನಿರಂಕುಶವಾಗಿ ಕೈವಶಮಾಡಿಕೊಂಡು ಪಾಲಿಸುವಷ್ಟು ಬಲಾಢ್ಯನು. ಒಮ್ಮೆ ದೇವದಾನವರಿಗೆ ಯುದ್ಧವು ಸಂಭವಿಸಿದಾಗ, ದೇವತೆಗಳು ದಾನವರೊಡನೆ ಇದಿರಿಸಿ ನಿಲ್ಲಲಾರದೆ ಈ ಖಟ್ವಾಂಗನ ಸಹಾಯವನ್ನಪೇಕ್ಷಿಸಿ ಬಂದರು. ಇವರ ಪ್ರಾರ್ಥನೆಯ ಮೇಲೆ ಆ ರಾಜನು ದೇವತೆಗಳ ಕಡೆಗೆ ಸಹಾಯಕನಾಗಿ ನಿಂತ, ಯುದ್ಧಮಾಡಿ ದಾನವರನ್ನು ಜಯಿಸಿ ಬಂದನು. ಆದಕ್ಕಾಗಿ ದೇವತೆಗಳು ಸಂತೋಷಿಸಿ, ಆತನಿಗಿಷ್ಟವಾದ ಯಾವ ವರವನ್ನು ಕೇಳಿದರೂ ತಾವು ಕೊಡುವುದಾಗಿ ವಾಗ್ದಾನ ಮಾಡಿದರು. ಆದಕ್ಕಾರಾಜನು ಬಹಳಸಂತೋಷಗೊಂಡವನಾಗಿ "ಎಲೈ ದೇವತೆಗಳಿರಾ! ಮುಂದೆ ನನಗೆ ಆಯುಃಕಾಲವೆಷ್ಟೆಂಬುದನ್ನು ತಿಳಿಸಬೇಕು. ಅದೇ ನೀವು ನನಗೆ ಅನುಗ್ರಹಿಸಬೇಕಾದ ವರವು." ಎಂದು ಪ್ರಾರ್ಥಿಸಿದನು. ಆದಕ್ಕಾ ದೇವತೆಗಳು ತಮ್ಮ ಧ್ಯಾನದೃಷ್ಟಿಯಿಂದಾಲೋಚಿಸಿ, "ಎಲೈ ರಾಜನೆ! ನಿನ್ನ ಆಯುಃಪರಿಮಾಣವು ಇನ್ನು ಮುಹೂರ್ತಮಾತ್ರವೇ ಉಳಿದಿರುವುದು" ಎಂದರು. ಈ ಮಾತನ್ನು ಕೇಳಿದೊಡನೆ ಖಟ್ವಾಂಗನು ವಿಮಾನವನ್ನೇರಿ ವೇಗದಿಂದ ತನ್ನ ಅಂತಃಪುರಕ್ಕೆ ಬಂದು, ಆಗಲೇ ತನ್ನ ರಾಜ್ಯಕೋಶಾದಿ

ಗಳೆಲ್ಲವನ್ನೂ ತೊರೆದು, ದೃಢವಾದ ವೈರಾಗ್ಯವನ್ನು ವಹಿಸಿ, ಶ್ರೀಹರಿಯ ಪಾದಾರವಿಂದವೊಂದರಲ್ಲಿಯೇ ನಟ್ಟ ಮನಸ್ಸುಳ್ಳವನಾಗಿ, ಆ ಪರಮಾತ್ಮನ ನಾಮಸ್ಮರಣವನ್ನು ಮಾಡುತ್ತ, ಎರಡು ಗಳಿಗೆಗಳ ಕಾಲದೊಳಗಾಗಿ ಮೋಕ್ಷವನ್ನೂ ಹೊಂದಿದನು. ಎಲೈ ಪರೀಕ್ಷಿದ್ರಾಜನೆ! ಖಟ್ವಾಂಗನು ಇಷ್ಟು ಸ್ವಲ್ಪಕಾಲದೊಳಗಾಗಿಯೇ ಶ್ರೀ ಹರಿಯ ಕೃಪೆಗೆ ಪಾತ್ರನಾಗಿ ಮೋಕ್ಷವನ್ನು ಹೊಂದಿರುವಾಗ, ಇನ್ನೂ ಏಳುದಿನಗಳವರೆಗೆ ಜೀವಿಸಿರತಕ್ಕ ನೀನು ಅಷ್ಟರಲ್ಲಿ ಶ್ರೀ ಹರಿಯನ್ನು ಭಜಿಸಿ ಮೋಕ್ಷವನ್ನು ಸಂಪಾದಿಸುವುದೊಂದು ಹೆಚ್ಚೇ? ಆದುದರಿಂದ ನಿನ್ನ ಕಾರ್ಯಸಾಧನೆಗೆ ತಕ್ಕಷ್ಟು ಕಾಲವಿಲ್ಲವೆಂಬ ಚಿಂತೆಯನ್ನು ಬಿಡು! ಉಳಿದಿರತಕ್ಕ ಈ ಏಳು ದಿನಗಳಲ್ಲಿಯೇ, ಪರಲೋಕಪ್ರಾಪ್ತಿಗೆ ತಕ್ಕ ಕಾರ್ಯಗಳಲ್ಲಿ ಪ್ರಯತ್ನಿಸಿ ಮೋಕ್ಷವನ್ನು ಸಾಧಿಸು! ಮನುಷ್ಯನು ಅಂತ್ಯಕಾಲದಲ್ಲಿ ನಡೆಸಬೇಕಾದ ಕಾರ್ಯವೇನೆಂಬುದನ್ನು ತಿಳಿಸುವೆನು ಕೇಳು! ಪುರುಷನು ತನಗೆ ಅವಸಾನಕಾಲವು ಸಮೀಪಿಸಿದುದನ್ನು ತಿಳಿದೊಡನೆ, ಮನಸ್ಸಿನಲ್ಲಿ ಮರಣಭಯವನ್ನು ಬಿಟ್ಟು, ಸರ್ವಸಂಗಪರಿತ್ಯಾಗಮಾಡಿ, ದೇಹದಲ್ಲಿಯೂ, ಮನೆ ಮೊದಲಾದ ಸ್ವತ್ತುಗಳಲ್ಲಿಯೂ ನಿಶ್ಶೇಷವಾಗಿ ಮಮತೆಯನ್ನು ತೊರೆಯಬೇಕು! * ಈ ವೈರಾಗ್ಯವನ್ನವಲಂಬಿಸಿದೊಡನೆ ಜಿತೇಂದ್ರಿಯನಾಗಿ, ಸನ್ಯಾಸವನ್ನು ವಹಿಸಿ, ಹೆಂಡತಿಮಕ್ಕಳನ್ನು ಬಿಟ್ಟುಬಂದೆನೆಂಬ ಚಿಂತೆಯನ್ನು ಸ್ವಲ್ಪವಾದರೂ ಮನಸ್ಸಿನಲ್ಲಿಡದೆ ದೃಢಧೈರ್ಯದಿಂದಿರಬೇಕು. ಆಮೇಲೆ ಪುಣ್ಯತೀರ್ಥಸ್ನಾನಮಾಡಿ, ಪರಿಶುದ್ಧವಾದ ಒಂದು ವಿವಿಕ್ತಸ್ಥಳದಲ್ಲಿ ಸೇರಿ, † ಯಥಾವಿಧಿಯಾಗಿ ಕಲ್ಪಿಸಿದ ದರ್ಭಾಸನದಲ್ಲಿ ಕುಳ್ಳಿರಬೇಕು. ಹೀಗೆ ದೃಢಚಿತ್ತನಾಗಿ ಕುಳಿತಮೇಲೆ ಸರ್ವಲೋಕಪಾವನವಾಗಿಯೂ, ಅಕಾರ, ಉಕಾರ, ಮಕಾರಗಳೆಂಬ ವರ್ಣತ್ರಯಾತ್ಮಕವಾಗಿಯೂ, ಬ್ರಹ್ಮಪ್ರತಿಪಾದಕವಾಗಿಯೂ ಇರುವ ಓಂಕಾರವೆಂಬ ಪ್ರಣವಾಕ್ಷರವನ್ನು ಎಡೆಬಿಡದೆ ಮನನಮಾಡಬೇಕು. ರೇಚಕ ಪೂರಕ, ಕುಂಭಕಗಳೆಂಬ ‡ ಪ್ರಾಣಾಯಾಮಮಂತ್ರಗಳಿಂದ ಉಚ್ಛ್ವಾಸನಿಶ್ವಾಸ ವಾಯುವನ್ನು ನಿಗ್ರಹಿಸಿಡಬೇಕು. ಬ್ರಹ್ಮಬೀಜಾಕ್ಷರ ರೂಪವಾದ ಓಂಕಾರವನ್ನು ಮರೆಯದೆ ಅದರಲ್ಲಿ ಮನಸ್ಸನ್ನು ನಿರ್ಬಂಧಿಸಿಡಬೇಕು. ಎಲೈ ರಾಜನೆ! ಜೀವಾತ್ಮನನ್ನು ಒಬ್ಬ ರಥಿಕನನ್ನಾಗಿ ತಿಳಿ! ಅವನಿಗೆ ಶರೀರವೇ ರಥವು. ಬುದ್ಧಿಯೇ ಸಾರ

---

* ಇಲ್ಲಿಂದ ಮುಂದೆ ಕ್ರಮವಾಗಿ ಅಷ್ಟಾಂಗಯೋಗಗಳು ನಿರೂಪಿಸಲ್ಪಡುವುವು. ಇಲ್ಲಿ ನಿಯಮಾಂಗವು ಸೂಚಿತವಾಗಿದೆ.

† ಇಲ್ಲಿ ಆಸನರೂಪವಾದ ಅಂಗವು ಹೇಳಲ್ಪಟ್ಟಿದೆ.

‡ ಇದರಿಂದ ಪ್ರಾಣಾಯಾಮರೂಪವಾದ ಅಂಗವು ಸೂಚಿತವಾಗುವುದು.

ಥಿಯು. ಇಂದ್ರಿಯಗಳೇ ಆ ರಥವನ್ನೆಳೆಯತಕ್ಕ ಕುದುರೆಗಳಂತಿರುವುವು. ಮನಸ್ಸೆಂಬುದು ಆ ಕುದುರೆಗಳಿಗೆ ಕಟ್ಟಿದ ಹಗ್ಗದಂತಿರುವುದು. ಸ್ರಕ್ಚಂದನಾದಿ ವಿಷಯಗಳೇ ಅದರ ಸಂಚಾರಮಾರ್ಗಗಳೆನಿಸಿರುವುವು. * ಆದುದರಿಂದ ಬುದ್ಧಿಯೆಂಬ ಸಾರಥಿಯ ಕೈಯಲ್ಲಿ, ಮನಸ್ಸೆಂಬ ಹಗ್ಗದಿಂದ ಹಿಡಿಯಲ್ಪಟ್ಟಿರುವ ಇಂದ್ರಿಯಗಳೆಂಬ ಕುದುರೆಗಳು, ದೇಹವೆಂಬ ರಥವನ್ನು ವಿಷಯಗಳೆಂಬ ಬೀದಿಗಳಲ್ಲಿ, ಸಿಕ್ಕಿದ ಕಡೆಗೆ ಎಳೆದುಕೊಂಡುಹೋಗದ ಹಾಗೆ ತಡೆದಿಡಬೇಕಾದುದು ರಥಿಕನಾಗಿರುವ ಜೀವನ ಕಾರ್ಯವು. ಪೂರ್ವಜನ್ಮದಲ್ಲಿ ನಡೆಸಿದ ಪುಣ್ಯಪಾಪಕರ್ಮಗಳ ಸಂಬಂಧದಿಂದ ಮನಸ್ಸೆಂಬುದು ನಾನಾಕಡೆಗಳಿಗೆ ಬಲಾತ್ಕರಿಸಿ ಎಳೆಯಲ್ಪಡುವುದು. † ಆ ಮನಸ್ಸನ್ನು, ಯುಕ್ತಾಯುಕ್ತವಿವೇಚನೆಯುಳ್ಳ ಬುದ್ಧಿಯ ಬಲದಿಂದ ಶುಭಾಸ್ಪದವಾದ ಪರಮಾತ್ಮರೂಪವಾದ ವಸ್ತುವಿನಲ್ಲಿ ನಿಶ್ಚಲವಾಗಿ ನಿಲ್ಲಿಸಿಡಬೇಕು. ಹೀಗೆ ಮನಸ್ಸನ್ನು ವಿಷಯಾಂತರಗಳಿಗೆ ಹೋಗದಂತೆ ನಿರ್ಬಂಧಿಸಿಟ್ಟಮೇಲೆ ಆ ಭಗವಂತನ ಮುಖಾರವಿಂದವೊಂದನ್ನೇ ‡ ಏಕಾಗ್ರತೆಯಿಂದ ಧ್ಯಾನಿಸುತ್ತಿರಬೇಕು. ¶ ಸ್ಥಿರಧ್ಯಾನಾಸಕ್ತವಾದ ಈ ಮನಸ್ಸಿನಲ್ಲಿ ಆ ಭಗವಂತನನ್ನು ಬಿಟ್ಟು ಬೇರೆ ಯಾವ ಪದಾರ್ಥವನ್ನೂ ಸ್ಮರಿಸಬಾರದು. ಮನಸ್ಸಿನಲ್ಲಿ ಧಾರಣೆಗೆ ಯೋಗ್ಯವಾದ ಶುಭಾಶ್ರಯವಾದ ಆ ವಸ್ತುವಿನ ಸ್ವರೂಪವೆಂತಹುದೆಂದು ಕೇಳುವೆಯಾ? ಆಗಾಗ ರಜಸ್ತಮೋಗುಣಗಳಿಂದ ಮೂಢವಾಗುತ್ತಿರುವ ಮನಸ್ಸು, ಯಾವನ ಧ್ಯಾನದಿಂದ ನಿರ್ಮಲವಾಗಿ ಪ್ರಸನ್ನತೆಯನ್ನು ಹೊಂದುವುದೋ ಸರ್ವೋತ್ತಮವಾದ ಆ ವಿಷ್ಣುವಿನ ಸ್ವರೂಪವೇ ಶುಭಾಶ್ರಯ ವಸ್ತುವೆನಿಸುವುದು. ಧೀರನಾದವನು ಮನಃಕಾಲುಷ್ಯವನ್ನು ನೀಗಿಸತಕ್ಕ ಈ ಧಾರಣಾಯೋಗವನ್ನೇ ಮೊದಲು ಸಂಪಾದಿಸಬೇಕು. ಇದನ್ನು ಸಾಧಿಸಿ, ಶುಭಾಶ್ರಯವಾಗಿ ತನಗಾಧಾರವಾಗಿರುವ ಪರವಸ್ತುವನ್ನು ಧ್ಯಾನಿಸತಕ್ಕವನಿಗೆ ಭಕ್ತಿಯೋಗವು ತಾನಾಗಿಯೇ ಹುಟ್ಟುವುದು" ಎಂದನು. ಶುಕಮುನಿಯು ಹೇಳಿದ ಈ ವಾಕ್ಯವನ್ನು ಕೇಳಿ ತಿರುಗಿ ಪರೀಕ್ಷಿದ್ರಾಜನು, "ಎಲೈ ಮಹರ್ಷಿಯೆ ? ಧಾರಣೆಯೆಂಬುದೆಂತಹುದು ? ಅದಕ್ಕೆ ಆಶ್ರಯವಾದ ಭಗವದ್ರೂಪವಾವುದು ? ಆ ಧಾರಣೆಯನ್ನು ಹೇಗೆ ನಡೆಸಿದರೆ ಮನಸ್ಸಿನ ಮಾಲಿನ್ಯವನ್ನು ನೀಗಿಸುವುದು ? ಈ ವಿಷಯವನ್ನು ನೀನು ಇನ್ನೂ ವಿವರ

---

* ಇದರಿಂದ ಪ್ರತ್ಯಾಹಾರವು ಸೂಚಿತವಾಗಿದೆ.

† ಇದರಿಂದ ಧಾರಣಾರೂಪವಾದ ಅಂಗವು ವ್ಯಕ್ತವಾಗುವುದು.

‡ ಇಲ್ಲಿ ಧ್ಯಾನಾಂಗವು ಹೇಳಲ್ಪಟ್ಟಿದೆ.

¶ ಇಲ್ಲಿ ಸಮಾಧಿರೂಪವಾದಂಗವು ಹೇಳಲ್ಪಟ್ಟಿದೆ.

ವಾಗಿ ನನಗೆ ತಿಳಿಸಬೇಕು.'' ಎಂದನು. ಅದಕ್ಕಾ ಶುಕಮುನಿಯು ''ಎಲೈ ರಾಜನೆ! ನೀನು ಕೇಳಿದ ಪ್ರಶ್ನೆಯು ಉಚಿತವಾಗಿಯೇ ಇರುವುದು. ಧಾರಣೆಗೆ ಆಧಾರವಾವು ದೆಂಬುದನ್ನು ಮೊದಲು ಹೇಳುವೆನು ಕೇಳು. ಹಿಂದೆ ಹೇಳಿದಂತೆ ಮನುಷ್ಯನು ಮೊದಲು ಆಸನಶಕ್ತಿಯನ್ನು ಸಾಧಿಸಿ, ರೇಚಕಾದಿಗಳಿಂದ ಪ್ರಾಣವಾಯುವನ್ನು ತಡೆದು, ಪತ್ನೀಪುತ್ರಾದಿಗಳಲ್ಲಿ ಸಂಗವನ್ನು ತೊರೆದು, ಇಂದ್ರಿಯಗಳನ್ನೂ ನಿಗ್ರ ಹಿಸಿದಮೇಲೆ, ಬುದ್ಧಿಬಲದಿಂದ ಭಗವಂತನ ವಿರಾಡ್ರೂಪದಲ್ಲಿ ಮನಸ್ಸನ್ನು ನಿಲ್ಲಿ ಸಿಡಬೇಕು. ಇದೇ ಧಾರಣೆಯೆನಿಸುವುದು. ಭೂತಭವಿಷ್ಯದ್ವರ್ತಮಾನಕಾಲಗ ಳಲ್ಲಿರುವ ಪ್ರಪಂಚವೆಲ್ಲ ಮಹತ್ತಿಗಿಂತಲೂ ಮಹತ್ತಾದ ಯಾವ ಭಗವಂತನ ವಿರಾಡ್ರೂಪದಲ್ಲಿ ಗೋಚರಿಸುತ್ತಿರುವುದೋ, ಅಂತಹ ಪರಸ್ವರೂಪವೇ ಭಕ್ತಿಯೋಗಾವಲಂಬಿಯಾದ ಪುರುಷನ ಮನಸ್ಸಿಗೆ ವಿಷಯ ಭೂತವು. ಅನಿರುದ್ಧಾಂಶದಿಂದ ಹುಟ್ಟಿದ ಈ ಪುರುಷಸ್ವರೂಪವೇ ಅಂಡಕೋಶ ವೆನಿಸುವುದು. ಈ ರೂಪವು, ಭೂಮಿ, ನೀರು, ತೇಜಸ್ಸು, ವಾಯು, ಆಕಾಶ, ಅಹಂಕಾರ, ಮಹತ್ತತ್ವಗಳೆಂಬ ಏಳುಬಗೆಯ ಆವರಣಗಳಿಂದೊಪ್ಪುತ್ತಿರುವುದು. ಈ ಶರೀರದಿಂದ ಕೂಡಿದವನೇ ವಿರಾಟ್ಪುರುಷನೆನಿಸುವನು ಆ ಪುರುಷನೇ ಭಕ್ತಿಗೆ ಸಾಧನವಾದ ಧಾರಣಾಯೋಗಕ್ಕೂ ಆಧಾರನೆನಿಸಿರುವನು. ಆ ಮಹಾತ್ಮನಿಗೆ ಪಾತಾಳಲೋಕವೇ ಅಂಗಾಲೆನಿಸುವುದು. ರಸಾತಲವು ಹಿಮ್ಮಡಿಯಾಗಿಯೂ ಪಾದಾಗ್ರವಾಗಿಯೂ ಇರುವುದು. ತಲಾತಲವೇ ಆತನ ಜಂಘೆಗಳು! ಸುತಲವೇ ಆತನ ಜಾನುಗಳು! ಅತಲವಿತಲಗಳೆರಡೂ ಆತನ ತೊಡೆಗಳು! ಭೂಲೋಕವೇ ಆತನ ಕಟಿಪ್ರದೇಶವು. ಆಕಾಶವೆಂಬುದು ಆ ಆದಿಪುರುಷನ ನಾಭಿಯು. ಗ್ರಹ ನಕ್ಷತ್ರಾದಿಗಳಿಂದ ಕೂಡಿದ ನಕ್ಷತ್ರಲೋಕವನ್ನು ಆತನ ವಕ್ಷಃಸ್ಥಲವೆಂದು ಹೇಳು ವರು. ಮಹರ್ಲೋಕವೇ ಆ ಪುರುಷನ ಕಂಠವು. ಜನಲೋಕವು ಆತನ ಮುಖವು. ತಪೋಲೋಕವು ಆತನ ಫಾಲಪ್ರದೇಶವು. ಸತ್ಯಲೋಕವೇ ಆತನ ಶಿರಸ್ಸು. ಇಂದ್ರಾದಿದೇವತೆಗಳೇ ಆತನ ಬಾಹುಗಳು. ದಿಕ್ಕುಗಳೇ ಆತನ ಕಿವಿಗಳು. ಶಬ್ದವೇ ಆತನ ಶ್ರವಣೇಂದ್ರಿಯವು. ಅಶ್ವಿನೀದೇವತೆಗಳಿಬ್ಬರೂ ಆತನ ನಾಸಾಪುಟಗಳು. ಗಂಧವೇ ಆತನಘ್ರಾಣೇಂದ್ರಿಯವು. ಅಗ್ನಿಹೋತ್ರನು ಆತನ ಬಾಯಿಯು. ದ್ಯುಲೋಕವು ಆತನ ನಯನಗಳು ಸೂರ್ಯನೇ ಆತನ ನೇತ್ರೇಂದ್ರಿಯವು. ಹಗಲಿರುಳುಗಳೇ ಆತನ ನಿಮೇಷೋನ್ಮೇಷಗಳು. ಬ್ರಹ್ಮಪದವಿಯೇ ಆತನ ಹುಬ್ಬಿನಾಟಗಳು. ಜಲವೂ, ತದಭಿಮಾನಿದೇವತೆಯಾದ ವರುಣನೂ ಆತನ ದವಡೆ ಗಳು. ರಸವೇ ಆತನ ಜಿಹ್ವೇಂದ್ರಿಯವು. ಛಂದಸ್ಸುಗಳೇ ಆತನ ಶಿರಸ್ಸು.

ಯಮನೇ ಆತನ ಕೋರೆಹಲ್ಲುಗಳು. ನಿಮ್ಮಂತಹ ಜೀವಿಗಳಲ್ಲಿರುವ ಪುತ್ರಕಳತ್ರಾದಿ ಪ್ರೇಮವೇ ಆತನ ಹಲ್ಲುಗಳು. ಲೋಕದ ಜನರನ್ನು ಮರುಳುಗೊಳಿಸತಕ್ಕ ಆಶ್ಚರ್ಯ ಮಾಯೆಯನ್ನು ಆ ಮಹಾಪುರುಷನ ಮಂದಹಾಸವೆನ್ನುವರು. ಆ ಮಹಾತ್ಮನ ಕಡೆಗಣ್ಣಿನ ನೋಟವೇ ಪ್ರಪಂಚಸೃಷ್ಟಿಯು. ಲಜ್ಜೆ, ಲೋಭ, ಇವೆರಡೂ ಆತನ ಮೇಲಿನ ಹುತ್ತು ಕೆಳಗಣ ತುಟಿಗಳು. ಧರ್ಮವೆಂಬುದೇ ಆ ಪುರುಷನ ಸ್ತನಗಳು. ಅಧರ್ಮಮಾರ್ಗವೇ ಆತನ ಬೆನ್ನು. ಪ್ರಜಾಪತಿಬ್ರಹ್ಮನೇ ಆತನ ಗುಹ್ಯವು. ಮಿತ್ರಾವರುಣರಿಬ್ಬರೂ ಆತನ ಅಂಡಬೀಜಗಳು. ಸಮುದ್ರವೇ ಆತನ ಜಠರವು. ಪರ್ವತಗಳೇ ಆತನ ಎಲುಬುಗಳು. ನದಿಗಳೆಲ್ಲವೂ ಆತನ ನಾಡಿಗಳು. ವೃಕ್ಷಗಳೆಲ್ಲವೂ ವಿಶ್ವಾತ್ಮನಾದ ಆತನ ಮೈಕೂದಲುಗಳು. ವಾಯುಸಮೂಹವೇ ಆತನ ಉಸಿರಾಟವು. ಕಾಲವೇ ಆತನ ನಡೆ! ಪ್ರಾಣಿಗಳಿಗೆ ಸತ್ವಾದಿತ್ರಿಗುಣ ಸಂಬಂಧದಿಂದುಂಟಾಗುವ ಸಂಸಾರವೆಂಬುದು ಆತನು ಕಾಲಕಾಲಕ್ಕೆ ನಡೆಸತಕ್ಕ ಲೀಲಾಕಾರ್ಯಗಳು. ಮೇಘಸಮೂಹಗಳೇ ಆತನ ತಲೆಕೂದಲುಗಳು. ಸಂಧ್ಯಾ ಕಾಲಗಳೆರಡೂ ಆತನ ವಸ್ತ್ರಗಳು. ಅವ್ಯಕ್ತವೆನಿಸಿದ ಪ್ರಕೃತಿಯೇ ಆತನ ಹೃದಯವೆನಿಸುವುದು. ಸರ್ವೌಷಧಿಗಳ ವಿಕಾರಕ್ಕಾಶ್ರಯನಾದ ಚಂದ್ರನೇ ಆತನ ಮನಸ್ಸು. ಮಹತ್ತತ್ವವೆಂಬುದೇ ಆತನ ವಿಜ್ಞಾನವ್ಯವಸಾಯಶಕ್ತಿಯು. ರುದ್ರನೇ ಆತನ ಅಹಂಕಾರವು. ಕುದುರೆಗಳು, ಹೇಸರಗತ್ತೆಗಳು, ಒಂಟೆಗಳು, ಆನೆಗಳು, ಇವೆಲ್ಲವೂ ಆತನ ನಖಗಳು. ಇತರಪಶುಮೃಗಾದಿಗಳೆಲ್ಲವೂ ಆ ಮಹಾತ್ಮನ ಶ್ರೋಣೀಭಾಗಗಳು. ಪಕ್ಷಿಜಾತಿಯೆಲ್ಲವೂ ಆತನ ಶಿಲ್ಪನೈಪುಣ್ಯವೆನಿಸುವುದು. ಮಂತ್ರಗಳೇ ಆತನ ಬುದ್ಧಿಯು. ಮನುಷ್ಯಜಾತಿಯೇ ಆತನಿಗೆ ನಿವಾಸಸ್ಥಾನವು. ಗಂಧರ್ವಾದಿದೇವತೆಗಳು ಆತನ ಕಂಠಸ್ವರವು. ಪ್ರಹ್ಲಾದಾದಿಗಳೇ ಆತನ ಸ್ಮೃತಿಯು. ಇದಲ್ಲದೆ ಆ ಮಹಾತ್ಮನಿಗೆ ಬ್ರಾಹ್ಮಣರು ಮುಖವೆಂದೂ, ಕ್ಷತ್ರಿಯರು ಭುಜಗಳೆಂದೂ, ವೈಶ್ಯರು ತೊಡೆಗಳೆಂದೂ, ಶೂದ್ರರು ಪಾದಗಳೆಂದೂ, ವಸುರುದ್ರಾದಿದೇವತೆಗಳ ಹೆಸರುಗಳೇ ಆತನ ಪರ್ಯಾಯನಾಮಗಳೆಂದೂ, ಹವಿರ್ಭಾಗಗಳೆಲ್ಲವೂ ಪೂಜಾದ್ರವ್ಯಗಳೆಂದೂ, ಯಜ್ಞಪ್ರಯೋಗಗಳು ತದಾರಾಧನಕ್ರಿಯೆಗಳೆಂದೂ ಮಹರ್ಷಿಗಳು ಹೇಳುವರು. ಎಲೈರಾಜನೆ! ಇದೇ ಆ ಭಗವಂತನ ಅವಯವಸಂಸ್ಥಾನಗಳು. ಆತನ ಈ ರೂಪದಲ್ಲಿ ಬುದ್ಧಿಯನ್ನು ನೆಲೆಗೊಳಿಸಿದವನಿಗೆ ಸರ್ವವೂ ಈಶ್ವರಾಂತರ್ಭೂತವೆಂದು ತೋರುವುದೇ ಹೊರತು, ಆ ಈಶ್ವರನಿಗಿಂತಲೂ ಭಿನ್ನವಾದ ಬೇರೆ ಯಾವವಸ್ತುವನ್ನೂ ಕಾಣುವುದಕ್ಕೇ ಅವಕಾಶವಿಲ್ಲ. * ಸ್ವಪ್ನಕಾಲಗಳಲ್ಲಿ, ಒಂದೇ ಜೀವನು,

---

* ಇಲ್ಲಿ ಅಧಿಷ್ಠಾನಮಾತ್ರದಲ್ಲಿಯೇ ಜೀವಾತ್ಮ ದೃಷ್ಟಾಂತವೆಂದು ತಿಳಿಯಬೇಕು.

ತನಗೆ ಅನುಭವಯೋಗ್ಯಗಳಾಗಿ ಪರಮಾತ್ಮನಿಂದ ಸೃಷ್ಟಿಸಲ್ಪಟ್ಟು ಹುತ್ತು ಆ ಸ್ವಪ್ನಕಾಲದಲ್ಲಿ ಮಾತ್ರವೇ ಇದ್ದು ನಾಶಹೊಂದತಕ್ಕವುಗಳಾಗಿಯೂ ಇರುವ ಪದಾರ್ಥಗಳೊಡನೆ ಸೇರಿ, ರಾಜ್ಯಾಭಿಷೇಕ, ಶಿರಶ್ಛೇದ ಮೊದಲಾದ ಸುಖ ದುಃಖಗಳನ್ನನುಭವಿಸುವಂತೆ, ಭಗವಂತನೂ ಕೂಡ ಪ್ರತ್ಯಕ್ಷಾನುಮಾನಗಳೇ ಮೊದಲಾದ ಸರ್ವವಿಧಜ್ಞಾನಗಳಿಂದಲೂ ಅನುಭವಿಸಲ್ಪಡುವ ಎಲ್ಲಾವಸ್ತುಗಳಲ್ಲಿಯೂ ನೆಲೆಸಿರುವನು. ಹೀಗೆ ಸರ್ವಶರೀರನಾಗಿದ್ದರೂ, ಆ ಶರೀರಗತವಾದ ದೋಷಗಳನ್ನು ಹೊಂದದೆ, * ನಿರ್ವಿಕಾರನಾಗಿ, † ಆನಂದಾಶ್ರಯನಾಗಿಯೂ ಆನಂದಸ್ವರೂಪನಾಗಿಯೂ ಇರುವನು. ಇಂತಹ ಭಗವಂತನನ್ನು ಮಾತ್ರ ಉಪಾಸನೆಮಾಡಬೇಕೇ ಹೊರತು, ಈ ಬ್ರಹ್ಮಕ್ಕಿಂತಲೂ ಬೇರೆಯಾದ ಸ್ವತಂತ್ರವಸ್ತುವೊಂದನ್ನು ಕಲ್ಪಿಸಿ, ಅದರಲ್ಲಿ ಆಸಕ್ತಿಯಿಡುವವನಿಗೆ, ಸಂಸಾರರೂಪವಾದ ಅಧೋಗತಿಯು ಎಂದಿದ್ದರೂ ತಪ್ಪದು. ಇಲ್ಲಿಗೆ ಮೊದಲನೆಯ ಅಧ್ಯಾಯವು.

---

## ಭಕ್ತಿಯೋಗದ ಮಹಿಮೆ. ಧೂಮಾದ್ಯರ್ಚಿರಾದಿಗತಿಗಳ ವಿವರಣವು.

ಎಲೈ ಪರೀಕ್ಷಿದ್ರಾಜನೇ ಕೇಳು! ‡ ಸೃಷ್ಟಿಗೆ ಮೊದಲು ಬ್ರಹ್ಮದೇವನೂ ಕೂಡ ಹಿಂದೆ ಹೇಳಿದ ಧಾರಣಾಯೋಗದಿಂದಲೇ ಭಗವಂತನನ್ನು ಸಂತೋಷ

---

* ಇಲ್ಲಿ ಸ್ವರೂಪದಿಂದಲೂ, ಗುಣಗಳಿಂದಲೂ ನಿರ್ವಿಕಾರನೆಂಬುದರಿಂದ ಅಚಿತ್ತಿಗೆ ವ್ಯಾವೃತ್ತಿಯು ಸೂಚಿತವಾಗುವುದು.

† ಇಲ್ಲಿ ಭಗವಂತನು ಆನಂದಾಶ್ರಯನೆಂದೂ, ಆನಂದಸ್ವರೂಪನೆಂದೂ ಹೇಳಿರುವುದರಿಂದ ಜೀವಾತ್ಮನಿಗೆ ವ್ಯಾವೃತ್ತಿಯು ಸೂಚಿತವಾಗುವುದು.

‡ ಇಲ್ಲಿ "ನಷ್ಟಾಂ ಸ್ಮೃತಿಂ ಪ್ರತ್ಯವರುಧ್ಯ" ಎಂದು ಮೂಲವು. ಇದರಿಂದ ಪೂರ್ವಕಲ್ಪದಲ್ಲಿದ್ದ ಚತುರ್ಮುಖನೇ ಪ್ರತಿಮಹಾಕಲ್ಪದಲ್ಲಿಯೂ ಇದ್ದು ಹಿಂದೆ ನಷ್ಟವಾಗಿದ್ದ ಸೃಷ್ಟಿವಿಷಯಕಜ್ಞಾನವನ್ನು ಪುನಃಪುನಃಪಡೆದು ಸೃಷ್ಟಿಕಾರ್ಯವನ್ನು ನಡೆಸುವ ಹಾಗೆ ಅರ್ಥವಾಗುವುದು. ಹಾಗಿದ್ದರೂ ಪ್ರತಿಕಲ್ಪದಲ್ಲಿಯೂ ಬೇರೆಬೇರೆ ಚತುರ್ಮುಖನಿರಬೇಕೆಂದು ಭೇದವನ್ನೊಪ್ಪುವುದೇ ನ್ಯಾಯವೆಂದು ತೋರುವುದು. "ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ', "ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ,' ಇತ್ಯಾದಿಪ್ರಮಾಣಗಳಿಂದ ಆಯಾಕಲ್ಪದಲ್ಲಿದ್ದ ಚತುರ್ಮುಖರಿಗೆ ಆಯಾಕಲ್ಪಾಂತದಲ್ಲಿಯೇ ಮುಕ್ತಿಯೆಂದು ಸಿದ್ಧವಾಗುವುದು. ಇದಲ್ಲದೆ ಋಷಿಮಾದ್ಯಂ ನ ಬಧ್ನಾತಿ ಪಾಪೀಯಾಂಸ್ತ್ವಂ

ಪಡೆಸಿ, ಆತನ ಅನುಗ್ರಹದಿಂದಲೇ, ಪ್ರಳಯದಲ್ಲಿ ತನಗೆ ನಷ್ಟವಾಗಿದ್ದ ಸೃಷ್ಟಿಕಾರ್ಯವಿಷಯವಾದ ಜ್ಞಾನವನ್ನು ತಿರುಗಿ ಪಡೆದನು. ಇದರಿಂದ ಆಯಾಪದಾರ್ಥಗಳ ವಿಷಯವಾದ ಜ್ಞಾನವನ್ನೂ ನೆನಪಿಗೆ ತಂದುಕೊಂಡು, ಪ್ರಳಯಕ್ಕೆ ಮೊದಲಿದ್ದ ಸೃಷ್ಟಿಯನ್ನನುಸರಿಸಿಯೇ ನಿಶ್ಚಯಾತ್ಮಕವಾದ ಜ್ಞಾನದಿಂದ ಸಮಸ್ತ ಪ್ರಪಂಚವನ್ನೂ ಸೃಷ್ಟಿಸಿದನು. ಎಲೈ ರಾಜನೆ! ಮತ್ತೊಂದು ವಿಷಯವನ್ನು ಹೇಳುವೆನು ಕೇಳು! ವಿಶೇಷವಾಗಿ ಕರ್ಮಗಳನ್ನು ಕೊಂಡಾಡಿ, ಅವುಗಳ ವಿಷಯದಲ್ಲಿ ಬುದ್ಧಿಯನ್ನೆಳೆಯುವುದೇ ವೇದವಾಕ್ಯಗಳ ಪದ್ಧತಿ! ಇದರಿಂದ ಮೂಢಜನರ ಮನಸ್ಸು, ಸ್ವರ್ಗಾದಿಶಬ್ದಾಡಂಬರಗಳಿಂದ ಮೋಕ್ಷರೂಪವಾದ ಪರಮಪುರುಷಾರ್ಥವನ್ನು ಚೆನ್ನಾಗಿ ತೋರಿಸದೆ ಬಿಟ್ಟಿರುವ ಆ ವೇದಗಳಲ್ಲಿ ಹೇಳಲ್ಪಟ್ಟ ಕರ್ಮಗಳಲ್ಲಿಯೇ ವಿಶೇಷವಾಗಿ ಪ್ರವರ್ತಿಸುತ್ತಿರುವುದು. ಈ ಕರ್ಮಗಳ ವಿಷಯವಾಗಿಯೇ ತೊಳಲುತ್ತಿರುವ ಮನುಷ್ಯನೆ

---

ರಜೋಗುಣಃ! ನಾತ್ಮಾವಸೀದತ್ಯಸ್ಮಿಂಸ್ತೇ ವರ್ಷೀಯಾನ್ ಮದನುಗ್ರಹಂ' ಎಂದು ಭಗವಂತನೇ ಹೇಳಿರುವದರಿಂದ ಬ್ರಹ್ಮನಿಗೆ ತಿರುಗಿ ಸಂಸಾರಪ್ರಾಪ್ತಿಯಿಲ್ಲವೆಂದೂ ಸ್ಪಷ್ಟವಾಗುವುದು. ಇದರಿಂದ ಪ್ರತಿಕಲ್ಪಕ್ಕೂ ಬೇರೆಬೇರೆ ಚತುರ್ಮುಖಬ್ರಹ್ಮರುಂಟೆಂದೇ ಗ್ರಹಿಸಬೇಕು. ಈ ಕಾರಣಕ್ಕಾಗಿ ಮೊದಲಿನ ಸ್ಮೃತಿಶಬ್ದಕ್ಕೆ ಸೃಷ್ಟಿಕಾರ್ಯದ ಜ್ಞಾನವೆಂದೇ ಅರ್ಥವನ್ನು ಗ್ರಹಿಸಬೇಕೇ ಹೊರತು, ಸ್ಮರಣವೆಂದು ಹೇಳುವುದಕ್ಕವಕಾಶವಿಲ್ಲ. ಆದರೆ ಚತುರ್ಮುಖಬ್ರಹ್ಮನು ಧಾರಣಾಯೋಗದಿಂದ ವಿರಾಟ್ಪುರುಷನನ್ನು ಭಜಿಸುವುದರಿಂದ ಸೃಷ್ಟಿಸಾಮರ್ಥ್ಯವನ್ನು ಪಡೆಯುವನಲ್ಲವೆ? ಆ ಸಾಮರ್ಥ್ಯವುಂಟಾದ ಮೇಲೆಯೇ ಪಾತಾಳಾದಿಲೋಕಗಳನ್ನು ಸೃಷ್ಟಿಸಬೇಕಷ್ಟೆ? ಈ ಪಾತಾಳಾದಿಲೋಕಗಳಾದರೋ ವಿರಾಟ್ಪುರುಷನಿಗೆ ಅವಯವಗಳಾಗಿ ನಿರೂಪಿಸಲ್ಪಟ್ಟಿವೆ. ಈ ಅವಯವಗಳು ವಿರಾಟ್ಪುರುಷನಿಗೆ ಮೊದಲೇ ಸಿದ್ಧವಾಗಿದ್ದ ಹೊರತು, ಆತನ ವಿಷಯಕವಾದ ಧಾರಣಾಯೋಗವು ಸಂಭವಿಸುವುದಕ್ಕೆ ಅವಕಾಶವಿಲ್ಲ. ಈ ಅವಯವಗಳು ಮೊದಲೇ ಸಿದ್ಧವಾಗಿದ್ದ ಪಕ್ಷದಲ್ಲಿ ಬ್ರಹ್ಮನು ಅದನ್ನು ಸೃಷ್ಟಿಸಬೇಕಾದ ಅವಶ್ಯಕತೆಯಿಲ್ಲ. ಹೀಗೆ ಅನ್ಯೋನ್ಯಾಶ್ರಯದೋಷವುಂಟಾಗುವುದಲ್ಲವೆ? ಇದನ್ನು ನಿವಾರಿಸುವುದು ಹೇಗೆ?" ಎಂದರೆ, ಭಗವಂತನ ನಾಭಿಕಮಲದಿಂದ ಚತುರ್ಮುಖನು ಉದಯಿಸಿ, ತಪಸ್ಸನ್ನು ಮಾಡಿ ಆ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡ ಮೇಲೆ, ಭಗವಂತನು ಆತನನ್ನು ಕುರಿತು, "ಭೂಯಸ್ತ್ವಂ ತಪ ಆತಿಷ್ಠ ವಿದ್ಯಾಂ ಚೈವ ಮದಾಶ್ರಯಾಂ । ತಾಭ್ಯಾಮಂತರ್ಹೃದಿ ಬ್ರಹ್ಮನ್ ಲೋಕಾನ್ದ್ರಕ್ಷ್ಯಸ್ಯಪಾವೃತಾನ್ । ತತ ಆತ್ಮನಿ ಲೋಕೇ ಚ ಭಕ್ತಿಯುಕ್ತಸ್ಸಮಾಹಿತಃ । ದ್ರಷ್ಟಾಸಿ ಮಾಂ ತತಂ ಬ್ರಹ್ಮನ್ ಮಯಿ ಲೋಕಾಂಸ್ತ್ವಮಾತ್ಮನಃ" ಎಂದು ಮುಂದೆ ಹೇಳುವ ರೀತಿಯಿಂದ, ಸೃಷ್ಟಿಸಲ್ಪಡಬೇಕಾದ ಪದಾರ್ಥಗಳೇ ಬ್ರಹ್ಮನಿಗೆ ಮೊದಲು ದೃಷ್ಟಿಗೋಚರವಾಗುವುದರಿಂದ, ಅವೆಲ್ಲವನ್ನೂ ಭಗವದವಯವಗಳನ್ನಾಗಿ ಕಲ್ಪಿಸಿಕೊಂಡು, ಧಾರಣ ಮಾಡುವುದರಿಂದ ಬ್ರಹ್ಮನಿಗೆ ಸೃಷ್ಟಿವಿಷಯಕಜ್ಞಾನವೂ, ಸೃಷ್ಟಿಸಾಮರ್ಥ್ಯವೂ ಉಂಟಾಗುವುದೆಂದು ಗ್ರಹಿಸಬೇಕು.

ಮನಸ್ಸು, ಅವುಗಳಿಂದುಂಟಾಗಬಹುದಾದ ಸ್ವರ್ಗಾದಿ ಸುಖಗಳಲ್ಲಿಯೇ ಆಸೆಯಿಟ್ಟು, ಅದರಿಂದಲೇ ತೃಪ್ತಿಹೊಂದುತ್ತಿರುವುದು. ಇದರಿಂದ ಮನುಷ್ಯನು, ಅನಾದಿಕರ್ಮವಾಸನೆಯಿಂದ ಪ್ರಕೃತಿಮಯವಾದ ಈ ಪ್ರಪಂಚದಲ್ಲಿಯೇ ವರ್ತಿಸುತ್ತ, ಸ್ವರ್ಗಾದಿಸುಖಗಳಿಗಾಗಿ ಪ್ರಯತ್ನಿಸುತ್ತಿರುವನೇ ಹೊರತು, ಮೋಕ್ಷಕ್ಕಾಗಲಿ, ಆ ಮೋಕ್ಷಸಾಧನೆಗೆ ಬೇಕಾದ ಉಪಾಯಗಳಿಗಾಗಲಿ ಮನಸ್ಸನ್ನು ಕೊಡಲಾರನು. ಆದರೆ "ಲೋಕದಲ್ಲಿ ಮನುಷ್ಯನ ಆತ್ಮೋಜ್ಜೀವನಕ್ಕಾಗಿಯೇ ಪ್ರವರ್ತಿಸಿರುವ ವೇದವು ಸ್ವರ್ಗಾದಿಸಾಧನಗಳಾದ ಕರ್ಮಗಳನ್ನು ಬೋಧಿಸಿ ಹೀಗೆ ಜನರನ್ನು ವಂಚಿಸಬಹುದೆ? ಎಂದು ನೀನು ಶಂಕಿಸಬಹುದು, ಎಲೈ ರಾಜೇಂದ್ರನೆ! ಹಾಗೆಣಿಸಬಾರದು! ತತ್ತ್ವವನ್ನು ವಿಚಾರಿಸಿದರೆ ವೇದಗಳು ಎಂದಿಗೂ ಹಾಗೆ ವಂಚಿಸತಕ್ಕವುಗಳಲ್ಲ. ವೇದವೆಂಬುದು ಸತ್ತ್ವರಜಸ್ತಮೋಗುಣಪ್ರಚುರರಾದ ಮೂರುಬಗೆಯುವರಿಗೂ ನಿಷ್ಪಕ್ಷಪಾತವಾಗಿ ಹಿತವನ್ನು ತಿಳಿಸುತ್ತಿರುವುದೇ ಹೊರತು, ರಜೋಗುಣ ತಮೋಗುಣ ಪ್ರಚುರರಾದವರಿಗೆ ಬೇಕಾದ ಸ್ವರ್ಗಾದಿಗಳನ್ನು ಮಾತ್ರವೇ ಸಾಧಿಸಬೇಕೆಂದು ನಿರ್ಬಂಧಿಸುವುದಿಲ್ಲ. ಹೀಗೆ ರಜಸ್ತಮೋಗುಣಪ್ರಧಾನರಿಗೆ ಅವರವರ ಗುಣಕ್ಕನುಸಾರವಾಗಿ ಸ್ವರ್ಗಾದಿಫಲಗಳನ್ನೂ, ಅದಕ್ಕೆ ಸಾಧನಗಳನ್ನೂ ಬೋಧಿಸದಿದ್ದರೆ, ಅವರು ಸಾತ್ವಿಕಫಲರೂಪವಾದ ಮೋಕ್ಷಕ್ಕೂ ಪ್ರವರ್ತಿಸದೆ, ತಮ್ಮ ಇಷ್ಟಾನುಸಾರವಾದ ಸ್ವರ್ಗಾದಿಫಲಗಳನ್ನು ಸಾಧಿಸುವುದಕ್ಕೂ ದಾರಿ ತಿಳಿಯದೆ, ಕೇವಲ ಕಾಮಪ್ರವಣರಾಗಿ, ಇದ್ದುದರಲ್ಲಿಯೂ ಕೆಟ್ಟುಹೋಗುವರು. ಆದುದರಿಂದಲೇ ವೇದಗಳು ಈ ಮೂವರಿಗೂ ಬೇಕಾದ ಫಲೋಪಾಯಗಳನ್ನು ತಿಳಿಸುತ್ತಿರುವುವು. ಆದರೇನು! ಬುದ್ಧಿಶಾಲಿಯಾದವನು ಮೋಕ್ಷಾಪೇಕ್ಷೆಯುಳ್ಳ ಕೇವಲ ಸಾತ್ವಿಕನಿಗೆ ಈ ಕರ್ಮಗಳೆಲ್ಲವೂ ಪರಿತ್ಯಾಜ್ಯಗಳೆಂಬುದನ್ನೂ, ಒಂದುವೇಳೆ ಆ ಕರ್ಮಗಳನ್ನು ನಡೆಸಿದರೂ ಅವುಗಳಿಗೆ ಮೋಕ್ಷವೊಂದೇ ಫಲವೆಂಬ ಭಾವದಿಂದ ಅನುಷ್ಠಿಸಬೇಕೆಂಬುದನ್ನೂ ತನ್ನ ವಿವೇಕಜ್ಞಾನದಿಂದ ತಾನೇ ನಿಶ್ಚಯಿಸಿಕೊಳ್ಳಬೇಕು. ಸ್ವರ್ಗಾದಿಗಳೆಲ್ಲವೂ ಅಶಾಶ್ವತಗಳಾದ ಅಲ್ಪಸುಖಗಳೆಂಬುದನ್ನೂ ತಿಳಿದು, ಎಚ್ಚರತಪ್ಪದೆ ಆ ಮೋಕ್ಷಸಾಧನೆಗಾಗಿಯೇ ಪ್ರಯತ್ನಿಸಬೇಕು. ವೇದಗಳಲ್ಲಿ ನಾನಾವಿಧಫಲಗಳೂ, ಅದಕ್ಕೆ ಸಾಧನಗಳಾಗಿ ಅನೇಕ ಕರ್ಮಗಳೂ ಹೇಳಲ್ಪಟ್ಟಿದ್ದರೂ, ತನ್ನ ದೇಹಧಾರಣೆಗೆ ಬೇಕಾಗುವ ಭೋಗ್ಯವಸ್ತುಗಳನ್ನು ಮಾತ್ರವೇ ಪರಿಗ್ರಹಿಸಿ, ಉಳಿದವುಗಳನ್ನು ನಿಸ್ಸಾರಗಳೆಂದು ತ್ಯಜಿಸಬೇಕು. "ಆದರೆ ದೇಹಧಾರಣಕ್ಕಾಗಿಯಾದರೂ ಕ್ಷುದ್ರಫಲಗಳಲ್ಲಿ ಪ್ರಯತ್ನಿಸಬೇಕಾಗುವುದಲ್ಲವೆ?" ಎಂದರೆ, ಈ ದೇಹಧಾರಣಕ್ಕೆ ಬೇಕಾದ ಕೋರಿಕೆಗಳೂ ಕೂಡ, ಪೂರ್ವಕರ್ಮಾನು

ರೂಪವಾಗಿಯೋ, ಅಥವಾ ಬೇರೆ ಯಾವ ವಿಧದಿಂದಲೋ! ಸಿದ್ಧಿಸುವ ಪಕ್ಷದಲ್ಲಿ ಅದನ್ನು ಮತ್ತೊಂದು ವಿಧವಿಂದ ಸಾಧಿಸುವುದಕ್ಕಾಗಿ ಪ್ರಯತ್ನಿಸುವುದೂ ವ್ಯರ್ಥಾ ಶ್ರಮವೆಂಬುದನ್ನು ತಿಳಿದು, ಆ ಪ್ರಯತ್ನವನ್ನು ಬಿಟ್ಟುಬಿಡುವುದೇ ಮೇಲು. ನಾವು ಎಷ್ಟೆಷ್ಟೇ ಶ್ರಮಪಟ್ಟರೂ ನಮಗೆ ಲಭ್ಯವಾದ-ದೆಷ್ಟೋ ಅಷ್ಟೇ ಸಿಕ್ಕುವುದು. ನಮಗೆ ಕೇವಲಶ್ರಮವೊಂದೇ ಫಲವಾಗುವುದು. ಎಲೈ ರಾಜನೆ! ಈ ದೇಹ ಧಾರಣೆಗೆ ಬೇಕಾದ ಪರಿಕರಗಳು ಪ್ರಯತ್ನವಿಲ್ಲದೆ ಹೇಗೆ ಲಭಿಸುವುವೆಂದು ನೀನು ಕೇಳಬಹುದು. ಆ ವಿಷಯವನ್ನೂ ತಿಳಿಸುವೆನು ಕೇಳು! ಮಲಗುವದಕ್ಕೆ ವಿಶಾಲವಾದ ಈ ಭೂಮಿಯು ಸರ್ವಸುಲಭವಾಗಿರುವಾಗ, ಸುಪ್ಪತ್ತಿಗೆ, ಮಂಚ, ಮೊದಲಾದ ಸಾಧನಗಳನ್ನು ಹುಡುಕುವುದೇಕೆ? ತನ್ನ ತಲೆದೆಸೆಗೆ ತನ್ನೊಡನೆ ಸಹಜವಾಗಿ ಹುಟ್ಟಿರುವ ತೋಳುಗಳಿರುವಾಗ ದಿಂಬುಗಳನ್ನು ಹುಡುಕುವುದಕ್ಕಾಗಿ ಪ್ರಯತ್ನಿಸುವುದೇಕೆ? ಆಹಾರವನ್ನಿಟ್ಟುಕೊಂಡು ತಿನ್ನುವುದಕ್ಕೆ ತಮ್ಮ ತಮ್ಮ ಕೈಬೊಗಸೆಗಳಿರುವಾಗ, ಬೇರೆ ಬೇರೆಬಗೆಯ ಭೋಜನಪಾತ್ರೆಗಳನ್ನು ಸಂಗ್ರಹಿಸಿಡುವ ಪ್ರಯತ್ನವೇಕೆ? * ದಿಕ್ಕುಗಳೇ ನಮಗೆ ಮೇಲುಬಟ್ಟೆಯಂತಿರುವಾಗ, ಬೆಲೆಯುಳ್ಳ ಪಟ್ಟೆಮಡಿಗಳನ್ನೇ ಸಂಗ್ರಹಿಸಬೇಕೆಂಬ ಚಿಂತೆಯೇಕೆ? ದಾರಿಯಲ್ಲಿ ಬಿದ್ದ ಒಂದೆರಡು ಹರುಕುಬಟ್ಟೆಗಳನ್ನು ಕೌಪೀನವಾಗಿ ಕಟ್ಟಿಕೊಂಡು ಕಾಲವನ್ನು ಕಳೆಯಬಾರದೇಕೆ? ಎಲೈ ಪರೀಕ್ಷಿದ್ರಾಜನೆ! ನಮ್ಮ ಉದರಭರಣಕ್ಕಾಗಿಯೂ ನಾವು ಶ್ರಮಪಡಬೇಕಾದುದಿಲ್ಲ. ವೃಕ್ಷಗಳೆಲ್ಲವೂ ಇತರರ ಪೋಷಣೆಗಾಗಿಯೇ ಫಲವನ್ನು ಬಿಡುವುವಲ್ಲವೆ? ಆಫಲವನ್ನೇ ತಿಂದು ನಾವೇಕೆ ಜೀವಿಸಬಾರದು. ಲೋಕದಲ್ಲಿರುವ ನದಿಗಳೆಲ್ಲವೂ ಒಣಗಿಹೋಗಿವೆಯೆ? ಇಲ್ಲವಷ್ಟೆ? ಆ ನದೀಜಲವನ್ನೇ ಕುಡಿದು ನಾವೇಕೆ ತೃಪ್ತರಾಗಬಾರದು? ನಾವು ವಾಸಮಾಡುವುದಕ್ಕಾಗಿ ಹೋದರೆ ಪರ್ವತಗುಹೆಗಳ ಬಾಗಿಲನ್ನು ತಡೆದು ನಿಲ್ಲುವವರೊಬ್ಬರೂ ಇಲ್ಲವಷ್ಟೆ? ಅಂತಹ ಪರ್ವತಗುಹೆಗಳಲ್ಲಿಯೇ ನಾವೇಕೆ ವಾಸಮಾಡಬಾರದು? ರಾಜೇಂದ್ರಾ? ಒಂದುವೇಳೆ ಇವೆಲ್ಲವೂ ಕಾಲವಶದಿಂದ ದುರ್ಲಭವಾದರೂ, ಶರಣಾಗತರಕ್ಷಣೆಗಾಗಿ ದೀಕ್ಷೆ

---

* ಇಲ್ಲಿ "ದಿಗ್ವಲ್ಕಲಾವೌ ಸತಿ ಕಿಂ ದುಕೂಲೈಃ" ಎಂದು ಮೂಲವು. ಈ ವಾಕ್ಯದಿಂದ ದುಕೂಲಗಳನ್ನು ಬಿಟ್ಟು, ದಿಗಂಬರನಾಗಿರಬೇಕೆಂಬ ಅರ್ಥವು ತೋರುತಿದ್ದರೂ ಹಾಗೆ ಗ್ರಹಿಸಬಾರದು. ಇಲ್ಲಿ ವಲ್ಕಲಶಬ್ದಕ್ಕೆ ಉತ್ತರೀಯವಮಾತ್ರವೆಂದೇ ಗ್ರಹಿಸಬೇಕಾದುದುಚಿತವು. ಏಕೆಂದರೆ, "ಅಪವಿತ್ರ ಕರೋ ನಗ್ನಃ" ಎಂಬ ಸ್ಮೃತಿವಾಕ್ಯದಿಂದ, ಮುಮುಕ್ಷುವಾದವನು ನಗ್ನನಾಗಿದ್ದ ಪಕ್ಷದಲ್ಲಿ, ಕರ್ಮಾರ್ಹತೆಯಿಲ್ಲದೆ ಅಪವಿತ್ರನೆನಿಸುವನು. ಆದುದರಿಂದ ಇಲ್ಲಿ ಕೇವಲ ನಗ್ನತ್ವವನ್ನು ಹೇಳಬಾರದು.

ಯನ್ನು ವಹಿಸಿರುವ ಆ ಭಗವಂತನೊಬ್ಬನಿಲ್ಲವೆ? ಹೀಗಿರುವಾಗ ಧನಮದ ದಿಂದಲೂ, ಅಧಿಕಾರಮದದಿಂದಲೂ ಕೊಬ್ಬಿ, ಹಿಂದು ಮುಂದು ತಿಳಿಯದೆ ಉನ್ಮಾರ್ಗದಲ್ಲಿ ವರ್ತಿಸುತ್ತಿರುವ ತುಚ್ಛಜನರನ್ನು ಸೇವಿಸಿ ಬದುಕಬೇಕೆಂಬುದು ಕೇವಲ ಮೌಢ್ಯವಲ್ಲವೆ? ನಮಗೆ ಬೇಕಾದ ವಸ್ತುಗಳು ಹೇಗೋ ಒಂದುವಿಧದಿಂದ ನಮಗೆ ಸಿಕ್ಕಬಹುದಾಗಿರುವಾಗ, ಅವುಗಳಿಗಾಗಿ ನಾವು ಚಿಂತಿಸಿ ಶ್ರಮಪಡುವುದುಚಿತವೆ? ಇವುಗಳಲ್ಲಿ ವಿರಕ್ತನಾಗಿ ಭಗವಂತನನ್ನು ಭಜಿಸಬೇಕಾದುದೇ ನಮ್ಮ ಕೃತ್ಯವು. ಆತನನ್ನು ಭಜಿಸಿದ ಪಕ್ಷದಲ್ಲಿ ಸಂಸಾರಬಂಧಕ್ಕೆ ಕಾರಣವಾದ ಅವಿದ್ಯೆಯೆಂಬುದು ಬಿಟ್ಟುಹೋಗುವುದು. ಭಗವಂತನೇ ಜೀವಾತ್ಮಗಳಲ್ಲಿ ಪ್ರವೇಶಿಸಿ ಅವುಗಳಿಗೆ ಧಾರಕನಾಗಿರುವನು. ಆದುದರಿಂದ ಈ ಜೀವನು ತನಗಾಯಶ್ರಭೂತನಾದ ಆ ಪರ ಮಾತ್ಮನನ್ನು ಅನುವರ್ತಿಸುವುದೇ ನ್ಯಾಯವು. ಆ ಪರಮಾತ್ಮನೇ ಜೀವಾತ್ಮನಿಗೆ ವಿಶೇಷ ಪ್ರೀತಿವಿಷಯನಾಗಿರಬೇಕಾದುದೂ ಯುಕ್ತವು. ಆ ಪರಮಾತ್ಮನು ನಿರತಿಶಯಸುಖಸ್ವರೂಪನು. ಆತನೇ ಪರಮಪುರುಷಾರ್ಥಸ್ವರೂಪನು. ಅಂತಹ ಭಗವಂತನನ್ನು ಸೇವಿಸಿ, ಆತನನ್ನು ಹೊಂದುವುದಕ್ಕೆ ವಿರೋಧಿಯಾದ ಅವಿದ್ಯೆಯ ಸಂಬಂಧವನ್ನು ತಪ್ಪಿಸಿಕೊಂಡು, ನಿರತಿಶಯಾನಂದಸ್ವರೂಪನಾದ ಆ ಭಗವಂತನ ಉಪಾಸನೆಯೆಂಬ ಪರಮಸುಖವನ್ನು ಹೊಂದಿ, ಫಲಾಂತರಗಳಲ್ಲಿ ವಿಮುಖನಾಗಿರಬೇಕು. ಇಂತಹ ಭಗವಂತನ ಚಿಂತೆಯನ್ನು ಬಿಟ್ಟು ಫಲಾಂತರಗಳಲ್ಲಿ ಆಸೆಯಿಡುವವನು ಕೇವಲ ಪಶುಪ್ರಾಯನಲ್ಲದೆ ಬೇರೆಯಲ್ಲ. ಲೋಕದಲ್ಲಿ ಎಷ್ಟೋಮಂದಿ ಮೂಢರು, ಭಗವಂತನನ್ನು ಬಿಟ್ಟು, ಇತರವಸ್ತುಗಳಲ್ಲಿ ಆಸೆಯಿಟ್ಟು, ವೈತರಣೀನದಿಯಂತಿರುವ ಸಂಸಾರದಲ್ಲಿ ಬಿದ್ದು, ತಮ್ಮತಮ್ಮ ಕರ್ಮಾನುಸಾರವಾಗಿ ಸಂಭವಿಸುವ ಆಧ್ಯಾತ್ಮಿಕಾದಿಬಾಧೆಗಳಲ್ಲಿ ಸಿಕ್ಕಿ ಶ್ರಮಪಡುವರು. ಇವರ ಸ್ಥಿತಿಯನ್ನು ನೋಡಿಯೂ ಆ ಮಾರ್ಗದಲ್ಲಿಯೇ ಪ್ರವರ್ತಿಸ ತಕ್ಕವನು ಪಶುವಲ್ಲದೆ ಬೇರೆಯೇನು? ಜ್ಞಾನಿಯಾದ ಮನುಷ್ಯನೊಬ್ಬನೇ ಯಾವ ವಿಪತ್ತುಗಳಿಗೂ ಈಡಾಗದೆ, ತನ್ನ ಹೃದಯಾಕಾಶದಲ್ಲಿ ಅಡಗಿರುವ ಭಗವಂತನನ್ನು ಎಡೆಬಿಡದೆ ಸ್ತುತಿಸುತ್ತಿರುವನು. ಅಂತಹ ಜ್ಞಾನಿಗಳ ಹೃದಯ ಕಮಲದಲ್ಲಿರುವವನೇ ಪರಮಪುರುಷನಾದ ಆ ಭಗವಂತನು. ಆ ಪುರುಷನು ಶಂಖ ಚಕ್ರಗದಾಪದ್ಮಗಳಿಂದ ಶೋಭಿತಗಳಾದ ಚತುರ್ಭುಜಗಳಿಂದೊಪ್ಪುತ್ತಿರುವನು. ಅವನೇ ಪುಂಡರೀಕಾಕ್ಷನು. ಅವನ ಮುಖವು ಯಾವಾಗಲೂ ಪ್ರಸನ್ನವಾಗಿರುವುದು. ಆತನು ಧರಿಸಿದ ವಸ್ತ್ರವು ಕದಂಬಪುಷ್ಪಗಳ ಕುಸುಮಗಳಂತೆ ಹೊಂಬಣ್ಣದಿಂದೊಪ್ಪುತ್ತಿರುವುವು. ಆತನ ತೋಳುಗಳು ರತ್ನಖಚಿತಗಳಾದ ಭುಜಕೀರ್ತಿಗ

ರಿಂದ ಪ್ರಕಾಶಿಸುತ್ತಿರುವುವು. ಆ ಮಹಾತ್ಮನ ಶಿರಸ್ಸಿನಲ್ಲಿ ಸುವರ್ಣ ಮಯವಾದ ಕಿರೀಟವು ಬೆಳಗುತ್ತಿರುವುದು. ಕಿವಿಗಳು ಕುಂಡಲ ಗಳಿಂದ ಶೋಭಿಸುತ್ತಿರುವುವು. ಆ ಮಹಾತ್ಮನ ಪಾದಪಲ್ಲವಗಳನ್ನೇ ಯೋಗೀಶ್ವರರೆಲ್ಲರೂ ಉಲ್ಲಾಸವಿಶಿಷ್ಟವಾದ ತಮ್ಮ ಹೃದಯಕಮಲ ದಲ್ಲಿಟ್ಟು ಪೂಜಿಸುತ್ತಿರುವರು. ಆ ಮಹಾತ್ಮನ ವಕ್ಷಃಸ್ಥಲವು ಶ್ರೀವತ್ಸವೆಂಬ ಮಚ್ಚೆಯಿಂದಲೂ, ಆತನ ಕಂಠಪ್ರದೇಶವು ಕೌಸ್ತುಭರತ್ನದಿಂದಲೂ ಪ್ರಕಾಶಿ ಸುತ್ತಿರುವುದು. ಶಂಖವನ್ನು ಹೋಲುತ್ತಿರುವ ಆತನ ಕಂಠವು ವನಮಾಲಿಕೆ ಯಿಂದಲೂ, ಆತನ ಕಟಿಪ್ರದೇಶವು ಅಂದವಾದ ಕಟಿಸೂತ್ರದಿಂದಲೂ, ಆತನ ಬೆರಳುಗಳು ಬೆಲೆಯುಳ್ಳ ಉಂಗುರಗಳಿಂದಲೂ ಒಪ್ಪುತ್ತಿರುವುವು. ಆತನ ಮುಂಗೈ ಗಳು ಮನೋಹರಗಳಾದ ಕೈಬಳೆಗಳಿಂದಲೂ, ಆತನ ಪಾದಗಳು ಅಂದವಾದ ಕಾಲಂದುಗೆಯಿಂದಲೂ ಶೋಭಿಸುವುವು. ಆ ಮಹಾತ್ಮನ ಮುಖವು ಸುರುಳಿ ಗಟ್ಟಿದ ನೀಲಕುಂತಲಗಳಿಂದಲೂ, ಮಂದಹಾಸದಿಂದಲೂ ಪ್ರಕಾಶಿಸುತ್ತಿರುವುದು. ಆ ಮಹಾಪುರುಷನು, ತನ್ನ ದೃಷ್ಟಿಯಿಂದಲೂ, ಹುಬ್ಬಿನಾಟಗಳಿಂದಲೂ ಕರುಣಾ ರಸವನ್ನು ಸುರಿಸುತ್ತಿರುವನು. ಎಲೈ ಪರೀಕ್ಷಿದ್ರಾಜನೆ! ಮನುಷನು ಧಾರಣಾ ಶಕ್ತಿಯಿಂದ ಎಷ್ಟು ಕಾಲದವರೆಗೆ ತನ್ನ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಬಲ್ಲನೋ ಅದುವರೆಗೂ ಇಂತಹ ಸರ್ವೇಶ್ವರನ ಮನೋಹರಾಕಾರವನ್ನು ಜ್ಞಾನದೃಷ್ಟಿಯಿಂದ ನೋಡುತ್ತಿರಬೇಕು. ಹೀಗೆ ಆ ಪರಮಪುರುಷನ ದಿವ್ಯಸ್ವರೂಪದಲ್ಲಿ ಅಂಗುಷ್ಠ ದಿಂದ ಹಿಡಿದು, ಮಂದಹಾಸಪರ್ಯಂತವಾಗಿ ಒಂದೊಂದವಯವವನ್ನೂ ಬೇರೆಬೇರೆ ಯಾಗಿ ಮನಸ್ಸಿನಲ್ಲಿಟ್ಟುಕೊಂಡು ಧ್ಯಾನಿಸುತ್ತಿದ್ದು, ಈ ಭಾವನೆಯಿಂದ ಯಾವ ಯಾವ ಅವಯವಸೌಂದರ್ಯವು ಮನಸ್ಸಿನಲ್ಲಿ ದೃಢಪಡುವುದೋ, ಅದನ್ನು ಬಿಟ್ಟು ಕ್ರಮವಾಗಿ ಮುಂದುಮುಂದಿನ ಅವಯವಗಳನ್ನು ಭಾವನೆಗೆ ತಂದುಕೊಂಡು, ಬುದ್ಧಿಯು ಪ್ರಸನ್ನವಾಗುವವರೆಗೆ ಧಾರಣಾಯೋಗದಿಂದ ಅವುಗಳನ್ನು ಧ್ಯಾನಿ ಸುತ್ತ ಬರಬೇಕು. ಹೀಗೆ ದಿವ್ಯಾತ್ಮಸ್ವರೂಪದ ಒಂದೊಂದವಯವವನ್ನೂ ಪ್ರತ್ಯೇಕ ವಾಗಿ ಧ್ಯಾನಿಸಿ, ಬುದ್ಧಿಯನ್ನು ನಿಷ್ಕಲ್ಮಷವಾಗಿ ಮಾಡಿಕೊಂಡಮೇಲೆಯೂ ಬಿಡ ಬಾರದು ಸರ್ವೇಶ್ವರನಾಗಿಯೂ, ಬ್ರಹ್ಮಾದಿದೇವತೆಗಳಿಗಿಂತಲೂ ಉತ್ತಮ ನಾಗಿಯೂ, ಸರ್ವನಿಯಾಮಕನಾಗಿಯೂ ಇರುವ ಆ ಭಗವಂತನಲ್ಲಿ ದೃಢವಾದ ಭಕ್ತಿಯೋಗವು ಹುಟ್ಟಲಾರಂಭಿಸುವವರೆಗೂ, ಮುಮುಕ್ಷುವಾದವನು ತನಗೆ ಅವಶ್ಯಕವೆನಿಸಿದ ಅನುಷ್ಠಾನವನ್ನು ಮುಗಿಸಿಕೊಂಡಮೇಲೆ, ಆ ದಿವ್ಯಾತ್ಮಸ್ವರೂ ಪದ ಸ್ಥೂಲಾಕೃತಿಯನ್ನು (ವಿರಾಡ್ರೂಪವನ್ನು) ದೃಢಮನಸ್ಸಿನಿಂದ ಧ್ಯಾನಿಸಬೇಕು.

ಹೀಗೆ ಯೋಗಿಯಾದವನು ಪೂರ್ಣವಾದ ಭಕ್ತಿಯೋಗವನ್ನು ಸಂಪಾದಿಸಿ, ಈ ಶರೀರಕ್ಕೆ ಕಾರಣವಾದ ತನ್ನ ಪ್ರಾರಬ್ಧಕರ್ಮವೂ ಮುಗಿಯುತ್ತ ಬಂದಮೇಲೆ, ಕಾಲದೇಶಗಳೊಂದನ್ನೂ ಗಮನಿಸದೆ, ದೇಹತ್ಯಾಗಕ್ಕೆ ನಿಶ್ಚಯಿಸಿ, ನಿರಾತಂಕವಾದ ಸ್ಥಳದಲ್ಲಿ ಸುಖವಾಗಿ ಕುಳಿತು, ಪ್ರಾಣಗಳನ್ನೂ, ಇಂದ್ರಿಯಗಳನ್ನೂ ನಿರ್ಬಂಧಿಸಬೇಕು. ಭಗವದುಪಾಸನದಿಂದ ಪಾಪವನ್ನು ನೀಗಿ ನಿಷ್ಕಲ್ಮಷವಾಗಿರುವ ಬುದ್ಧಿಯಿಂದ ಮನಸ್ಸನ್ನು ಕಟ್ಟಿ, ಆ ಬುದ್ಧಿಯನ್ನು ಕ್ಷೇತ್ರಜ್ಞನೆನಿಸಿದ ಜೀವಾತ್ಮನಲ್ಲಿ ಸೇರಿಸಿಡಬೇಕು. ಹೀಗೆ ಜೀವಾತ್ಮನನ್ನು ಪರಮಾತ್ಮನಲ್ಲಿ ಸಮರ್ಪಿಸಿದಮೇಲೆ, ಬ್ರಹ್ಮಪದದಲ್ಲಿ ಬ್ರಹ್ಮಾನಂದಸುಖವನ್ನನುಭವಿಸುತ್ತ, ಸಮಸ್ತ ಕರ್ಮಗಳಿಂದಲೂ ನಿವೃತ್ತನಾಗುವನು. ಎಲೈ ಪರೀಕ್ಷಿದ್ರಾಜನೆ? ಸಮಸ್ತಲೋಕಗಳನ್ನೂ ನಿಯಮಿಸುವ ಬ್ರಹ್ಮಾದಿದೇವತೆಗಳೂ ಕೂಡ ಕಾಲವಶರಾಗಿರುವರು. ಕಾಲವಾದರೂ ಬ್ರಹ್ಮಪದದಲ್ಲಿ ಯಾವಕಾರ್ಯವನ್ನು ಸಾಧಿಸುವುದಕ್ಕೂ ಸಮರ್ಥವಲ್ಲ. ಇನ್ನು ದೇವತೆಗಳಿಗಾಗಲಿ ಮನುಷ್ಯರಿಗಾಗಲಿ ಅದರಮೇಲೆ ಯಾವಶಕ್ತಿಯೂ ಸಾಗದೆಂಬುದನ್ನು ಹೇಳತಕ್ಕುದೇನು ? ಆ ಬ್ರಹ್ಮಪದವೆಂಬುದು ಕೇವಲ ಶುದ್ಧಸತ್ವಮಯವಾದುದು. ಮಿಶ್ರಸತ್ವಗುಣಕ್ಕಾದರೂ ಅಲ್ಲಿ ಪ್ರವೇಶವಿಲ್ಲ. ಹೀಗಿರುವಾಗ ರಜಸ್ತಮೋಗುಣಗಳಿಗಾಗಲಿ, ಅದರಿಂದುಂಟಾಗಿರುವ ದೇವಮನುಷ್ಯಾದಿಗಳಿಗಾಗಲಿ ಪ್ರವೇಶವೆಲ್ಲಿಯದು ? ಅವುಗಳ ವಿಷಯವೂ ಹಾಗಿರಲಿ! ಸಮಸ್ತ ಪ್ರಪಂಚದ ಸೃಷ್ಟಿಗೂ ಕಾರಣಭೂತವಾದ ಪ್ರಕೃತಿಯಾಗಲಿ, ಆ ಪ್ರಕೃತಿಗುಣಗಳಾದ ಸತ್ವರಜಸ್ತಮಸ್ಸುಗಳಾಗಲಿ, ಆ ಗುಣಕಾರ್ಯಗಳಾದ ಮಹದಹಂಕಾರಗಳಾಗಲಿ, ಅಲ್ಲಿ ತಮ್ಮ ಕಾರ್ಯವನ್ನು ನಡೆಸುವುದಕ್ಕೆ ಸಮರ್ಥವಲ್ಲ. ಆ ಪರಬ್ರಹ್ಮವು ಅಪ್ರಾಕೃತವೆನಿಸಿರುವುದು. ಎಲೈ ರಾಜನೆ! ಮತ್ತೊಂದು ವಿಷಯವನ್ನು ಹೇಳುವೆನು ಕೇಳು. ವೇದಾಂತಗಳೆಲ್ಲವೂ ವಿಷ್ಣುಸ್ಥಾನವಾದ ಪರಮಪದವೇ ನಮಗೆ ಪ್ರಾಪ್ಯವೆಂದು ಹೇಳುತ್ತಿರುವುವು. ಮತ್ತು ಬ್ರಹ್ಮಾತ್ಮಕವಲ್ಲದ ಸ್ವತಂತ್ರವಸ್ತುವೊಂದಾದರೂ ಪ್ರಪಂಚದಲ್ಲಿಯೇ ಇಲ್ಲವೆಂದೂ ಬೋಧಿಸುತ್ತಿರುವುವು. ಮತ್ತು ನಮಗೆ ಪ್ರಾಪ್ಯನಾದ ಆ ವಿಷ್ಣುಸ್ವರೂಪವೇ ಕಾಲಾದಿಗಳಿಗೂ ನಿಯಾಮಕವಾಗಿರುವುದೆಂದೂ, ಅದಕ್ಕೆ ಸತ್ವಾದಿಗುಣಕಾರ್ಯಗಳ ಸಂಬಂಧವಿಲ್ಲವೆಂದೂ ನಿರೂಪಿಸುವುವು. ಆದುದರಿಂದ ಯೋಗಿಯಾದವನು ರಾಗದ್ವೇಷಾದಿಗಳನ್ನು ಬಿಟ್ಟು, ಬೇರೆ ಯಾವ ವಿಧವಾದ ಚಿಂತೆಯೂ ಇಲ್ಲದೆ ಶುದ್ಧಮನಸ್ಸಿನಿಂದ ಭಗವಂತನ ಪಾದಗಳನ್ನು ಪ್ರತಿಕ್ಷಣವೂ ಆಲಿಂಗಿಸಿಕೊಂಡು, ಇತರ ಕೃತ್ಯಗಳಿಂದ ನಿವೃತ್ತನಾಗಬೇಕು. ಎಲೈ ರಾಜೇಂದ್ರನೆ! ಅಂತಹ ಯೋಗಿಯು ದೇಹತ್ಯಾಗ

ವಮಾಡಬೇಕಾದ ಕ್ರಮವನ್ನೂ ಹೇಳುವೆನು ಕೇಳು. ಅಂತಹ ಯೋಗಿಯು, ಸಮಸ್ತವೂ ಬ್ರಹ್ಮಾತ್ಮಕವೇ ಎಂದು ಬುದ್ಧಿಯಲ್ಲಿ ನಿರ್ಧರಿಸಿ ಭಗವದುಪಾಸನಾತ್ಮಕವಾಗಿಯೂ, ತದ್ದರ್ಶನಾತ್ಮಕನಾಗಿಯೂ ಇರುವ ಜ್ಞಾನದ ಬಲದಿಂದ, ಸಮಸ್ತವಾಸನೆಗಳನ್ನೂ ತೊಲಗಿಸಿಕೊಂಡು, ತನ್ನ ಪಾದಮೂಲದಿಂದ ಗುದಸ್ಥಾನವನ್ನು ನಿರೋಧಿಸಬೇಕು. ಹೀಗೆ ಮಾಡಿದಮೇಲೆ ಮುಂದೆ ಹೇಳುವ ಕ್ರಮದಿಂದ ಪ್ರಾಣವಾಯುವನ್ನು ನಿರಾಯಾಸವಾಗಿ ನಾಭಿಮೊದಲಾದ ಸ್ಥಾನಗಳಲ್ಲಿ ಸೇರಿಸಬಹುದು. ಅದರ ಕ್ರಮವೇನೆಂಬುವನ್ನು ಕೇಳು! ಮೊದಲು ಮೂಲಾಧಾರಚಕ್ರದಲ್ಲಿರುವ ವಾಯುವನ್ನು, ನಾಭಿಯಲ್ಲಿರುವ ಮಣಿಪೂರಕವೆಂಬ ಚಕ್ರದಲ್ಲಿ ಸೇರಿಸಬೇಕು. ಅಲ್ಲಿಂದ ಹೃದಯಮಧ್ಯದಲ್ಲಿರುವ ಅನಾಹತವೆಂಬ ಚಕ್ರಕ್ಕೆ ತಂದು ಸೇರಿಸಿ, ಅಲ್ಲಿಂದ ಕಂಠದಲ್ಲಿ ಉದಾನವಾಯುಸಂಚಾರವಿದಂತೆ ಅದಕ್ಕೆ ಗತಿಯನ್ನು ಕಲ್ಪಿಸಿ, ಕಂಠದ ಕೆಳಗಿರುವ ವಿಶುದ್ಧವೆಂಬ ಚಕ್ರದಲ್ಲಿ ಸೇರಿಸಬೇಕು. ಆಮೇಲೆ ನಿಶ್ಚಲವಾದ ಮನಸ್ಸುಳ್ಳವನಾಗಿ, ಅದು ಹೋಗಬೇಕಾದ ದಾರಿಯನ್ನು ಚೆನ್ನಾಗಿ ಅನುಸಂಧಾನಮಾಡಿ, ಆ ವಿಶುದ್ಧವೆಂಬ ಚಕ್ರದ ಕೊನೆಗೆ ಸಂಬಂಧಿಸಿರುವ ತಾಲುವಿನ ಮೂಲಪ್ರದೇಶಕ್ಕೆ ಪ್ರಯತ್ನದಿಂದ ತಂದು ಸೇರಿಸಬೇಕು. ಅಸ್ಥಳದಿಂದ ಪ್ರಾಣವಾಯುವನ್ನು ಹುಬ್ಬಿನ ನಡುವೆ ಇರುವ ಆಜ್ಞಾಚಕ್ರದಲ್ಲಿ ತಂದು ಸೇರಿಸಬೇಕು. ಆಗ ಆ ಯೋಗಿಯು ಬಾಯಿ, ಮೂಗು, ಕಿವಿ, ಕಣ್ಣು ಮೊದಲಾದ ದ್ವಾರಗಳೆಲ್ಲವೂ ಮುಚ್ಚಿಹೋಗುವುವು. ಆತನಿಗೆ ವಿಷಯಾಂತರಗಳಲ್ಲಿ ಅಪೇಕ್ಷೆಯೂ ತಪ್ಪಿ ಹೋಗುವುದು. ತಾನು ಹೊಂದಬೇಕಾದ ಪ್ರದೇಶವೊಂದರಲ್ಲಿಯೇ ದೃಢಜ್ಞಾನವು ಹುಟ್ಟುವುದು. ಈ ಆಜ್ಞಾಚಕ್ರದಲ್ಲಿ ತಂದು ಸೇರಿಸಿದ್ದವಾಯುವನ್ನು, ಆತನು ಮುಹೂರ್ತಕಾಲದವರೆಗೆ ಹಾಗೆಯೇ ತಡೆದಿಟ್ಟು, ಪರಮಾತ್ಮಪ್ರಾಪ್ತಿಗಾಗಿ ನಿರೀಕ್ಷಿಸುತ್ತಿದ್ದರೆ, ಆ ವಾಯುವು ಬ್ರಹ್ಮರಂಧ್ರವನ್ನು ಭೇದಿಸಿಕೊಂಡು ಹೋಗುವುದು. ಯೋಗಿಯಾದವನು ತನ್ನ ಸ್ಥೂಲದೇಹವನ್ನು ಬಿಡಬೇಕಾದ ಕ್ರಮವೇ ಇದು. ಎಲೈ ರಾಜೇಂದ್ರನೆ! ಮತ್ತೊಂದು ವಿಷಯವನ್ನು ತಿಳಿಸುವೆನು ಕೇಳು! ದೇಹತ್ಯಾಗವಾದ ಮೇಲೆ ಜೀವನಿಗೆ ಅರ್ಚಿರಾದಿಗತಿಯೆಂದೂ, ಧೂಮಾದಿಗತಿಯೆಂದೂ ಎರಡು ಮಾರ್ಗಗಳುಂಟು. ಅವುಗಳಲ್ಲಿ ಮುಮುಕ್ಷುವಾದವನು ಅರ್ಚಿರಾದಿಗತಿಯನ್ನವಲಂಬಿಸುವುದೇ ಉಚಿತವು. ಎಲೈ ರಾಜನೆ! ಚತುರ್ಮುಖಬ್ರಹ್ಮನೇ ಮೊದಲಾದ ದೇವತೆಗಳು ಸ್ವತಂತ್ರರೆಂಬ ಭಾವನೆಯಿಂದ, ಆ ದೇವತೆಗಳನ್ನು ಭಜಿಸತಕ್ಕವರು ಧೂಮಾದಿಗತಿಯನ್ನು ಹಿಡಿದು ಹೋಗುವರು. ಸಿದ್ಧರಿಗೆ ಕ್ರೀಡಾಸ್ಥಾನವಾಗಿಯೂ, ಅಣಿಮಾದ್ಯಷ್ಟೈಶ್ವರ್ಯಸಮೃದ್ಧಿಯುಳ್ಳದಾಗಿಯೂ ಇರುವ ಆ ಚತುರ್ಮುಖಲೋಕವನ್ನು ಹೊಂದ

ಬೇಕೆಂದಪೇಕ್ಷಿಸಿ, ಮೇಲೆ ಹೇಳಿದಂತೆ ಧೂಮಾದಿಗತಿಯನ್ನವಲಂಬಿಸಿ ಹೋಗತಕ್ಕ ವರಿಗೆ, ದೇಹಾವಸಾನಕಾಲದಲ್ಲಿ ಸ್ಥೂಲದೇಹವು ಮಾತ್ರ ಬಿಟ್ಟು ಹೋಗುವುದೇ ಹೊರತು, ಇಂದ್ರಿಯಗಳೂ, ಮನಸ್ಸೂ ಅವರೊಡನೆಯೇ ಸೇರಿಕೊಂಡಿರುವುವು. ಇವುಗಳಿಂದ ಕೂಡಿದ ಸೂಕ್ಷ್ಮದೇಹದಿಂದಲೇ ಅವರು ಲೋಕಾಂತರಗಳನ್ನು ಹೊಂದುವರು. ಇಂತಹ ದೇವತಾಂತರೋಪಾಸಕರಾದ ಯೋಗಿಗಳು, ಮೂರು ಲೋಕಗಳ ಒಳಭಾಗದಲ್ಲಿಯೂ, ಹೊರಭಾಗದಲ್ಲಿಯೂ ಇರುವ ಜನಲೋಕಾದಿಗಳಲ್ಲಿ ವಾಯುವೇಗದಿಂದ ವರ್ತಿಸುವರು. ಶಾಸ್ತ್ರಜನ್ಯಜ್ಞಾನವನ್ನೂ ಕರ್ಮಯೋಗವನ್ನೂ, ಯಮನಿಯಮಾದಿಗಳನ್ನೂ, ಸಮಾಧಿಯನ್ನೂ ಅವಲಂಬಿಸಿದವರಿಗೆ, ಬ್ರಹ್ಮಾಂಡದಲ್ಲಿ ಅಂತರ್ಗತಗಳಾದ ಲೋಕಗಳಲ್ಲಿ ಯಥೇಷ್ಟ ವಿಹಾರವು ಲಭಿಸುವಂತೆ, ಕಾಮ್ಯಕರ್ಮಗಳನ್ನು ನಡೆಸತಕ್ಕವರಿಗೆ ಲಭಿಸಲಾರದು. ಇದರಿಂದ ಕೇವಲ ಕರ್ಮಪರರಿಗಿಂತಲೂ ಇಂತಹ ಯೋಗೀಶ್ವರನೇ ಮೇಲೆಂದು ಸ್ಪಷ್ಟವಾಗುವುದು. ಅಂತಹ ಯೋಗಿಗಿಂತಲೂ ಭಗವದುಪಾಸಕನು ಇನ್ನೂ ಮೇಲೆನಿಸುವನು. ಆದುದರಿಂದಲೇ ಹೀಗೆ ಪರಮಾತ್ಮೋಪಾಸನದಿಂದ ಭಕ್ತಿಯೋಗನಿಷ್ಠರಾದವರು ತ್ರೈಲೋಕ್ಯದಲ್ಲಿ ಅಂತರ್ಭೂತವಾಗಿ, ಚತುರ್ದಶಭುವನಾತ್ಮಕವೆನಿಸಿದ ಅಂಡಕೋಶದ ಉಪರಿಭಾಗದಲ್ಲಿಯೂ ಸಂಚರಿಸಬಲ್ಲರು. ಮುಮುಕ್ಷುಗಳಿಗೆ ಅರ್ಚಿರಾದಿಗತಿಯೇ ಮುಖ್ಯವೆಂದು ಹೇಳಿದೆನಷ್ಟೆ? ಆ ದಾರಿಯನ್ನು ಹಿಡಿದು ಹೋಗತಕ್ಕ ಕ್ರಮವನ್ನೂ ಹೇಳುವೆನು ಕೇಳು. ಮುಮುಕ್ಷುವಾದವನು ತನ್ನ ಹೃದಯ ಕಮಲದಲ್ಲಿರುವ ಪರಮಾತ್ಮನ ಅನುಗ್ರಹಕ್ಕೆ ಪಾತ್ರನಾದೊಡನೆ ಆ ಜೀವಕ್ಕೆ ಸ್ಥಾನಭೂತವಾದ ಹೃದಯಕಮಲದ ಅಗ್ರಭಾಗದಲ್ಲಿರುವ ಸುಷುಮ್ನೆಯೆಂಬ ನಾಡಿಯ ದ್ವಾರವು ಪ್ರಕಾಶವಾಗಿ ತೆರೆಯಲ್ಪಡುವುದು. ಬ್ರಹ್ಮಪ್ರಾಪ್ತಿಗೆ ಇದೇ ದಾರಿಯೆನಿಸಿರುವುದು. ಈ ಮಾರ್ಗವಾಗಿ ದೇಹವನ್ನು ಬಿಟ್ಟು ಹೊರಟು, ಅಲ್ಲಿಂದ ಶೀರ್ಷಕಪಾಲಕ್ಕೆ ಹೊರಗಿರುವ ಆಕಾಶಮಾರ್ಗವಾಗಿ, ಅರಿಶ್ಯಬ್ದವಾಚ್ಯವಾದ ಅಗ್ನಿಯನ್ನು ಹೊಂದುವನು. ಅಲ್ಲಿ ಇವನಿಗೆ ಪುಣ್ಯಪಾಪಕರ್ಮಗಳೆಲ್ಲವೂ ಬಿಟ್ಟು ಹೋಗುವುವು. ಈ ವಿಧವಾದ ಕರ್ಮವಿಮೋಚನವು ಧೂಮಾದಿಗತಿಯನ್ನವಲಂಬಿಸತಕ್ಕವರಿಗೆ ಸಂಭವಿಸದು. ಈ ಕರ್ಮವಿಮೋಚನವಾದ ಮೇಲೆ ಆತನು ಸೂರನಿಗೆ ಉಪರಿಭಾಗದಲ್ಲಿರುವ * ಶಿಂಶುಮಾರಚಕ್ರವನ್ನು ಹೊಂದುವನು. ಈ ಚಕ್ರವು ವಿಷ್ಣುವಿಗೆ ಸ್ಥಾನಭೂತವಾದುದು. ಮತ್ತು ಬ್ರಹ್ಮಜ್ಞಾನಿಗಳೆಲ್ಲರಿಗೂ ನಮಸ್ಕಾರಾರ್ಹವಾದುದು. ಗ್ರಹ

* ಈ ಶಿಂಶುಮಾರಚಕ್ರಸ್ವರೂಪವು ಮುಂದೆ ಐದನೆಯ ಸ್ಕಂಧದಲ್ಲಿ ವಿವರವಾಗಿ ತಿಳಿಸಲ್ಪಡುವುದು.

ತಾರಕ ನಕ್ಷತ್ರಾದಿಗಳೆಲ್ಲಕ್ಕೂ ಆಶ್ರಯಭೂತವಾದುದು. ಮುಮುಕ್ಷುವು ಈ ಶಿಂಶು ಮಾರಚಕ್ರವನ್ನತಿಕ್ರಮಿಸಿ, ಪುಣ್ಯಪಾಪರಹಿತನಾಗಿಯೂ, ಅತಿಸೂಕ್ಷ್ಮವಾಗಿಯೂ ಇರುವ ಲಿಂಗಶರೀರದೊಡನೆ ಅಸಹಾಯನಾಗಿ ಒಬ್ಬನೇ ಹೋಗುತ್ತ, ಕಲ್ಪಾಂತದ ವರೆಗೆ ಮಾತ್ರವೇ ಆಯುಃಪ್ರಮಾಣವುಳ್ಳ ದೇವತೆಗಳಿಗೆ ವಿಹಾರಸ್ಥಾನವಾದ ಜನ ಲೋಕವನ್ನು ಸೇರುವನು. ಈ ಲೋಕವು ಅವಾಂತರ.ಪ್ರಳಯಕಾಲದಲ್ಲಿ ಆದಿಶೇಷನ ವಿಷಾಗ್ನಿಯಿಂದ ದಗ್ಧವಾಗಿ ನಾಶಹೊಂದುವುದೆಂದು ತನ್ನ ಜ್ಞಾನದೃಷ್ಟಿಯಿಂದ ತಿಳಿದು, ಅಲ್ಲಿ ನಿಲ್ಲದೆ ಒಡನೆಯೇ ಚತುರ್ಮುಖಲೋಕವನ್ನು ಸೇರುವನು. ಈ ಲೋಕ ವು ಸ್ವರ್ಗಾದಿಲೋಕಗಳಿಗಿಂತಲೂ ಹೆಚ್ಚು ಕಾಲವಿರತಕ್ಕುದಾದರೂ, ಎರಡು ಪರಾ ರ್ಧ ಕಾಲಕ್ಕಿಂತಲೂ ಹೆಚ್ಚಾಗಿ ನಿಲ್ಲತಕ್ಕುದಲ್ಲ. ಆದರೆ ಆಲೋಕದಲ್ಲಿ ದುಃಖವಾಗಲಿ, ಬೇರೆ ಮನೋವಿಕಾರಗಳಾಗಲಿ, ಭಯವಾಗಲಿ, ಚಳಿಗಾಳಿ, ಮಳೆ, ಬಿಸಿಲುಗಳಿಂ ದುಂಟಾಗುವ ಬಾಧೆಯಾಗಲಿ ಯಾವುದೊಂದೂ ಇರುವುದಿಲ್ಲ. ಈಸ್ಥಾನವು ಯಾವಾ ಗಲೂ ಅನೇಕ ಯೋಗೀಶ್ವರರಿಂದೊಪ್ಪುವ ದಿವ್ಯವಿಮಾನಗಳಿಂದ ಶೋಭಿತವಾಗಿರು ವುದು. ಆದರೆ ಅಲ್ಲಿನವರು ಈ ಪ್ರತ್ಯಕ್ಷಪ್ರಪಂಚಕ್ಕಿಂತಲೂ ವಿಲಕ್ಷಣವಾದ ಪರ ಬ್ರಹ್ಮರೂಪವನ್ನು ಬಲ್ಲವರಾದರೂ, ಅವರಿಗೆ ತಾವು ನಡೆಸಿದ ಕರ್ಮಬಂಧವೇ ಮೂಲ ಕವಾಗಿ ತಮಗೆ ಅಪಾರದುಃಖಕಾರಣವಾದ ಸಂಸಾರವು ತಿರುಗಿ ಸಂಭವಿಸಬಹು ದೆಂಬ ಭಯವೊಂದುಮಾತ್ರ ಮನಸ್ಸನ್ನು ಆಗಾಗ ಕಳವಳಹೊಂದಿಸುತ್ತಿರುವುದು. ಈ ನ್ಯೂನತೆಯನ್ನು ನೋಡಿ ಅಲ್ಲಿಯೂ ನಿಲ್ಲದೆ ಮುಂದೆ ಹೊರಡುವನು. ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಮಹತ್, ಅಹಂಕಾರಗಳೆಂಬ ಏಳುಬಗೆಯ ಆವರಣಗಳುಂಟು ಆದುದರಿಂದ ಚತುರ್ಮುಖಲೋಕದಿಂದ ಪರಮಪದಕ್ಕೆ ಹೋಗ ಲುದ್ದೇಶಿಸಿದವನು, ಅಲ್ಲಿಂದ ಹೊರಟಕೂಡಲೆ ಪೃಥಿವೀಮಯವಾದ ಆವರಣವನ್ನು ಪ್ರವೇಶಿಸಿ ಅಲ್ಲಿ ನಿರ್ಭಯನಾಗಿರುತಿದ್ದು, ಅದೇಸ್ವರೂಪದೊಡನೆ ಆ ಆವರಣವನ್ನೂ ದಾಟಿ, ಜಲಾವರಣವನ್ನು ಹೊಂದುವನು. ಅದರಿಂದಾಚೆಗೆ ಆವರಣಾಗ್ನಿಯನ್ನು ಹೊಂದಿ, ಅಗ್ನಿಸ್ವರೂಪನಾಗಿ. ಅಲ್ಲಿ ತನಗೆ ಅಗ್ನಿಸಂಬಂಧವಾದ ಉರಿ, ಬೇಗೆ, ಮುಂ ತಾದ ಬಾಧೆಯೊಂದೂ ತೋರದುದರಿಂದ, ಆತುರವಿಲ್ಲದೆ ಮೆಲ್ಲಗೆ ಅದನ್ನ ತಿಕ್ರಮಿಸಿ ಹೋಗಿ ಆವರಣವಾಯುವನ್ನು ಸೇರುವನು. ವಾಯುಸ್ವರೂಪದಿಂದ ಇದನ್ನೂ ದಾಟಿದಮೇಲೆ, ಹಿಂದೆ ಹೇಳಿದ ವಾಯು ಮೊದಲಾದ ಎಲ್ಲಾ ಭೂತ ಗಳಿಗೂ ಉತ್ಪತ್ತಿಕಾರಣವಾಗಿ, ಅವೆಲ್ಲಕ್ಕಿಂತಲೂ ದೊಡ್ಡದಾಗಿ ಶಬ್ದವೆಂಬ ಅಸಾ ಧಾರಣಗುಣವುಳ್ಳ ಆವರಣಾಕಾಶವನ್ನು ಸೇರುವನು. ಎಲೈರಾಜನೆ! ಮುಮುಕ್ಷುವಾ ದವನು ಹೀಗೆ ತನ್ನ ಸೂಕ್ಷ್ಮದೇಹದಲ್ಲಿರುವ ಇಂದ್ರಿಯಗಳಿಂದ ಆಯಾಭೂತಗಳಲ್ಲಿ

ರುವ ಗುಣಗಳನ್ನು ಗ್ರಹಿಸುತ್ತ ಹೋಗುವನು ಘ್ರಾಣೇಂದ್ರಿಯದಿಂದ ಭೂಮ್ಯಾವರಣಗುಣವಾದ ಗಂಧವನ್ನೂ, ಜಿಹ್ವೇಂದ್ರಿಯದಿಂದ ಜಲಾವರಣದಲ್ಲಿರುವ ರಸವನ್ನೂ, ನೇತ್ರೇಂದ್ರಿಯದಿಂದ ಅಗ್ನಿಗತವಾದ ರೂಪವನ್ನೂ, ತ್ವಗಿಂದ್ರಿಯದಿಂದ ವಾಯುಗತವಾದ ಸ್ಪರ್ಶವನ್ನೂ, ಶ್ರವಣೇಂದ್ರಿಯದಿಂದ ಆಕಾಶಗುಣವಾದ ಶಬ್ದವನ್ನೂ, ಅಂತಃಕರಣದಿಂದ ಅಭಿಪ್ರಾಯವನ್ನೂ ಗ್ರಹಿಸುವನು. ಒಂದೊಂದು ಭೂತಾವರಣವನ್ನು ಭೇದಿಸುವಾಗಲೂ, ಹೀಗೆ ತನ್ನ ಇಂದ್ರಿಯಗಳಿಂದ ಆಯಾಭೂತಗುಣವನ್ನು ಗ್ರಹಿಸುತ್ತ ಹೋಗುವುದಲ್ಲದೆ, ಅಂತಹ ಯೋಗಿಯು ಆಕಾಶಾದಿಭೂತಗಳಿಗೂ, ಶಬ್ದಾದಿ ತನ್ಮಾತ್ರಗಳಿಗೂ, ಜ್ಞಾನಕರ್ಮೇಂದ್ರಿಯಗಳಿಗೂ ಕಾರಣವಾಗಿ, ಮತ್ತು ತನ್ನ ಕಾರ್ಯದಿಂದಲೇ ತಾನು ವ್ಯಾಪ್ತವಾಗುತ್ತ, ದಿಕ್ಕು, ವಾಯು, ಮುಂತಾದ ದೇವತೆಗಳಿಂದಧಿಷ್ಠಿತಗಳಾದ ಇಂದ್ರಿಯಗಳಿಗೂ ಕಾರಣವಾಗಿ, ಸಾತ್ವಿಕ ರಾಜಸ ತಾಮಸಗಳೆಂಬ ಮೂರುವಿಭಾಗಗಳುಳ್ಳ ಅಹಂಕಾರತತ್ವವನ್ನು ಸೇರಿ ಅದರೊಡನೆ ಸೇರಿದಂತೆಯೇ ವಿಜ್ಞಾನವೆಂಬ ಹೆಸರುಳ್ಳ ಮಹತ್ತತ್ವಾವರಣವನ್ನು ಹೊಂದುವನು. ಅಲ್ಲಿಂದಾಚೆಗೆ ಸತ್ವರಜಸ್ತಮೋಗುಣಗಳ ಸಮಸ್ಥಿತಿಗೆ ಆಶ್ರಯವಾದ ಪ್ರಕೃತಿಗೆ ಬಂದು ಸೇರುವನು. ಅಲ್ಲಿಂದ ಹೊರಟು ಅದರ ಎಲ್ಲೆಯನ್ನು ದಾಟಿದೊಡನೆ, ಪುಣ್ಯಪಾಪಸಂಬಂಧವಿಲ್ಲದೆ ಪರಿಶುದ್ಧವಾಗಿರುವ ಸೂಕ್ಷ್ಮರೂಪವನ್ನು ಹೊಂದಿ, ಹಸಿವು ಬಾಯಾರಿಕೆ ಮೊದಲಾದ ವಿಕಾರಗಳೊಂದಕ್ಕೂ ಈಡಾಗದ ನಿತ್ಯಾನಂದಸ್ವರೂಪವಾದ ಪರಮಾತ್ಮನನ್ನು ಆದೇವಿಧವಾದ ಆನಂದದೊಡನೆ ಬಂದು ಸೇರುವನು. ಎಲೈ ಪರೀಕ್ಷಿದ್ರಾಜನೆ! ನಾನು ಹೇಳಿದ ಈ ಅರ್ಚಿರಾದಿಮಾರ್ಗವನ್ನು ಪರಮಭಾಗವತೋತ್ತಮರೆಲ್ಲರೂ ಅತ್ಯಾದರದಿಂದ ಅನುಸರಿಸುವರು. ಈ ಮಾರ್ಗವನ್ನು ಹಿಡಿದು ಮುಕ್ತಿಹೊಂದಿದವನು ಪುನರ್ಜನ್ಮವಿಲ್ಲದೆ ಪರಮಾನಂದವನ್ನನುಭವಿಸುತ್ತಿರುವನೆಂಬುದಕ್ಕೆ ಎಷ್ಟುಮಾತ್ರವೂ ಸಂದೇಹವಿಲ್ಲ. ಎಲೈ ರಾಜೇಂದ್ರನೆ! ನೀವು ತಿಳಿಯಬೇಕಾದ ವಿಷಯಗಳೇನೆಂದು ಕೇಳಿದೆಯಲ್ಲವೆ? ಇದೇ ನೀನು ಕೇಳಿ ತಿಳಿಯಬೇಕಾದ ಮುಖ್ಯವಿಷಯವು! ಅದನ್ನೇ ನಾನೂ ನಿನಗೆ ತಿಳಿಸಿರುವೆನು. ಧೂಮಾದಿಗತಿಯೆಂದೂ, ಅರ್ಚಿರಾದಿಗತಿಯೆಂದೂ ಹೇಳಲ್ಪಡುವ ಈ ಮಾರ್ಗಗಳೆರಡೂ ವೇದಗಳಲ್ಲಿ ವಿವರಿಸಲ್ಪಟ್ಟು ಅನಾದಿಯಾಗಿ ಬಂದಿರುವುವು. ಪೂರ್ವದಲ್ಲಿ ಬ್ರಹ್ಮದೇವದಿಂದ ಆರಾಧಿಸಲ್ಪಟ್ಟ ಶ್ರೀವಾಸುದೇವನು, ಅವನಲ್ಲಿ ಪ್ರಸನ್ನನಾಗಿ, ಈ ವಿವರಗಳೆಲ್ಲವನ್ನೂ ತಿಳಿಸಿದನು. ಸಂಸಾರಿಗಳಿಗೆ ಅರ್ಚಿರಾದಿಮಾರ್ಗಕ್ಕಿಂತಲೂ ಉತ್ತಮವಾದ ಮಾರ್ಗವಿಲ್ಲ. ಇದರ ಸ್ವರೂಪವನ್ನು ನೆನಸಿಕೊಂಡಾಗಲೇ ವಾಸುದೇವನಲ್ಲಿ ಭಕ್ತಿಯು ಜನಿಸುವುದು ಇದಲ್ಲದೆ ಬ್ರಹ್ಮ

ದೇವನು ವೇದಗಳೆಲ್ಲವನ್ನೂ ಮೂರಾವರ್ತಿ ಮಗುಚಿನೋಡಿ, ಕೊನೆಗೆ ಮೋಕ್ಷ ವನ್ನು ಪಡೆಯುವುದಕ್ಕೆ ಭಕ್ತಿಗಿಂತಲೂ ಸುಲಭವಾದ ಬೇರೆ ಉಪಾಯವಿಲ್ಲವೆಂದು ನಿರ್ಧರಿಸಿರುವನು. ಈ ಭಕ್ತಿಮಾರ್ಗವನ್ನು ಹಿಡಿಯುವುದರಿಂದ ವಾಸುದೇವನೆಂಬ ವಿಕಾರಶೂನ್ಯನಾದ ಪರಬ್ರಹ್ಮನಲ್ಲಿ ಪ್ರೇಮಾನುರಾಗವು ಹುಟ್ಟದಿರದು. ಆದರೆ "ಅನುಭವಿಸಿ ಕಂಡ ವಿಷಯಗಳಲ್ಲಿ ಅನುರಾಗವು ಹುಟ್ಟಬಹುದೇ ಹೊರತು ಯಾವಾಗಲೂ ಕಂಡು ಕೇಳದ ಬ್ರಹ್ಮದಲ್ಲಿ ಅನುರಾಗವು ಹುಟ್ಟುವುದು ಹೇಗೆ" ಎಂದು ನೀನು ಶಂಕಿಸಬಹುದು ಎಲೈ ರಾಜನೆ! ಅದಕ್ಕೂ ತಕ್ಕ ಸಮಾಧಾನವನ್ನು ಹೇಳುವೆನು ಕೇಳು! ಶ್ರೀಹರಿಯೇ ಸರ್ವಭೂತಗಳಲ್ಲಿಯೂ ಅಂತರಾತ್ಮನಾಗಿದ್ದು, ಯಾವಾಗಲೂ ಪ್ರಕಾಶಿಸುತ್ತಿರುವನು. ಮಹದಾದಿಕಾರ್ಯಗಳಿಂದಲೂ ತನ್ನ ಶಕ್ತಿಯನ್ನು ಕಾಣಿಸುತ್ತಿರುವನು ವೇದಗಳಿಂದಲೂ ಅವನ ಗುಣಗಳು ಹೊರ ಪಡುತ್ತಿರುವುವು. ಹೀಗಿರುವಾಗ ಆ ಭಗವಂತನಲ್ಲಿ ಅನುರಾಗವು ಹುಟ್ಟುವುದೊಂದು ಹೆಚ್ಚೇ! ಎಲೈ ರಾಜೇಂದ್ರನೆ! ನಾವು ಸರ್ವವಿಧದಿಂದಲೂ ಅಂತಹ ಭಗವಂತನನ್ನು ಎಡೆಬಿಡದೆ ಧ್ಯಾನಿಸುತ್ತ, ಯಾವಾಗಲೂ ಆತನ ರೂಪವನ್ನೇ ಸ್ಮರಿಸುತ್ತ, ಕ್ಷಣಕ್ಷಣಕ್ಕೂ ಆತನಿಗೆ ನಮಸ್ಕರಿಸುತ್ತ, ಸರ್ವಕಾಲಗಳಲ್ಲಿಯೂ ಆತನ ಕಥೆಗಳನ್ನು ಕೇಳುತ್ತಿರಬೇಕು. ಹೀಗೆ ಶ್ರೀಹರಿಕಥಾಮೃತವನ್ನು ಪಾನಮಾಡಿದವರು, ಮಲಿನವಾದ ದೇಹವನ್ನು ತೊರೆದು, ನಿತ್ಯಾನಂದಮಯವಾದ ಮತ್ತು ಎಂದಿಗೂ ಸಾವಿಲ್ಲದ ರೂಪವನ್ನು ಹೊಂದಿ ಶ್ರೀವಾಸುದೇವನ ಪಾದಾರವಿಂದವನ್ನು ಸೇರುವರು ಇಲ್ಲಿಗೆ ಎರಡನೆಯ ಅಧ್ಯಾಯವು.

---

{ ಶುಕನು ಪರೀಕ್ಷಿತ್ತಿಗೆ ಹರಿಭಕ್ತಿಮಾರ್ಗದ ಪ್ರಾಶಸ್ತ್ಯವನ್ನೂ, ಆಹರಿಯೊಬ್ಬನೇ ಮೋಕ್ಷಾದಿಸರ್ವಫಲಪ್ರದನೆಂದೂ ತಿಳಿಸಿದುದು. }

ತಿರುಗಿ ಶುಕಮುನಿಯು ಪರೀಕ್ಷಿನ್ಮಹಾರಾಜನನ್ನು ಕುರಿತು. "ಎಲೈ ರಾಜನೆ! ಲೋಕದಲ್ಲಿ ಮನುಷ್ಯಜನ್ಮವೇ ದುರ್ಲಭವು. ಅದೃಷ್ಟವಶದಿಂದ ಒಂದುವೇಳೆ ಮನುಷ್ಯನಾಗಿ ಹುಟ್ಟಿದರೂ, ಅವರಲ್ಲಿ ಸರಿಯಾದ ಬುದ್ಧಿಯುಳ್ಳವರು ವಿರಳರು. ಮನುಷ್ಯಜನ್ಮದಲ್ಲಿ ಹುಟ್ಟಿ ವಿವೇಕಿಯಾಗಿಯೂ ಇರುವವನ್ನು ಮರಣಕಾಲದಲ್ಲಿ ಮಾಡಬೇಕಾದ ಕಾರ್ಯಗಳೇನೆಂದು ಕೇಳಿನೆಯಷ್ಟೆ? ಇದುವರೆಗೆ

ಹೇಳಿದ ವಿಷಯಗಳಿಂದ ಆ ವಿಷಯುವನ್ನು ನಿನಗೆ ಹೇಳಿತಿಳಿಸಿದೆನು. ಇನ್ನು ಕಾಮಿಗಳಾಗಿ ಇತರಫಲಗಳನ್ನಪೇಕ್ಷಿಸುವವರು ಬೇರೆ ಯಾವ ದೇವತೆಗಳನ್ನು ಹೇಗೆ ಭಜಿಸಬೇಕೆಂಬುದನ್ನೂ ತಿಳಿಸುವೆನು ಕೇಳು. ಬ್ರಹ್ಮತೇಜಸ್ಸನ್ನಪೇಕ್ಷಿಸುವವನು ವೇದಗಳಿಗೆ ಪತಿಯಾದ ಬ್ರಹ್ಮದೇವನನ್ನು ಉಪಾಸನೆಮಾಡಬೇಕು. ಹಾಗೆಯೇ ಇಂದ್ರಿಯಬಲವನ್ನಪೇಕ್ಷಿಸುವವನು ಇಂದ್ರನನ್ನೂ, ಸಂತಾನಾಪೇಕ್ಷೆಯುಳ್ಳವನು ದಕ್ಷನೇ ಮೊದಲಾದ ಪ್ರಜಾಧಿಪತಿಗಳನ್ನೂ, ಶ್ರೀಯನ್ನಪೇಕ್ಷಿಸತಕ್ಕವನು ಅದ್ಭುತಶಕ್ತಿಯುಳ್ಳ ವಿಷ್ಣುಪತ್ನಿಯನ್ನೂ, ತೇಜಸ್ಸನ್ನು ಕೋರುವವನು ಸೂರ್ಯನನ್ನೂ, ಅರ್ಥದಲ್ಲಿಆಸೆಯುಳ್ಳವನು ಅಷ್ಟವಸುಗಳನ್ನೂ, ವೀರ್ಯವನ್ನು ಕೋರುವವನು ರುದ್ರದೇವತೆಗಳನ್ನೂ, ಅನ್ನಾಪೇಕ್ಷೆಯುಳ್ಳವನು ಅದಿತಿಯನ್ನೂ, ಸ್ವರ್ಗವನ್ನು ಕೋರುವವನುಅದಿತಿಪುತ್ರರನ್ನೂ ಭಜಿಸಬೇಕು. ರಾಷ್ಟ್ರವನ್ನು ಕೋರುವವನು ವಿಶ್ವೇದೇವತೆಗಳನ್ನು ಪೂಜಿಸಬೇಕು. ನಾನಾದಿಕ್ಕುಗಳನ್ನು ಸಾಧಿಸಬೇಕೆಂದಪೇಕ್ಷಿಸತಕ್ಕವನು ಸಾಧ್ಯರನ್ನು ಭಜಿಸಬೇಕು. ಮತ್ತು ಆಯುಸ್ಸನ್ನು ಕೋರುವವನು ಅಶ್ವಿನೀದೇವತೆಗಳನ್ನೂ, ದೇಹಪುಷ್ಟಿಯನ್ನಪೇಕ್ಷಿಸತಕ್ಕವನುಭೂದೇವಿಯನ್ನೂ, ಪ್ರತಿಷ್ಠಾಕಾಂಕ್ಷಿಯಾದವನು ಭೂಮ್ಯಾಕಾಶಗಳನ್ನೂ, ಸೌಂದರ್ಯವನ್ನು ಕೋರುವವನು ಗಂಧರ್ವರನ್ನೂ, ಸ್ತ್ರೀಯರಲ್ಲಿ ಆಸೆಯುಳ್ಳವನು ಊರ್ವಶಿಯೆಂಬ ಅಪ್ಸರಸ್ತ್ರೀಯನ್ನೂ ಸಮಸ್ತಜನರಮೇಲೆ ಅಧಿಕಾರವನ್ನು ಕೋರುವವನು ಪರಮೇಷ್ಠಿಯನ್ನೂ, ಯಶಸ್ಸನ್ನು ಕೋರುವವನು ಯಜ್ಞದೇವನಾದ ವಿಷ್ಣುವನ್ನೂ ಭಜಿಸಬೇಕು. ಹಾಗೆಯೇ ಹಣದಲ್ಲಿ ಆಸೆಯುಳ್ಳವನು ಕುಬೇರನನ್ನೂ, ವಿದ್ಯಾಭಿಲಾಷೆಯುಳ್ಳವನು ರುದ್ರನನ್ನೂ ಅನುಕೂಲದಾಂಪತ್ಯವನ್ನು ಕೋರುವವನು ಪಾರ್ವತೀದೇವಿಯನ್ನೂ, ಧರ್ಮಾರ್ಥಗಳಲ್ಲಿ ಆಸೆಯುಳ್ಳವನು ಉತ್ತಮಶ್ಲೋಕನಾದ ವಿಷ್ಣುವನ್ನೂ, ಸಂತಾನವೃದ್ಧಿಯಲ್ಲಿ ಆಸೆಯುಳ್ಳವನು ಪಿತೃದೇವತೆಗಳನ್ನೂ, ರಕ್ಷಣೆಯನ್ನು ಕೋರುವವನು ಯಕ್ಷರನ್ನೂ, ಬಲವನ್ನಪೇಕ್ಷಿಸತಕ್ಕವನು ಮರುದ್ಗಣಗಳನ್ನೂ, ರಾಜ್ಯವನ್ನು ಕೋರುವವನು ಮನುರೂಪರಾದ ದೇವತೆಗಳನ್ನೂ, ಶತ್ರುಮರಣವನ್ನಪೇಕ್ಷಿಸುವವನು ನಿಮುತಿಯೆಂಬ ರಾಕ್ಷಸಾಂಶವುಳ್ಳ ದಿಕ್ಪಾಲಕನನ್ನೂ, ಯೋಗಾಪೇಕ್ಷೆಯುಳ್ಳವನು ಚಂದ್ರನನ್ನೂ ಭಜಿಸಬೇಕು. ಎಲೈ ರಾಜೇಂದ್ರನೆ! ಈ ಯಾವ ವಿಷಯಗಳಲ್ಲಿಯೂ ಅಪೇಕ್ಷೆಯಿಲ್ಲದೆ ವೈರಾಗ್ಯಪ್ರೌಢನಾದವನೇ ಅಪೇಕ್ಷಿಸತಕ್ಕವನು ಆ ಪರಮಪುರುಷನೊಬ್ಬನನ್ನೇ ಪೂಜಿಸಬೇಕು. ಕೇವಲವಿರಕ್ತಮಾರ್ಗದಲ್ಲಿದ್ದವನಾಗಲಿ, ಇತರಫಲಗಳಲ್ಲಿ ಅಪೇಕ್ಷೆಯಿದ್ದವನಾಗಲಿ ಮೋಕ್ಷದಲ್ಲಿ ಆಸೆಯುಳ್ಳನಾದರೆ, ಅವಿಚ್ಛಿನ್ನವಾದ ಭಕ್ತಿಯೋಗವನ್ನವಲಂಬಿಸಿ ಪರಮಪುರುಷನನ್ನು ಪೂಜಿಸ

ಬೇಕು. "ಆದರೆ ಹೀಗೆ ಭಜಿಸತಕ್ಕವರಿಗೆ ಮೋಕ್ಷಪ್ರಾಪ್ತಿಯುಂಟಾಗುವ ಕಾಲ ವಾವುದು ?" ಎಂದು ನೀನು ಕೇಳಬಹುದು. ಎಲೈ ರಾಜನೆ ! ಈ ಲೋಕದಲ್ಲಿ ಹಾಗೆ ಭಗವಂತನನ್ನು ಭಜಿಸುತ್ತಿರುವವರಿಗೆ ಭಗವದ್ಭಕ್ತರ ಸಹವಾಸವು ಲಭಿಸಿದ ಕೂಡಲೆ ತಪ್ಪದೆ ಮೋಕ್ಷವು ಕೈಗೂಡುವುದೆಂದು ತಿಳಿ. ಅದು ಹೇಗೆಂದು ಕೇಳುವೆಯಾ ? ಅಂತಹ ಸಜ್ಜನರ ಸಹವಾಸದಿಂದ ಭಗವಂತನಲ್ಲಿ ಮನಸ್ಸು ನಿಶ್ಚಲವಾಗಿ ನಿಲ್ಲುವುದು. ಆ ಮನೋದಾರ್ಢ್ಯವು ಹುಟ್ಟಿದೊಡನೆ, ಮುಕ್ತಿಯುಂಟಾಗುವುದು. ಭಗವಂತನಲ್ಲಿ ನಿಶ್ಚಲವಾದ ಭಕ್ತಿಯನ್ನು ಮೊದಲು ಸಂಪಾದಿಸಬೇಕು. ಎಲೈ ರಾಜನೆ ! ಶ್ರೀಮನ್ನಾರಾಯಣನ ಚರಿತ್ರಗಳನ್ನು ಕೇಳುತ್ತಿದ್ದ ಪಕ್ಷದಲ್ಲಿ ಸತ್ವರಜಸ್ತಮೋಗುಣಕಾರ್ಯಗಳಾದ ಹಸಿವು, ಬಾಯಾರಿಕೆ, ಶೋಕ, ಮೋಹ, ಜರಾ, ಮರಣಗಳೊಂದೂ ಸಂಭವಿಸವು ಮನಸ್ಸು ನಿರ್ಮಲ ವಾಗುವುದು. ಈಲೋಕದಲ್ಲಿಯೂ ಶಬ್ದಾದಿವಿಷಯಗಳಲ್ಲಿ ವಿರಕ್ತಿಯು ಹುಟ್ಟುವುದು. ಮೋಕ್ಷಕ್ಕೆ ಪ್ರಧಾನೋಪಾಯವಾದ ಭಕ್ತಿಯೋಗವು ತಾನಾಗಿಯೇ ಲಭಿಸುವುದು ಹೀಗಿರುವಾಗ ಸುಖಾಭಿಲಾಷಿಯಾದ ಯಾವ ಮನುಷ್ಯನು ತಾನೇ ಹರಿಕಥಾಶ್ರವಣದಲ್ಲಿ ಅನುರಾಗ ವನ್ನು ಹೊಂದದಿರುವನು ?" ಎಂದನು. ಈ ಸಂಗತಿಯನ್ನು ಕೇಳಿ ಶೌನಕನು ಸೂತ ನನ್ನು ಕುರಿತು, "ಎಲೈ ಮಹಾತ್ಮನೆ ! ಶುಕಮುನಿಯು ಹೇಳಿದ ಈ ಮಾತನ್ನು ಕೇಳಿದ ಮೇಲೆ ಪರೀಕ್ಷಿದ್ರಾಜನು ಮುಂದೆ ಯಾವ ಪ್ರಶ್ನವನ್ನು ಮಾಡಿ ದನು ? ಅದಕ್ಕೆ ಶುಕನು ಕೊಟ್ಟ ಉತ್ತರವೇನು ? ನಮಗೆ ಅವೆಲ್ಲವನ್ನೂ ಕೇಳಿ ತಿಳಿಯಬೇಕೆಂಬ ಕುತೂಹಲವು ಬಹಳವಾಗಿರುವುದು. ಆದುದರಿಂದ ಅವೆಲ್ಲವನ್ನೂ ನಮಗೆ ವಿವರವಾಗಿ ತಿಳಿಸಬೇಕು ಅವರ ಪ್ರಶ್ನೋತ್ತರಗಳೆಲ್ಲವೂ ಕೇವಲ ಹರಿಕಥಾ ಪ್ರಚುರವಾಗಿಯೇ ಇರುವುವು. ಅವರಿಬ್ಬರೂ ಪರಮಭಾಗವತೋತ್ತಮರು. ಆ ಪರೀಕ್ಷಿನ್ಮಹಾರಾಜನು ಬಾಲ್ಯದಲ್ಲಿ ಸಣ್ಣಮಕ್ಕಳೊಡನೆ ಆಡುತ್ತಿರುವ ಕಾಲದಲ್ಲಿ ಯೂ ಕೂಡ ಕೃಷ್ಣನ ಕ್ರೀಡೆಗಳನ್ನೇ ಅನುಕರಿಸುತ್ತಿದ್ದನೇ ಹೊರತು ಬೇರೆ ಮಾರ್ಗ ಕ್ಕೆ ಹೋಗುತ್ತಿರಲಿಲ್ಲ. ಅಂತಹ ಪರಮಭಾಗವತನಾದ ಪರೀಕ್ಷಿತ್ತಿಗೂ, ಶ್ರೀಹರಿ ಪರಾಯಣನಾದ ಶುಕಮುನಿಗೂ ನಡೆದ ಸಂವಾದವು ಶ್ರೀಕೃಷ್ಣಚರಿತ್ರಗಳನ್ನು ಬಿಟ್ಟು ಬೇರೊಂದರಲ್ಲಿ ಪ್ರವರ್ತಿಸಲಾರವು. ಆ ಕಥೆಗಳನ್ನು ಕೇಳುತ್ತಿರುವುದಕ್ಕಿಂ ತಲೂ ನಮಗೆ ಬೇರೆ ಲಾಭವೇನುಂಟು ? ಎಲೈ ಸೂತನೆ ! ಸೂರ್ಯನು ತಾನು ಆಕಾಶ ದಲ್ಲಿ ಹುಟ್ಟಿ ಮುಳುಗಿದ ಹಾಗೆಲ್ಲಾ ಜನಗಳ ಆಯುರ್ದಾಯವನ್ನು ಅಪಹರಿಸಿ ಕೊಂಡು ಹೋಗುತ್ತಿರುವನು. ಇಂತಹ ಸಂದರ್ಭದಲ್ಲಿ ಉತ್ತಮಶ್ಲೋಕನಾದ ಶ್ರೀಮನ್ನಾರಾಯಣನ ಕಥೆಗಳನ್ನು ಕೇಳುವುದರಿಂದ ನಾವು ಕಳೆಯತಕ್ಕ ಕಾಲ

ವನ್ನು ಮಾತ್ರ ಈತನು ನಿರರ್ಥಕವಾಗಿ ಮಾಡಲಾರನು. ಕ್ಷಣಕ್ಷಣಕ್ಕೂ ಮನುಷ್ಯರ ಆಯುಸ್ಸು ಕಳೆದುಹೋಗುತ್ತಿದ್ದರೂ ಅದರಲ್ಲಿ ಭಗವದ್ಗುಣಾನುಭವದಿಂದ ಕಳೆದ ಕಾಲವು ಮಾತ್ರ ಸಾರ್ಥಕವೆನಿಸುವುದು. ಈ ಕಾಲವನ್ನು ಮಾತ್ರ ಸೂರ್ಯಗತಿಯಿಂದಲೂ ಕಳೆದು ಹೋಗದಂತೆಯೇ ಎಣಿಸಬಹುದು. "ಅದರಿಂ ನಮ್ಮ ಆಯುರ್ದಾಯಕ್ಕೆ ಈ ಲೋಕದಲ್ಲಿ ಬದುಕಿರುವುದೇ ಒಂದು ಫಲವಾಗಬಾರದೆ?" ಎಂದು ಕೆಲವರು ಭಾವಿಸಬಹುದು. ಈ ವಿಧದಿಂದ ಬದುಕಿದ ಮಾತ್ರಕ್ಕೆ ಫಲವೇನು? ಲೋಕದಲ್ಲಿ ಎಷ್ಟೋ ವೃಕ್ಷಗಳೂ ಬದುಕಿರುವುವಲ್ಲವೆ? ಆದರೆ "ಅವುಗಳಿಗೆ ಶ್ವಾಸೋಚ್ಛ್ವಾಸಗಳೆಲ್ಲಿ? ನಮ್ಮ ಹಾಗೆ ಅವುಗಳು ಉಸಿರಾಡುವುದಿಲ್ಲವಷ್ಟೆ?" ಎಂದು ಆಕ್ಷೇಪಿಸಬಹುದು. ಉಸಿರಾಡಿದ ಮಾತ್ರಕ್ಕೇನು? ಕಮ್ಮಾರರ ಕೈಯಲ್ಲಿರುವ ಕತ್ತಿಗಳೂ ಕೂಡ ಎಡೆಬಿಡದೆ ಉಸಿರಾಡಿಸುತ್ತಿರುವುವು. ಆದಮಾತ್ರಕ್ಕೆ ಫಲವೇನು? ಅದರಂತೆಯೇ ಅಲ್ಲಲ್ಲಿ ಗ್ರಾಮಗಳಲ್ಲಿರುವ ನಾಲ್ಕು ಕಾಲಿನ ಜಂತುಗಳೆಲ್ಲವೂ ಆಹಾರಮೈಥುನಗಳನ್ನು ನಡೆಸುವುದಿಲ್ಲವೆ? ಇವೆಲ್ಲವನ್ನೂ ನಡೆಸಿದ ಮಾತ್ರಕ್ಕೆ ಫಲವೇನಾಯಿತು? ಎಲೈ ಮಹಾತ್ಮನೆ! ಇನ್ನು ಹೆಚ್ಚು ಮಾತಿನಿಂದೇನು. ಯಾವನ ಕಿವಿಯಲ್ಲಿ ಒಂದಾವರ್ತಿಯಾದರೂ ಭಗವನ್ನಾಮವು ಬೀಳುವುದಿಲ್ಲವೋ ಆ ಮನುಷ್ಯನು ನಾಯಿಗಳಿಗೂ, ಊರುಹಂದಿಗಳಿಗೂ, ಒಂಟೆಗಳಿಗೂ, ಕತ್ತೆಗಳಿಗೂ, ಸಮನೆಂದೆಣಿಸಲ್ಪಡುವ ಕೇವಲ ಮೃಗಪ್ರಾಯನೇ ಹೊರತು ಬೇರೆಯಲ್ಲ. ತ್ರಿವಿಕ್ರಮಾವತಾರವನ್ನೆತ್ತಿ ಸಮಸ್ತಲೋಕಗಳನ್ನೂ ತನ್ನ ಪಾದಸ್ಪರ್ಶದಿಂದ ಪವಿತ್ರವಾಗಿ ಮಾಡಿದ ಭಗವಂತನ ಚರಿತ್ರೆಗಳನ್ನು ಕೇಳದ ಕಿವಿಗಳು ಹಾಳುಬಿದ್ದ ಗವಿಗಳೇ ಹೊರತು ಕಿವಿಗಳಲ್ಲ. ಯಾವನ ನಾಲಗೆಯು ಭಗವತ್ಕಥೆಗಳನ್ನು ಒಂದಾವರ್ತಿಯಾದರೂ ಗಾನಮಾಡುವುದಿಲ್ಲವೋ ಅಂತವನ ನಾಲಗೆಯು, ಹಾಳುಬಾವಿಯಲ್ಲಿ ಬಿದ್ದು ಅರಚುತ್ತಿರುವ ಕಪ್ಪೆಗಳ ನಾಲಗೆಯಂತೆಯೇ ಹೊರತು ಬೇರೆಯಲ್ಲ. ಅಂತವನಿಗೆ ನಾಲಗೆಯಿದ್ದರೂ ಇಲ್ಲದಂತೆಯೇ ಎಣಿಸಬಹುದು. ಭೋಗಮೋಕ್ಷಪ್ರದನಾದ ಭಗವಂತನ ಪಾದಗಳಿಗೆ ಒಂದಾವರ್ತಿಯಾದರೂ ಭಕ್ತಿಯಿಂದ ಬಗ್ಗದ ತಲೆಯು ಎಷ್ಟೋ ಅಮೂಲ್ಯವಾದ ಪಟ್ಟೆವಸ್ತ್ರಗಳಿಂದಲೂ, ರಾಜಕಿರೀಟಗಳಿಂದಲೂ ಶೋಭಿತವಾಗಿದ್ದರೂ ಮೈಗೆ ಅದೊಂದು ಭಾರವೇ ಹೊರತು ಬೇರೆಯಲ್ಲ. ಶ್ರೀಹರಿಯ ಪಾದಪೂಜೆಗಳನ್ನು ಮಾಡದ ಕೈಗಳು ಎಷ್ಟೋ ಸುವರ್ಣಕಟಕಗಳಿಂದ ಶೋಭಿಸುತ್ತಿದ್ದರೂ ಅವುಗಳು ಹೆಣದ ಕೈಗಳಂತಲ್ಲದೆ ಬೇರೆಯಲ್ಲ. ಶ್ರೀಮಹಾವಿಷ್ಣುವಿನ ದಿವ್ಯಮಂಗಳವಿಗ್ರಹಗಳನ್ನು ನೋಡಿ ಆನಂದವನ್ನನುಭವಿಸದ ಕಣ್ಣುಗಳು ನವಿಲುಕಣ್ಣುಗಳೇ ಹೊರತು ಬೇರೆಯಲ್ಲ. ವಿಷ್ಣುಕ್ಷೇತ್ರಗಳಿಗೆ ಯಾತ್ರಾರ್ಥವಾಗಿ ಹೋಗದ ಮನುಷ್ಯರ ಪಾದಗಳು,

ಮರದಕಾಲುಗಳಲ್ಲದೆ ಬೇರೆಯಲ್ಲ. ಮತ್ತು ಯಾವನು ಭಗವದ್ಭಕ್ತರ ಪಾದಧೂಳಿಯಲ್ಲಿ ಅಭಿಲಾಷೆಯಿಲ್ಲದಿರುವನೋ, ಯಾವನು ಶ್ರೀಹರಿಯ ಪಾದಸಂಬಂಧವುಳ್ಳ ತುಳಸೀದಳದ ಸುಗಂಧವನ್ನು ಒಂದಾವರ್ತಿಯಾದರೂ ಆಘ್ರಾಣಿಸಿ ತಿಳಿದಿಲ್ಲವೋ ಅಂತವನನ್ನು ಜೀವಚ್ಛವವೆಂದೇ ಭಾವಿಸಬೇಕು. ಭಗವನ್ನಾಮಗಳನ್ನು ಕೇಳುವಾಗಲೂ ಹೇಳುವಾಗಲೂ, ಯಾವನಿಗೆ ಅದರಿಂದುಂಟಾದ ರಸಾನುಭವದಿಂದ ಕಣ್ಣುಗಳಲ್ಲಿ ಆನಂದಬಾಷ್ಪವೂ, ಮುಖದಲ್ಲಿ ವಿಕಾಸವೂ, ದೇಹದಲ್ಲಿ ರೋಮಾಂಚವೂ ಉಂಟಾಗುವುದಿಲ್ಲವೋ ಅವನ ಹೃದಯವು ಉಕ್ಕಿನಿಂದ ನಿರ್ಮಿತವಾದಂತೆಯೇ ತಿಳಿಯಬೇಕು. ಎಲೈ ಸೂತನೆ! ಆದುದರಿಂದ ಆತ್ಮವಿದ್ಯಾನಿಪುಣನಾದ ಶುಕಮುನಿಯು, ಪರೀಕ್ಷಿದ್ರಾಜನಿಗೆ ಮುಂದೆ ಯಾವ ವಿಷಯವನ್ನು ತಿಳಿಸಿದನೋ ಅದನ್ನು ನೀನೂ ನಮಗೆ ವಿಸ್ತರಿಸಿ ತಿಳಿಸಬೇಕು" ಎಂದು ಪ್ರಾರ್ಥಿಸಿದರು. ಇಲ್ಲಿಗೆ ಮೂರನೆಯ ಅಧ್ಯಾಯವು

———

{ ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು ಲೋಕಸೃಷ್ಟಿಯ ಕ್ರಮವನ್ನು ಕೇಳಿದುದು. }

ಶೌನಕಾದಿಗಳ ವಾಕ್ಯವನ್ನು ಕೇಳಿ ಸೂತಪೌರಾಣಿಕನು ಅವರನ್ನು ಕುರಿತು, "ಎಲೈ ಮಹರ್ಷಿಗಳೇ ಕೇಳಿರಿ! ಹೀಗೆ ವ್ಯಾಸಪುತ್ರನಾದ ಶುಕಮುನಿಯು ಆತ್ಮತತ್ತ್ವವನ್ನು ಉಪದೇಶಿಸಿದ ಮೇಲೆ, ಪರೀಕ್ಷಿದ್ರಾಜನು ಬುದ್ಧಿಯಲ್ಲಿ ತಿಳಿವುಹೊಂದಿ, ಆಗಲೇ ತನ್ನ ದೇಹದಲ್ಲಿಯೂ ಗೃಹದಲ್ಲಿಯೂ, ಧನದಲ್ಲಿಯೂ, ಪಶುಗಳಲ್ಲಿಯೂ, ಪತ್ನೀಪುತ್ರಾದಿಗಳಲ್ಲಿಯೂ, ಬಂಧುಗಳಲ್ಲಿಯೂ, ನಿರುಪದ್ರವವಾದ ರಾಜ್ಯದಲ್ಲಿಯೂ ತನ್ನದೆಂಬ ಅಭಿಮಾನವನ್ನು ಬಿಟ್ಟು, ವಿಷ್ಣುಕಥಾಶ್ರವಣವೊಂದರಲ್ಲಿಯೇ ಆಸಕ್ತಿಯುಳ್ಳವನಾಗಿದ್ದನು. ತನಗೆ ಮರಣವು ಸಮೀಪಿಸಿರುವುದನ್ನು ತಿಳಿದಾಗಲೇ, ಧರ್ಮಾರ್ಥಕಾಮಗಳನ್ನು ಕೈಗೂಡಿಸತಕ್ಕ ಕರ್ಮಗಳೆಲ್ಲವನ್ನೂ ತ್ಯಜಿಸಿ, ಭಗವಂತನಾದ ವಾಸುದೇವನೊಬ್ಬನಲ್ಲಿಯೇ ತನ್ನ ಆತ್ಮವೂ, ತನ್ನ ಮನಸ್ಸೂ ದೃಢವಾಗಿ ನೆಲಸುವಂತೆ, ಬುದ್ಧಿಯನ್ನು ದೃಢಪಡಿಸಿಕೊಂಡನು. ಹೀಗೆ ಮನೋದಾರ್ಢ್ಯವುಂಟಾದಮೇಲೆ ಆ ಪರೀಕ್ಷಿದ್ರಾಜನೂಕೂಡ ಈಗ ನೀವು ನನ್ನನ್ನು ಪ್ರಶ್ನೆಮಾಡಿದಂತೆಯೇ ಶುಕಮುನಿಯನ್ನು ಕುರಿತು ಪ್ರಶ್ನೆಮಾಡಿದನು. ಅದನ್ನು ಹೇಳುವೆನು ಕೇಳಿರಿ. "ಓ ಬ್ರಾಹ್ಮಣೋತ್ತಮಾ! ನೀವು ಹೇಳಿದ

ಹೂತುಗಳು ಯುಕ್ತವಾಗಿಯೇ ಇರುವುವು. ತಾವು ಹೇಳುತ್ತಿರುವ ಹರಿಕಥೆಗಳನ್ನು ಕೇಳುತ್ತಿರುವುದರಿಂದ ನನ್ನ ಅವಿವೇಕಗಳೆಲ್ಲವೂ ನೀಗಿದುವು ಭಗವಂತನಾದ ವಾಸುದೇವನು ತನ್ನ ಮಾಯೆಯಿಂದ ಲೋಕಗಳನ್ನು ಹೇಗೆ ಸೃಷ್ಟಿಸಿದನೋ, ಬ್ರಹ್ಮಾದಿದೇವತೆಗಳಿಂದಲೂ ಊಹಿಸುವುದಕ್ಕೆ ಶಕ್ಯವಲ್ಲದ ಈ ಪ್ರಪಂಚವನ್ನು ಭಗವಂತನು ಯಾವ ಶಕ್ತಿಯನ್ನವಲಂಬಿಸಿ ರಕ್ಷಿಸುತ್ತಿರುವನೋ, ಪ್ರಳಯಕಾಲ ದಲ್ಲಿ ಯಾವ ಯಾವ ಶಕ್ತಿಗಳಿಂದ ಸಂಹರಿಸುವನೋ, ಆ ಸಂಗತಿಗಳೆಲ್ಲವನ್ನೂ ನಿನ್ನಿಂದ ಕೇಳಿ ತಿಳಿಯಬೇಕೆಂಬ ಕುತೂಹಲವುಂಟಾಗಿರುವುದು. ಆ ಶ್ರೀಹರಿಯ ಚರಿತ್ರವೊಂದೊಂದೂ ಅತ್ಯಾಶ್ಚರ್ಯವನ್ನುಂಟುಮಾಡುತ್ತಿರುವುದು ಆ ಭಗವಂತನು ಭೂಮಿಯಲ್ಲಿ ತನ್ನ ಲೀಲೆಗಳನ್ನು ನಡೆಸುವುದಕ್ಕಾಗಿ ಯಾವಯಾವ ಶಕ್ತಿಗಳನ್ನು ಹಿಡಿದು, ಯಾವಯಾವ ಅವತಾರಗಳನ್ನು ಯಾವರೀತಿಯಿಂದ ನಿರ್ವಹಿಸಿರುವನೋ ಅವೆಲ್ಲವನ್ನೂ ತಿಳಿಸಿ ನನಗೆ ಕರ್ಣಾನಂದವನ್ನುಂಟುಮಾಡಬೇಕು ಆ ಭಗವಂತನು ತಾನೊಬ್ಬನೇ ಆಗಿದ್ದರೂ ಅನೇಕಾವತಾರಗಳನ್ನೆತ್ತಿ ಅನೇಕಕಾರ್ಯಗಳನ್ನು ನಡೆಸುತ್ತ ಬರುವನಷ್ಟೆ? ಭಗವಂತನು ಹೀಗೆ ನಡೆಸುವುದಕ್ಕಾಗಿ ಸತ್ವರಜಸ್ತಮೋಗುಣಗಳು ಈಮೂರನ್ನು, ಒಂದಾಗಿಯೇ ತನ್ನ ಲೀಲೆಗಳಿಗೆ ಇಂಡು ನಡೆಸುತ್ತಿರುವನೋ, ಅಥವಾ, ಆ ಗುಣಗಳಲ್ಲಿ ಕ್ರಮವಾಗಿ ಒಂದಾದಮೇಲೆ ಮತ್ತೊಂದನ್ನು ಅವಲಂಬಿಸಿ ಆಯಾ ಗುಣಕ್ಕನುಸಾರವಾದ ಕಾರ್ಯವನ್ನು ನಡೆಸುವನೋ, ಇವರ ತತ್ವವನ್ನು ನನಗೆ ತಿಳಿಸಬೇಕು. ಎಲೈ ಶುಕಮುನೀಂದ್ರನೆ! ಈ ನನ್ನ ಪ್ರಶ್ನೆಗಳಿಗೆ ತಕ್ಕಉತ್ತರ ವನ್ನು ಕೊಡಬೇಕಾದರೆ ನೀನೇ ಸಮರ್ಥನು. ವೇದಾರ್ಥಗಳು ನಿನಗೆ ತಿಳಿದಂತೆ ಮತ್ತೊಬ್ಬರಿಗೆ ತಿಳಿಯುವು. ತತ್ವಜ್ಞಾನಿಗಳಲ್ಲಿಯೂ ಕೂಡ ನೀನೇ ಅಗ್ರಗಣ್ಯನು. ಹೀಗೆ ಉಭಯವಿಧದಲ್ಲಿಯೂ, ಪರಿಪೂರ್ಣಜ್ಞಾನಪೂರ್ಣ ನಿನಗಿಂತಲೂ ಲೋಕದಲ್ಲಿ ಮೇಲೆನಿಸಿದವರಾರುಂಟು? ಆದುದರಿಂದ ನನ್ನಲ್ಲಿ ದಯೆಯಿಟ್ಟು ನನ್ನ ಮನಸ್ಸಂ ಶಯವು ನೀಗುವಂತೆ ಮಾಡಬೇಕು" ಎಂದು ಪ್ರಾರ್ಥಿಸಿದನು. ರಾಜನ ಪ್ರಾರ್ಥನೆ ಯನ್ನು ಕೇಳಿ ಶುಕಮುನಿಯು ಸಂತೋಷಗೊಂಡು, ಆತನ ಪ್ರಶ್ನೆಗಳಿಗೆ ಸದು ತ್ತರವನ್ನು ಕೊಡಬೇಕೆಂದು ನಿಶ್ಚಯಿಸಿ, ಮೊದಲೇ ಈ ವಿಧವಾಗಿ ತನ್ನ ಮನಸ್ಸಿನಲ್ಲಿ ಶ್ರೀಹರಿಯನ್ನು ಧ್ಯಾನಮಾಡಿ ನಮಸ್ಕರಿಸುವನು. "ಎಲೈದೇವ ದೇವನೆ! ನೀನು ಪ್ರಕೃತಿಗಿಂತಲೂ, ಗುಣಗಳಿಂದಲೂ, ಪ್ರಪಂಚದ ಒಳಹೊರ ಭಾಗಗಳೆಲ್ಲವನ್ನೂ ವ್ಯಾಪಿಸಿ ವರ್ತಿಸತಕ್ಕವನು. ಲೋಕದ ಸೃಷ್ಟಿಸ್ಥಿತಿಸಂಹಾರ ವೆಂಬ ಈ ಮೂರುಕಾರ್ಯಗಳೂ ನಿನಗೆ ಲೀಲೆಗಳಾಗಿರುವುವು. ಆ ಲೀಲೆಗಳಿಂದಲೇ ನೀನು ಬ್ರಹ್ಮನೆಂದೂ ನಿಜಾವತಾರವಾದ ವಿಷ್ಣುವೆಂದೂ, ರುದ್ರನೆಂದೂ

ಮೂರ್ತಿಭೇದವನ್ನು ಹೊಂದಿ, ಶಕ್ತಿತ್ರಯವನ್ನು ತೋರಿಸುವೆ. ಸಮಸ್ತ ಪ್ರಪಂಚ ದಲ್ಲಿಯೂ ಅಂತರ್ಯಾಮಿಯಾಗಿ ವರ್ತಿಸುವೆ. ನಿನ್ನ ಸ್ವರೂಪಾದಿಗಳೆಲ್ಲವೂ ಭಗವ ದುಪಾಸನಾರೂಪವಾದ ಜ್ಞಾನವೊಂದಕ್ಕೆ ಪ್ರತ್ಯಕ್ಷವಾಗುವುದೇ ಹೊರತು ಬೇರೆ ವಿಧದಲ್ಲಿ ಪ್ರತ್ಯಕ್ಷವಾಗಲಾರದು. ಅಂತಹ ವಿಲಕ್ಷಣ ಸ್ವರೂಪನಾದ ನಿನಗೆ ವಂದನೆ ಗಳನ್ನರ್ಪಿಸುವೆನು. ಓ ಮಹಾತ್ಮಾ! ನೀನು ಸಜ್ಜನರ ತಾಪಗಳನ್ನು ನೀಗಿಸತಕ್ಕ ವನು. ದುರ್ಜನರನ್ನು ಶಿಕ್ಷಿಸತಕ್ಕವನು. ಶುದ್ಧಸತ್ವಮಯವಾದ ದೇಹವುಳ್ಳವನು. ಪರಮಹಂಸಾಶ್ರಮದಲ್ಲಿದ್ದು ಆ ಆಶ್ರಮಕ್ಕನುಗುಣವಾದ ಕರ್ಮಗಳನ್ನನುಷ್ಠಿಸುವುದ ರಲ್ಲಿ ಆಸಕ್ತಿಯುಳ್ಳವರಿಗೆ ಇಷ್ಟಾರ್ಥಗಳನ್ನು ಕೊಡುವವನು. ಅಂತಹ ನಿನಗೆ ನಮಸ್ಕಾ ರವು. ದೇವಾ! ಆಶ್ರಿತವಾತ್ಸಲ್ಯದಿಂದಲೇ ನೀನು ಯಾದವಕುಲದಲ್ಲಿ ಹುಟ್ಟಿದೆ! ನಿನ್ನ ಸ್ವರೂಪವು ಯೋಗಿಗಳಿಗೂ ದುರ್ಲಭವಾದುದು. ಎಣೆಯಿಲ್ಲದ ಮತ್ತು ದಿವ್ಯ ವಾದ ತೇಜೋವಿಶೇಷದಿಂದ ನಿನ್ನ ಮಹಿಮೆಯಲ್ಲಿಯೇ ನೀನು ರಮಿಸುತ್ತಿರುವೆ. ಎಲೈ ಭಗವಂತನೆ! ನಿನ್ನನ್ನು ಸ್ತುತಿಸಿದರೂ, ನಿನ್ನನ್ನು ಧ್ಯಾನಿಸಿದರೂ, ನಿನ್ನ ದರ್ಶನವನ್ನು ಮಾಡಿದರೂ, ನಿನ್ನ ಪಾದಗಳಿಗೆ ನಮಸ್ಕರಿಸಿದರೂ, ನಿನ್ನ ಕಥೆ ಗಳನ್ನು ಕೇಳಿದರೂ, ನಿನ್ನನ್ನು ಪೂಜಿಸಿದರೂ ಮನುಷ್ಯರ ಪಾಪಗಳೆಲ್ಲವೂ ಆಕ್ಷಣ ದಲ್ಲಿಯೇ ನಶಿಸುವುವು. ಅಂತಹ ಮಂಗಳಮೂರ್ತಿಯಾದ ನಿನಗೆ ನಮಸ್ಕಾರವು! ಜ್ಞಾನಿಗಳೆಲ್ಲರೂ ಯಾವ ನಿನ್ನ ಪಾದಾರವಿಂದವನ್ನು ನಂಬಿ, ಇಹಪರಲೋಕ ಸುಖಗಳಿಗೂ ಮನಸ್ಸು ಕೊಡದೆ, ಸಂಸಾರತಾಪತ್ರಯಗಳನ್ನು ತೊಲಗಿಸಿಕೊಂಡು ಪರಮಪದವನ್ನು ಹೊಂದುವರೋ ಅಂತಹ ದಿವ್ಯಮಂಗಳಮೂರ್ತಿಯಾದ ನಿನಗೆ ನಮಸ್ಕಾರವು. ಎಲೈ ದೇವದೇವನೆ! ದೇಹವನ್ನು ದಂಡಿಸಿ ಚಾಂದ್ರಾಯಣಾದಿವ್ರತ ಗಳನ್ನು ನಡೆಸುವವರಾಗಲಿ, ವಿಶೇಷದಾನಶೀಲರಾಗಲಿ, ಶೌರ್ಯದಾರ್ಢ್ಯಾದಿಗಳಿಂದ ವಿಶೇಷಕೀರ್ತಿಯನ್ನು ಸಂಪಾದಿಸಿದವರಾಗಲಿ, ಮಂತ್ರಾರ್ಥಗಳನ್ನರಿತು ಕರ್ಮ ಗಳನ್ನು ನಡೆಸುವವರಾಗಲಿ, ಸದಾಚಾರಪರರಾಗಲಿ, ತಾವು ನಡೆಸುವ ಆಯಾ ಸತ್ಕಾರ್ಯಗಳನ್ನು ನಿನ್ನಲ್ಲಿಯೇ ಅರ್ಪಿತವನ್ನಾಗಿ ಮಾಡದಿದ್ದರೆ, ಅವರ ತಪಸ್ಸು ಮೊದಲಾದ ಸತ್ಕಾರ್ಯಗಳಿಂದಲೂ ಉತ್ತಮಫಲವನ್ನು ಹೊಂದಲಾರರು. ಆದು ದರಿಂದ ಈ ತಪಸ್ಸು ಮೊದಲಾದುವುಗಳನ್ನು ಭಕ್ತಿಯೋಗಕ್ಕೆ ಅಂಗವಾಗಿ ನಡೆಸಿದ ಪಕ್ಷದಲ್ಲಿ, ನಿರತಿಶಯವಾದ ಫಲವನ್ನು ಹೊಂದುವರು. ಅಂತಹ ಭಕ್ತಿವಿಷಯ ನಾದ ನಿನಗೆ ನಮಸ್ಕಾರವು. ಕಿರಾತರಾಗಲಿ, ಶಕಯವನಾದಿಗಳಾಗಲಿ, ಆಂಧ್ರದೇಶದ ನಿಕೃಷ್ಟಜಾತಿಯವರಾಗಲಿ, ಬೇಡರಾಗಲಿ, ಚಂಡಾಲರೇ ಮೊದಲಾದವರಾಗಲಿ, ತುರುಷ್ಕರಾಗಲಿ, ಇನ್ನೂ ಎಷ್ಟೋ ನೀಚಕುಲದಲ್ಲಿ ಹುಟ್ಟಿದವರಾದರೂ, ಎಷ್ಟೋ

ಪಾಪಾತ್ಮರಾಗಿದ್ದರೂ ನಿನ್ನನ್ನಾಶ್ರಯಿಸುವುದರಿಂದ ತಮ್ಮ ಪಾಪಗಳನ್ನು ನೀಗಿ ಶುದ್ಧರಾಗುವರು. ಅಂತಹ ಮಹಾಮಹಿಮೆಯುಳ್ಳ ನಿನಗೆ ನಮಸ್ಕಾರವು. ಎಲೈ ಮಹಾಪುರುಷನೆ! ಭಕ್ತಿಯೋಗನಿಷ್ಠರಾದವರೆಲ್ಲರಿಗೂ ನೀನೇ ಅಧಿಪತಿಯು ವೇದದ ಪೂರ್ವಭಾಗದಲ್ಲಿ ಹೇಳಿರುವ ಸಮಸ್ತ ಕರ್ಮಗಳಿಂದಲೂ ಆರಾಧಿಸಲ್ಪಡತಕ್ಕ ವನು ನೀನಲ್ಲದೆ ಬೇರೆಯಲ್ಲ. ಅದಕ್ಕೆ ಫಲವನ್ನು ಕೊಡತಕ್ಕವನೂ ನೀನೇ ಹೊರತು ಬೇರೆ ದೇವತೆಗಳಲ್ಲ ಮತ್ತು ಶ್ರುತಿಗಳಲ್ಲಿ ಹೇಳಲ್ಪಟ್ಟ ದಾನಧರ್ಮಾದಿಗಳಿಂದಲೂ ನೀನೇ ಆರಾಧಿತನಾಗಿ ಅದಕ್ಕೆ ತಕ್ಕ ಫಲವನ್ನು ಕೊಡುತ್ತಿರುವೆ. ಉಪನಿಷದ್ಭಾಗ ಗಳಲ್ಲಿ ಹೇಳಲ್ಪಡುವ ಉಪಾಸನಾತ್ಮಕವಾದ ಜ್ಞಾನಕ್ಕೂ ನೀನೇ ವೇದ್ಯನು. ಅವರ ಫಲಗಳನ್ನು ಕೊಡತಕ್ಕವನು. ನೀನು ದೇಹಪರಹಿತರಾದ ಬ್ರಹ್ಮರುದ್ರಾದಿಗಳಿಗೂ ಅಗೋಚರವಾದ ಚಿಹ್ನಗಳುಳ್ಳವನು. ಅಂತಹ ಸರ್ವೋತ್ತಮಗುಣವಿಶಿಷ್ಟನಾದ ನೀನು ನನ್ನಲ್ಲಿ ಪ್ರಸನ್ನನಾಗಬೇಕು. ಎಲೈ ದೇವನೆ! ನೀನು ಸಾಕ್ಷಾಲ್ಲಕ್ಷ್ಮೀ ದೇವಿಗೂ ಅಧಿಪತಿಯು. ನೀನೇ ಸಮಸ್ತಯಜ್ಞಗಳಿಗೂ ಫಲವನ್ನು ಕೊಡತಕ್ಕ ವನು. ನೀನೇ ಸಮಸ್ತಪ್ರಪಂಚಗಳನ್ನೂ ಸೃಷ್ಟಿಸತಕ್ಕವನು ಮತ್ತು ಸಮಸ್ತ ಪ್ರಜೆಗಳಿಗೂ ನೀನೇ ಅಧಿಪತಿಯು. ಬುದ್ಧಿಗೂ ನೀನೇ ಅಧಿಪತಿಯು ಭೂಮಂಡಲ ಕ್ಕೂ ನೀನೇ ಅಧಿಪತಿಯು. ಯಾದವಕುಲಕ್ಕೂ ನೀನೇ ಅಧಿಪತಿಯು. ನೀನೇ ಅವ ರೆಲ್ಲರಿಗೂ ಮುಖ್ಯಗತಿಯು. ಅಂತಹ ನೀನು ನನ್ನಲ್ಲಿ ಪ್ರಸನ್ನನಾಗಬೇಕು. ಓ ಮಹಾತ್ಮನೆ! ಯೋಗೀಶ್ವರರೆಲ್ಲರೂ ಯಾವ ನಿನ್ನ ಪಾದಪದ್ಮಗಳನ್ನು ಸ್ಮರಿ ವುದರಿಂದ ತಮ್ಮ ಬುದ್ಧಿಯನ್ನು ಪವಿತ್ರವಾಗಿ ಮಾಡಿಕೊಂಡು, ಅದರಿಂದ ತತ್ವಜ್ಞಾನವನ್ನೂ ಸಂಪಾದಿಸಿ, ಅದನ್ನು ಇತರರಿಗೂ ಉಪದೇಶಿಸಿ, ಪರಮ ಪದವನ್ನು ಹೊಂದುವರೋ, ಅಂತಹ ನೀನು ನನ್ನಲ್ಲಿ ಕೃಪೆಯಿಟ್ಟು ಪ್ರಸನ್ನನಾಗ ಬೇಕು ಕಲ್ಪಾದಿಯಲ್ಲಿ ಬ್ರಹ್ಮನಿಗೆ ಸೃಷ್ಟಿವಿಷಯಕಜ್ಞಾನವನ್ನು ವಿವರಿಸಿದ ಯಾವ ನಿನ್ನಿಂದ, ವೇದರೂಪಿಣಿಯಾದ ಸರಸ್ವತಿಯು ಪ್ರೇರಿತೆಯಾಗಿ, ಸ್ವರವಿಶೇಷಾದಿ ಚಿಹ್ನಗಳೊಡನೆ ನಿನ್ನ ಮುಖಾಗ್ರದಿಂದ ಆವಿರ್ಭವಿಸಿದಳೋ ಋಷಿಗಳಿಗೆ ಜ್ಞಾನ ಪ್ರದನಾದ ಅಂತಹ ನೀನು ನನ್ನಲ್ಲಿ ಪ್ರಸನ್ನನಾಗಬೇಕು. ಓ ವಾಸುದೇವಾ! ಪೂರ್ಣಕಾಮನಾದ ನೀನು ಪಂಚಭೂತಗಳಿಂದ ಸಮಸ್ತ ಶರೀರಗಳನ್ನೂ ನಿರ್ಮಿಸ ತಕ್ಕವನು. ಆ ಮೇಲೆ ನೀನೇ ಆ ಶರೀರಗಳಲ್ಲಿ ಅಂತರಾತ್ಮನಾಗಿಯೂ ವರ್ತಿಸತಕ್ಕ ವನು. ಮತ್ತು ಪಂಚಭೂತಗಳಿಂದಲೂ, ಏಕಾದಶೇಂದ್ರಿಯಗಳಿಂದಲೂ ಏರ್ಪಟ್ಟಿ ರುವ ಆ ಶರೀರಗಳಲ್ಲಿ ನೀನೇ ಅಧಿಷ್ಠಾನದೇವತೆಯಾಗಿದ್ದು, ಮೇಲೆ ಹೇಳಿದ ಭೂತೇಂದ್ರಿಯವರ್ಗಗಳೆಂಬ ಷೋಡಶಸ್ವರೂಪನಾಗಿ, ತದನುಭಾವ್ಯಗಳಾದ

ಷೋಡಶಕಲೆಗಳನ್ನೂ ನೀನೇ ಅನುಭವಿಸತಕ್ಕವನು. ಇಂತಹ ಮಹಾತ್ಮನಾದ ನೀನು ನನ್ನ ವಾಕ್ಕುಗಳಿಗೆ ಗೋಚರನಾಗಬೇಕು" ಎಂದು ಭಗವಂತನನ್ನು ಸ್ತುತಿಸಿ, ತನ್ನ ತಂದೆಯಾದ ವ್ಯಾಸಮುನಿಯನ್ನು ಧ್ಯಾನಿಸುವನು. "ಮಹಾತ್ಮನಾದ ಎಲೈ ಜನಕನೆ! ಯಾವ ನಿನ್ನ ಮುಖಪದ್ಮದಿಂದ ಸ್ರವಿಸುತ್ತಿರುವ ಜ್ಞಾನವೆಂಬ ಮಕರಂದವನ್ನು, ಮಹಾನುಭಾವರಾದ ಶಿಷ್ಯರೆಲ್ಲರೂ ಪಾನಮಾಡುವರೋ, ಅಂತಹ ನಿನಗೆ ನಮಸ್ಕಾರವು" ಎಂದು ಗುರುವಂದನವನ್ನು ಮಾಡಿ, ಪರೀಕ್ಷಿದ್ರಾಜನನ್ನು ಕುರಿತು "ಎಲೈ ರಾಜೇಂದ್ರನೆ! ಈಗ ನೀನು ಕೇಳುವಂತೆಯೇ ಪೂರ್ವದಲ್ಲಿ ನಾರದನು ಬ್ರಹ್ಮನನ್ನು ಪ್ರಾರ್ಥಿಸಿದುದರ ಮೇಲೆ, ಆ ಬ್ರಹ್ಮನು ತನಗೆ ವಿಷ್ಣುವಿನಿಂದುಪದೇಶಿಸಲ್ಪಟ್ಟ ಈ ಸೃಷ್ಟಿಕ್ರಮವನ್ನು ನಾರದನಿಗೆ ಹೇಳಿರುವನು. ಅದನ್ನೇ ನಿನಗೂ ತಿಳಿಸುವೆನು" ಎಂದನು. ಇದು ನಾಲನೆಯ ಅಧ್ಯಾಯವು.

---

## ನಾರದನು ಬ್ರಹ್ಮನಿಂದ ಪ್ರಪಂಚಸೃಷ್ಟಿಕ್ರಮವನ್ನು ಪ್ರಶ್ನೆಮಾಡಿ ತಿಳಿದುದು.

"ಎಲೈ ರಾಜೇಂದ್ರನೆ! ನಾರದನು ಬ್ರಹ್ಮನನ್ನು ಪ್ರಶ್ನೆಮಾಡುವನು. "ಎಲೈ ದೇವದೇವನೆ! ವಂದಿಸುವೆನು! ನೀನು ಸಮಸ್ತ ಜಗತ್ತನ್ನೂ ಸೃಷ್ಟಿಸಿದವನು. ಸಮಸ್ತಪ್ರಾಣಿಗಳಿಗೂ ಮೊದಲು ಹುಟ್ಟಿದವನು. ರುದ್ರಾದಿದೇವತೆಗಳಿಗೂ ದೇವತೆಯೆನಿಸಿದವನು. ಆದುದರಿಂದ ನನಗೆ ಆತ್ಮತತ್ತ್ವವನ್ನು ವಿವರಿಸಿ ಜ್ಞಾನೋದಯವನ್ನುಂಟುಮಾಡಬೇಕು. ಪ್ರಪಂಚಜ್ಞಾನವು ಸರಿಯಾಗಿ ಜನಿಸಿದರೆ ಆತ್ಮಜ್ಞಾನವೂ ಆಗಲೇ ಹುಟ್ಟುವುದು. ಓ ಜನಕಾ! ಈ ಪ್ರಪಂಚವೆಂಬುದು ಯಾವ ಭಗವಂತನ ಶರೀರವು? ಇದಕ್ಕೆ ಉಪಾದಾನಕಾರಣವಾವುದು? ಇದು ಪ್ರಳಯಕಾಲದಲ್ಲಿ ಲೀನವಾಗುವುದೆಲ್ಲಿ? ಈ ಪ್ರಪಂಚಕ್ಕೆಲ್ಲಕ್ಕೂ ಅಧೀಶ್ವರನಾವನು? ಇವೆಲ್ಲವನ್ನೂ ನನಗೆ ತಿಳಿಸಬೇಕು. ನೀನು ಭೂತಭವಿಷ್ಯದ್ವರ್ತಮಾನಗಳೆಂಬ ಮೂರುಕಾಲಗಳಲ್ಲಿಯೂ ಗೋಚರಿಸತಕ್ಕ ವಸ್ತುಗಳೆಲ್ಲಕ್ಕೂ ಅಧಿಪತಿಯಾಗಿರುವುದರಿಂದ, ಈ ಪ್ರಪಂಚದಲ್ಲಿ ನಿನಗೆ ತಿಳಿಯದುದೊಂದೂ ಇಲ್ಲ. ಇವೆಲ್ಲವೂ ನಿನಗೆ ಕೈಕನ್ನಡಿಯಂತೆ ಸ್ಪಷ್ಟವಾಗಿ ತಿಳಿದಿರುವುವು. ಹೀಗೆ ಇವೆಲ್ಲವನ್ನೂ ಸ್ಪಷ್ಟವಾಗಿ ತಿಳಿಯತಕ್ಕ ಜ್ಞಾನವು ನಿನಗೆ ಯಾರ ಅನುಗ್ರಹದಿಂದುಂಟಾಯಿತು? ನಿನಗೆ ಆಶ್ರಯನಾವನು? ನಿನಗೆ ಅಧಿಪತಿಯಾರು? ನಿನಗೆ ಈ ಸ್ವರೂಪವು ಯಾರಿಂದುಂಟಾಯಿತು? ನೀನೊಬ್ಬನೇ ಪಂಚಭೂತ

ಗಳನ್ನು ಸಾಧನವಾಗಿಟ್ಟುಕೊಂಡು, ಸಮಸ್ತಪ್ರಾಣಿಗಳನ್ನೂ ಸೃಷ್ಟಿಸುವೆಯಲ್ಲವೆ? ಹೀಗೆ ಸೃಷ್ಟಿಸಲ್ಪಟ್ಟ ಭೂತಗಳಿಗೆ ಯಾವ ವಿಧವಾದ ಪರಿಭವವೂ ಇಲ್ಲದೆ ಹೇಗೆ ರಕ್ಷಿಸುತ್ತಿರುವೆ? ಎಲೈ ಮಹಾತ್ಮನೆ! ಜೇಡರ ಹುಳದಂತೆ ನೀನು ನಿನ್ನ ಶಕ್ತಿಯನ್ನ ವಲಂಬಿಸಿ, ಸ್ವಲ್ಪವೂ ಶ್ರಮವಿಲ್ಲದ ಹಾಗೆ, ನಿನ್ನ ಶರೀರದಿಂದಲೇ ಸಮಸ್ತ ಭೂತಗಳನ್ನೂ ಹುಟ್ಟಿಸಿ, ಅದನ್ನು ರಕ್ಷಿಸುತ್ತಿದ್ದು, ಕೊನೆಗೆ ಅದನ್ನು ಸಂಹರಿಸುತ್ತಿರುವ. ಓ ದೇವಾ! ನಾಮರೂಪಗಳಿಂದಲೂ, ಸತ್ವರಜಸ್ತಮೋಗುಣಗಳಿಂದಲೂ ಉತ್ತಮಾಧಮಮಧ್ಯಮಗಳಾಗಿ ಬೇರ್ಪಟ್ಟಿರುವ ಚೇತನಾತ್ಮಕವಾದ ಪ್ರಪಂಚವೆಲ್ಲವೂ ನಿನ್ನಿಂದಲೇ ನಿರ್ಮಿಸಲ್ಪಡುವುದು. ಒಂದು ವಸ್ತುವಾದರೂ ಬೇರೊಬ್ಬರಿಂದ ನಿರ್ಮಿತವಾದ ಹಾಗೆ ಊಹಿಸುವುದಕ್ಕೂ ಅವಕಾಶವಿಲ್ಲ. ಓ ಮಹಾತ್ಮಾ! ಸೃಷ್ಟಿಕರ್ತನಾದ ನೀನೂ ಕೂಡ ಬಹಳ ಸಮಾಹಿತನಾಗಿ ಘೋರತಪಸ್ಸನ್ನು ಮಾಡುತಿದ್ದೆಯೆಂದು ಕೇಳಿ, ನನ್ನ ಮನಸ್ಸಿಗೆ ಒಂದು ವಿಧವಾದ ಶಂಕೆಯು ಹುಟ್ಟಿರುವುದು ಎಲ್ಲರಿಗಿಂತಲೂ ನೀನೇ ಮೇಲಾದವನೆಂದೂ, ನಿನಗಿಂತಲೂ ಉತ್ತಮರಿಲ್ಲವೆಂದೂ, ಇತರರೆಲ್ಲರೂ ನಿನ್ನನ್ನೇ ಉಪಾಸನೆಮಾಡಬೇಕೇ ಹೊರತು ನಿನ್ನಿಂದ ಉಪಾಸನೆಮಾಡಲ್ಪಡತಕ್ಕವರು ಬೇರೊಬ್ಬರೂ ಇಲ್ಲವೆಂದೂ ನಾವು ನಿಶ್ಚಯವಾಗಿ ನಂಬಿದ್ದೆವು. ಹೀಗಿರುವಾಗ ನೀನೂ ತಪಸ್ಸು ಮಾಡಿದೆಯೆಂದು ಕೇಳಿ ನಮ್ಮ ಮನಸ್ಸಿಗೆ ಸಂದೇಹವುಂಟಾಗಿರುವುದು. ಓ ದೇವಾ! ನೀನು ಸಮಸ್ತಕ್ಕೂ ಅಧಿಪತಿಯಾಗಿ ಸರ್ವಜ್ಞನಾಗಿರುವುದರಿಂದ, ಅದರ ಕಾರಣವನ್ನು ನೀನೇ ತಿಳಿಸಿ ನನ್ನ ಸಂದೇಹವನ್ನು ನೀಗಿಸಿ ಮನಸ್ಸಿಗೆ ಸಂತೋಷವನ್ನುಂಟುಮಾಡಬೇಕು'' ಎಂದನು. ಈ ಮಾತನ್ನು ಕೇಳಿ ಬ್ರಹ್ಮನು ಸಂತೋಷಗೊಂಡು ''ವತ್ಸ ನಾರದಾ! ನಿನ್ನ ಪ್ರಶ್ನೆ ಯುಕ್ತವಾಗಿಯೇ ಇರುವುದು. ಇದು ಸಮಸ್ತಲೋಕಕ್ಕೂ ಹಿತವಾದುದು. ಇದರಿಂದ ನಿನ್ನ ಸುಸ್ವಭಾವವೂ ಹೊರಪಡುವುದು. ಹೇಗೆಂದರೆ:—ನೀನು ನನ್ನನ್ನು ಕುರಿತು ಬೇರೆ ಯಾವ ಪ್ರಶ್ನವನ್ನೂ ಮಾಡದೆ, ಕೇವಲ ಭಗವಂತನ ವಿಷಯವಾದ ಪ್ರಶ್ನವನ್ನೇ ಮಾಡುತ್ತಿರುವೆಯಲ್ಲವೆ! ಆ ಭಗವಂತನ ಶಕ್ತಿಯನ್ನು ನಿನಗೆ ತಿಳಿಸುವುದರಿಂದ ನಾನು ಎಣೆಯಿಲ್ಲದ ಪುಣ್ಯಕ್ಕೆ ಭಾಗಿಯಾಗುವೆನು. ಅಂತಹ ಪುಣ್ಯವು ನನಗೆ ಲಭಿಸುವ ಹಾಗೆ ನೀನು ಮಾಡುವುದರಿಂದ, ನಿನಗೆ ನನ್ನಲ್ಲಿರುವ ಕರುಣಾರಸವನ್ನು ಹೊರಪಡಿಸಿದಂತಾಗುವುದಿಲ್ಲವೆ! ನಾರದಾ! ನನಗೆ ಈ ಹದಿನಾಲ್ಕುಲೋಕಗಳ ಮೇಲೆ ಅಧಿಕಾರವಿರುವುದೇನೋ ನಿಜವು. ಆ ಅಧಿಕಾರವನ್ನು ನನಗೆ ಕೊಟ್ಟಿರತಕ್ಕ ಪರಮಪುರುಷನು ಬೇರೊಬ್ಬನಿರುವನು. ಅದನ್ನು ನೀನು ತಿಳಿಯದೆ ನಾನೇ ಸಮಸ್ತಭೂತಗಳನ್ನೂ ಸೃಷ್ಟಿಸುತ್ತಿರುವೆನೆಂದು ಪ್ರಶ್ನೆಮಾಡಿದೆ.

ಆದರೆ ಅದನ್ನೂ ಸಂಪೂರ್ಣವಾಗಿ ಅಸತ್ಯವೆಂದೂ ಹೇಳುವುದಕ್ಕಿಲ್ಲ. ಈ ನಿನ್ನ ಮಾತಿನಲ್ಲಿಯೂ ಸ್ವಲ್ಪ ನಿಜಾಂಶವಿರುವುದು. ನನಗಿಂತಲೂ ಮೇಲಾದ ಸರ್ವೇಶ್ವರನಾವನೆಂದು ಕೇಳಿದುದಕ್ಕೆ ಪ್ರತ್ಯುತ್ತರವನ್ನು ಹೇಳುವೆನು ಕೇಳು. ಯಾವ ಮಹಾಪುರುಷನ ಶಾಂತಿಯಿಂದಲೇ ಸೂರ್ಯ, ಚಂದ್ರ, ಗ್ರಹ, ನಕ್ಷತ್ರಾದಿಗಳೂ, ಅಗ್ನಿಹೋತ್ರನೂ ಕಾಂತಿವಿಶಿಷ್ಟರಾಗಿ ಪ್ರಕಾಶಿಸುತ್ತಿರುವರೋ, ಆ ಭಗವಂತನ ತೇಜಸ್ಸಿನಿಂದಲೇ ಈ ಸಮಸ್ತಲೋಕವೂ ಪ್ರಕಾಶಗೊಂಡಿರುವುದು. ಹೀಗೆ ಆ ಭಗವಂತನ ತೇಜಸ್ಸಿನಿಂದ ಪ್ರಕಾಶಗೊಂಡಿರುವ ಈ ವಿಶ್ವವನ್ನು ನಾನು ನಿಮಿತ್ತಮಾತ್ರವಾಗಿ ಪ್ರಕಾಶಗೊಳಿಸುತ್ತಿರುವೆನು ಇಷ್ಟೇಹೊರತು ನನ್ನ ಸ್ವಶಕ್ತಿಯಿಂದ ನಾನು ಯಾವುದನ್ನೂ ನಡೆಸುವುದಕ್ಕೆ ಸಮರ್ಥನಲ್ಲ. ಈ ಸಮಸ್ತ ಪ್ರಪಂಚಕ್ಕೂ ಆಧಾರನಾದ ಸರ್ವೇಶ್ವರನು ಬೇರೊಬ್ಬನಿರುವನು. ಯಾವನ ಮಾಯೆಯಿಂದ ಮೋಹಿತರಾದ ನೀವೆಲ್ಲರೂ, ನನನ್ನೇ ಲೋಕಪತಿಯನ್ನಾಗಿ ಹೇಳುತ್ತಿರುವಿರೋ, ಅಂತಹ ಜಗದೀಶ್ವರನಿಗೆ ಈಗ ನಾನೂ ನನ್ನ ವಂದನೆಗಳನ್ನರ್ಪಿಸುವೆನು. ಮತ್ತು ವತ್ಸ ನಾರದಾ! ಆ ಭಗವಂತನ ಕಣ್ಣಿದಿರಿಗೆ ನಿಲ್ಲುವುದಕ್ಕೂ ನಾಚುತ್ತಿರುವ ಮಾಯೆಯೆಂಬುದು ನಿಮ್ಮೆಲ್ಲರನ್ನೂ ಹೀಗೆ ವಿವೇಕಶೂನ್ಯರನ್ನಾಗಿ ಮಾಡುತ್ತಿರುವುದು. ಆ ಮಾಯಾಸಂಬಂಧದಿಂದಲೇ ನಿಮ್ಮಂತವರೆಲ್ಲರೂ ನಿಜಸ್ಥಿತಿಯನ್ನು ತಿಳಿಯಲಾರದೆ, ಆ ಭಗವಂತನೊಬ್ಬನಿಗೆ ಹೊರತು ಬೇರೊಬ್ಬರಿಗೆ ಯಾವ ವಿಧದ ಸ್ವಾತಂತ್ರ್ಯವಿಲ್ಲದಿದ್ದರೂ ನನ್ನನ್ನು ಸ್ವತಂತ್ರನನ್ನಾಗಿ ಭಾವಿಸುತ್ತಿರುವಿರಿ. ಈನಿಮ್ಮ ಅಜ್ಞಾನವನ್ನು ನೋಡಿ ನನಗೆ ನಗೆಯುಂಟಾಗುತ್ತಿರುವುದು. ಓನಾರದಾ! ಪ್ರಕೃತಿ, ಮಹತ್ತು, ಅಹಂಕಾರ ಮೊದಲಾದುವುಗಳೂ, ಎಲ್ಲಾ ಜೀವ ಕೋಟಿಯೂ, ಈ ಸಮಸ್ತವೂ ಕೂಡ ಆ ವಾಸುದೇವನಿಗಿಂತಲೂ ಬೇರೆಯಾದುದಲ್ಲವೆಂದು ನಿಶ್ಚಯವಾಗಿ ತಿಳಿ! ಸಮಸ್ತವೇದಗಳೂ ಆ ನಾರಾಯಣನೊಬ್ಬನನ್ನೇ ಪ್ರತಿಪಾದಿಸುತ್ತಿರುವುವು. ಸಮಸ್ತದೇವತೆಗಳೂ ಆ ನಾರಾಯಣನ ಶರೀರದಿಂದಲೇ ಹುಟ್ಟಿರುವರು. ಸಮಸ್ತಲೋಕವೂ ಆ ನಾರಾಯಣನೊಬ್ಬನಿಗೇ ಅಧೀನವಾಗಿರುವುದು! ಸಮಸ್ತಯಜ್ಞಗಳೂ ಆ ನಾರಾಯಣನ ಆರಾಧನರೂಪವಾಗಿಯೇ ಇರುವುವು. ಪ್ರಾಣಾಯಾಮಾದಿಯೋಗಗಳೆಲ್ಲವೂ ಆ ನಾರಾಯಣನನ್ನೇ ವಿಷಯೀಕರಿಸುವುವು. ಕೃಛ್ರಚಾಂದ್ರಾಯಣಾದಿವ್ರತಗಳೂ ತಪಸ್ಸು ಮೊದಲಾದುವೂ ಕೂಡ ಆತನ ಆರಾಧನರೂಪವಾಗಿಯೇ ಇರುವುವು. ಸರ್ವೋತ್ತಮವಾದ ಭಕ್ತಿಯೂ ಕೂಡ ಆ ನಾರಾಯಣನ ಪೂಜಾರೂಪವಲ್ಲದೆ ಬೇರೆಯಲ್ಲ. ಸಮಸ್ತವಿಧಗಳಾದ ಪುರುಷಾರ್ಥಗಳ ಸಿದ್ಧಿಯೂ ಆ ಭಗವಂತನ ಅಧೀನ

ವಾಗಿರುವುವು. ಸಮಸ್ತವಸ್ತುಗಳನ್ನೂ ಸಾಕ್ಷಾತ್ಕರಿಸತಕ್ಕವನಾಗಿ, ಸಮಸ್ತಕ್ಕೂ ನಿಯಾಮಕನಾಗಿ, ವಿಕಾರಶೂನ್ಯನಾಗಿ, ಸರ್ವಾಂತರ್ಯಾಮಿಯಾಗಿರುವ ಆ ಭಗವಂತನ ಕಡೆಗಣ್ಣಿನ ನೋಟದಿಂದಲೇ ನಾನೂ ಸೃಷ್ಟಿಸಲ್ಪಟ್ಟವನು. ಆದರಿಂದ ಪ್ರೇರಿತನಾಗಿ ಈ ಕಾರ್ಯಗಳನ್ನು ನಡೆಸುತ್ತಿರುವೆನು. ಅವನಿಂದ ಮೊದಲು ಸೃಷ್ಟಿಸಲ್ಪಟ್ಟ ಪ್ರಪಂಚವನ್ನೇ ತಿರುಗಿ ನಾನು ಸೃಷ್ಟಿಸುತ್ತಿರುವೆನು. ಹೇಯಗುಣವಿಲ್ಲದ ಆ ಭಗವಂತನು, ಈ ಪ್ರಪಂಚದ ಸೃಷ್ಟಿಸ್ಥಿತಿ ಸಂಹಾರಗಳೆಂಬ ಲೀಲೆಗಳನ್ನು ನಡೆಸುವುದಕ್ಕಾಗಿ, ಸತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳನ್ನು ಸ್ವೇಚ್ಛೆಯಿಂದ ಸ್ವೀಕರಿಸಿರುವನು. ಈ ಮೂರು ಗುಣಗಳೂ ಬೇರೆಬೇರೆ ಮೂರುಬಗೆಯ ಸ್ವಭಾವವುಳ್ಳವು. ಅದರಲ್ಲಿ ಸತ್ವಗುಣವೆಂಬುದು ಪ್ರಕಾಶಕವಾದ ಸ್ವಭಾವವುಳ್ಳುದು. ರಜೋಗುಣವೆಂಬುದು ಪ್ರೇರಕ ಸ್ವಭಾವವುಳ್ಳುದು. ತಮೋಗುಣವು ಮೋಹವನ್ನುಂಟುಮಾಡತಕ್ಕ ಸ್ವಭಾವವುಳ್ಳುದು. ಈ ಮೂರುಗುಣಗಳೂ ಕೂಡ, ನಿಜಸ್ವರೂಪದಿಂದ ನಾಶರಹಿತನಾದ ಜೀವಾತ್ಮನನ್ನು ಶರೀರೇಂದ್ರಿಯಗಳ ನಿಮಿತ್ತವಾಗಿ ಯಾವಾಗಲೂ ಬಂಧಿಸುತ್ತಿರುವುವು. ಹೀಗೆ ತನಗೆ ಶರೀರಭೂತವಾದ ಪ್ರಕೃತಿಯಲ್ಲಿರುವ ಸತ್ವಾದಿಗುಣತ್ರಯದಿಂದ ಸೇರುತ್ತಿರುವ ಆ ಭಗವಂತನೇ ಸಮಸ್ತ ಪ್ರಪಂಚವನ್ನೂ, ನನ್ನನ್ನೂ ಕೂಡ ನಿಯಮಿಸುತ್ತಿರುವನೆಂದು ತಿಳಿ! ಆ ಭಗವಂತನೇ ಸಮಸ್ತ ಪ್ರಪಂಚಕ್ಕೂ ಕಾರಣಭೂತವಾದ ಮಾಯೆಗೆ ನಿಯಾಮಕನಾಗಿದ್ದು, ತನ್ನ ಸಂಕಲ್ಪದಿಂದಲೇ ಈ ಪ್ರಪಂಚರೂಪವಾಗಿ ಕಾಣಿಸಿ ಕೊಳ್ಳುತ್ತ, ಕರ್ಮಗಳಿಗೆ ವಶನಾಗದೆ ಇರುವನು. ಆದರೆ ಕಾಲಕರ್ಮಸ್ವಭಾವಗಳೆಂಬಿವು ಮೂರನ್ನೂ ಪ್ರಪಂಚಸೃಷ್ಟಿಗಾಗಿ ತನಗೆ ಸಹಕಾರಿಗಳನ್ನಾಗಿ ಸ್ವೀಕರಿಸಿರುವನು. ಕಾಲವೆಂಬುದು ತನಗೆ ತಾನೇ ಅಪ್ರಯತ್ನವಾಗಿ ಬಂದು ಅವನಲ್ಲಿ ಸೇರಿ, ಮಹದಾದಿ ಕಾರ್ಯಗಳಿಗೆ ಪರಿಣಾಮವನ್ನುಂಟುಮಾಡತಕ್ಕುದಾಗಿರುವುದು. ಇಂತಹ ಕಾಲವನ್ನೂ, ಜೀವನ ಅದೃಷ್ಟರೂಪವಾದ ಕರ್ಮಫಲವನ್ನೂ, ಮೂಲಪ್ರಕೃತಿಯಲ್ಲಿರುವ ಪರಿಣಾಮರೂಪವಾದ ಸ್ವಭಾವಗುಣವನ್ನೂ, ಜಗತ್ಸೃಷ್ಟಿಗೆ ಸಹಕಾರಿಗಳನ್ನಾಗಿ ತಾನಾಗಿಯೇ ಸ್ವೇಚ್ಛೆಯಿಂದ ಸ್ವೀಕರಿಸಿರುವನು. ಈ ಮೂರರಲ್ಲಿ ಕಾಲವೆಂಬುದು ಸತ್ವರಜಸ್ತಮೋಗುಣಗಳ ವ್ಯತ್ಯಾಸಕ್ಕೆ ಕಾರಣವಾಗಿರುವುದು. ಹೀಗೇ ಕಾಲವಶದಿಂದುಂಟಾಗುವ ಸತ್ವಾದಿಗುಣಗಳ ವೈಷಮ್ಯದಿಂದಲೂ, ಪ್ರಕೃತಿಯಲ್ಲಿರುವ ಪರಿಣಾಮಸ್ವಭಾವದಿಂದಲೂ, ಜೀವಾತ್ಮರ ಅದೃಷ್ಟದಿಂದಲೂ, ಪರಮಪುರುಷನಿಂದ ಪ್ರೇರಿತವಾದ ಪ್ರಕೃತಿಯಿಂದ ಮಹತ್ತೆಂಬ ತತ್ವವು ಜನಿಸಿತು. ಹೀಗೆ ಪರಮಪುರುಷನ ಸಂಕಲ್ಪದಿಂದ ವಿಕಾರಹೊಂದತಕ್ಕುದಾಗಿ, ಜ್ಞಾನಕರ್ಮಗ

ಳನ್ನು ಮುಖ್ಯವಾಗಿ ಹೊಂದಿರುವುದರಿಂದ ಸತ್ವರಜೋಗುಣಗಳಿಗೆ ಮಾತ್ರವೇ ನೆಲೆಯಾಗಿಯೂ ಇರುವ ಆ ಮಹತ್ತತ್ವದಿಂದ ಹುಟ್ಟಿದ ಅಹಂಕಾರತತ್ವವೆಂಬುದು, ಕೇವಲ ತಮೋಗುಣಪ್ರಧಾನವೆನಿಸಿರುವುದು. ಅದು ವಿಕಾರಹೊಂದುತ್ತ ಸಾತ್ವಿಕಾಹಂಕಾರವೆಂದೂ ರಾಜಸಾಹಂಕಾರವೆಂದೂ, ತಾಮಸಾಹಂಕಾರವೆಂದೂ ಮೂರುವಿಧವಾಗಿ ಬೇರ್ಪಟ್ಟಿರುವುದು. ಇವುಗಳಲ್ಲಿ ತಾಮಸಾಹಂಕಾರವೆಂಬುದು ಮಹಾಭೂತಗಳೆಂಬ ದ್ರವ್ಯಗಳನ್ನು ಸೃಷ್ಟಿಸತಕ್ಕ ಶಕ್ತಿಯುಳ್ಳದು. ತೈಜಸವೆಂದು ಹೇಳಲ್ಪಡುವ ರಾಜಸಾಹಂಕಾರವೆಂಬುದು ಕ್ರಿಯೆಗಳಲ್ಲಿ ಪ್ರವೃತ್ತಿಯುಂಟುಮಾಡತಕ್ಕ ಶಕ್ತಿಯುಳ್ಳದು. ವೈಕಾರವೆನಿಸುವ ಸಾತ್ವಿಕಾಹಂಕಾರವೆಂಬುದು ಶಬ್ದಾದಿವಿಷಯಗಳನ್ನು ತಿಳಿಸತಕ್ಕ ಜ್ಞಾನೇಂದ್ರಿಯಗಳನ್ನುಂಟುಮಾಡುವಶಕ್ತಿಯುಳ್ಳದು. ಭೂತಾದಿಯೆಂದು ಹೆಸರುಳ್ಳುದಾಗಿಯೂ, ಪರಮಪುರುಷನ ಪ್ರೇರಣೆಯಿಂದಲೇ ವಿಕಾರಹೊಂದತಕ್ಕುದಾಗಿಯೂ ಇರುವ ತಾಮಸಾಹಂಕಾರದಿಂದ ಪಂಚಭೂತಗಳಲ್ಲಿ ಆಕಾಶವೆಂಬುದು ಮೊದಲು ಹುಟ್ಟಿತು. ಚೇತನಾಚೇತನಗಳ ಸ್ವರೂಪವನ್ನು ತಿಳಿಸುವುದಕ್ಕೆ ಪ್ರಮಾಣವಾಗಿಯೂ, ಆ ಆಕಾಶದ ಸೂಕ್ಷ್ಮರೂಪವಾಗಿಯೂ, ಆಕಾಶಕ್ಕೆ ಅಸಾಧಾರಣವಾಗಿಯೂ ಇರುವ ಶಬ್ದಗುಣವು ಮೊದಲು ಜನಿಸಿ, ಅದರಿಂದ ಆಕಾಶವು ಹುಟ್ಟಿತು. ವಿಕಾರಹೊಂದುತ್ತ ಬಂದ ಆ ಆಕಾಶದಿಂದ ಸ್ಪರ್ಶಗುಣವುಳ್ಳ ವಾಯುವು ಹುಟ್ಟಿತು. ಆ ವಾಯುವಿನಲ್ಲಿ ತನಗೆ ಕಾರಣವಾದ ಆ ಆಕಾಶದಲ್ಲಿರುವ ಶಬ್ದಗುಣವೂ, ತನ್ನಲ್ಲಿ ಸ್ವತಸ್ಸಿದ್ಧವಾದ ಸ್ಪರ್ಶಗುಣವೂ ಇವೆರಡೂ ಸೇರಿದುವು. ಮತ್ತು ಆ ವಾಯುವು ಪ್ರಾಣರೂಪವಾಗಿ ದೇಹದಲ್ಲಿ ಸೇರುವುದರಿಂದ, ಇಂದ್ರಿಯಗಳಿಗೂ, ಶರೀರಕ್ಕೂ ಬಲವನ್ನು ಕೊಡುತ್ತಿರುವುದು. ವಿಕಾರಹೊಂದುತ್ತಿರುವ ಆ ವಾಯುವೆಂಬ ಭೂತದಲ್ಲಿ, ಮೇಲೆ ಹೇಳಿದಂತೆ ಕಾಲಕರ್ಮಸ್ವಭಾವಗಳೆಂಬೀ ಮೂರರ ಸಹಾಯದಿಂದ ತೇಜಸ್ಸು ಜನಿಸಿತು. ಆ ತೇಜಸ್ಸಿನಲ್ಲಿ ತನಗೆ ಕಾರಣಭೂತಗಳಾದ ಆಕಾಶವಾಯುಗಳೆಂಬ ಭೂತಗಳಲ್ಲಿರುವ ಶಬ್ದ, ಸ್ಪರ್ಶಗುಣಗಳೆರಡೂ, ತನ್ನಲ್ಲಿ ಸ್ವತಸ್ಸಿದ್ಧವಾಗಿ ಹುಟ್ಟಿದ ರೂಪಗುಣವೂ ಈ ಮೂರೂ ಒಂದಾಗಿ ಸೇರಿದುವು. ವಿಕಾರಹೊಂದುತ್ತಿರುವ ಆ ತೇಜಸ್ಸಿನಿಂದ ರಸಾತ್ಮಕವಾದ ಜಲವು ಹುಟ್ಟಿತು. ಆ ಜಲದಲ್ಲಿ ತನಗೆ ಕಾರಣಭೂತವಾದ ತೇಜಸ್ಸಿನಲ್ಲಿರುವ ಶಬ್ದಸ್ಪರ್ಶರೂಪಗುಣಗಳೂ, ಮತ್ತು ತನ್ನಲ್ಲಿಯೇ ಹುಟ್ಟಿದ ರಸವೆಂಬ ಗುಣವೂ ಒಂದಾಗಿ ಸೇರಿದುವು. ಹಾಗೆಯೇ ವಿಕಾರಹೊಂದುತ್ತಿರುವ ಜಲದಿಂದ ಗಂಧಗುಣವುಳ್ಳ ಭೂಮಿಯು ಹುಟ್ಟಿತು. ಈ ಭೂಮಿಯಲ್ಲಿ ತನಗೆ ಕಾರಣವಾದ ಜಲದಲ್ಲಿರುವ ಶಬ್ದಾದಿ ನಾಲ್ಕು ಗುಣಗಳಲ್ಲದೆ ಹೊಸದಾಗಿ ಗಂಧ

ವೆಂಬ ಗುಣವೂ ಒಂದಾಗಿ ಸೇರಿದುವು. ಮೇಲೆ ಹೇಳಿದ ಪಂಚಮಹಾಭೂತಗಳ ಉತ್ಪತ್ತಿಯೆಲ್ಲವೂ ತಾಮಸಾಹಂಕಾರದ ಕಾರ್ಯಗಳು. ಸಾತ್ವಿಕಾಹಂಕಾರದ ಕಾರ್ಯಗಳನ್ನೂ ಹೇಳುವೆನು ಕೇಳು! ಸಾತ್ವಿಕಾಹಂಕಾರದಿಂದ ದಿಕ್ಕುಗಳು, ವಾಯು, ಸೂರ್ಯನು, ವರುಣನು, ಅಶ್ವಿನೀದೇವತೆಗಳೆಂಬಿವರನ್ನು ಅಧಿಷ್ಠಾನದೇವತೆಗಳನ್ನಾಗಿ ಪಡೆದ ಕಿವಿ, ತ್ವಕ್ಕು, ಕಣ್ಣು, ನಾಲಗೆ, ಮೂಗು, ಎಂಬ ಐದು ಜ್ಞಾನೇಂದ್ರಿಯಗಳೂ, ಇಂದ್ರನು, ಅಗ್ನಿ, ಉಪೇಂದ್ರನು, ಮಿತ್ರನು, ಬ್ರಹ್ಮನು, ಇವರನ್ನು ಅಧಿಷ್ಠಾನದೇವತೆಗಳನ್ನಾಗಿ ಪಡೆದ ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಐದು ಕರ್ಮೇಂದ್ರಿಯಗಳೂ, ಚಂದ್ರನು ಅಧಿಷ್ಠಾನದೇವತೆಯಾಗಿ ಉಳ್ಳ ಮನಸ್ಸೂ, ಹೀಗೆ ಏಕಾದಶೇಂದ್ರಿಯಗಳು ಜನಿಸಿದುವು. ಈ ವಿಧವಾಗಿ ಜ್ಞಾನೇಂದ್ರಿಯಗಳೈದು, ಕರ್ಮೇಂದ್ರಿಯಗಳೈದು, ಮತ್ತು ಮನಸ್ಸು, ಇವೆಲ್ಲಕ್ಕೂ, ರಾಜಸಾಹಂಕಾರದಿಂದ ಸಹಕರಿಸಲ್ಪಟ್ಟು ವಿಕಾರಹೊಂದುತ್ತಿರುವ ಸಾತ್ವಿಕಾಹಂಕಾರವು ಕಾರಣವೆನಿಸಿರುವುದು. ಇದರಿಂದ ಈ ಇಂದ್ರಿಯಗಳಲ್ಲಿ ರಾಜಸಾಹಂಕಾರದ ಗುಣಗಳೂ ಕಲೆತಿರುವುವು. ಹೀಗೆ ಆಕಾಶಾದಿಭೂತಗಳೂ, ಮನಸ್ಸೂ, ಅವುಗಳಿಗೆ ವಿಷಯಗಳಾದ ತನ್ಮಾತ್ರಗಳೂ, ಬೇರೆಬೇರೆಯಾಗಿದ್ದುದರಿಂದ, ಬ್ರಹ್ಮಾಂಡಸೃಷ್ಟಿಗೆ ಅಸಮರ್ಥಗಳಾಗಿದ್ದುವು. ಆಗ ಭಗವಂತನ ಶಕ್ತಿಯಿಂದ ಇವು ಪ್ರೇರಿತಗಳಾಗಿ, * ಪಂಚೀಕರಣ ಕ್ರಮವನ್ನನುಸರಿಸಿ, ಒಂದಕ್ಕೊಂದು ಸಂಯೋಗವನ್ನು ಹೊಂದಿ, ಸ್ಥೂಲಸೂಕ್ಷ್ಮಗಳೆಂಬ ರೂಪಭೇದದಿಂದ, ಕಾಲಕರ್ಮಸ್ವಭಾವಗಳನ್ನನುಸರಿಸಿ, ಈ ಬ್ರಹ್ಮಾಂಡದ ಉತ್ಪತ್ತಿಗೆ ಕಾರಣಗಳಾದುವು. ಬ್ರಹ್ಮಾಂಡವೆಂಬುದು ಈ ಭೂತೇಂದ್ರಿಯಸಂಯೋಗದಿಂದಲೇ ಉಂಟಾದುದರಿಂದ, ಆಕಾಶದಿಂದುಂಟಾದ ವಾಯುವಿನಂತೆ ಇದನ್ನು ಬೇರೊಂದು ತತ್ವವೆಂದೆಣಿಸುವುದಕ್ಕಿಲ್ಲ. ಇದಕ್ಕೆ ಆಕಾಶಾದಿಗಳಂತೆ ಬೇರೊಂದು ತತ್ವವನ್ನು ಹುಟ್ಟಿಸತಕ್ಕ ಶಕ್ತಿಯೂ ಇಲ್ಲ. ಆದುದರಿಂದ ಈ ಬ್ರಹ್ಮಾಂಡವೆಂಬುದು, ಕಾರ್ಯಕಾರಣರೂಪಗಳಾದ ಆ ಎರಡು ಬಗೆಯ ತತ್ವಗಳಿಗಿಂತಲೂ ಬೇರೆ

---

* ಪಂಚೀಕರಣವೆಂದರೆ, ಒಂದೊಂದು ಭೂತಗಳನ್ನೂ ಎರಡಾಗಿ ವಿಭಾಗಿಸಿ, ಅವುಗಳಲ್ಲಿ ಒಂದೊಂದು ಅರ್ಧಭಾಗವನ್ನು ತಿರುಗಿ ಐದುಭಾಗವಾಗಿ ಮಾಡಿ, ಆ ಐದು ಭಾಗಗಳಲ್ಲಿ ಒಂದನ್ನು ಬಿಟ್ಟು ಉಳಿದ ನಾಲ್ಕುಭಾಗಗಳನ್ನೂ ಇತರ ಭೂತಗಳಲ್ಲಿ ಒಂದೊಂದಕ್ಕೆ ಒಂದೊಂದರಂತೆ ಸೇರಿಸಿಡುವುದು. ಇದರಿಂದ ಒಂದೊಂದು ಭೂತಗಳಲ್ಲಿಯೂ ಬೇರೆ ಎಲ್ಲಾ ಭೂತಗಳ ಅಂಶವೂ ಸ್ವಲ್ಪಸ್ವಲ್ಪವಾಗಿ ಸೇರುವುವು. ಮಹತ್ತು, ಅಹಂಕಾರಗಳೆಂಬ ಎರಡು ತತ್ವಗಳನ್ನೂ ಸೇರಿಸಿ, ಇದೇಕ್ರಮದಿಂದ ಮಿಶ್ರಣವಾಡುವುದನ್ನು ಸಪ್ತೀಕರಣವೆಂದು ಹೇಳುವರು ಮೊದಲು ಮಂಗಳಶ್ಲೋಕದಲ್ಲಿ ''ತೇಜೋವಾರಿಮೃದಾಂಯಥಾ ವಿನಿಮಯಃ'' ಎಂಬ ವಾಕ್ಯದಿಂದ ಸೂಚಿತವಾದ ತ್ರಿವೃತ್ಕರಣವೆಂಬುದು ಇದಕ್ಕೆ ಉಪಲಕ್ಷಕವೆಂದು ತಿಳಿಯಬೇಕು.

ಯಾಗಿರುವುದು. ಈ ಬ್ರಹ್ಮಾಂಡವು ಕಲ್ಪಾಂತದಲ್ಲಿ ಗರ್ಭೋದಕವೆಂಬ ನೀರಿನಲ್ಲಿದ್ದಾಗ, ಕಾಲಕರ್ಮಸ್ವಭಾವಗಳಿಗೀಡಾಗದೆ, ಸಮಸ್ತವನ್ನೂ ಸಜೀವವನ್ನಾಗಿ ಮಾಡತಕ್ಕ ಶಕ್ತಿಯುಳ್ಳ ಭಗವಂತನು, ಸಮಷ್ಟಿಪುರುಷನೆನಿಸಿದ ಬ್ರಹ್ಮನನ್ನು ತನಗೆ ಶರೀರವನ್ನಾಗಿ ಮಾಡಿಕೊಂಡು, ಆತನಲ್ಲಿ ಅಂತರಾತ್ಮನಾಗಿ, ಕಾಲಕರ್ಮಸ್ವಭಾವಗಳನ್ನನುಸರಿಸುತ್ತ, ಆ ಅಂಡವನ್ನೊಳಹೊಕ್ಕು, ಅದನ್ನು ಜೀವಸಹಿತವನ್ನಾಗಿ ಮಾಡಿದನು. ಒಡನೆಯೇ ಆ ಅಂಡವನ್ನು ಭೇದಿಸಿಕೊಂಡು ಪುರುಷಾಕೃತಿಯೊಂದು ಉದ್ಭವಿಸಿತು. ಆತನೂ ಚತುರ್ಮುಖರೂಪದಿಂದ ಹೊರಟುಬಂದ ಪರಮಪುರುಷನೇ ಹೊರತು ಬೇರೆಯಲ್ಲ. ಆದರೆ ಈ ರೂಪದಲ್ಲಿ ಅಂತರ್ಯಾಮಿಯಾಗಿದ್ದ ಪುರುಷನು, ಮೇಲೆ ಕಾಣುವಂತೆ ನಾಲ್ಕು ಮುಖದವನಲ್ಲ. ಆವನಿಗೆ ಸಾವಿರತೊಡೆಗಳು! ಸಾವಿರಕಾಲುಗಳು! ಸಾವಿರತೋಳುಗಳು! ಸಹಸ್ರಮುಖಗಳು! ಸಾವಿರತಲೆಗಳು! ಆತನೇ ಸರ್ವಾಂತರ್ಯಾಮಿಯಾದ ಪರಮಪುರುಷನು' ಪಂಡಿತರು ಪಾತಾಳಾದಿಸಮಸ್ತಲೋಕಗಳನ್ನೂ ಈ ಪರಮಪುರುಷನ ಅಂಗಾಲು ಮೊದಲಾದ ಶರೀರಾವಯವಗಳನ್ನಾಗಿ ಭಾವಿಸಿ ಧ್ಯಾನಿಸುವರು. ಆತನ ಕಟಿ (ಮಧ್ಯ)ಭಾಗದಿಂದ ಕೆಳಗಿರುವ ಅವಯವಗಳನ್ನು ಕೆಳಗಿನ ಏಳು ಲೋಕಗಳನ್ನಾಗಿಯೂ, ಜಘನಕ್ಕೆ ಮೇಲಿನ ಅವಯವಗಳನ್ನು ಮೇಲಿನ ಏಳುಲೋಕಗಳನ್ನಾಗಿಯೂ ಕಲ್ಪಿಸಿರುವರು. ಆ ಪರಮಪುರುಷನ ಮುಖದಿಂದ ಬ್ರಾಹ್ಮಣಜಾತಿಯೂ, ತೋಳುಗಳಿಂದ ಕ್ಷತ್ರಜಾತಿಯೂ, ತೊಡೆಗಳಿಂದ ವೈಶ್ಯಜಾತಿಯೂ, ಕಾಲುಗಳಿಂದ ಶೂದ್ರಜಾತಿಯೂ ಹುಟ್ಟಿರುವುವು. ಮತ್ತು ಆತನ ಪಾದಗಳಿಂದ ಭೂಲೋಕವೂ, ನಾಭಿಯಿಂದ ಭುವರ್ಲೋಕವೂ, ಹೃದಯದಿಂದ ಸ್ವರ್ಲೋಕವೂ ಕಂಠದಿಂದ ಜನಲೋಕವೂ, ಆತನ ಸ್ತನದ್ವಯಗಳಿಂದ ತಪೋಲೋಕವೂ, ಆತನ ಶಿರಸ್ಸಿನಿಂದ ಸತ್ಯಲೋಕವೆಂಬ ಹೆಸರುಳ್ಳುದಾಗಿ ಇತರ ಲೋಕಗಳಿಗಿಂತಲೂ ಹೆಚ್ಚುಕಾಲದವರೆಗೆ ನಿಲ್ಲತಕ್ಕ ಚತುರ್ಮುಖಲೋಕವೂ ಉದ್ಭವಿಸಿರುವುದು. (ಆ ಮಹಾತ್ಮನ ನಿಜಸ್ಥಾನವಾದ ಪರಮಪದ (ವೈಕುಂಠ) ವಾದರೋ, ಈ ಲೋಕಗಳಂತೆ ಮತ್ತೊಂದು ಕಾರಣದಿಂದ ಉದ್ಭವಿಸಿದುದಲ್ಲ. ಅದು ಎಂದೆಂದಿಗೂ ನಾಶವಿಲ್ಲದೆ ಶಾಶ್ವತವಾಗಿರುವುದು. ಅದನ್ನೇ ಬ್ರಹ್ಮಲೋಕವೆನ್ನುವರು) ಮತ್ತು ಆ ಪರಮಪುರುಷನ ಮಧ್ಯಪ್ರದೇಶದಿಂದ ಅತಲವೂ, ತೊಡೆಗಳಿಂದ ವಿತಲವೂ, ಮಂಡಿಗಳಿಂದ ಸುತಲವೂ, ಮೊಳಕಾಲುಗಳಿಂದ ತಲಾತಲವೂ, ಹರಡುಗಳಿಂದ ಮಹಾತಲವೂ, ಪಾದಾಗ್ರಗಳಿಂದ ರಸಾತಲವೂ, ಅಂಗಾಲಿನಿಂದ ಪಾತಾಳವೂ ಕಲ್ಪಿಸಲ್ಪಟ್ಟಿರುವುವು. ಇದ

ರಿಂದ ಆ ಪರಮಪುರುಷನೇ ಲೋಕಸ್ವರೂಪನೆನಿಸಿರುವನು. ಇದಲ್ಲದೆ ಆ ಪರಮ ಪುರುಷನ ಅಂಗಾಲು ಮೊದಲಾಗಿ ನಾಭಿಯವರೆಗಿರುವ ಅವಯವಗಳಿಂದ ಭೂಲೋಕವೂ, ಮೇಲೆ ಕಂಠಪರ್ಯಂತವಾಗಿರುವ ಅವಯವಗಳಿಂದ ಭುವರ್ಲೋಕವೂ, ಆತನ ಶಿರಸ್ಸಿನಿಂದ ಸ್ವರ್ಲೋಕವೂ, ಕಲ್ಪಿತಗಳಾಗಿರುವುವೆಂದು ಲೋಕಸೃಷ್ಟಿಕ್ರಮವನ್ನು ಹೀಗೆ ಸಂಗ್ರಹಿಸಿಯೂ ಹೇಳುವುದುಂಟು. ಇಲ್ಲಿಗೆ ಐದನೆಯ ಅಧ್ಯಾಯವು.

---

## ಪುರುಷಸೂಕ್ತಕ್ರಮದಿಂದ ಪರಮಪುರುಷನ ಸ್ವರೂಪವನ್ನು ವಿವರಿಸಿದುದು.

### ವಿರಾಡ್ವಿಭೂತಿವರ್ಣನವು.

ತಿರುಗಿ ಬ್ರಹ್ಮದೇವನು ನಾರದನನ್ನು ಕುರಿತು, "ನಾರದಾ! ಕೇಳು! ವಾಗಿಂದ್ರಿಯಕ್ಕೂ, ಅದಕ್ಕೆ ಅಧಿಷ್ಠಾನದೇವತೆಯಾದ ಅಗ್ನಿದೇವನಿಗೂ, ಆ ಪರಮಪುರುಷನ ಮುಖವೇ ಆಶ್ರಯಸ್ಥಾನವು. ದೇವತೆಗಳ ಆಹಾರವಾದ ಹವ್ಯ, ಪಿತೃಗಳ ಆಹಾರವಾದ ಕವ್ಯ, ಅವರಿಬ್ಬರಿಂದಲೂ ಭುಕ್ತಶೇಷವಾದ ಅಮೃತ, ಈ ಮೂರುಬಗೆಯ ಅನ್ನದಲ್ಲಿರುವ ಷಡ್ವಿಧರಸಗಳಿಗೂ, ಮತ್ತು ನಮ್ಮ ರಸನೇಂದ್ರಿಯಕ್ಕೂ, ಆ ಇಂದ್ರಿಯಕ್ಕೆ ಅಧಿದೇವತೆಯಾದ ವರುಣನಿಗೂ, ಆ ಪರಮಪುರುಷನ ನಾಲಗೆಯೇ ಆಶ್ರಯಸ್ಥಾನವು. ಸಮಸ್ತ ಜೀವರಾಶಿಗಳ ಪ್ರಾಣಗಳಿಗೂ, ಆ ಪ್ರಾಣಕ್ಕೆ ಅಧಿದೇವತೆಯಾದ ವಾಯುವಿಗೂ ಆತನ ನಾಸಾರಂಧ್ರಗಳೇ ಆಶ್ರಯಸ್ಥಾನವು. ಓಷಧಿಗಳಿಗೂ, ಅಶ್ವಿನೀದೇವತೆಗಳಿಗೂ, ಇಷ್ಟವಸ್ತುಲಾಭದಿಂದುಂಟಾಗುವ ಸುಖರೂಪವಾದ ಮೋದಕ್ಕೂ ಆ ಇಷ್ಟವಸ್ತುವಿನಲ್ಲಿ ಮಮತೆಯಿಂದ ಹುಟ್ಟುವ ಸುಖರೂಪವಾದ ಪ್ರಮೋದಕ್ಕೂ, ಆವನ ಘ್ರಾಣೇಂದ್ರಿಯವೇ ಸ್ಥಾನವು. ಮತ್ತು ಕಪ್ಪು, ಬಿಳುಪು ಮೊದಲಾದ ವರ್ಣಗಳಿಗೂ, ಅವುಗಳನ್ನು ಪ್ರಕಾಶಗೊಳಿಸುವ ತೇಜಸ್ಸಿಗೂ, ಆತನ ಚಕ್ಷುರಿಂದ್ರಿಯವೇ ಸ್ಥಾನವು. ದ್ಯುಲೋಕಕ್ಕೂ ಸೂರ್ಯನಿಗೂ, ಆತನ ಕಣ್ಣುಗಳೆರಡೂ ಆವಾಸಸ್ಥಾನವು. ದಿಕ್ಕುಗಳಿಗೂ, ತೀರ್ಥಗಳಿಗೂ, ಆತನ ಕಿವಿಗಳು ಸ್ಥಾನವೆನಿಸುವುವು. ಆಕಾಶಕ್ಕೂ, ಆಕಾಶಗುಣವೆನಿಸಿದ ಶಬ್ದಕ್ಕೂ, ಆತನ ಶ್ರೋತ್ರೇಂದ್ರಿಯವು ಆಶ್ರಯವೆನಿಸುವುದು. ಸಮಸ್ತ ವಸ್ತುಗಳ ಸಾರಾಂಶಗಳಿಗೂ ಸೌಂದರ್ಯಕ್ಕೂ ಆ ಪರಮಪುರುಷನ ಶರೀರವೇ ಸ್ಥಾನವು. ಸ್ಪರ್ಶಗುಣಕ್ಕೂ, ವಾಯು

ವಿಗೂ, ಸಮಸ್ತಯಜ್ಞಕ್ಕೂ ಅವನ ಚರ್ಮವೇ ಸ್ಥಾನವೆನಿಸುವುದು. ಸಮಸ್ತವೃಕ್ಷಗಳಿಗೂ, (ಯಜ್ಞಸಾಧನಗಳಾದ ವೃಕ್ಷಗಳಿಗೂ) ಆತನ ದೇಹದ ಕೂದಲುಗಳೇ ಸ್ಥಾನವು. ಕಲ್ಲು, ಲೋಹಗಳು, ಮೇಘಗಳು, ಮಿಂಚು ಇವುಗಳಿಗೆ ಆತನ ತಲೆಕೂದಲು, ಮೀಸೆ, ಉಗುರು, ಮುಂತಾದುವುಗಳು ಸ್ಥಾನವೆನಿಸುವುವು. ವಿಶೇಷವಾಗಿ ಲೋಕಕ್ಷೇಮಕಾರಿಗಳಾದ ಇಂದ್ರಾದಿಲೋಕ ಪಾಲಕರಿಗೆ ಆತನ ತೋಳುಗಳೇ ವಾಸಸ್ಥಾನವು. ಭೂಲೋಕ, ಭುವರ್ಲೋಕ ಗಳಿಗೆ ಆತನ ಮೂರಡಿಗಳು ಸ್ಥಾನವೆನಿಸುವುವು. ಸಮಸ್ತ ಲೋಕದ ಕ್ಷೇಮಕ್ಕೂ, ಅದರ ಅನಿಷ್ಟನಿವಾರಣೆಗೂ, ಇಷ್ಟಪ್ರಾಪ್ತಿಗೂ, ಆತನ ಪಾದವೇ ಆಶ್ರಯವು. ಜಲದ ವೀರ್ಯವೆನಿಸಿದ ಶುಕ್ಲಕ್ಕೂ, ಸೃಷ್ಟಿಗೂ, ಪರ್ಜನ್ಯದೇವತೆಗೂ, ಪ್ರಜಾಧಿ ಪತಿಗೂ, ಆ ಭಗವಂತನ ಪುರುಷಲಿಂಗಸ್ಥಾನವೇ ಆಶ್ರಯವು. ಸಂತಾನಕ್ಕಾಗಿ ನಡೆಸುವ ಸಂಭೋಗದಿಂದುಂಟಾದ ಆನಂದಕ್ಕೆ ಆತನ ಉಪಸ್ಥೇಂದ್ರಿಯವೇ ಸ್ಥಾನವು. ಓ ನಾರದಾ! ಯಮಮಿತ್ರರೆಂಬ ದೇವತೆಗಳಿಗೂ, ಮಲವಿಸರ್ಜನೆಗೂ ಆತನ ಪಾಯುವೆಂಬ ಇಂದ್ರಿಯವು ಸ್ಥಾನವೆನಿಸುವುದು. ಹಿಂಸೆ, ಮೃತ್ಯು, ನಿರುತಿ, ನರಕವೆಂಬಿವುಗಳಿಗೆ ಆತನ ಗುದಸ್ಥಾನವೇ ಆಶ್ರಯವು ಅಲಕ್ಷ್ಮಿ, ಅಧರ್ಮ, ಅಜ್ಞಾನವೆಂಬಿವುಗಳಿಗೆ ಆತನ ಪೃಷ್ಠಭಾಗವು ಸ್ಥಾನವೆನಿಸುವುದು. ನದನದಿಗಳಿಗೆ ಆತನ ನಾಡಿಗಳೂ, ಪರ್ವತಗಳಿಗೆ ಆತನ ಅಸ್ಥಿಪಂಜರವೂ ಸ್ಥಾನವೆನಿಸುವುವು. ಪ್ರಕೃತಿಗೂ, ಅನ್ನಾದಿಗಳಲ್ಲಿರುವ ರಸಕ್ಕೂ, ಸಮುದ್ರಗಳಿಗೂ, ಪ್ರಾಣಿಗಳ ಸಾವಿಗೂ ಆತನ ಉದರಪ್ರದೇಶವೇ ಸ್ಥಾನವು ಧರ್ಮಕ್ಕೂ, ನಮ್ಮ ಮಕ್ಕಳಾದ ಸನಕಾದಿಗಳಿಗೂ, ರುದ್ರನಿಗೂ, ಅಮಹತ್ತೆಂಬತತ್ವಕ್ಕೂ ಆ ಪರಮಪುರುಷನ ಮನಸ್ಸೇ ಆಶ್ರಯವು. ಹೀಗೆ ಆ ಪರಮಪುರುಷನಿಂದುಂಟಾದ ಜಗತ್ತೆಲ್ಲವೂ, ಆತನ ವಿಭೂತಿಗಳೆನಿಸಿ, ಅವನಿಗೆ ಶರೀರರೂಪವಾಗಿಯೂ ಇರುವುದರಿಂದ ಈ ಪ್ರಪಂಚದಲ್ಲಿ ಅವನಿಗಿಂತಲೂ ಬೇರೆಯಾದ ವಸ್ತುವೊಂದೂ ಇಲ್ಲ ನಾರದಾ! ಮುಖ್ಯವಾಗಿ ಚತುರ್ಮುಖನಾದ ನಾನೂ, ನೀನೂ, ರುದ್ರನೂ, ಮೊದಲು ಹುಟ್ಟಿದ ಈ ಸನಕಾದಿಮಹರ್ಷಿಗಳೂ, ದೇವತೆಗಳೂ, ದಾನವರೂ, ಪರ್ವತಗಳೂ, ನಾಗರೂ, ಗಂಧರ್ವರೂ, ಅಪ್ಸರಸ್ಸುಗಳೂ, ಯಕ್ಷರೂ, ರಾಕ್ಷಸರೂ, ಭೂತಗಣ ಗಳೂ, ಪನ್ನಗರೂ, ವಸುಗಳೂ, ಪಿತೃಗಳೂ, ಸಿದ್ಧವಿದ್ಯಾಧರಚಾರಣರೂ, ಸಮಸ್ತ ವೃಕ್ಷಗಳೂ, ಇನ್ನೂ ಜಲದಲ್ಲಿಯೂ, ಸ್ಥಲದಲ್ಲಿಯೂ, ಆಕಾಶದಲ್ಲಿಯೂ ಜೀವಿಸ ತಕ್ಕ ಸಮಸ್ತ ಪ್ರಾಣಿಗಳೂ, ಗ್ರಹನಕ್ಷತ್ರತಾರೆಗಳೂ, ಮಿಂಚು, ಮೇಘ, ಮೊದ ಲಾದುವುಗಳೂ, ಇವೆಲ್ಲವೂ ಆ ಪರಮಪುರುಷನೆಂದೇ ತಿಳಿ! ಇನ್ನು ಹೆಚ್ಚು

ಮಾತಿನಿಂದೇನು! * ಹಿಂದೆ ಹುಟ್ಟಿದುದಾಗಲಿ, ಈಗ ಹುಟ್ಟುತ್ತಿರುವುದಾಗಲಿ, ಮುಂದೆ ಹುಟ್ಟುವುದಾಗಲಿ ಲೋಕದಲ್ಲಿ ಯಾವಯಾವ ವಸ್ತುವುಂಟೋ, ಅವೆಲ್ಲವೂ ಭಗವತ್ಸ್ವರೂಪವೇ! ಹೀಗೆ ಭೂತಭವಿಷ್ಯದ್ವರ್ತಮಾನಗಳಲ್ಲಿರುವ ಸಮಸ್ತ ವಸ್ತುಗಳೂ ಆತನಿಗೆ ಶರೀರಭೂತಗಳಾದುದರಿಂದ, ಆತನಿಗಿಂತ ಬೇರೆಯಾದ ಸ್ವತಂತ್ರ ವಸ್ತುವೊಂದಾದರೂ ಇಲ್ಲ. † ನಾಭಿಯಿಂದ ಒಂದು ಗೇಣಳತೆಗೆ ಮೇಲೆ ನೆಲೆಗೊಂಡಿರುವ ನಮ್ಮ ಹೃದಯಕಮಲದಲ್ಲಿ ಅಡಗಿರುವ ಆ ಭಗವಂತನಿಂದಲೇ ಈ ಸಮಸ್ತಜಗತ್ತೂ ಆವರಿಸಲ್ಪಟ್ಟಿರುವುದು. ಹೀಗೆ ಹೃದಯಾಂತರ್ಯಾಮಿಯಾದ ಆ ಪರಮಪುರುಷನು, ತನಗೆ ವಾಸಸ್ಥಾನವಾದ ಜೀವಶರೀರವನ್ನು ಒಳಭಾಗದಲ್ಲಿ ಸಂಪೂರ್ಣವಾಗಿ ವ್ಯಾಪಿಸಿ, ಶರೀರಸಹಿತನಾದ ಆ ಜೀವನನ್ನು ತನ್ನ ಅಧಿಕಾರಕೊಳಪಡಿಸಿಕೊಂಡಿರುವನು. ಇದರಂತೆ ತನ್ನ ಶರೀರಕ್ಕಿಂತಲೂ ಹೊರಗಿರುವ ವಸ್ತುಗಳನ್ನೂ ತ ನ ಗ ಧೀ ನ ವಾ ಗಿ ಮಾಡಿಕೊಂಡು, ಸರ್ವವ್ಯಾಪಿಯಾಗಿರುವನು. ಅನಿರುದ್ಧರೂಪಿಯಾದ ‡ ಆ ವಿರಾಟ್ಪುರುಷನಿಂದ ಸೃಷ್ಟವಾದ ಈ ಬ್ರಹ್ಮಾಂಡವೆಲ್ಲವೂ ಆತನ ಅಧಿಕಾರಕ್ಕೊಳಪಟ್ಟು ಒಳಗೆ ಹೊರಗೆಲ್ಲಾ ಆತನಿಂದಲೇ ಆವರಿಸಲ್ಪಟ್ಟಿರುವುವು. § ಆ ಭಗವಂತನು ಅನಿತ್ಯವಾಗಿಯೂ, ಅನುಭವಿಸಿ ಕೆಲವು ಕಾಲದಮೇಲೆ ಬಿಡತಕ್ಕುದಾಗಿಯೂ ಇರುವ ಕರ್ಮಫಲವನ್ನು ಅತಿಕ್ರಮಿಸಿದವನಾದುದರಿಂದ, ನಿರ್ಭಯವಾದ ಮೋಕ್ಷವನ್ನು ಕೊಡುವುದಕ್ಕೆ ಆತನೊಬ್ಬನಲ್ಲದೆ ಬೇರೊಬ್ಬರು ¶ ಸಮರ್ಥರಲ್ಲ. ಹೀಗೆ ಶರೀರದಲ್ಲಿದ್ದರೂ ಜೀವನಿಗಿಂ

---

* ಇಲ್ಲಿ "ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಂ" ಎಂಬ ಶ್ರುತ್ಯರ್ಥವು ಸೂಚಿತವಾಗಿದೆ. ಚರಾಚರಾತ್ಮಕವಾದ ಪ್ರಪಂಚವು ಭಗವಂತನಿಗೆ ಶರೀರಭೂತವೆಂದು ಹೇಳುವುದರಿಂದ, ಜೀವಶರೀರಗಳಿಗೆ ಭೇದವಿರುವಂತೆ, ಪರಮಾತ್ಮನನ್ನೂ, ಪ್ರಪಂಚವನ್ನೂ ಬೇರೆ ವಸ್ತುಗಳನ್ನಾಗಿ ಗ್ರಹಿಸಬಾರದು ಏಕೆಂದರೆ, ನಾಮರೂಪವಿಭಾಗಗಳೊಂದೂ ತೋರದಂತೆ ಸೂಕ್ಷ್ಮಾವಸ್ಥೆಯಲ್ಲಿದ್ದ ಪ್ರಕೃತಿಪುರುಷಕಾಲಗಳನ್ನು ಶರೀರವಾಗಿ ಹೊಂದಿದ ಪರಮಪುರುಷನು ನಾಮರೂಪವಿಭಾಗಗಳಿಂದ ಕಾಣತಕ್ಕ ಸ್ಥೂಲಾವಸ್ಥೆಯನ್ನು ಹೊಂದಿದ ಪ್ರಕೃತಿ ಮೊದಲಾದ ಶರೀರದೊಡನೆ ಸ್ವಸ್ವರೂಪವಾದ ಜಗತ್ತಾಗಿ ಪರಿಣಮಿಸುವುದರಿಂದ, ಏಕತ್ವವೇ ಸಂಭವಿಸುವುದು. "ಸರ್ವಂ ಖಲ್ವಿದಂ ಬ್ರಹ್ಮ" "ಅಯಮಾತ್ಮಾ ಬ್ರಹ್ಮ" "ತತ್ವಮಸಿ" ಇತ್ಯಾದಿವೇದಾಂತವಾಕ್ಯಗಳಿಗೆ ಇದೇ ಅಭಿಪ್ರಾಯವು.

† ಇಲ್ಲಿ "ಅಧೋ ನಿಷ್ಟ್ಯಾ ವಿತಸ್ತ್ಯಾಂ ತು ನಾಭ್ಯಾಮುಪರಿ ತಿಷ್ಠತಿ, ಹೃದಯಂ ತದ್ವಿಜಾನೀಯಾದ್ವಿಶ್ವಸ್ಯಾಯತನಂ ಮಹತ್" ಎಂಬ ಶ್ರುತ್ಯರ್ಥಗಳು ಸೂಚಿತವಾಗಿವೆ.

‡ ಇಲ್ಲಿ "ಸ ಭೂಮಿಂ ವಿಶ್ವತೋ ವೃತ್ವಾ" ಎಂದು ಶ್ರುತಿಯು.

§ ಇಲ್ಲಿ "ಉತಾಮೃತತ್ವಸ್ಯ" ಎಂಬುದು ಶ್ರುತಿವಾಕ್ಯವು.

¶ ಇಲ್ಲಿ "ಏತಾವಾನಸ್ಯ ಮಹಿಮಾ" ಎಂಬುದು ಶ್ರುತಿವಾಕ್ಯವು.

ತಲೂ ವಿಲಕ್ಷಣನಾದ ಆ ಪರಮಾತ್ಮನಲ್ಲಿ ಇದೊಂದು ಅದ್ಭುತವಾದ ಮಹಿಮೆಯುಂಟು ಅವನ ಮಹಿಮೆಯನ್ನು ಹೀಗೆಂದು ನಿರ್ಣಯಿಸುವುದೇ ಸಾಧ್ಯವಲ್ಲ. ಸಮಸ್ತ ಪ್ರಪಂಚಸ್ವರೂಪನಾಗಿದ್ದರೂ, ಅದರ ದೋಷವನ್ನು ಮಾತ್ರ ತನ್ನಲ್ಲಿ ಅಂಟಿಸಿಕೊಳ್ಳದಂತಿರುವನು ಅವನಲ್ಲಿ ಎಂತಹ ಅಸಾಧಾರಣಗುಣಗಳನ್ನು ಹೇಳಿದರೂ ಹೊಂದುವುದು. ಭೂರಾದಿಲೋಕಗಳೆಲ್ಲವನ್ನೂ * ತನಗೆ ಅಂಶಭೂತವಾಗಿ ಹೊಂದಿರುವ ಆ ಪರಮಾತ್ಮನ ಏಕದೇಶದಲ್ಲಿಯೇ ದೇವಾದಿ ಚತುರ್ವಿಧಭೂತಗಳೂ, ಅಡಗಿಕೊಂಡಿರುವುವೆಂದು ಹಿರಿಯರು ತಮ್ಮ ಜ್ಞಾನದೃಷ್ಟಿಯಿಂದ ತಿಳಿದಿರುವರು. ನಾರದಾ! † ಸಾವು ಮೊದಲಾದ ವಿಕಾರಗಳಿಲ್ಲದಿರುವುದು, ಅವುಗಳನ್ನು ಕುರಿತು ಭಯವಿಲ್ಲದಿರುವುದು, ಎಲ್ಲರೂ ಆಸೆಪಡತಕ್ಕುದಾದ ಮಹಾನಂದವನ್ನನುಭವಿಸುವುದು, ಈ ಮೂರು ಬಗೆಯ ಐಶ್ವರ್ಯವನ್ನೂ ಆತನು ಆ ಪರಮಪದವೊಂದರಲ್ಲಿಯೇ ಅಡಗಿಸಿಟ್ಟಿರುವನು. ಅದು ಈ ಪ್ರಕೃತಿಮಂಡಲಕ್ಕಿಂತಲೂ ಹೊರಗಾಗಿ, ಆ ಪರಮಪುರುಷನ ನಿವಾಸಸ್ಥಾನವಾಗಿರುವುದು. ಆ ಲೋಕವನ್ನು ಸೇರಿದವರು ಮಾತ್ರವೇ ಎಂದೆಂದಿಗೂ ಮರಣವಿಲ್ಲದೆ, ಮರಣಭಯವೂ ಇಲ್ಲದೆ ನಿರತಿಶಯಾನಂದವನ್ನನುಭವಿಸಬಲ್ಲರು ಅಲ್ಲಿ ಸೇರಿದವರಿಗೆ ಯಾವ ವಿಧವಾದ ದುಃಖವೂ ಇರುವುದಿಲ್ಲ ಆ ವೈಕುಂಠಲೋಕವೆಂಬುದು ಭಗವದ್ವಿಭೂತಿಗಳಲ್ಲಿ ಮೂರುಪಾಲನ್ನೊಳಕೊಂಡು. ತ್ರಿಪಾದ್ವಿಭೂತಿಯೆನಿಸಿ ಪ್ರಕೃತಿ ಮಂಡಲಕ್ಕಿಂತ ವಿಪುಲವಾಗಿರುವುದು. ಅಲ್ಲಿ ಪುನರ್ಜನ್ಮವಿಲ್ಲದ ನಿತ್ಯಮುಕ್ತರು ಮಾತ್ರ ವಾಸಮಾಡುವರು ಉಳಿದ ನಾಲ್ಕನೆಯ ಭಾಗವು ಮಾತ್ರ ಏಕಪಾದ್ವಿಭೂತಿಯೆನಿಸಿ, ಈಮೂರು ಲೋಕವನ್ನೊಳಕೊಂಡಿರುವದು. ಇದು ಸಂಸಾರಿಗಳಾದ ಜೀವರಾಶಿಗಳಿಗೆ ನಿವಾಸಸ್ಥಾನವು ಅಹಂಕಾರಮಮಕಾರಾದಿಗಳಿಗೂ ವರ್ಣಾಶ್ರಮನಿಬಂಧನೆಗಳಿಗೂ ಕಟ್ಟುಬಿದ್ದು, ಪುಣ್ಯಪಾಪರೂಪವಾದ ಕರ್ಮಗಳ ಫಲವನ್ನು ಅನುಭವಿಸತಕ್ಕವರಿಗೆ ಇದೇ ನಿವಾಸಸ್ಥಾನವಾಗಿರುವುದು ಈ ಲೋಕದಲ್ಲಿ ಜನನಮರಣಗಳಿಗೆ ಸಿಕ್ಕಿ ಬಿದ್ದಿರುವ ಸಂಸಾರಿಗಳಲ್ಲಿ ಕೂಡ ಭೋಗಾಪೇಕ್ಷಿಗಳೆಂದೂ, ಮೋಕ್ಷಾಪೇಕ್ಷಿಗಳೆಂದೂ ಎರಡು ಬಗೆ

---

* ಇಲ್ಲಿ "ಯಸ್ಯಾಯುತಾಯುತಶತೈಕಕಲಾಂಶಕಾಂಶೇ ವಿಶ್ವಂ ವಿಚಿತ್ರಚಿದಚಿತ್ಪ್ರವಿಭಾಗವೃತ್ತಮ್" ಎಂಬ ವಾಕ್ಯಾರ್ಥವು ಹೇಳಲ್ಪಡುವುದು.

† ಇಲ್ಲಿ "ಅಮೃತಂ ಕ್ಷೇಮಮಭಯಂ ತ್ರಿಮೂರ್ಧ್ನೋಧಾಯಿ ಮೂರ್ಧಸು" ಎಂದು ಮೂಲವು. ಇಲ್ಲಿ ಅಮೃತಾದಿವಿಶೇಷಣತ್ರಯದಿಂದ, ಆತ್ಮನಿಗೆ ಮುಕ್ತದಶೆಯಲ್ಲಿ ಪ್ರಾಪ್ತವಾಗುವ "ಏಷ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಸ್ಸತ್ಯಕಾಮಸ್ಸತ್ಯಸಂಕಲ್ಪಃ" ಎಂಬ ಶ್ರುತ್ಯುಕ್ತಗಳಾದ ಎಂಟು ಗುಣಗಳೂ ಸೂಚಿತವಾಗುವುವು.

ಯುಂಟು. ಆ ಎರಡು ಬಗೆಯವರಲ್ಲಿ ಭೋಗಾಪೇಕ್ಷಿಗಳು ತಮ್ಮ ತಮ್ಮ ಕರ್ಮಾನುಸಾರವಾಗಿ ಭೋಗಗಳನ್ನನುಭವಿಸುವುದಕ್ಕೆ ತಕ್ಕ ಸ್ಥಾನಗಳಾದ ಸ್ವರ್ಗಾದಿಲೋಕಗಳನ್ನು ಸೇರಬೇಕಾದರೆ, ಅವರು ಹೋಗಬೇಕಾದ ದಾರಿಯೊಂದುಂಟು. ಇದಕ್ಕೆ ಧೂಮಾದಿಮಾರ್ಗವೆಂದು ಹೆಸರು. ಇದನ್ನು ಬಿಟ್ಟು ಮೋಕ್ಷಕ್ಕೆ ಹೋಗಬೇಕಾದ ದಾರಿಯೇ ಬೇರೆ! ಅದನ್ನು ಅರ್ಚಿರಾದಿಮಾರ್ಗವೆಂದು ಹೇಳುವರು. ಇಂತವರು ಕರ್ಮಗಳನ್ನು ತೊರೆದು, ಪ್ರಕೃತಿ ಸಂಬಂಧವಿಲ್ಲದೆ, ಅಪ್ರಾಕೃತವಾದ ದಿವ್ಯಶರೀರದೊಡನೆ ಭಗವಂತನನ್ನು ಅನುಭವಿಸುವರು. ಧೂಮಾದಿಮಾರ್ಗದಿಂದ ಸ್ವರ್ಗವೊದಲಾದ ಸ್ಥಾನಗಳನ್ನು ಸೇರಬೇಕೆಂದು ಕೋರುವವರಿಗೆ ಯಾಗಾದಿಕರ್ಮರೂಪಗಳಾದ ಅವಿದ್ಯೆಯೇ ಸಾಧನವು. ಅರ್ಚಿರಾದಿಮಾರ್ಗದಿಂದ ವೈಕುಂಠಲೋಕವನ್ನು ಸೇರುವುದಕ್ಕೆ ಭಗವದುಪಾಸನವೆಂಬ ವಿದ್ಯೆಯೊಂದೇ ಮುಖ್ಯಸಾಧನವು. ಜೀವಾತ್ಮನಿಗೆ ಈ ಮೇಲೆ ಹೇಳಿದ ಎರಡು ಸ್ಥಾನಗಳಿಗೂ ಪ್ರವೇಶವುಂಟು. ಅವನು ಅವಕ್ಕೆ ಬೇಕಾದ ಎರಡು ಬಗೆಯ ಉಪಾಯಗಳಲ್ಲಿ ಯಾವುದನ್ನಾದರೂ ಹಿಡಿಯಬಹುದು. ಆದುದರಿಂದ ಮನುಷ್ಯರು ಅವರವರ ಅಭಿರುಚಿಗೆ ತಕ್ಕಂತೆ ಆಯಾ ಉಪಾಯಗಳಲ್ಲಿ ಪ್ರವರ್ತಿಸುವರು. ಅದು ಹಾಗಿರಲಿ! ಪ್ರಪಂಚ ಸೃಷ್ಟಿಗೆ ಮೊದಲು *ವಿರಾಟ್ಪುರುಷನೆಂದೂ,ಅನಿರುದ್ಧನೆಂದೂ, ಪ್ರಖ್ಯಾತನಾದ ಆತನು, ತನಗೆ ಶರೀರಭೂತವಾಗಿಯೂ. ಈಪ್ರಪಂಚನಿರ್ಮಾಣಕ್ಕೆ ಬೇಕಾದ (ಉಪಾದಾನ) ಸಾಮಗ್ರಿಯಾಗಿಯೂ ಇದ್ದ ಪ್ರಕೃತಿಯಿಂದ, ಮಹತ್ತು, ಅಹಂಕಾರ, ಭೂತಗುಣಗಳೈದು, ಭೂತಗಳೈದು, ಇವೆಲ್ಲವನ್ನೂ ಗ್ರಹಿಸಿ, ಪಂಚೀಕರಣರೀತಿಯಿಂದ ಒಂದಕ್ಕೊಂದನ್ನು ಕಲೆಸಿ, ಅಂಡವನ್ನು ಸೃಷ್ಟಿ

* ಅತ್ರ "ತಸ್ಮಾದ್ವಿರಾಡಜಾಯತ" ಎಂದು ಶ್ರುತಿಯು. ಇಲ್ಲಿ ಕಾರಣಪುರುಷನಿಂದ ಅನಿರುದ್ಧರೂಪಿಯಾದ ವಿರಾಟ್ಪುರುಷನು ಹುಟ್ಟಿ, ತಾನೇ ಬ್ರಹ್ಮಾಂಡಕಾರಣನಾದ ವೈರಾಜಪುರುಷನೂ ಆದುದಾಗಿ ಗ್ರಾಹ್ಯವು. ಈ ವೈರಾಜಪುರುಷನೇ ತನಗೆ ಶರೀರಭೂತವಾದ ಪ್ರಕೃತಿಯೆಂಬ ಉಪಾದಾನಕಾರಣದಿಂದ ಅಂಡವನ್ನು ಸೃಷ್ಟಿಸಿ, ಅದರ ಒಳಹೊರಭಾಗಗಳನ್ನೆಲ್ಲಾ ತಾನೇ ಆವರಿಸಿದ್ದನು. ಇಲ್ಲಿ ಗ್ರಹಿಸಬೇಕಾದ ಮುಖ್ಯಾಂಶವೇನೆಂದರೆ, ಸೂಕ್ಷ್ಮಪ್ರಕೃತಿಪುರುಷಶರೀರಿಯಾದ ಪರಮಾತ್ಮನೇ, ಸ್ಥೂಲಪ್ರಕೃತಿ ಪುರುಷವಿಶಿಷ್ಟನಾದ ಪ್ರಪಂಚರೂಪದಿಂದ ಪರಿಣಾಮಹೊಂದಿರುವನು. ಆದುದರಿಂದ ಪ್ರಕೃತಿ, ಜೀವ, ಈಶ್ವರರೆಂಬ ಈ ಮೂರು ತತ್ತ್ವಗಳ ಪರಿಣಾಮದಲ್ಲಿಯೂ ಮೂರುಬಗೆಯ ವ್ಯತ್ಯಾಸವುಂಟು ಪ್ರಕೃತಿಯಲ್ಲಿ ರೂಪದ ಬದಲಾವಣೆ, ಜೀವನಲ್ಲಿ ಸ್ವಭಾವದ ಬದಲಾವಣೆ, ಈಶ್ವರನಲ್ಲಿ ನಿಯಮಕ್ರಮದ ಬದಲಾವಣೆಯೆಂದು ಭೇದವನ್ನು ಗ್ರಹಿಸಬೇಕು. ಮತ್ತು ವಸ್ತ್ರದಲ್ಲಿರುವ ನೂಲಿನ ಕಪ್ಪು, ಬಿಳುಪು ಮೊದಲಾದ ಬಣ್ಣಗಳು ವಸ್ತ್ರದಲ್ಲಿ ಕಂಡರೂ, ಆನೂಲನ್ನು ಬಿಟ್ಟು ಬೇರೆಕಡೆಗಳಿಗೆ ಹರಡದಂತೆ ಪ್ರಕೃತಿಜೀವಗಳ ಪರಿಣಾಮಗುಣಗಳು ಪರಮಾತ್ಮನಲ್ಲಿ ಸೇರಲಾರವೆಂದು ಗ್ರಾಹ್ಯವು.

ಸಿದನು. ಆಮೇಲೆ ಪಂಚಭೂತಗಳಿಂದಲೂ, ಏಕಾದಶೇಂದ್ರಿಯಗಳಿಂದಲೂ, ಸತ್ತ್ವ ರಜಸ್ತಮೋಗುಣಗಳಿಂದಲೂ ಕೂಡಿದ ದೇವಮನುಷ್ಯಾದಿ ಪ್ರಪಂಚಗಳನ್ನು ಸೃಷ್ಟಿಸಬೇಕೆಂದೆಣಿಸಿ, ಅದಕ್ಕೆ ತಕ್ಕ ಆಕಾರದಿಂದ ತಾನೂ ಗೋಚರಿಸಿದನು. ಮತ್ತು ಆ ಪರಮಪುರುಷನು ತಾನು ಆ ಅಂಡದಲ್ಲಿ ಮಾತ್ರವೇ ಅಡಗಿರದೆ, ಸೂರ್ಯನು ಘಟಾದಿವಸ್ತುಗಳಲ್ಲಿ ತನ್ನ ಕಿರಣಗಳಿಂದ ಒಳಹೊಕ್ಕು, ಅವುಗಳ ಒಳಭಾಗದಲ್ಲಿ ಮಾತ್ರವೇ ಅಡಗಿರದೆ, ತನ್ನ ಕಿರಣಗಳಿಂದ ಅವುಗಳ ಹೊರಭಾಗವನ್ನೂ ವ್ಯಾಪಿಸಿ ನಿಲ್ಲುವಂತೆ, ಭಗವಂತನೂ ಕೂಡ ಆ ಅಂಡವೆಲ್ಲವನ್ನೂ ತನ್ನ ಸ್ವರೂಪದಿಂದ ವ್ಯಾಪಿಸಿದನು. ಆದುದರಿಂದ ಭಗವಂತನು ಆ ಪ್ರಕೃತಿಗಿಂತಲೂ ವಿಲಕ್ಷಣನಾಗಿಯೂ, ತನಗೆ ಶರೀರಭೂತಗಳಾದ ಚೇತನಾಚೇತನಗಳಲ್ಲಿರುವ ದೋಷಗಳಿಗೆ ಭಾಗಿಯಾಗದೆಯೂ ಇರುವನೆಂದು ತಿಳಿ! "ಆದರೆ ಸಮಸ್ತವೂ ಆ ಪುರುಷಸ್ವರೂಪವೇ ಆಗಿದ್ದ ಪಕ್ಷದಲ್ಲಿ, ಯಜ್ಞಯಾಗಾದಿಗಳೂ, ಅವುಗಳನ್ನು ನಡೆಸುವುದಕ್ಕೆ ಬೇಕಾದ ಸಾಧನಸಾಮಗ್ರಿಗಳೂ, ಅವನಿಂತಲೂ ಬೇರೆಯಾಗಿರುವುವೆಂದು ಹೇಳುವುದಕ್ಕಿಲ್ಲವಷ್ಟೆ? ಹಾಗಿದ್ದರೆ ಆ ಯಾಗಾದಿಗಳಿಂದ ಅವನನ್ನು ಆರಾಧಿಬೇಕೆಂಬುದು ಹೇಗೆ" ಎಂದು ನಿನಗೆ ಶಂಕೆಯುಂಟಾಗಬಹುದು. ಅದಕ್ಕೂ ಸಮಾಧಾನವನ್ನು ಹೇಳುವೆನು ಕೇಳು. ಆ ಪರಮಪುರುಷನು ಅಸಾಧಾರಣಮಹಿಮೆಯುಳ್ಳವನು. ಮೊದಲು ಆವಿರಾಟ್ಪುರುಷನ ನಾಭಿಕಮಲದಿಂದ ಚತುರ್ಮುಖನಾದ ನಾನು ಹುಟ್ಟಿದೆನು. ಅವನನ್ನು ಯಾಗಗಳಿಂದ ಆರಾಧಿಸಬೇಕೆಂದು ನನ್ನ ಮನಸ್ಸಿಗೆ ತೋರಿತು. ಆಗ ಪರಮಪುರುಷನ ಅವಯವಗಳ ಹೊರತು ಬೇರೆ ಯಾವ ಯಾಗೋಪಕರಣಗಳೂ ನನಗೆ ಗೋಚರಿಸಲಿಲ್ಲ. ನಾನು ಇದಕ್ಕಾಗಿ ಚಿಂತಿಸುತ್ತ, ಆ ಪರಮಪುರುಷನ ಅವಯವಗಳನ್ನೇ ಮನಸ್ಸಿನಲ್ಲಿ ದೃಢವಾಗಿ ನಿಲ್ಲಿಸಿಕೊಂಡು ಧ್ಯಾನಿಸುತ್ತಿದ್ದೆನು. ಆ ಅವಯವಗಳೇ ನನಗೆ ಯಾಗೋಪಕರಣಗಳಾಗಿ ಒದಗಿ ಬಂದುವು. ಯಜ್ಞಕ್ಕೆ ತಕ್ಕ ಪಶುಗಳೂ, ಯೂಪಸ್ತಂಭ ಮೊದಲಾದುವುಗಳಿಗೆ ಉಪಯೋಗಪಡುವ ವೃಕ್ಷಗಳೂ, ಇದೋ ನಾನಿರುವ ಈ ಯಾಗಭೂಮಿಯೂ, ಯಾಗಕ್ಕೆ ತಕ್ಕ ವಸಂತಾದಿಕಾಲವೂ, ಪುರೋಡಾಶ ಮೊದಲಾದ ವಸ್ತುಗಳೂ, ಅದಕ್ಕೆ ಬೇಕಾದ ಬತ್ತ, ಗೋಧುವೆ, ಮುಂತಾದ ಔಷಧಿಗಳೂ, ತುಪ್ಪ ಮೊದಲಾದುವೂ, ಸೋಮರಸ ಮೊದಲಾದ ರಸಗಳೂ, ಸ್ವರ್ಣಾದಿಲೋಹಗಳೂ, ಕಪಾಲಮೊದಲಾದುವುಗಳಿಗೆ ಬೇಕಾದಮಣ್ಣು, ನೀರು ಮುಂತಾದುವೂ, ಋಗ್ಯಜುಸ್ಸಾಮಗಳೆಂಬ ವೇದಗಳೂ, ಚತುರ್ಹೋತೃಮಂತ್ರಗಳಿಂದ ಪ್ರಕಾಶಿತಗಳಾದ ಕರ್ಮಗಳೂ, ಜ್ಯೋತಿಷ್ಟೋಮಾದಿ

ನಾಮಗಳೂ, ಸ್ವಾಹಾಕಾರವೇ ಮೊದಲಾದ ಮಂತ್ರಗಳೂ, ದಕ್ಷಿಣೆಗಳೂ, ವ್ರತಗಳೂ, ದೇವತಾನುಕ್ರಮವೂ, ಪ್ರಯೋಗವಿಧಿಗಳೂ, ಸಂಕಲ್ಪವೂ ಕ್ರಿಯಾಕಲಾಪಗಳೂ, ವಿಷ್ಣುಕ್ರಮವೇ ಮೊದಲಾದ ಗತಿಗಳೂ, ದೇವತಾಧ್ಯಾನಗಳೂ, ಶ್ರದ್ಧೆಯೂ ಪ್ರಾಯಶ್ಚಿತ್ತಗಳೂ, ಕರ್ಮಸಮರ್ಪಣವೂ, ಇನ್ನೂ ಯಾಗಕ್ಕೆ ಯಾವಯಾವ ಅಂಗಗಳುಂಟೋ ಅವೆಲ್ಲವನ್ನೂ ನಾನು ಆ ಭಗವಂತನ ಅವಯವಗಳಿಂದ ಸಮಸ್ತಯಾಗಸಾಧನಗಳನ್ನೂ ಕಲ್ಪಿಸಿಕೊಂಡೆನು. ಹೀಗೆ ನಾನೇ ವಿರಾಟ್ಪುರುಷನ ಅವಯವಗಳಿಂದ ಸಮಸ್ತಯಾಗಸಾಧನಗಳನ್ನೂ ಕಲ್ಪಿಸಿಟ್ಟುಕೊಂಡು, ಅವುಗಳಿಂದ ಆತನ ಪ್ರೀತಿಗಾಗಿ ಯಾಗಗಳನ್ನು ನಡೆಸಿ ಅವನನ್ನಾರಾಧಿಸಿದೆನು. ಆಗ ನಿನ್ನ ಒಡಹುಟ್ಟಿದವರಾದ ಮರೀಚಿಮೊದಲಾದ ಈ ಒಂಬತ್ತು ಮಂದಿ ಪ್ರಜಾಧಿಪತಿಗಳೂ, ನಾನು ಮಾಡಿದ ಯಾಗವನ್ನು ನೋಡಿ, ಬಹಳ ಭಕ್ತಿಯುಕ್ತರಾಗಿ, ಸ್ವಸ್ವರೂಪದಿಂದ ಕಣ್ಣಿಗೆ ಕಾಣದಿದ್ದರೂ ಇಂದ್ರಾದಿರೂಪದಿಂದ ಗೋಚರಿಸುತ್ತಿದ್ದ ಆ ಪರಮಪುರುಷನನ್ನು ಯಾಗಗಳಿಂದಾರಾಧಿಸಿದರು. ಆಮೇಲೆ ಮನುಗಳೂ ಕೂಡ ಅದನ್ನು ನೋಡಿ ತಮತಮಗೆ ಅನುಕೂಲವಾದ ಕಾಲಗಳಲ್ಲಿ ಯಾಗಗಳನ್ನು ನಡೆಸಿ ಸರ್ವಾಂತರ್ಯಾಮಿಯಾದ ಆ ಭಗವಂತನನ್ನಾರಾಧಿಸಿದರು. ಅದರಂತೆ ದೇವದಾನವರೂ, ರಾಜರೂ, ಮುನೀಶ್ವರರೂ, ದೃಢವಾದ ನಿಯಮದಿಂದ ಭಗವದಾರಾಧನಗಳನ್ನು ನಡೆಸಿದರು. ಹಾಗೆಯೇ ವಿಷ್ಣುಪ್ರೀತಿಗಾಗಿ ಇನ್ನೂ ಅನೇಕರು ಯಜ್ಞವನ್ನು ನಡೆಸುತ್ತಿರುವರು. ಪ್ರಕೃತಿಸಂಬಂಧವಾದ ಗುಣಗಳಿಲ್ಲದ ಪರಮಾತ್ಮನು, ತನ್ನಲ್ಲಿ ಸೂಕ್ಷ್ಮರೂಪದಿಂದ ಸೇರಿದ್ದ ಜಗತ್ತನ್ನು ಸೃಷ್ಟಿಸುವುದಕ್ಕಾಗಿಯೇ, ಮಾಯಾಗುಣಗಳಾದ ಸತ್ವರಜಸ್ತಮೋಗುಣಗಳನ್ನು ಸ್ವೀಕರಿಸಿ, ಸೃಷ್ಟಿಕಾರ್ಯಕ್ಕೆ ನನ್ನನ್ನು ನಿಯಮಿಸಲು, ನಾನು ಆತನ ಅನುಮತಿಯಿಂದ ಲೋಕಗಳನ್ನು ಸೃಷ್ಟಿಸುತ್ತಿರುವೆನು. ರುದ್ರನೂ ಕೂಡ ನನ್ನಂತೆಯೇ ಆತನ ಆಜ್ಞಾಧೀನನಾಗಿ ಈ ಪ್ರಪಂಚದ ಸಂಹಾರಕಾರ್ಯವನ್ನು ನಡೆಸುತ್ತಿರುವನು. ಆ ಭಗವಂತನು ತಾನೇ ವಿಷ್ಣುವಾಗಿ ಅವತರಿಸಿ ಈ ಪ್ರಪಂಚವನ್ನು ರಕ್ಷಿಸುತ್ತ ಬರುವನು. ಬ್ರಹ್ಮರುದ್ರರಲ್ಲಿ ಅಂತರ್ಯಾಮಿಯಾಗಿದ್ದು ಸೃಷ್ಟಿಸಂಹಾರಗಳನ್ನೂ, ನಿಜಸ್ವರೂಪದಿಂದ ರಕ್ಷಣಕಾರ್ಯವನ್ನೂ ಆ ಪರಮಪುರುಷನು ತಾನಾಗಿ ನಡೆಸುತ್ತಿರುವನು. ಹೀಗೆ ಸೃಷ್ಟಿ ಸ್ಥಿತಿ ಸಂಹಾರಗಳೆಂಬ ಈ ಮೂರುಕಾರ್ಯಗಳನ್ನು ನಡೆಸತಕ್ಕ ಮೂರುಶಕ್ತಿಯೂ ಅವನೊಬ್ಬನಲ್ಲಿರುವುದೇ ಹೊರತು, ಚೇತನಾಚೇತನರೂಪವಾದ ಪ್ರಪಂಚದಲ್ಲಿ ಆ ಭಗವಂತನಿಗಿಂತಲೂ ಬೇರೆಯಾದ

ಸ್ವತಂತ್ರವಸ್ತುವಾಗಲಿ, ಅವನಿಗೆ ಮೇಲಾದುದಾಗಲಿ, ಅವನಿಗೆ ಸಮವಾದುದಾಗಲಿ, ಯಾವುದೊಂದೂ ಇಲ್ಲವೆಂದು ತಿಳಿ! ಇದನ್ನು ನೀನು ದೃಢವಾಗಿ ನಂಬು! (ನೀನು ಆ ಭಗವಂತನ ನಿಜಸ್ಥಿತಿಯನ್ನು ಇನ್ನೂ ಚೆನ್ನಾಗಿ ತಿಳಿಯದವನಾದುದರಿಂದ, ನನ್ನನ್ನೇ ಸೃಷ್ಟಿಕರ್ತನನ್ನಾಗಿ ತಿಳಿದು, ಪ್ರಪಂಚದಲ್ಲಿ ನನಗೆ ಮೇಲೆ ಬೇರೊಬ್ಬರೂ ಇಲ್ಲವೆಂದು ಭ್ರಮೆಗೊಂಡಿರುವಂತಿದೆ! ನನಗೂ ಆತನೇ ಪ್ರಭುವು. ಆತನೇ ನನ್ನಲ್ಲಿ ಅಂತರ್ಯಾಮಿಯಾಗಿದ್ದು ನನ್ನನ್ನು ಆಯಾ ಕಾರ್ಯಗಳಲ್ಲಿ ಪ್ರೇರಿಸುತ್ತಿರುವನು) ನಾರದಾ! ನನ್ನ ಮಾತನ್ನು ಎಂದಿಗೂ ಸುಳ್ಳೆಂದು ತಿಳಿಯಬೇಡ! ನನ್ನ ಮನಸ್ಸಿನ ಭಾವನೆಯೂ ಕೂಡ ಸುಳ್ಳಾಗಲಾರದು! ಆ ಭಗವಂತನ ಗುಣವರ್ಣನಗಳಿಂದುಂಟಾದ ಮಹಿಮೆಯಿಂದ, ನನ್ನ ಬಾಯಲ್ಲಿ ಹೊರಟ ವಾಕ್ಯವೊಂದಾದರೂ ಅಸತ್ಯವಾಗಲಾರದು ನನ್ನ ಇಂದ್ರಿಯಗಳೂ ದುರ್ಮಾರ್ಗಕ್ಕೆ ಹೋಗಲಾರವು. ನಾನು ಶ್ರದ್ಧೆಯಿಂದ ಭಗವದುಪಾಸನವನ್ನು ಮಾಡುತ್ತಿರುವುದೇ ಇವಕ್ಕೆಲ್ಲಾ ಕಾರಣವು. ಆ ಭಗವಂತನ ಅನುಗ್ರಹಬಲದಿಂದಲ್ಲದೆ ನನ್ನ ಶಕ್ತಿಯಿಂದ ಯಾವುದೂ ನಡೆಯಲಾರದು. ವತ್ಸ ನಾರದಾ! ಮತ್ತೊಂದಾಶ್ಚರ್ಯವನ್ನು ಹೇಳುವೆನು ಕೇಳು! ಆ ಭಗವದನುಗ್ರಹದಿಂದ ನಾನು ಎಷ್ಟೋವಿಧದಲ್ಲಿ ಮೇಲ್ಮೆಯನ್ನು ಪಡೆದಿರುವೆನು. ಸಮಸ್ತವೇದಗಳೂ ನನಗೆ ಹೃದ್ಗತವಾಗಿ ನಾನೇ ವೇದಮಯನೆನಿಸಿಕೊಂಡಿರುವೆನು ಅನೇಕ ತಪಸ್ಸುಗಳನ್ನು ಮಾಡಿ ತಪೋಮಯನೆನಿಸಿಕೊಂಡಿರುವೆನು ಮರೀಚಿ ಮೊದಲಾದ ನವಬ್ರಹ್ಮರಿಂದಲೂ ನಾನು ಎಷ್ಟೋ ಗೌರವಪೂರ್ವಕವಾಗಿ ನಮಸ್ಕರಿಸಲ್ಪಡುತ್ತಿರುವೆನು. ಆ ಭಗವದನುಗ್ರಹದಿಂದಲೇ ಜ್ಞಾನಸಂಪತ್ತನ್ನೂ ಪಡೆದಿರುವೆನು. ಅಂತಹ ನಾನು ಎಷ್ಟೋ ಶ್ರದ್ಧೆಯಿಂದ ನಿರ್ವಿಘ್ನವಾದ ಯೋಗವನ್ನವಲಂಬಿಸಿ, ಆ ಭಗವಂತನನ್ನು ಧ್ಯಾನಿಸುತ್ತಿದ್ದರೂ, ತನ್ನ ಮಾಯಾಪ್ರಭಾವದಿಂದ ಇತರರಿಗೆ ಯಥಾಸ್ಥಿತವಾಗಿ ತನ್ನ ನಿಜವನ್ನು ಕಾಣಿಸದ ಆ ಭಗವಂತನ ಸ್ವರೂಪಗುಣಗಳನ್ನು ನಾನೂ ಹೀಗೆಂದು ನಿಶ್ಚಯಿಸಿ ತಿಳಿಯಲಾರದಿರುವೆನು. ನನ್ನ ಸ್ಥಿತಿಯೇ ಹೀಗಿರುವಾಗ ಇತರಜೀವರಾಶಿಗಳು ಹೇಗೆತಾನೇ ಆತನ ನಿಜಸ್ಥಿತಿಯನ್ನು ತಿಳಿಯಬಲ್ಲುವು? ತನ್ನನ್ನು ಮರೆಹೊಕ್ಕವರಿಗೆ ಸಂಸಾರಭಯವನ್ನು ತಪ್ಪಿಸಿ, ಶುಭವನ್ನು ಕೈಗೂಡಿಸತಕ್ಕವುಗಳಾಗಿಯೂ, (ಶುಭಾಶ್ರಯಗಳಾಗಿಯೂ) ಇರುವ ಆ ಭಗವಂತನ ಪಾದಾರವಿಂದಗಳನ್ನು ನಾನು ದೃಢಮನಸ್ಸಿನಿಂದ ನಂಬಿನಿಂತಿರುವೆನು. ವಾಯುವನ್ನು ಗ್ರಹಿಸುವುದು ಹೇಗೆ ಅಸಾಧ್ಯವೋ, ಹಾಗೆ ಸ್ವಮಾಯೆಯನ್ನು ತಾನೇ ಹಿಡಿದಿರುವ ಆತನ ನಿಜಸ್ಥಿತಿಯನ್ನು ಗ್ರಹಿಸಲು ನಾನೂ ಸಮರ್ಥ

ನಲ್ಲ! ನೀವೂ ಸಮರ್ಥರಲ್ಲ! ರುದ್ರನಾದರೂ ಅದನ್ನು ತಿಳಿಯಲಾರನು! ಇಂತಹ ಜ್ಞಾನಿಗಳಿಗೇ ಅಗೋಚರನಾದ ಆ ಪರಮಪುರುಷನ ನಿಜಸ್ಥಿತಿಯನ್ನು ತಿಳಿಯಬೇಕಾದರೆ, ಸಾಮಾನ್ಯರಾದ ಬೇರೆ ದೇವತೆಗಳಿಂದಾಗಲಿ, ಮನುಷ್ಯರಿಂದಾಗಲಿ ಸಾಧ್ಯವೇ? ಎಂದಿಗೂ ಸಾಧ್ಯವಲ್ಲ! ನಮ್ಮೆಲ್ಲರನ್ನೂ ಆ ಭಗವಂತನ ಮಾಯೆಯು ಆವರಿಸಿಕೊಂಡಿರುವುದರಿಂದ, ನಾವೊಬ್ಬರೂ ನಿಜವನ್ನರಿಯಲಾರದೆ, ಅವನಿಂದ ನಿರ್ಮಿತವಾದ ಅಚೇತನವಾದ ಈ ಶರೀರವನ್ನೂ ಆತ್ಮವೆಂದೇ ಭ್ರಮಿಸುತ್ತಿರುವೆವು. ನಮ್ಮ ದೇಹಕ್ಕೂ, ಆತ್ಮಕ್ಕೂ ಇರುವ ಭೇದವನ್ನೇ ತಿಳಿದುಕೊಳ್ಳಲಾರದ ನಮಗೆ, ಆ ಪರಮಾತ್ಮನ ತತ್ತ್ವವನ್ನು ತಿಳಿಯಬೇಕೆಂದರೆ ಹೇಗೆ ತಾನೇ ಸಾಧ್ಯವು? "ಆದರೆ ಆ ಮಾಯೆಯ ಸಂಬಂಧವನ್ನು ತಪ್ಪಿಸಿಕೊಳ್ಳುವುದಕ್ಕೆ ನಮಗೆ ಉಪಾಯವೇನೂ ಇಲ್ಲವೆ?" ಎಂದು ನೀನು ಕೇಳಬಹುದು. ಅದಕ್ಕೂ ಸುಲಭೋಪಾಯಗಳು ಕೆಲವುಂಟು. ನಮ್ಮಂತಿರುವವರೆಲ್ಲರೂ ಆ ಭಗವಂತನ ಅವತಾರಚರಿತ್ರೆಗಳನ್ನು ಕೀರ್ತಿಸಿ ಗಾನ ಮಾಡುವುದೊಂದೇ ನಮ್ಮನ್ನು ನಾವು ಉದ್ಧರಿಸಿಕೊಳ್ಳುವುದಕ್ಕೆ ಬೇಕಾದ ಮುಖ್ಯೋಪಾಯವು ಅವನ ನಿಜಸ್ಥಿತಿಯನ್ನು ಬೇರೆ ನಾವು ತಿಳಿಯಲಾರೆವು, ಅವನ ಅವತಾರಚರಿತ್ರೆಗಳನ್ನು ನಾವು ಭಕ್ತಿಯಿಂದ ಕೀರ್ತಿಸುತ್ತಿದ್ದು, ಅದರಿಂದಲೇ ನಾವು ಅವನ ಮಾಯೆಯನ್ನು ತಪ್ಪಿಸಿಕೊಳ್ಳಬೇಕೇ ಹೊರತು ಉಪಾಯಾಂತರವಿಲ್ಲ. ಅಂತಹ ಮಹಾಮಹಿಮೆಯುಳ್ಳ ಭಗವಂತನಿಗೆ ಈಗ ನಾವು ಮಾಡಬೇಕಾದುದು, ಇದೋ! ನಮ್ಮಿಂದ ಸುಲಭವಾಗಿ ಸಾಧ್ಯವಾದ ಈ ನಮಸ್ಕಾರವು ಹೊರತು ಬೇರೆಯಿಲ್ಲ. ನಾರದಾ! ಇದರಲ್ಲಿರುವ ಒಂದು ರಹಸ್ಯವನ್ನು ಹೇಳುವೆನು ಕೇಳು. ಕರ್ಮಾಧೀನವಾದ ಈ ಜಗತ್ತಿಗೆಲ್ಲಕ್ಕೂ ಕಾರಣಭೂತನಾದ ಆ ಪರಮಪುರುಷನು, ಪ್ರತಿಕಲ್ಪದಲ್ಲಿಯೂ ತಾನೇ ಕರ್ತನಾಗಿದ್ದು, ತನ್ನನ್ನೇ ಆಧಾರವಾಗಿ ಮಾಡಿಕೊಂಡು, ತನ್ನಿಂದ, ತನ್ನನ್ನೇ ತಾನು ಸೃಷ್ಟಿಸುತ್ತ, ಅದನ್ನು ತಾನೇ ರಕ್ಷಿಸುತ್ತ, ತಾನೇ ಕೊಲ್ಲುತ್ತಲೂ ಇರುವನು. "ಆದರೆ ಈ ಜಗದ್ವ್ಯಾಪಾರವೆಂಬುದು ಭಗವಂತನಿಗೆ ಕರ್ಮಾಧೀನವಾಗಿ ಬಂದುದೇ ಅಥವಾ ಅವನು ಲೀಲಾರ್ಥವಾಗಿ ನಡೆಸುವನೆ?" ಎಂದು ನೀನು ಶಂಕಿಸಬಹುದು. ಈ ಕಾರ್ಯವು ಅವನಿಗೆ ಕರ್ಮಾಧೀನವಾದುದಲ್ಲ. ಆತನಿಗೆ ಪುಣ್ಯಪಾಪಕರ್ಮಗಳ ಸಂಬಂಧವೇ ಇರುವುದಿಲ್ಲ. ಆದುದರಿಂದ ಜೀವಾತ್ಮನ ವ್ಯಾಪಾರಗಳಂತೆ ಇದು ಅವನಿಗೆ ಕರ್ಮಾಧೀನವಲ್ಲ. ಆತನು ಕೇವಲ ಜ್ಞಾನಸ್ವರೂಪನು. ಸ್ವಯಂಪ್ರಕಾಶವುಳ್ಳವನು. ಜೀವನಂತೆ ಅವನು ಬೇರೊಂದರ ಆಧಾರವನ್ನಪೇಕ್ಷಿಸುವವನಲ್ಲ. ಸ್ವರೂಪದಿಂದಾಗಲಿ, ಗುಣದಿಂದಾಗಲಿ ವಿಕಾರಹೊಂದುವವನಲ್ಲ! ಪೂರ್ಣಕಾಮ

ನಾದುದರಿಂದ ಅವನು ಪ್ರಯತ್ನಮಾಡಿ ಪಡೆಯಬೇಕಾದ ಕೋರಿಕೆಗಳೊಂದೂ ಇರುವುದಿಲ್ಲ. ಪ್ರಕೃತಿಸಂಬಂಧವಾದ ಗುಣಗಳೊಂದೂ ಆತನಲ್ಲಿ ಸೇರಲಾರವು. ಆತನು ಉತ್ಪತ್ತಿವಿನಾಶಗಳಿಲ್ಲದವನು. ನಿತ್ಯನು! ಆತನಿಗೆ ಸಮಾನವಾದ ಬೇರೆ ಯಾವ ವಸ್ತುವೂ ಇಲ್ಲ. ಅಂತಹ ಭಗವಂತನ ಸ್ವರೂಪವನ್ನು ಶಾಂತಾತ್ಮರಾಗಿಯೂ, ಜಿತೇಂದ್ರಿಯರಾಗಿಯೂ ಇರುವ ಯೋಗೀಶ್ವರರು ಕುಯುಕ್ತಿಗೊಳಗಾಗದ ತಮ್ಮ ಊಹೆಗಳಿಂದ ತಾವೇ ತಿಳಿದುಕೊಳ್ಳುವರು ಇಷ್ಟೇ ಹೊರತು ಕುತರ್ಕಗಳನ್ನು ಮಾಡತಕ್ಕವರಿಗೆ ಮಾತ್ರ ಆತನ ನಿಜಸ್ಥಿತಿಯು ತಿಳಿಯಲಾರದು. ನ್ಯಾಯಕ್ಕೀಡಾಗದ ಕುಯುಕ್ತಿಗಳಿಂದ ಆ ಪರಮಾತ್ಮನ ಸ್ವರೂಪವನ್ನು ಚರ್ಚಿಸತೊಡಗಿ ತೊಂದರೆಗೊಳಿಸುವವರಿಗೆ, ಆತನ ತತ್ವವು ಅಗೋಚರವಾಗಿಯೇ ಹೋಗುವುದು. ನಾರದಾ! ಇನ್ನು ಆ ಭಗವಂತನ ಅವತಾರಕ್ರಮಗಳನ್ನು ಹೇಳುವೆನು ಕೇಳು ವಿರಾಟ್ಪುರುಷನೇ ಆತನ ಪ್ರಥಮಾವತಾರವು. ಕಾಲವೂ, ಪ್ರಕೃತಿಯಲ್ಲಿರುವ ಪರಿಣಾಮಸ್ವಭಾವವೂ, ಚೇತನಾಚೇತನಗಳೂ, ಮನಸ್ಸೂ, ಸ್ಥೂಲಸೂಕ್ಷ್ಮದ್ರವ್ಯಗಳೂ, ಭೂಮಿ ಮೊದಲಾದ ಪ್ರಕೃತಿಯಿಂದುಂಟಾಗತಕ್ಕ ವಿಕಾರಗಳೂ, ಸತ್ವರಜಸ್ತಮೋಗುಣಗಳೂ, ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೂ, ಅಂತರಿಕ್ಷವೂ, ಸ್ವರ್ಗವೂ, ಸ್ಥಾವರಜಂಗಮಗಳೂ, ನಾನೂ, ರುದ್ರನೂ ಯಜ್ಞರೂಪನಾದ ವಿಷ್ಣುವೂ, ದಕ್ಷಾದಿ ಪ್ರಜಾಪತಿಗಳೂ, ನಿನ್ನಂತಹ ಋಷಿಗಳೂ, ಇಂದ್ರಾದಿದೇವತೆಗಳೂ, ಪಕ್ಷಿಶ್ರೇಷ್ಠರೂ, ಪಾತಾಳಲೋಕಾಧಿಪತಿಗಳಾದ ವಾಸುಕಿ ಮೊದಲಾದವರೂ, ಭೂಲೋಕಕ್ಕೊಡೆಯರಾದ ರಾಜರೂ, ಯಕ್ಷಗಂಧರ್ವವಿದ್ಯಾಧರರೂ, ಚಾರಣರೂ, ರಾಕ್ಷಸರೂ, ನಾಗರೂ, ಗಜಪತಿಗಳೂ, ಋಷಿಗಳಲ್ಲಿ ಮೇಲ್ಮೆಯುಳ್ಳವರೂ. ಪಿತೃದೇವತೆಗಳಲ್ಲಿ ಪ್ರಧಾನರೂ, ದೈತ್ಯದಾನವ ಸಿದ್ಧೇಶ್ವರರೂ, ಭೂತಪ್ರೇತಪಿಶಾಚಾಧಿಪತಿಗಳೂ, ಜಲಚರಸ್ಥಲಚರಗಳಲ್ಲಿ ಪ್ರಧಾನರೆನಿಸಿ ಕೊಂಡವರೂ, ಮೃಗಶ್ರೇಷ್ಠಗಳೂ, ಇವರೆಲ್ಲರೂ ಆ ಭಗವಂತನ ವಿಭೂತಿಗಳೆಂದೇ ತಿಳಿ! ಇಷ್ಟುಮಾತ್ರವೇ ಅಲ್ಲದೆ, ಲೋಕದಲ್ಲಿ ಯಾವುದು ಐಶ್ವರ್ಯವುಳ್ಳುದೋ, ಯಾವುದು ತೇಜಸ್ಸುಳ್ಳುದೋ, ಯಾವಯಾವುದರಲ್ಲಿ ಧೈರ್ಯೋತ್ಸಾಹ ವೇಗಗಳ ಅತಿಶಯವುಂಟೋ, ಯಾವುದರಲ್ಲಿ ಧಾರಣಾಸಾಮರ್ಥ್ಯವಿರುವುದೋ, ಯಾವುದರಲ್ಲಿ, ಬಲ, ತಾಳ್ಮೆ, ಮುಂತಾದ ಗುಣಗಳುಂಟೋ, ಆ ವಸ್ತುಸಮುದಾಯಗಳೆಲ್ಲವೂ ಭಗವಂತನ ವಿಭೂತಿಗಳೆಂದೇ ತಿಳಿ! ಮತ್ತು, ಕಾಂತಿ, ಲಜ್ಜೆ, ಅಧಿಕಾರ ಸಂಪತ್ತು, ಬುದ್ಧಿ, ಇವುಗಳನ್ನುಳ್ಳ ಸಮಸ್ತ ವಸ್ತುಗಳೂ, ಅತ್ಯಾಶ್ಚರ್ಯಕ್ಕೆಡೆ

ಯಾದುವುಗಳೂ, ಇವೆಲ್ಲವೂ, ಕರ್ಮಸಂಬಂಧವಿಲ್ಲದೆ ತನಗೆ ತಾನೇ ಸ್ವೇಚ್ಛೆಯಿಂದ ದಿವ್ಯಮಂಗಳವಿಗ್ರಹವನ್ನು ಧರಿಸಿದ ಆ ವಿರಾಟ್ಪುರುಷನ ವಿಭೂತಿಗಳೆಂದೇ ತಿಳಿ! ನಾರದಾ! ಈ ಬಗೆಯ ಸ್ವರೂಪವುಳ್ಳ ವಿರಾಟ್ಪುರುಷನೇ ಭಗವಂತನ ಮೊದಲನೆಯ ಅವತಾರವು. ಇನ್ನೂ ಆತನ ಅವತಾರಗಳು ಎಣಿಸಲಾರದಷ್ಟು ಅನಂತವಾಗಿರುವುವು. ಆ ಮಹಾಪುರುಷನ ಆಯಾ ಅವತಾರಗಳಲ್ಲಿ ನಡೆಸಿದ ಅದ್ಭುತ ಕಾರ್ಯಗಳನ್ನು ಇಷ್ಟೆಂದು ನಿರ್ಣಯಿಸುವುದಕ್ಕೂ ಸಾಧ್ಯವಿಲ್ಲ. ಆದುದರಿಂದ ಆ ಅವತಾರಗಳಲ್ಲಿ ಪ್ರಸಿದ್ಧವಾದ ಕೆಲವನ್ನು ಮಾತ್ರ ನಿನಗೆ ತಿಳಿಸುವೆನು ಕೇಳು. ಅಸತ್ಕಥೆಗಳನ್ನು ಕೇಳುವುದರಿಂದ ಕಿವಿಗಳಿಗುಂಟಾದ ಮಾಲಿನ್ಯವನ್ನು ನೀಗಿಸತಕ್ಕವುಗಳಾಗಿಯೂ, ಕರ್ಣಾಮೃತಪ್ರಾಯವಾಗಿಯೂ ಇರುವ ಆ ಭಗವಂತನ ಅವತಾರಚರಿತ್ರೆಗಳಲ್ಲಿ, ಪ್ರಧಾನವಾದ ಕೆಲವನ್ನು ಮಾತ್ರ ಮಹರ್ಷಿಗಳು ಹೇಳಿರುವರು. ಅವುಗಳನ್ನು ನಿನಗೂ ಕ್ರಮವಾಗಿ ಹೇಳುವೆನು. ಆ ಕಥಾಮೃತಗಳನ್ನು ನೀನೂ ಪಾನಮಾಡುವವನಾಗು !'' ಇಲ್ಲಿಗೆ ಆರನೆಯ ಅಧ್ಯಾಯವು

---

ಬ್ರಹ್ಮದೇವನು ನಾರದನಿಗೆ ಭಗವದವತಾರಗಳನ್ನೂ,
ಆಯಾ ಅವತಾರಗಳಲ್ಲಿ ನಡೆದ ಕಾರ್ಯಗಳನ್ನೂ,
ಅವತಾರಪ್ರಯೋಜನಗಳನ್ನೂ ತಿಳಿಸಿದುದು.

ವರಾಹಾವತಾರವು

ನಾರದಾ ! ಎಣೆಯಿಲ್ಲದ ಮಹಾಮಹಿಮೆಯುಳ್ಳ ಭಗವಂತನ ಮುಂದಿನ ಅವತಾರ ಚರಿತ್ರಗಳನ್ನು ಕ್ರಮವಾಗಿ ಹೇಳುವೆನು ಕೇಳು! ಪೂರ್ವದಲ್ಲಿ ದಿತಿಗೆ ಹಿರಿಯ ಮಗನಾದ ಹಿರಣ್ಯಾಕ್ಷನೆಂಬ ರಾಕ್ಷಸನು ಮದೋನ್ಮತ್ತನಾಗಿ ಈ ಭೂಮಂಡಲವನ್ನು ಚಾಪೆಯಂತೆ ಸುತ್ತಿಕೊಂಡು, ಸಮುದ್ರದೊಳಗೆ ಪ್ರವೇಶಿಸಲು, ಇದನ್ನು ಕಂಡು, ದಯಾಸಾಗರನಾದ ಭಗವಂತನು, ಭೂಮಿಯನ್ನುದ್ಧರಿಸಬೇಕೆಂಬುದಕ್ಕಾಗಿ, ಸಮಸ್ತಯಜ್ಞಸ್ವರೂಪವಾದ ವರಾಹಾಕೃತಿಯನ್ನು ತಾಳಿ, ಇಂದ್ರನು ಪರ್ವತವನ್ನು ಭೇದಿಸುವಂತೆ, ತನ್ನ ಕೋರೆದಾಡೆಯಿಂದ ಆ ದೈತ್ಯನನ್ನು ಕೊಂದು, ನೀರಿನಲ್ಲಿ ಮುಳುಗಿದ್ದ ಭೂಮಿಯನ್ನುದ್ಧರಿಸಿದನು. ಇದನ್ನು ವರಾಹಾವತಾರವೆನ್ನುವರು.

---

## ಸುಯಜ್ಞಾವತಾರವು

ಆಮೇಲೆ ಮತ್ತೊಂದುಕಾಲದಲ್ಲಿ, ರುಚಿಯೆಂಬ ಪ್ರಜಾಧಿಪತಿಗೆ ಆಕೂತಿಯೆಂಬ ಭಾರ್ಯೆಯಲ್ಲಿ ಸುಯಜ್ಞನೆಂಬ ಹೆಸರಿಂದ ಹುಟ್ಟಿದನು. ಈ ಅವತಾರದಲ್ಲಿ ತನಗೆ ಭಾರ್ಯೆಯಾದ ದಕ್ಷಿಣಾದೇವಿಯಲ್ಲಿ ಯಮವೆಂಬ ಇಂದ್ರಿಯನಿಗ್ರಹಶಕ್ತಿಯುಳ್ಳವರಾದುದರಿಂದ ಯಾಮರೆಂದು ಹೆಸರುಗೊಂಡ ಹನ್ನೆರಡುಮಂದಿ ದೇವತೆಗಳನ್ನು ಹಡೆದನು. ಆಕೂತಿಪುತ್ರನಾದ ಈತನೇ ಆಮೇಲೆ ಇಂದ್ರನೆನಿಸಿಕೊಂಡು, ಸಮಸ್ತಲೋಕಗಳ ಬಾಧೆಗಳನ್ನೂ ಪರಿಹರಿಸಿದನು. ಇದನ್ನು ನೋಡಿ ಇವನಿಗೆ ಮಾತಾಮಹನಾದ ಸ್ವಾಯಂಭುವಮನುವು, ಆ ಸುಯಜ್ಞನ ಕಾರ್ಯಕ್ಕಾಗಿ ಸಂತೋಷಿಸಿ, ಲೋಕಾರ್ತಿಹರನಾದ ಈತನಿಗೆ ಹರಿಯೆಂಬ ಹೆಸರನ್ನೂ ಕೊಟ್ಟನು. ಹೀಗೆ ದೇವತೆಗಳ ಉತ್ಪತ್ತಿಗೂ, ಲೋಕಬಾಧೆಯ ನಿವೃತ್ತಿಗೂ ಕಾರಣವಾದ ಈ ಅವತಾರದಲ್ಲಿ, ಈತನಿಗೆ ಸುಯಜ್ಞನೆಂದೂ, ಹರಿಯೆಂದೂ ನಾಮಭೇದವುಂಟಾಯಿತು.

---

## ಕಪಿಲಾವತಾರವು

ಆಮೇಲೆ ಆ ಭಗವಂತನೇ, ಕರ್ದಮಪ್ರಜಾಪತಿಗೆ ದೇವಹೂತಿಯೆಂಬ ಭಾರ್ಯೆಯಲ್ಲಿ ಕಪಿಲರೂಪದಿಂದವತರಿಸಿದನು ಇವನಿಗೆ ಒಂಬತ್ತುಮಂದಿ ಕನ್ಯೆಯರು ಸಹೋದರಿಯರಾಗಿ ಹುಟ್ಟಿದರು. ಹೀಗೆ ಕಪಿಲಾವತಾರವನ್ನೆತ್ತಿದ ಭಗವಂತನು ತನ್ನ ತಾಯಿಯಾದ ದೇವಹೂತಿಗೆ ಸಾಂಖ್ಯವನ್ನುಪದೇಶಿಸಿದನು. ಈ ಉಪದೇಶದಿಂದಲೇ ದೇವಹೂತಿಯೂ ಆತ್ಮಜ್ಞಾನವನ್ನು ಪಡೆದು, ಪಾಪಸಂಬಂಧವನ್ನು ಬಿಟ್ಟು, ಮುಕ್ತಿಯನ್ನು ಹೊಂದಿದಳು ! ಇದೇ ಕಪಿಲಾವತಾರವು.

---

## ದತ್ತಾತ್ರೇಯಾವತಾರವು

ಹಿಂದೆ ಅತ್ರಿಮುನಿಯು ಪುತ್ರನನ್ನು ಪಡೆಯಬೇಕೆಂಬ ಅಭಿಲಾಷೆಯಿಂದ ತಪಸ್ಸುಮಾಡಲು, ಭಗವಂತನು ಅವನ ತಪಸ್ಸಿಗೆ ಮೆಚ್ಚಿ, ಅವನಿಗೆ ಪ್ರತ್ಯಕ್ಷನಾಗಿ ಅವನನ್ನು ಕುರಿತು, "ಎಲೈ ಮಹರ್ಷಿಯೆ? ಇದೊ! ನಾನೇ ನನ್ನನ್ನು ನಿನಗೆ ಪುತ್ರನನ್ನಾಗಿ ಕೊಟ್ಟಿರುವೆನು!" ಎಂದು ಅನುಗ್ರಹಿಸಿದನು. ಹೀಗೆ ತನ್ನನ್ನು

ಅತ್ರಿಗೆ ದತ್ತುಮಗನನ್ನಾಗಿ ಒಪ್ಪಿಸಿದುದರಿಂದ, ಅವನಿಗೆ ದತ್ತಾತ್ರೇಯನೆಂಬ ಪ್ರಸಿದ್ಧಿಯುಂಟಾಯಿತು. ಈ ಅವತಾರದಲ್ಲಿ ಭಗವಂತನು ತನ್ನ ಪಾದಸೇವೆಯನ್ನು ಮಾಡಿ ಪರಿಶುದ್ಧಿಯನ್ನು ಹೊಂದಿದ ಹೈಹಯನೇ ಮೊದಲಾದವರಿಗೆ, ಇಹಲೋಕಸುಖಕ್ಕೆ ಬೇಕಾದ ಅಣಿಮಾದ್ಯಷ್ಟೈಶ್ವರ್ಯಸಿದ್ಧಿಯನ್ನೂ, ಪಾರಲೌಕಿಕವಾದ ಮೋಕ್ಷವನ್ನೂ ಅನುಗ್ರಹಿಸಿದನು. ಈ ದತ್ತಾತ್ರೇಯಾವತಾರದ ಚರಿತ್ರವು ಸರ್ವಲೋಕಪ್ರಸಿದ್ಧವಾಗಿರುವುದು

---

## ಮುನಿಕುಮಾರಾವತಾರವು

ನಾರದಾ! ನಾನು ಪೂರ್ವದಲ್ಲಿ ಲೋಕಸೃಷ್ಟಿಯನ್ನು ಮಾಡಬೇಕೆಂದಪೇಕ್ಷಿಸಿ, ಘೋರವಾದ ತಪಸ್ಸನ್ನು ಮಾಡಿದೆನಷ್ಟೆ? ಇದರಿಂದ ಪ್ರಸನ್ನನಾದ ಭಗವಂತನು ಮೊದಲು ಸನತ್ಕೆಂಬ ಹೆಸರುಳ್ಳ ಕುಮಾರನಾಗಿ ಹುಟ್ಟಿದನು. ಅದರಿಂಬಾಚೆಗೆ ಕ್ರಮವಾಗಿ ಸನಾತನನೆಂದೂ, ಸನಂದನನೆಂದೂ, ಸನಕನೆಂದೂ ಪ್ರಸಿದ್ಧವಾದ ಮೂರುಹೆಸರನ್ನು ಧರಿಸಿ ಮೂವರು ಕುಮಾರರಾಗಿ ಹುಟ್ಟಿದನು. ಸನಕಸನಂದನಾದಿಗಳು ನಾಲ್ವರೂ ಲೋಕದಲ್ಲಿ ಬಹಳ ಖ್ಯಾತಿಯನ್ನು ಹೊಂದಿದರು. ಕಲ್ಪಾಂತದಲ್ಲಿ ಯಾವಪ್ರಾಣಿಯೂ ಇಲ್ಲದೆ ನಾಶಹೊಂದಿದಾಗ, ಮುಂದಿನ ಕಲ್ಪಾದಿಯಲ್ಲಿ ಆತ್ಮತತ್ವವನ್ನು ತಿಳಿಸತಕ್ಕವರೊಬ್ಬರೂ ಇಲ್ಲದೆ ಅದರ ಸಂಪ್ರದಾಯವೇ ಕೆಡುಹಂತಾಯಿತು. ಅದನ್ನು ಮೊದಲು ಲೋಕಕ್ಕೆ ತಿಳಿಸಬೇಕೆಂಬುದಕ್ಕಾಗಿಯೇ ಭಗವಂತನು ಈ ವಿಧವಾದ ನಾಲ್ಕು ರೂಪಗಳಿಂದವತರಿಸಿ ಮೊದಲು ಅದನ್ನುಪದೇಶಿಸಿದನು. ಇವರಿಂದ ಅನೇಕ ಮಹರ್ಷಿಗಳು ತತ್ವಜ್ಞಾನೋಪದೇಶವನ್ನು ಹೊಂದಿ, ಅದನ್ನು ತಮ್ಮ ಶಿಷ್ಯಪರಂಪರೆಯಾಗಿ ಉಪದೇಶಿಸುತ್ತಬಂದರು. ಈ ಸನಕಾದಿಗಳಾದ ನಾಲ್ವರು ಕುಮಾರರೂ ಸಾಕ್ಷಾತ್ತಾಗಿ ವಿಷ್ಣುಕಳೆಯಿಂದ ಒಪ್ಪುತಿದ್ದರು. ಇದನ್ನೇ ಕುಮಾರಾವತಾರವೆಂದೂ ಹೇಳುವರು.

---

## ನರನಾರಾಯಣಾವತಾರವು

ಆ ಮೇಲೆ ಮತ್ತೊಮ್ಮೆ ಭಗವಂತನು ಧರ್ಮನೆಂಬ ಮುನಿಗೆ ದಕ್ಷಪುತ್ರಿಯಾದ ಮೂರ್ತಿಯೆಂಬವಳಲ್ಲಿ ನರನಾರಾಯಣರೆಂಬ ರೂಪದಿಂದ ಜನಿಸಿದನು. ಈ ನರನಾರಾಯಣರ ತಪಶ್ಶಕ್ತಿಯನ್ನು ಹೀಗೆಂದು ನಿರ್ಣಯಿಸುವುದಕ್ಕೂ

ಬೇರೊಬ್ಬರಿಗೆ ಸಾಧ್ಯವಲ್ಲ. ಹೀಗೆ ಎರಡು ರೂಪದಿಂದವತರಿಸಿದ ಭಗವಂತನು, ತಾನು ತಪಸ್ಸುಮಾಡಿ ಉಪಾಸಿಸತಕ್ಕ ದೈವವು ಬೇರೊಂದಿಲ್ಲದೆ, ಇತರ ಸಮಸ್ತ ದೇವತೆಗಳಿಗೂ ತಾನೇ ಉಪಾಸ್ಯದೈವವಾಗಿದ್ದರೂ, ಇತರರಿಗೆ ತಪೋಮಾರ್ಗವನ್ನು ತೋರಿಸಬೇಕೆಂಬುದಕ್ಕಾಗಿಯೇ ಅಸಾಧ್ಯವಾದ ಈ ತಪಸ್ಸನ್ನು ಮಾಡಲಾರಂಭಿಸಿದನು. ಹೀಗೆ ಭಗವಂತನು ನರನಾರಾಯಣರೆಂಬ ಸ್ವರೂಪದಿಂದ ಬದರಿಕಾಶ್ರಮದಲ್ಲಿ ಮಹಾತಪಸ್ಸನ್ನು ಹಿಡಿದು ಕುಳಿತಿದ್ದ ಕಾಲದಲ್ಲಿ, ದೇವೇಂದ್ರನು ಭಯಪಟ್ಟು, ಇವರ ತಪೋಭಂಗಕ್ಕಾಗಿ ಅಪ್ಸರಸ್ತ್ರೀಯರನ್ನು ಪ್ರೇರಿಸಿದನು. ಇಂದ್ರಾಜ್ಞೆಯನ್ನು ಕೇಳಿ ರಂಭೆ, ಮೇನಕೆ, ಮೊದಲಾದ ಅಪ್ಸರಸ್ತ್ರೀಯರು ಮನ್ಮಥನನ್ನು ಮುಂದಿಟ್ಟುಕೊಂಡು ಬಂದು, ತಮ್ಮ ಹಾವಭಾವವಿಲಾಸಗಳಿಂದ ಮೋಹಗೊಳಿಸುವುದಕ್ಕೆ ತೊಡಗಿದರು. ಅವರಲ್ಲಿ ಕೆಲವರು ದೃಢಮನಸ್ಸಿನಿಂದ ಕುಳಿತಿದ್ದ ಆ ಮುನಿಗಳ ಮುಂದೆ ಕಾಮೋದ್ರೇಕವನ್ನುಂಟುಮಾಡುವ ಹಾಸ್ಯವಾಕ್ಯಗಳನ್ನಾಡುತ್ತಿದ್ದರು. ಕೆಲವರು ಇಂಪಾದ ಗಾನವನ್ನಾರಂಭಿಸಿದರು. ಕೆಲವರು ನರ್ತಿಸುವುದಕ್ಕೆ ತೊಡಗಿದರು. ಇಷ್ಟಾದರೂ ಆ ಮಹರ್ಷಿಗಳ ಮನಸ್ಸು ಸ್ವಲ್ಪಮಾತ್ರವೂ ಚಲಿಸಲಿಲ್ಲ. ಒಂದುವೇಳೆ ಕೋಪದಿಂದ ಶಾಪವನ್ನು ಕೊಟ್ಟರೂ ತಮ್ಮ ತಪಸ್ಸಿಗೆ ಭಂಗವುಂಟಾಗುವುದೆಂಬ ಭಾವದಿಂದ ಮನಸ್ಸಿನಲ್ಲಿ ಕೋಪವನ್ನಾದರೂ ವಹಿಸದೆ, ಮನಸ್ಸನ್ನೂ, ಇಂದ್ರಿಯಗಳನ್ನೂ ನಿಗ್ರಹಿಸಿಟ್ಟುಕೊಂಡರು. ನಾರದಾ! ಕೇವಲ ಸತ್ವಗುಣಪ್ರಧಾನನಾದ ಆ ಭಗವಂತನಲ್ಲಿ ಕೋಪಪ್ರಸಕ್ತಿಯೆಲ್ಲಿಯದು? ಹಿಂದೊಮ್ಮೆ ಮನ್ಮಥನು ಇದೇರೀತಿ ತಪೋನಿರತನಾಗಿದ್ದ ರುದ್ರನನ್ನು ಮೋಹಗೊಳಿಸುವುದಕ್ಕೆ ಪ್ರಯತ್ನಿಸಿದಾಗ ರುದ್ರನು ಕೋಪವನ್ನು ತಡೆಯಲಾರದೆ, ತನ್ನ ಹಣೆಗಣ್ಣಿಂದ ಆ ಕಾಮನನ್ನು ದಹಿಸಿದನು. ಹೀಗೆ ರುದ್ರಾದಿಗಳೂ ಕೂಡ ತಮ್ಮ ದೇಹವನ್ನೇ ತಪಿಸತಕ್ಕ ಕೋಪವನ್ನು ತಾವು ದಹಿಸಲಸಮರ್ಥರಾಗಿರುವರು. ಕಾಮವನ್ನು ಜಯಿಸಬಲ್ಲವರಾದರೂ ಕೋಪವನ್ನು ನಿಗ್ರಹಿಸಲಾರರು. ಇಂತಹ ದುರ್ಜಯವಾದ ಕೋಪವನ್ನು ಜಯಿಸಬೇಕೆಂದರೆ, ಕೇವಲಸತ್ವಗುಣಪ್ರಧಾನನಾದ ಆ ಮಹಾವಿಷ್ಣುವಿಗೊಬ್ಬನಿಗೆ ಹೊರತು ಬೇರೆ ಯಾರಿಗೆ ತಾನೇ ಈ ಶಕ್ತಿಯುಂಟು? ಹೀಗೆ ಕಾಮಕ್ರೋಧಗಳೊಂದಕ್ಕೂ ಈಡಾಗದೆ ಜಿತೇಂದ್ರಿಯನಾಗಿದ್ದ ನಾರಾಯಣನು, ಆ ಅಪ್ಸರಸ್ತ್ರೀಯರೆಲ್ಲರೂ ನೋಡುತ್ತಿದ್ದ ಹಾಗೆಯೇ ತನ್ನ ತೊಡೆಯಿಂದ ಲೋಕಮೋಹನೆಯಾದ ಒಬ್ಬಸ್ತ್ರೀಯನ್ನು ಹುಟ್ಟಿಸಿದನು. ತನ್ನ ತೊಡೆಯಲ್ಲಿ ಹುಟ್ಟಿದುದರಿಂದ ಅವಳಿಗೆ ಊರ್ವಶಿಯೆಂಬ ಹೆಸರನ್ನು ಕೊಟ್ಟು ಮುಂದಿದ್ದ ಅಪ್ಸರಸ್ತ್ರೀಯರನ್ನು ನೋಡಿ "ಎಲೈ ಸ್ತ್ರೀಯರೆ! ನೀವೇಕೆ ಹೀಗೆ ವ್ಯರ್ಥ

ವಾಗಿ ಆಯಾಸಪಡುವಿರಿ! ನಿಮ್ಮಂತಹ ಸ್ತ್ರೀಯರನ್ನು ನಾನು ನನ್ನ ಅಂಗಾಂಗಗಳಲ್ಲಿಯೂ ಸೃಷ್ಟಿಸಬಲ್ಲೆನು. ಹೀಗಿರುವಾಗ ನಿಮ್ಮ ಮೋಹಕ್ಕೆ ನಾನು ಮರುಳಾಗುವೆನೆ ?'' ಎಂದು ಹೇಳಿ ಆ ಊರ್ವಶಿಯನ್ನೂ ಆ ಅಪ್ಸರಸ್ತ್ರೀಯರಿದ್ದ ಸ್ಥಳಕ್ಕೇ ಕಳುಹಿಸಿಕೊಟ್ಟನು. ರಂಭಾದಿಗಳೆಲ್ಲರೂ ಆ ಸ್ತ್ರೀವ್ಯಕ್ತಿಯ ರೂಪಾತಿಶಯವನ್ನು ನೋಡಿ, ಆಶ್ಚರ್ಯಗೊಂಡು, ತಮಗೆ ತಾವೇ ನಾಚಿ ಸುಮ್ಮನಾದರು. ಆ ಮೇಲೆ ಅವರೆಲ್ಲರೂ ಆ ಊರ್ವಶಿಗೇ ತಮ್ಮಲ್ಲಿ ಪ್ರಾಧಾನ್ಯವನ್ನು ಕೊಟ್ಟು ಅವಳೊಡನೆ ತಮ್ಮ ತಮ್ಮ ಸ್ಥಾನಕ್ಕೆ ಹೊರಟುಹೋದರು. ಇದೇ ನರನಾರಾಯಣಾವತಾರವು.

---

## ಧ್ರುವವರಪ್ರದಾವತಾರವು

ಉತ್ತಾನಪಾದನೆಂಬ ರಾಜನ ಮಗನಾದ ಧ್ರುವನೆಂಬ ಬಾಲಕನು, ಒಮ್ಮೆ ತನ್ನ ಸವತಿತಾಯಾದ ಸುರುಚಿಯೆಂಬವಳೊಡನೆ ತನ್ನ ತಂದೆಯು ಸಿಂಹಾಸನದಲ್ಲಿ ಕುಳಿತಿದ್ದಾಗ, ತಾನೂ ಅವರೊಡನೆ ಕಲೆತು ತಂದೆಯ ತೊಡೆಯಲ್ಲಿ ಕುಳ್ಳಿರುವುದಕ್ಕಾಗಿ ಹೋದನು. ಆಗ ಕೇವಲ ಮತ್ಸರ (ಹೊಟ್ಟೆಕಿಚ್ಚಿನ) ಸ್ವಭಾವವುಳ್ಳ ಸುರುಚಿಯು, ತಂದೆಯ ಸಮೀಪಕ್ಕೆ ಬರುತ್ತಿದ್ದ ಬಾಲಕನನ್ನು ಹೀಗಳೆದು ಧಿಕ್ಕರಿಸಿದಳು. ಧ್ರುವನು ಅತಿಕ್ರೂರವಾದ ಅವಳ ವಾಗ್ಬಾಣದಿಂದ ಬಹಳನೊಂದವನಾಗಿ, ಕೇವಲ ಬಾಲನಾಗಿದ್ದರೂ ಆ ಅವಮಾನವನ್ನು ಸಹಿಸಲಾರದೆ, ತಪಸ್ಸಿಗಾಗಿ ಕಾಡಿಗೆ ಹೊರಟನು. ಹೀಗೆ ಬಹಳ ಸಣ್ಣವಯಸ್ಸಿನಲ್ಲಿಯೇ ಕಾಡಿನಲ್ಲಿ ದೃಢವಾದ ತಪಸ್ಸನ್ನು ಹಿಡಿದು ಕುಳಿತಿದ್ದ ಆ ಧ್ರುವನಲ್ಲಿ ಭಗವಂತನು ಕರುಣೆಗೊಂಡು, ಆತನಿಗೆ ಶಾಶ್ವತವಾದ ಮತ್ತು ಮಹೋನ್ನತವಾದ ಒಂದು ಪದವಿಯನ್ನು ಕೊಟ್ಟನು. ಸಪ್ತರ್ಷಿಗಳೆಲ್ಲರೂ ಆ ಪದವಿಯ ಮಹಿಮೆಯನ್ನು ಅನವರತವೂ ಸ್ತುತಿಸುತ್ತಿರುವರು. ಈ ಧ್ರುವಮಂಡಲವೆಂಬುದು ಸಪ್ತರ್ಷಿಮಂಡಲಕ್ಕಿಂತಲೂ ಊರ್ಧ್ವಭಾಗದಲ್ಲಿ, ತೇಜೋಮಯವಾಗಿ ಪ್ರಕಾಶಿಸುತ್ತಿರುವುದು. ಹೀಗೆ ಧ್ರುವನಿಗೆ ಪ್ರತ್ಯಕ್ಷವಾಗಿ ವರವನ್ನು ಕೊಟ್ಟ ವಿಷ್ಣುಮೂರ್ತಿಯನ್ನೂ ಒಂದವತಾರವನ್ನಾಗಿ ಹೇಳುವರು.

---

## ಪೃಥುಚಕ್ರವರ್ತಿಯ ಅವತಾರವು

ಹಿಂದೆ ವೇನನೆಂಬ ರಾಜನೊಬ್ಬನಿದ್ದನು. ಅವನು ಬಹಳ ದುಸ್ಸ್ವಭಾವವುಳ್ಳವನು. ಇವನ ಕೆಟ್ಟಕೃತ್ಯಗಳನ್ನು ನೋಡಿ ಸಹಿಸಲಾರದೆ ಒಬ್ಬ ಬ್ರಾಹ್ಮ

ಙಾನು ಇವನನ್ನು ಶಪಿಸಿದನು. ಈ ಬ್ರಾಹ್ಮಣಶಾಪದಿಂದ ಆ ವೇನನಿಗೆ ದೇಹಾವ ಸಾನದಲ್ಲಿ ನರಕಗತಿಯುಂಟಾಯಿತು. ಈ ವೇನನ ಮಗನೇ ಪೃಥುಚಕ್ರವರ್ತಿಯು. ಈ ಪೃಥುವು, ಯಾಗಗಳೇ ಮೊದಲಾದ ಅನೇಕ ಸತ್ಕಾರ್ಯಗಳನ್ನು ನಡೆಸಿ, ತನ್ನ ತಂದೆಯನ್ನು ನರಕದಿಂದ ತಪ್ಪಿಸಿ, ತನ್ನ ಪುತ್ರಶಬ್ದವನ್ನು ಸಾರ್ಥಕಗೊಳಿಸಿ ಕೊಂಡನು. ಮತ್ತು ಈ ಪೃಥುಚಕ್ರವರ್ತಿಯೇ ಭೂದೇವಿಯನ್ನು ಹಸುವನ್ನಾ ಗಿಯೂ, ಹಿಮವತ್ಪರ್ವತವನ್ನು ಕರುವನ್ನಾಗಿಯೂ ಮಾಡಿ, ಹಾಲುಕರೆಯುವಂತೆ ಈ ಭೂಮಿಯಿಂದ ಸಮಸ್ತ ಸಾರವಸ್ತುಗಳನ್ನೂ ಹೊರಕ್ಕೆ ತೆಗೆದನು. ಈ ಅಸಾಧ್ಯಕಾರ್ಯಗಳನ್ನು ನಡೆಸುವುದಕ್ಕಾಗಿ, ಭಗವಂತನೇ ವೇನನೆಂಬ ರಾಜನಿಗೆ ಪೃಥುಚಕ್ರವರ್ತಿಯೆಂಬ ಹೆಸರಿನಿಂದ ಹುಟ್ಟಿದನಲ್ಲದೆ ಬೇರೆಯಲ್ಲ. ಆದುದರಿಂದ ಇದೂ ಭಗವದವತಾರಗಳಲ್ಲಿ ಒಂದಾಗಿರುವುದು.

---

## ಋಷಭಾವತಾರವು

ಆಗ್ನೀಧ್ರನ ಮಗನಾದ ನಾಭಿಯೆಂಬ ರಾಜನೊಬ್ಬನಿದ್ದನು. ಆತನ ಭಾರ್ಯೆಗೆ ಸುದೇವಿಯೆಂದು ಹೆಸರು. ನಾರದಾ! ಯಾವ ಭಗವಂತನ ಸ್ವರೂಪವನ್ನು ಪರಮಹಂಸರೆನಿಸಿದ ಮಹಾಯೋಗಿಗಳು ಮಾತ್ರ ತಿಳಿಯಬಲ್ಲರೇ ಹೊರತು ಬೇರೆಯ ವರು ತಿಳಿಯಲಾರರೆಂದು ಸಮಸ್ತವೇದಗಳೂ ಹೇಳುವುವೋ, ಆ ಪರಮಪುರುಷನೇ ಆ ನಾಭಿರಾಜನಿಗೆ ಋಷಭನೆಂಬ ಹೆಸರಿನಿಂದ ಪುತ್ರನಾಗಿ ಹುಟ್ಟಿದನು. ಈ ಋಷ ಭನು ಏನೂ ತಿಳಿಯದ ಮೂಢನಂತೆಯೇ ಕಾಣಿಸಿಕೊಳ್ಳುತ್ತ, ದೃಢವಾದ ಯೋಗ ಮಾರ್ಗವನ್ನು ಹಿಡಿದಿದ್ದನು. ಭಗವದಂಶದಿಂದ ಅವತರಿಸಿದ್ದ ಋಷಭನಿಗೆ, ಈ ಸಮಸ್ತ ಪ್ರಪಂಚವೂ ತನ್ನ ಸ್ವರೂಪವೇ ಎಂಬ ಭಾವವು ದೃಢವಾಗಿದ್ದುದರಿಂದ, ಯಾವುದರಲ್ಲಿಯೂ ಭೇದಬುದ್ಧಿಯನ್ನಿಡದೆ ಸಮಸ್ತಭೂತಗಳಲ್ಲಿಯೂ ಸಮದೃಷ್ಟಿ ಯಿಂದಿದ್ದನು. ಆತನ ಮನಸ್ಸು ಎಂತಹ ಕಾರಣಗಳಿಂದಲೂ ಕದಲುತ್ತಿರಲಿಲ್ಲ. ಸಮಸ್ತ ಸಂಗಗಳನ್ನೂ ತೊರೆದು ಜಿತೇಂದ್ರಿಯನಾಗಿಯೇ ವರ್ತಿಸುತ್ತಿದ್ದನು. ಈ ಮಹಾತ್ಮನು ನೋಡಿದವರಿಗೆ ಏನೂ ತಿಳಿಯದ ಜಡನಂತೆಯೇ ಕಾಣುತ್ತ, ಯೋಗ ಚರ್ಯೆಯನ್ನು ನಡೆಸಿದನು. ಇದೇ ಋಷಭಾವತಾರವು,

---

### ಹಯಗ್ರೀವಾವತಾರವು

ಹಿಂದೊಮ್ಮೆ ಆ ಭಗವಂತನು ತಾನಾಗಿಯೇ ಬಂದು ನನ್ನ ಯಾಗಭೂಮಿಯಲ್ಲಿ ಹಯಗ್ರೀವಸ್ವರೂಪದಿಂದ ಕಾಣಿಸಿಕೊಂಡನು. ಹೊಂಬಣ್ಣದ ಮೈಯುಳ್ಳವನಾಗಿ ಗೋಚರಿಸಿದ ಆತನನ್ನೇ ವೇದಸ್ವರೂಪನೆಂದೂ, ಯಾಗಾರಾಧ್ಯನೆಂದೂ ಹೇಳಬಹುದು. ಸಮಸ್ತದೇವತೆಗಳಲ್ಲಿಯೂ ಆತನು ಅಂತರ್ಯಾಮಿಯಾಗಿರುವನು. ಆತನ ಮೂಗಿನ ರಂಧ್ರಗಳಿಂದ ನಿಶ್ವಾಸರೂಪವಾಗಿ ಹೊರಟ ಘುರ್ಘುರಧ್ವನಿಯೇ ವೇದಸ್ವರೂಪದಿಂದ ಹೊರಟು ಬಂದುವು. ಇದೇ ಹಯಗ್ರೀವಾವತಾರವು.

---

### ಮತ್ಸ್ಯಾವತಾರವು

ಆ ಭಗವಂತನು ಪ್ರಳಯಕಾಲದಲ್ಲಿ ಮತ್ಸ್ಯರೂಪವನ್ನು ತಾಳಿ, ನನ್ನ ಮುಖದಿಂದ ಜಾರಿದ ವೇದಮಾರ್ಗಗಳನ್ನು ನನಗೆ ಹಿಂತಿರುಗಿ ಅನುಗ್ರಹಿಸಿಕೊಟ್ಟನು. ಪ್ರಳಯಕಾಲದಲ್ಲಿ ಭೂಮಿಯೇ ತಿಳಿಯದಂತೆ ಎಲ್ಲವೂ ಜಲಮಯವಾಗಿದ್ದುವು. ಆಗ ಮತ್ಸ್ಯರೂಪದಿಂದಿದ್ದ ಈ ಭಗವಂತನು, ಮುಂದಿನ ಸೃಷ್ಟಿಗೆ ಉಪಯುಕ್ತಗಳಾದ ಪಾರ್ಥಿವದ್ರವ್ಯಗಳೆಲ್ಲಕ್ಕೂ ಆಧಾರನಾಗಿ, ಆ ನಾವೆಯಿಂದ ಸಮಸ್ತಪ್ರಾಣಿಗಳಿಗೂ ನಿವಾಸಭೂತನಾಗಿ, ಮೊದಲು ವೈವಸ್ವತಮನುವಿಗೆ ಗೋಚರಿಸಿದನು. ಇದೇ ಆ ಭಗವಂತನ ಮತ್ಸ್ಯಾವತಾರವು.

---

### ಕೂರ್ಮಾವತಾರವು

ಪೂರ್ವದಲ್ಲಿ ದೇವಾಸುರರು ಅಮೃತವನ್ನು ಪಡೆಯುವುದಕ್ಕಾಗಿ ಸಮುದ್ರವನ್ನು ಕಲಶವನ್ನಾಗಿಯೂ, ವಾಸುಕಿಯನ್ನು ಕಡೆಯುವ ಹಗ್ಗವನ್ನಾಗಿಯೂ, ಮಂದರಪರ್ವತವನ್ನು ಕಡೆಗೋಲನ್ನಾಗಿಯೂ ಮಾಡಿ, ದೇವಶ್ರೇಷ್ಠರೂ, ಅಸುರಶ್ರೇಷ್ಠರೂ ಉಭಯಪಾರ್ಶ್ವಗಳಲ್ಲಿಯೂ, ನಿಂತು ಕಡೆಯುವಾಗ ಅದು ಭಾರದಿಂದ ಸಮುದ್ರದಲ್ಲಿ ಮುಳುಗಿಹೋಗುವ ಸಂಭವವು ತೋರಿತು. ಆಗ ಆದಿದೇವನಾದ ಭಗವಂತನು ಕೂರ್ಮಾವತಾರವನ್ನೆತ್ತಿ, ಆ ಪರ್ವತವನ್ನು ಬೆನ್ನಿನ ಮೇಲೆ ಹೊತ್ತು, ಆ ಪರ್ವತವು ಸುತ್ತುವುದರಿಂದುಂಟಾದ ಘರ್ಷಣದಿಂದ ತನ್ನ ಮೈನವೆಯನ್ನಾರಿಸುವಂತೆ ಕೂರ್ಮರೂಪಿಯಾದ ಆ ಭಗವಂತನು ಆ ಕಾಲದಲ್ಲಿ ನಿದ್ರಾಸು

ಖವನ್ನನುಭವಿಸುತ್ತಿದ್ದನು. ನಾರದಾ! ಭಗವಂತನ ನಿದ್ರೆಯೆಂಬುದು, ಪ್ರಜಾಕ್ಷೇಮಚಿಂತನೆಯಿಂದ ಶಯನಿಸುವುದೇ ಹೊರತು ಬೇರೆಯಲ್ಲ. ಪ್ರಾಕೃತಜನಗಳಲ್ಲಿ ಕಾಣುವ ತಮೋಗುಣ ಕಾರ್ಯವಾದ ನಿದ್ರೆಯೆಂಬುದು, ಅಪ್ರಾಕೃತ ದಿವ್ಯಮಂಗಳ ವಿಗ್ರಹವುಳ್ಳ ಮತ್ತು ಗುಣಸಂಪರ್ಕವಿಲ್ಲದ ಆ ಭಗವಂತನಲ್ಲಿ ಸಂಭವಿಸದು. ಇದೇ ಅವನ ಕೂರ್ಮಾವತಾರವು.

---

## ನೃಸಿಂಹಾವತಾರವು

ನಾರದಾ! ಆ ಭಗವಂತನು ದೇವತೆಗಳ ಭಯವನ್ನು ನೀಗಿಸುವುದಕ್ಕಾಗಿ ಲೋಕಭಯಂಕರವಾದ ನಾರಸಿಂಹಸ್ವರೂಪವನ್ನು ಸ್ವೀಕರಿಸಿದನು. ಪೂರ್ವದಲ್ಲಿ ಹಿರಣ್ಯಕಶಿಪುವೆಂಬ ರಾಕ್ಷಸನು ಆಡುತ್ತಿರುವ ಹುಬ್ಬುಗಂಟುಗಳಿಂದಲೂ, ತೀಕ್ಷ್ಣವಾದ ಕೋರೆದಾಡೆಗಳಿಂದಲೂ ಘೋರವಾದ ಮುಖವುಳ್ಳವನಾಗಿ ಗದೆಯನ್ನು ಹಿಡಿದು ತನಗಿದಿರಾಗಿ ಬರುವುದನ್ನು ನೋಡಿ ಅವನಿಗೂ ಭಯವನ್ನು ಹುಟ್ಟಿಸುವಂತೆ ಭಗವಂತನು ಈ ಸಿಂಹಸ್ವರೂಪವನ್ನು ಧರಿಸಿ ಬಂದು, ಆ ರಾಕ್ಷಸನನ್ನೆಳೆದು ತನ್ನ ತೊಡೆಯಮೇಲೆ ಮಲಗಿಸಿಕೊಂಡು, ತನ್ನ ನಖಾಗ್ರಗಳಿಂದಲೇ ಅವನನ್ನು ಸೀಳಿಬಿಟ್ಟನು. ಇದೇ ಆ ಭಗವಂತನ ನೃಸಿಂಹಾವತಾರವು.

---

## ಗಜೇಂದ್ರ ವರದಾವತಾರವು

ಪೂರ್ವದಲ್ಲಿ ಆನೆಗಳ ಹಿಂಡಿಗೆ ಯೂಥಪತಿಯೆನಿಸಿಕೊಂಡ ಒಂದಾನೊಂದು ಗಜವು, ತನ್ನ ಸ್ವಜಾತಿಯ ಆನೆಗಳೊಡನೆ ಕಾಡಿನಲ್ಲಿ ಸುತ್ತುತ್ತ ಬಹಳ ಆಯಾಸಪಟ್ಟು, ಬಾಯಾರಿಕೆಯಿಂದ ಪೀಡಿತವಾಗಿ, ಸಮೀಪದಲ್ಲಿದ್ದ ಒಂದು ಮಡುವನ್ನು ನೋಡಿ, ಅಲ್ಲಿ ನೀರನ್ನು ಕುಡಿಯುತಿದ್ದಿತು. ಆಗ ಅತಿ ಬಲಾಢ್ಯವಾಗಿಯೂ ಭಯಂಕರವಾಗಿಯೂ ಇದ್ದ ಒಂದಾನೊಂದು ಮೊಸಳೆಯು ಆ ಆನೆಯ ಕಾಲನ್ನು ಹಿಡಿಯಿತು. ಆ ಗಜಯೂಥವು ಬಹಳ ಹೊತ್ತಿನವರೆಗೆ ಆ ಮೊಸಳೆಯೊಡನೆ ಹೋರಾಡುತಿದ್ದರೂ, ತಪ್ಪಿಸಿಕೊಂಡು ಬರುವುದಕ್ಕೆ ಸಾಧ್ಯವಿಲ್ಲದೆ, ಕ್ರಮಕ್ರಮವಾಗಿ ಶಕ್ತಿಗುಂದುತ್ತ ಬಂದಿತು. ಕೊನೆಗೆ ಮುಂದೆ ಮಾಡಬೇಕಾದ ಪ್ರಯತ್ನವೊಂದೂ ತೋರದೇ, ತನ್ನ ಪ್ರಯತ್ನವನ್ನು ಬಿಟ್ಟು, ಆ ಕೊಳದಲ್ಲಿದ್ದ ಒಂದಾನೊಂದು ಕಮಲವನ್ನು ತನ್ನ ಸುಂಡಿಲಿನಿಂದ ಮೇಲಕ್ಕೆತ್ತಿ ಹಿಡಿದು, ಭಕ್ತಿಯಿಂದ ಭಗವಂತನನ್ನು

ಕುರಿತು, "ಎಲೈ ಕಾರಣಪುರುಷನೆ! ಓ ವಿಶುದ್ಧಕೀರ್ತೇ! ಕಿವಿಯಿಂದ ಕೇಳಿದಮಾತ್ರಕ್ಕೇ ಸಮಸ್ತ ಕಲ್ಯಾಣಗಳನ್ನೂ ಕೈಗೂಡಿಸತಕ್ಕ ನಾಮಧೇಯವುಳ್ಳವನೆ! ಓ ಲೋಕನಾಯಕಾ! ನನ್ನನ್ನು ರಕ್ಷಿಸು" ಎಂದು ದೈನ್ಯದಿಂದ ಮೊರೆಯಿಟ್ಟಿತು. ಹೀಗೆ ತನ್ನಲ್ಲಿ ಮರೆಹೊಕ್ಕು ಮೊರೆಯಿಡುತ್ತಿರುವ ಗಜೇಂದ್ರನಲ್ಲಿ ಶ್ರೀಹರಿಯು ದಯಾರ್ದ್ರಹೃದಯನಾಗಿ, ಗರುಡಾರೂಢನಾಗಿ ಬಂದು ತನ್ನ ಚಕ್ರಾಯುಧದಿಂದ ಆ ನಕ್ರವನ್ನು ಸೀಳಿ, ಗಜೇಂದ್ರನನ್ನು ಬಿಡಿಸಿ. ಅದಕ್ಕೆ ಮೋಕ್ಷವನ್ನೂ ಕೊಟ್ಟನು. ಇದೇ ಆ ಭಗವಂತನ ಗಜೇಂದ್ರವರದಾವತಾರವು. ಇದನ್ನು ಹರ್ಯವತಾರವೆಂದೂ ಹೇಳುವರು.

———

## ವಾಮನಾವತಾರವು

ಯಜ್ಞಾರಾಧ್ಯನಾದ ಆ ಪರಮಪುರುಷನು ಮತ್ತೊಮ್ಮೆ ಅದಿತಿಪುತ್ರನಾಗಿ ಹುಟ್ಟಿದನು. ಆ ಅದಿತಿಯಲ್ಲಿ ಜನಿಸಿದ ದ್ವಾದಶಾದಿತ್ಯರೆಂಬ ಹನ್ನೆರಡು ಮಕ್ಕಳಲ್ಲಿ ಈತನೇ ಕಿರಿಯವನಾಗಿದ್ದರೂ, ಗುಣಗಳಲ್ಲಿ ಮಾತ್ರ ಅವರೆಲ್ಲರಿಗೆ ಹಿರಿಯನೆನಿಸಿಕೊಂಡು, ಲೋಕವಿಖ್ಯಾತಿಯನ್ನು ಹೊಂದಿದನು ಈತನು ಆಕಾರದಲ್ಲಿ ಬಹಳ ಚಿಕ್ಕವನಂತೆ ತೋರಿದರೂ, ಚತುರ್ದಶಭುವನಗಳನ್ನೂ ತನ್ನ ಎರಡಡಿಗಳಿಂದಲೇ ಅಳೆದುಬಿಟ್ಟನು. ಇದಕ್ಕೆ ಕಾರಣವನ್ನು ಹೇಳುವೆನು ಕೇಳು! ಪೂರ್ವದಲ್ಲಿ ಬಲಿಯೆಂಬ ದಾನವನು ಇಂದ್ರನನ್ನು ಜಯಿಸಿ, ತ್ರೈಲೋಕ್ಯವನ್ನೂ ತನಗಧೀನವಾಗಿ ಮಾಡಿಕೊಂಡಿದ್ದನು. ಆಗ ಭಗವಂತನು ದೇವತೆಗಳ ಕಷ್ಟವನ್ನು ನೀಗಿಸುವುದಕ್ಕಾಗಿ ಒಂದು ವಾಮನ (ಗುಜ್ಜಾರಿಯ) ರೂಪವನ್ನು ಧರಿಸಿ, ಬಲಿಯು ಯಾಗಮಾಡುತಿದ್ದ ಕಾಲದಲ್ಲಿ ಬ್ರಾಹ್ಮಣವೇಷದಿಂದ ಆ ಯಜ್ಞಶಾಲೆಗೆ ಹೋದನು. ಆ ಯಾಗಕಾಲದಲ್ಲಿ ಬಲಿಚಕ್ರವರ್ತಿಯು ಕೇಳಿದವರಿಗೆ ಕೇಳಿದುದನ್ನು ಕೊಡುವಹಾಗೆ ಪ್ರತಿಜ್ಞೆ ಮಾಡಿದ್ದುದರಿಂದ, ಅಲ್ಲಿ ಈ ವಾಮನರೂಪಿಯಾದ ಬ್ರಾಹ್ಮಣನು, ತನಗಾಗಿ ಮೂರಡಿಯ ನೆಲವನ್ನು ಮಾತ್ರ ಯಾಚಿಸಿ, ಆ ವಿಷಯದಲ್ಲಿ ಮೊದಲು ಬಲಿಚಕ್ರವರ್ತಿಯ ವಾಗ್ದಾನವನ್ನು ಪಡೆದು, ಒಡನೆಯೇ ಮಹಾದ್ಭುತವಾದ ಆಕಾರವನ್ನು ತಾಳಿ, ಒಂದಡಿಯಿಂದ ಭೂಮಿಯೆಲ್ಲವನ್ನೂ ಆಕ್ರಮಿಸಿ, ಮತ್ತೊಂದಡಿಯಿಂದ ಆಕಾಶವೆಲ್ಲವನ್ನೂ ಆಕ್ರಮಿಸಿ ನಿಂತನು. ಮೂರನೆಯ ಹೆಜ್ಜೆಗೆ ಬೇರೆಲ್ಲಿಯೂ ಸ್ಥಳವಿಲ್ಲದುದನ್ನು ನೋಡಿ, ಬಲಿಯು ತನ್ನ ತಲೆಯನ್ನೇ ಒಡ್ಡಿದನು. ಆಗ ಭಗವಂತನು ಅವನ ತಲೆಯಮೇಲೆ ತನ್ನ ಪಾದವನ್ನಿಟ್ಟು, ಅವನನ್ನು ಪಾತಾಳದವರೆಗೆ ಮೆಟ್ಟಿ, ತ್ರೈಲೋಕ್ಯವನ್ನೂ ಇಂದ್ರನಿಗೆ ಅಧೀನವಾಗಿ ಮಾಡಿದನು. ಹೀಗೆ ಮೂರಡಿಯ

ನೆಲವನ್ನು ಯಾಚಿಸುವ ನೆವದಿಂದಲೇ ಭಗವಂತನು ತ್ರೈಲೋಕ್ಯವನ್ನೂ ತನ್ನ ವಶ ಮಾಡಿಕೊಂಡನು' ಆದರೆ "ಸರ್ವಲೋಕೇಶ್ವರನಾಗಿಯೂ, ಸರ್ವಶಕ್ತನಾಗಿಯೂ ಇರುವ ಭಗವಂತನು ಕೇವಲ ದುರ್ಬಲನಂತೆ ಹೀಗೆ ಕಪಟಭಾವದಿಂದ ಯಾಚಿಸಿ ಆ ಬಲಿಯನ್ನು ನಿಗ್ರಹಿಸಿದುದು ಯುಕ್ತವೇ?" ಎಂದು ನೀನು ಶಂಕಿಸಬಹುದು! ನಾರದಾ! ಹಾಗೆಣಿಸಬೇಡ! ಆ ಬಲಿಚಕ್ರವರ್ತಿಯಾದರೋ ಬಹಳ ಧರ್ಮಶೀಲನು! ಬಹಳ ಉದಾರ ಸ್ವಭಾವವುಳ್ಳವನು! ಹೀಗೆ ಧರ್ಮವನ್ನು ಮೀರದೆ ನಡೆಯುವ ಸಜ್ಜನರನ್ನು ವಿನಯದಿಂದಲೇ ವಶಪಡಿಸಿಕೊಳ್ಳಬೇಕೇ ಹೊರತು ಬಲಾತ್ಕರಿಸಿ ನಿಗ್ರಹಿಸಬಾರದು. ಅಂತವರನ್ನು ಹಾಗೆ ನಿಗ್ರಹಿಸುವುದು ಸಾಧ್ಯವೂ ಅಲ್ಲ! ಇದಕ್ಕಾಗಿಯೇ ದಯಾಸಮುದ್ರನಾದ ವಿಷ್ಣುವು ಅವನನ್ನು ವಿನಯಭಾವದಿಂದಲೇ ಜಯಿಸಬೇಕಾಯಿತು. ಆದರೆ ವಿನಯದಿಂದಾದರೂ ಸಜ್ಜನರನ್ನು ವಂಚಿಸಬಹುದೇ?" ಎಂದು ಕೇಳುವೆಯಾ? ಇದರಿಂದ ಭಗವಂತನು ಆ ಬಲಿಯ ಇಷ್ಟಾರ್ಥವನ್ನೇ ಕೈಗೂಡಿಸಿಕೊಟ್ಟನೇ ಹೊರತು ವಂಚಿಸಿದವನಲ್ಲ. ಆ ಬಲಿಯು ತ್ರೈಲೋಕ್ಯಾಧಿಪತ್ಯದ ಕಿರೀಟವನ್ನು ತಲೆಯಲ್ಲಿ ಧರಿಸುವುದಕ್ಕಿಂತ ಶ್ರೀಮಹಾವಿಷ್ಣುವಿನ ಪಾದತೀರ್ಥವನ್ನು ಶಿರಸ್ಸಿನಿಂದ ಧರಿಸುವುದೇ ತನಗೆ ಶ್ರೇಯಸ್ಕರವೆಂದು ಭಾವಿಸಿದ್ದವನು ಇದರಿಂದಲೇ ಆತನು ಆ ಕಾಲದಲ್ಲಿ ಶುಕ್ರನ ಕೋಪವನ್ನೂ ಲಕ್ಷಿಸದೆ, ಆತನ ಶಾಪಕ್ಕೂ ಭಯಪಡದೆ, ತನ್ನ ಪ್ರತಿಜ್ಞಾಪೂರ್ತಿಗಾಗಿ, ತನ್ನ ತಲೆಯನ್ನೇ ಆ ಶ್ರೀಮಹಾವಿಷ್ಣುವಿನ ಪಾದಾರವಿಂದಕ್ಕೊಪ್ಪಿಸಿ ಬಿಟ್ಟನು. ನಾರದಾ! ಆ ಬಲಿಯು ಎಂತಹ ಮಹಾತ್ಮನೋ ನೋಡು! ಹೀಗೆ ಬಲಿಯನ್ನು ನಿಗ್ರಹಿಸುವ ವ್ಯಾಜದಿಂದ ಅವನನ್ನುದ್ಧರಿಸಿದುದೇ ಆ ಭಗವಂತನ ತ್ರಿವಿಕ್ರಮಾವತಾರದ ಕಾರ್ಯವು

---

## ಹಂಸಾವತಾರವು

ಓ ನಾರದಾ! ನೀನೊಮ್ಮೆ ಅತಿಸ್ನೇಹವಶನಾಗಿ ಭಗವಂತನನ್ನು ಕುರಿತು ಯೋಗಾದಿವಿಷಯಗಳನ್ನು ಸಂಪೂರ್ಣವಾಗಿ ವಿವರಿಸಬೇಕೆಂದು ಪ್ರಾರ್ಥಿಸಲು, ಆತನು ಹಂಸಾವತಾರವನ್ನೆತ್ತಿ ಅವೆಲ್ಲವನ್ನೂ ನಿನಗೆ ವಿವರಿಸಿದನು. ಅದರಲ್ಲಿ ಫಲಾಪೇಕ್ಷೆಯಿಲ್ಲದ ಕರ್ಮಯೋಗವನ್ನೂ, ಭಗವದುಪಾಸನಾತ್ಮಕವಾದ ಭಕ್ತಿಯನ್ನೂ, ದೀಪವು ಇತರವಸ್ತುಗಳನ್ನು ಪ್ರಕಾಶಗೊಳಿಸುವಂತೆ ಆತ್ಮತತ್ವವನ್ನು ಪ್ರಕಾಶಗೊಳಿಸುವ ಜ್ಞಾನಯೋಗವನ್ನೂ ಉಪದೇಶಿಸಿದನು. ಹಂಸರೂಪಿಯಾದ ಆ ಭಗವಂತನು ಉಪದೇಶಿಸಿದ ಯೋಗಸ್ವರೂಪವನ್ನವಲಂಬಿಸಿಯೇ, ಈಗಲೂ

ಮಹಾತ್ಮರು, ಭಗವಂತನಾದ ವಾಸುದೇವನಲ್ಲಿ ಶರಣುಹೊಂದಿ, ಆತನ ಕೃಪೆಗೆ ಪಾತ್ರರಾಗುವರು. ಇದೇ ಆ ಭಗವಂತನ ಹಂಸಾವತಾರವು.

---

## ಆಯಾಮನ್ವಂತರಗಳಲ್ಲಿ ಬೇರೆಬೇರೆಯಾಗಿ ಕೈಕೊಂಡ ಅವತಾರಗಳು.

ಭಗವಂತನು ಆಯಾಮನ್ವಂತರಗಳಲ್ಲಿ ಆಯಾ ಮನುಗಳ ವಂಶಗಳನ್ನು ರಕ್ಷಿಸುವುದಕ್ಕಾಗಿ ಪ್ರಯತ್ನಿಸಿ, ದಶದಿಕ್ಕುಗಳಲ್ಲಿಯೂ ಅಪ್ರತಿಹತವಾದ ಪರಾಕ್ರಮದಿಂದ ಕೂಡಿದವನಾಗಿ ನಿರಂಕುಶವಾದ ತನ್ನ ಆಜ್ಞಾರೂಪವಾದ ಚಕ್ರವನ್ನು ಧರಿಸಿರುವನು. ಮತ್ತು ಅವನು ಮೂರನೆಯ ಲೋಕವಾದ ಸತ್ಯಲೋಕದವರೆಗೂ ತನ್ನ ಕೀರ್ತಿಯನ್ನು ವಿಸ್ತರಿಸಿ. ಆಗಾಗ ಮದೋನ್ಮತ್ತರಾದ ರಾಜರನ್ನು ನಿಗ್ರಹಿಸಿ ಸಾಧುಗಳನ್ನು ರಕ್ಷಿಸುತ್ತಿರುವನು.

---

## ಧನ್ವಂತರಿಯ ಅವತಾರವು

ಮತ್ತು ಆಭಗವಂತನು ದೇವವೈದ್ಯನಾದ ಧನ್ವಂತರಿಯ ಅವತಾರವನ್ನೆತ್ತಿ, ತನ್ನ ನಾಮಸ್ಮರಣಮಾತ್ರದಿಂದಲೇ ಸಮಸ್ತರೋಗಗಳನ್ನೂ ನೀಗಿಸುತ್ತಿರುವನಲ್ಲದೆ, ಲೋಕೋಪಕಾರಾರ್ಥವಾಗಿ ಆಯುರ್ವೇದವನ್ನು ಲೋಕದಲ್ಲಿ ಹರಡಿರುವನು. ದೇವತೆಗಳಿಗೆ ಸಮಾನವಾಗಿ ಯಜ್ಞಭಾಗಗಳನ್ನೂ ಸ್ವೀಕರಿಸುತ್ತಿರುವನು

---

## ಪರಶುರಾಮಾವತಾರವು

ಮಹಾತ್ಮನಾದ ಆ ಭಗವಂತನು ದುಷ್ಟರಾಜರನ್ನು ಶಿಕ್ಷಿಸುವುದಕ್ಕಾಗಿ, ಜಮದಗ್ನಿಯೆಂಬ ಮಹರ್ಷಿಯ ಗರ್ಭದಲ್ಲಿ ಜನಿಸಿ, ಕೈಯಲ್ಲಿ ಗಂಡುಗೊಡಲಿಯನ್ನು ಹಿಡಿದು, ಸಮಸ್ತಲೋಕಗಳನ್ನೂ ಸುತ್ತುತ್ತ, ಬ್ರಾಹ್ಮಣರಿಗೆ ದ್ರೋಹಿಗಳಾಗಿಯೂ, ವೇದಮಾರ್ಗಗಳನ್ನು ಬಿಟ್ಟವರಾಗಿಯೂ, ಲೋಕಕಂಟಕರಾಗಿಯೂ ಇದ್ದ ಕ್ಷತ್ರಿಯರನ್ನು ಇಪ್ಪತ್ತೊಂದಾವರ್ತಿ ವಧಿಸಿಬಂದನು. ಹೀಗೆ ಕ್ಷತ್ರಿಯರನ್ನು ಕೊಂದಮೇಲೆ ತನಗಧೀನವಾಗಿ ಮಾಡಿಕೊಂಡ ಸಮಸ್ತಭೂಮಂಡಲ

ವನ್ನೂ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ಈ ವಿಧವಾಗಿ ಪರಶುರಾಮ ನೆಂಬ ಹೆಸರಿನಿಂದ ಲೋಕದಲ್ಲಿ, ತನ್ನ ಸತ್ಕೀರ್ತಿಯನ್ನು ಹರಡಿರುವನು.

---

## ಶ್ರೀರಾಮಾವತಾರವು

ಓ! ನಾರದಾ! ನಾವೆಲ್ಲರೂ ರಾವಣನೆಂಬ ರಾಕ್ಷಸನ ಬಾಧೆಯನ್ನು ತಡೆಯಲಾರದೆ ಮಹಾವಿಷ್ಣುವಿನಲ್ಲಿ ಮೊರೆಯಿಡಲು, ಜೀವಪ್ರಕೃತಿಗಳೆರಡಕ್ಕೂ ನಿಯಾಮಕನಾದ ಆ ಭಗವಂತನು, ಭರತನೇ ಮೊದಲಾದ ಮೂವರು ಸಹೋದರರೊಡನೆ ಇಕ್ಷ್ವಾಕುವಂಶದಲ್ಲಿ ರಾಮನಾಗಿ ಅವತರಿಸುವನು. ಈತನು ಪಿತೃವಾಕ್ಯಪರಿಪಾಲನವೆಂಬ ವ್ರತವನ್ನು ಹಿಡಿದು, ಕೈಕೇಯಿಯೆಂಬ ತನ್ನ ಮಲತಾಯಿಯ ಕೋರಿಕೆಯನ್ನನುಸರಿಸಿ, ತಂದೆಯ ಮಾತಿನಮೇಲೆ ತನ್ನ ತಮ್ಮನಾದ ಲಕ್ಷ್ಮಣನೊಡನೆಯೂ, ಭಾರ್ಯೆಯಾದ ಸೀತೆಯೊಡನೆಯೂ ಸೇರಿ ಹದಿನಾಲ್ಕು ವರ್ಷಗಳವರೆಗೆ ವನವಾಸದಲ್ಲಿರುವನು. ಅವನು ದಂಡಕಾರಣ್ಯದಲ್ಲಿರುವಾಗ, ದುರಾತ್ಮನಾದ ರಾವಣನು ಆತನ ಪತ್ನಿಯಾದ ಸೀತೆಯನ್ನು ವಂಚನೆಯಿಂದ ಕದ್ದೊಯ್ಯುವನು. ಆಮೇಲೆ ರಾಮನು ಸುಗ್ರೀವನೊಡನೆ ಸ್ನೇಹವನ್ನು ಬೆಳೆಸಿ, ವಾಲಿಯನ್ನು ಕೊಂದು ವಾನರ ಸೈನ್ಯದೊಡನೆ ಲಂಕೆಗೆ ಹೊರಡುವನು. ದಾರಿಯಲ್ಲಿ ಸಮುದ್ರವು ಅಡ್ಡಲಾಗಿರುವುದನ್ನು ನೋಡಿ, ಅದನ್ನು ದಾಟುವುದಕ್ಕೆ ಉಪಾಯವೇನೂ ತೋರದಿದ್ದುದರಿಂದ, ತನ್ನಲ್ಲಿ ತಾನೇ ವಿಚಾರಿಸುತ್ತಿದ್ದು ಕೊನೆಗೆ ತ್ರಿಪುರಸಂಹಾರಿಯಾದ ರುದ್ರನಂತೆ ಕೋಪದಿಂದ ಜ್ವಲಿಸುತ್ತ ಕ್ರೂರದೃಷ್ಟಿಯಿಂದ ಆ ಸಮುದ್ರವನ್ನು ನೋಡುವನು. ಆಗ ಸಮುದ್ರನು ಈತನ ಕೋಪಕ್ಕೆ ಹೆದರಿ ಪುರುಷರೂಪದಿಂದ ಮುಂದೆ ಬಂದು ರಾಮನಲ್ಲಿ ಶರಣಾಗತನಾಗಿ ದಾರಿಯನ್ನು ಕೊಡುವನು. ಆಗ ರಾಮನು ಸೇತುಬಂಧನಪೂರ್ವಕವಾಗಿ ಸಮುದ್ರವನ್ನು ದಾಟಿ ಲಂಕೆಗೆ ಬಂದು, ಐರಾವತದ ಕೊಂಬಿನ ತಿವಿತದಿಂದ ಜಡ್ಡುಗಟ್ಟಿದ ಎದೆಯುಳ್ಳವನಾಗಿಯೂ, ಗರ್ವವಿಶಿಷ್ಟವಾದ ತನ್ನ ಅಟ್ಟಹಾಸದಿಂದಲೇ ಸಮಸ್ತದಿಕ್ಕುಗಳನ್ನೂ ಭೇದಿಸುವಂತೆ ಮದೋನ್ಮತ್ತನಾಗಿಯೂ ಇದ್ದ ರಾವಣನನ್ನು ಲೀಲಾಮಾತ್ರದಿಂದಲೇ ತನ್ನ ಬಾಣಗಳಿಂದ ಕೊಲ್ಲುವನು. ಇದು ಮುಂದೆ ನಡೆಯುವ ರಾಮಾವತಾರವೃತ್ತಾಂತವು

---

## ಕೃಷ್ಣಾವತಾರವು

ನಾರದಾ! ಲೋಕದಲ್ಲಿ ಅಸುರಭಾವದಿಂದ ಹುಟ್ಟಿ ಮದೋನ್ಮತ್ತರಾದ ದುಷ್ಟಕ್ಷತ್ರಿಯರ ಸೈನ್ಯಗಳ ಭಾರದಿಂದ ಮುಂದೆ ಭೂಭಾರವು ಹೆಚ್ಚಿ ಹೋಗುವುದು. ಈ ಭಾರವನ್ನು ಪರಿಹರಿಸಿ ಭೂದೇವಿಗೆ ಅವರ ಬಾಧೆಯನ್ನು ತೊಲಗಿಸುವುದಕ್ಕಾಗಿಯೇ ಭಗವಂತನು ಯಾದವಕುಲದಲ್ಲಿ ಬಲರಾಮಕೃಷ್ಣರೆಂಬ ರೂಪದಿಂದವತರಿಸುವನು. * ಕಪ್ಪು, ಬಿಳುಪುಬಣ್ಣದ ಕೂದಲುಗಳಿಂದ ಕೂಡಿದ ಭಗವಂತನು, ಆ ತನ್ನ ಎರಡು ಕೂದಲುಗಳೇ ಈ ಭೂಭಾರವನ್ನು ನೀಗಿಸಬಲ್ಲುವೆಂಬ ಭಾವವನ್ನು ತೋರಿಸುವುದಕ್ಕಾಗಿ, ಎರಡು ಬಣ್ಣಗಳುಳ್ಳ ಎರಡು ರೂಪದಿಂದವತರಿಸುವನು. ಇವರಿಬ್ಬರೂ ವಸುದೇವನಿಗೆ ಪುತ್ರರಾಗುವರು. ರೋಹಿಣೀದೇವಿಯಲ್ಲಿ ಬಲರಾಮನೂ, ದೇವಕೀದೇವಿಯಲ್ಲಿ ಕೃಷ್ಣನೂ ಜನಿಸುವರು. ಇವರಿಬ್ಬರಲ್ಲಿ ಶ್ರೀಕೃಷ್ಣನನ್ನು ಸಾಕ್ಷಾದ್ವಿಷ್ಣುವೆಂದೇ ಹೇಳುವರು. ಅಂತಹ ಕೃಷ್ಣನು ಜನಗಳಿಗೆ ಸಾಮಾನ್ಯ ಮನುಷ್ಯನಂತೆಯೇ ಕಾಣುತ್ತ, ಅತಿಮಾನುಷಕೃತ್ಯಗಳಿಂದ ತನ್ನ ಮಹಿಮೆಯನ್ನು ಆಗಾಗ ತೋರಿಸುತ್ತಿರುವನು. ಈತನು ನಡೆಸುವ ಒಂದೆರಡು ಅದ್ಭುತಕಾರ್ಯಗಳನ್ನೂ ತಿಳಿಸುವೆನು ಕೇಳು. ಈ ಕೃಷ್ಣನು ಮೂರುತಿಂಗಳ ಕೂಸಾಗಿರುವಾಗಲೇ ಕಂಸನಿಂದ ಪ್ರೇರಿತೆಯಾದ † ಪೂತನೆಯೆಂಬ ರಾಕ್ಷಸಿಯು, ಸ್ತನದಲ್ಲಿ ವಿಷವನ್ನು ತುಂಬಿಕೊಂಡು, ಆ ಸಣ್ಣಮಗುವಿಗೆ ಮೊಲೆಯೂಡಿಸುವ ನೆವದಿಂದ ಅವನನ್ನು ಕೊಲ್ಲಬೇಕೆಂದು ನಂದಗೋಕುಲಕ್ಕೆ ಬರುವಳು. ಇವಳ ನಡತೆಯನ್ನು ನೋಡಿ ಗೋಪಸ್ತ್ರೀಯರು ಸಂದೇಹಪಟ್ಟು, ಅನೇಕವಿಧದಿಂದ ತಡೆಯುತ್ತಿದ್ದರೂ ಕೇಳದೆ ಆ ರಾಕ್ಷಸಿಯು ಮಗುವನ್ನು ಬಲಾತ್ಕಾರದಿಂದೆತ್ತಿ ತೊಡೆಯಲ್ಲಿರಿಸಿಕೊಂಡು ಸ್ತನ್ಯವನ್ನು ಕೊಡುತ್ತಿರುವಾಗ, ಸಣ್ಣಮಗುವಾದ ಕೃಷ್ಣನು, ಹಾಲುಕುಡಿಯುವ ನೆವದಿಂದಲೇ ಆಕೆಯ ಪ್ರಾಣವಾಯುಗಳನ್ನು ಹೀರಿಬಿಡುವನು.

---

* ಭಗವಂತನು ತನ್ನ ತಲೆಯಲ್ಲಿದ್ದ ಬಿಳುಪು ಕಪ್ಪು ಬಣ್ಣದ ಕೂದಲೆರಡನ್ನು ಕಿತ್ತೆಸೆಯಲು, ಅವೆರಡೂ ಅ ರಾಮಕೃಷ್ಣರೂಪದಿಂದ ಹುಟ್ಟಿದುದಾಗಿ ಭಾರತವಿಷ್ಣುಪುರಾಣಾದಿಗಳಲ್ಲಿ ಹೇಳಲ್ಪಟ್ಟಿರುವುದು ಆದರೆ ಹೀಗೆ ಹೇಳಿದುದು ರಾಮಕೃಷ್ಣರ ಮೈಬಣ್ಣವನ್ನೂ, ಆ ಭಗವಂತನ ಕೇಶಗಳೇ ಭೂಭಾರವನ್ನು ನೀಗಿಸುವುದಕ್ಕೆ ಸಮರ್ಥಗಳೆಂಬ ಭಾವವನ್ನೂ ತಿಳಿಸುವುದಕ್ಕೆ ಹೊರತು, ರಾಮಕೃಷ್ಣರು ಕೇಶಾವತಾರವೆಂಬ ಅಭಿಪ್ರಾಯದಿಂದ ಹೇಳಿದುದಲ್ಲವೆಂದು ಗ್ರಾಹ್ಯವು.

† ಇಲ್ಲಿ ಪೂತನೆಯು ಉಲೂಕಾ (ಗೂಬೆಯು) ರೂಪದಿಂದ ಬಂದುದಾಗಿ ಪುರಾಣಾಂತರ ಪ್ರಸಿದ್ಧಿಯುಂಟು.

ಹೀಗೆಯೇ ಮತ್ತೊಮ್ಮೆ ಕಂಸನಿಂದ ಪ್ರೇರಿತನಾದ ಶಕಟಾಸುರನೆಂಬ ರಾಕ್ಷಸನು, ಈತನನ್ನು ಕೊಲ್ಲುವುದಕ್ಕಾಗಿ ಬಂಡಿಯ ರೂಪದಿಂದ ಬರಲು, ಬಾಲನಾದ ಕೃಷ್ಣನು ಬಂಡಿಯನ್ನು ತನ್ನ ಕಾಲಿನಿಂದ ಮೆಟ್ಟುವ ನೆವದಿಂದ ಆ ರಾಕ್ಷಸನನ್ನು ಕೊಲ್ಲುವನು. ಮತ್ತೊಮ್ಮೆ ಕೃಷ್ಣನು ದುಶ್ಚೇಷ್ಟೆಯನ್ನು ಮಾಡಿದನೆಂದು ಕೇಳಿ ಯಶೋದಾದೇವಿಯು ಕೋಪಗೊಂಡು, ಅವನನ್ನು ಹಗ್ಗದಿಂದ ಬಿಗಿದು ಒಂದು ಒರಳುಕಲ್ಲಿಗೆ ಕಟ್ಟಿಹಾಕುವಳು. ವಿಚಿತ್ರ ವೀರ್ಯವುಳ್ಳ ಈ ಬಾಲಕನು ಆ ಒರಳುಕಲ್ಲನ್ನು ತನ್ನೊಡನೆಯೇ ಎಳೆದುಕೊಂಡು ಹೋಗುತ್ತ, ದಾರಿಯಲ್ಲಿ ಬಹುಕಾಲದಿಂದ ರೂಢಮೂಲವಾಗಿ ಬೆಳೆದಿದ್ದ ಎರಡು ಮರಗಳ ನಡುವೆ ಪ್ರವೇಶಿಸಿ, ಅವೆರಡನ್ನೂ ಆ ನೆವದಿಂದಲೇ ಮುರಿದು ಕೆಡಹುವನು. ನಾರದಾ! ಇವೆಲ್ಲವೂ ಅಮಾನುಷಕೃತ್ಯಗಳೆಂಬುದನ್ನು ಹೇಳಬೇಕಾದುದೇನು! ಮತ್ತೊಮ್ಮೆ ಶ್ರೀಕೃಷ್ಣನು, ಗೋಕುಲದಲ್ಲಿ ತನ್ನ ಕುಲವೃತ್ತಿಯನ್ನು ಹಿಡಿದು ತನ್ನ ಸಂಗಡಿಗರಾದ ಗೊಲ್ಲರೊಡನೆ ದನಗಳನ್ನಟ್ಟಿಕೊಂಡು ಕಾಡಿಗೆ ಹೋದಾಗ ಕೆಲವುಮಂದಿ ಗೋಪಾಲಕರು ಯಮುನಾನದಿಯ ಒಂದು ಭಾಗದಲ್ಲಿ, ವಿಷಮಿಶ್ರವಾದ ಜಲವುಳ್ಳ ಕಾಳಿಯವೆಂಬ ಮಡುವಿನಲ್ಲಿ, ದನಗಳನ್ನು ನೀರು ಕುಡಿಯುವುದಕ್ಕಾಗಿ ಬಿಟ್ಟು, ತಾವೂ ನೀರನ್ನು ಕುಡಿದು ಮೂರ್ಛಿತರಾಗಿ ಬೀಳುವರು. ಅದನ್ನು ನೋಡಿ ಕೃಷ್ಣನು ಕೋಪಗೊಂಡು, ಅಲ್ಲಿದ್ದ ಕಾಳಿಯನೆಂಬ ಕ್ರೂರಸರ್ಪವನ್ನು ಕಾಲಿಂದ ಮೆಟ್ಟಿ, ಅವನನ್ನು ಭಂಗಿಸಿ, ಆಸ್ಥಳದಿಂದ ಅವನನ್ನು ಹೊರಡಿಸುವನು. ಮೂರ್ಛಿತರಾಗಿ ಬಿದ್ದಿರುವ ಗೋಪಾಲಕರನ್ನೂ ಗೋವುಗಳನ್ನೂ ಅಮೃತವರ್ಷದಿಂದ ಬದುಕಿಸುವನು. ಮತ್ತೊಮ್ಮೆ ಗೋಪಾಲಕರೆಲ್ಲರೂ ರಾತ್ರಿಯಲ್ಲಿ ನಿದ್ರೆಯಿಂದ ಮೈಮರೆತು ಮಲಗಿರುವಾಗ, ಭಯಂಕರವಾದ ಕಾಡುಗಿಚ್ಚು ಸುತ್ತಲೂ ಆವರಿಸಿಕೊಳ್ಳುವುದು. ಅದನ್ನು ನೋಡಿ ಗೋಪಾಲಕರೆಲ್ಲರೂ ಹೆದರಿ, ಬದುಕುವುದಕ್ಕೆ ದಾರಿಕಾಣದೆ, ಕೃಷ್ಣನನ್ನು ಕುರಿತುಮೊರೆಯಿಡುವರು. ಆಗ ಕೃಷ್ಣನು ಅವರೆಲ್ಲರನ್ನೂ ಸ್ವಲ್ಪಕಾಲದವರೆಗೆ ಕಣ್ಣು ಮುಚ್ಚಿಕೊಂಡಿರುವಂತೆ ಹೇಳಿ, ಅವರು ಕಣ್ಣನ್ನು ತೆರೆಯುವಷ್ಟರೊಳಗಾಗಿ ಕಾಡುಗಿಚ್ಚನ್ನು ನುಂಗಿ ಈ ಮಹಾವಿಪತ್ತಿನಿಂದ ಅವರನ್ನು ರಕ್ಷಿಸುವನು. ನಾರದಾ! ಇಂತಹ ಸಾಹಸಕಾರ್ಯಗಳನ್ನು ಪರಮಪುರುಷನೊಬ್ಬನಲ್ಲದೆ ಬೇರೆ ಯಾರು ತಾನೇ ನಡೆಸಬಲ್ಲರು! ಮತ್ತೊಮ್ಮೆ ಕೆಲವು ಮಂದಿ ಬಾಲಕರು ಯಶೋದೆಯ ಬಳಿಗೆ ಹೋಗಿ, ಕೃಷ್ಣನು ಮಣ್ಣನ್ನು ತಿನ್ನುತ್ತಿರುವನೆಂದು ದೂರುವರು. ಆಗ ಯಶೋದೆಯು ಕೋಪದಿಂದ ಬಂದು ಕೃಷ್ಣನನ್ನು ನೋಡಿ, ಅವನನ್ನು ಕಟ್ಟಿ ಹಾಕುವುದಕ್ಕಾಗಿ ಯತ್ನಿಸುವಳು. ಆಗ ಕೃಷ್ಣನು ತಾನು ನಿರ್ದೋಷಿಯೆಂಬುದನ್ನು ತೋರಿಸುವ

ನೆವದಿಂದ, ತನ್ನ ಬಾಯನ್ನು ತೆರೆದು ತೋರಿಸಲು, ಅದರಲ್ಲಿ ಯಶೋದೆಯ ಕಣ್ಣಿಗೆ ಚರಾಚರಾತ್ಮಕವಾದ ಸಮಸ್ತಪ್ರಪಂಚವೂ ಗೋಚರಿಸುವುದು. ಈ ವಿಶ್ವರೂಪವನ್ನು ನೋಡಿ ಯಶೋದೆಯು ಪ್ರಜ್ಞೆತಪ್ಪಿ ಬೀಳುವಳು. ಆಗ ಕೃಷ್ಣನೇ ಆವಳನ್ನು ಸಮಾಧಾನಪಡಿಸಿ ಚೇತರಿಸಿಕೊಳ್ಳುವ ಹಾಗೆ ಮಾಡುವನು. ಮತ್ತೊಮ್ಮೆ ಕೃಷ್ಣನ ತಂದೆಯಾದ ನಂದಗೋಪನು ಸ್ನಾನಾರ್ಥವಾಗಿ ಯಮುನಾನದಿಗೆ ಹೋಗುವನು. ಆಗ ವರುಣದೂತರು ಕೃಷ್ಣನ ಶಕ್ತಿಯನ್ನು ಪರೀಕ್ಷಿಸಬೇಕೆಂದು ಯೋಚಿಸಿ, ನಂದನನ್ನು ಹಿಡಿದು ವರುಣಪಾಶದಿಂದ ಕಟ್ಟಿ ತಮ್ಮ ಲೋಕಕ್ಕೆ ಎಳೆದುಕೊಂಡು ಹೋಗುವರು. ಆಗ ಕೃಷ್ಣನೂ ಕೂಡ ತನ್ನ ತಂದೆಯನ್ನು ಬಿಟ್ಟಿರಲಾರದೆ ವರುಣಲೋಕಕ್ಕೆ ಹೋಗುವನು. ಆಗ ವರುಣನು ಕೃಷ್ಣದರ್ಶನದಿಂದ ಪರಮಾನಂದಭರಿತನಾಗಿ, ಅವನನ್ನು ಪೂಜಿಸಿ, ನಂದನನ್ನು ಕಳುಹಿಸಿಕೊಡುವನು. ಮತ್ತೊಮ್ಮೆ ಬಹಳ ಮಾಯಾವಿಯಾದ ವ್ಯೋಮಾಸುರನೆಂಬವನು, ಕೃಷ್ಣನ ಸಂಗಡಿಗರಾದ ಗೋಪಾಲಬಾಲಕರನ್ನು ಹಿಡಿದು, ಒಂದು ಗುಹೆಯಲ್ಲಿ ಸೇರಿಸಿ ಬಚ್ಚಿಟ್ಟುಕೊಳ್ಳುವನು. ಇದನ್ನು ತಿಳಿದು ಕೃಷ್ಣನು ಆ ದುರಾತ್ಮನನ್ನು ಕೊಂದು ತನ್ನ ಸಂಗಡಿಗರನ್ನು ಬಿಡಿಸಿ ಕರೆತರುವನು. ಮತ್ತೊಮ್ಮೆ ಎಣೆಯಿಲ್ಲದ ಮಹಾಮಹಿಮೆಯುಳ್ಳ ಈ ಕೃಷ್ಣನು, ತನ್ನ ಸಂಗಡಿಗರಾದ ಗೋಪಾಲಕರೆಲ್ಲರೂ ಹಗಲಿನಲ್ಲಿ ಬಹಳವಾಗಿ ಶ್ರಮಪಟ್ಟು ರಾತ್ರಿಯಲ್ಲಿ ಗಾಢನಿದ್ರೆಯಿಂದ ಮಲಗಿರುವಾಗ, ಅವರಿಗೆ ತಿಳಿಯದಹಾಗೆಯೇ ಅವರೆಲ್ಲರನ್ನೂ ವೈಕುಂಠಕ್ಕೆ ಸಾಗಿಸಿ ಅಲ್ಲಿನ ನಿರತಿಶಯಾನಂದವನ್ನು, ಅವರಿಗೆ ತೋರಿಸುವನು. ಒಮ್ಮೆ ಗೋಪಾಲಕರೆಲ್ಲರೂ ದೇವೇಂದ್ರನ ಪ್ರೀತಿಗಾಗಿ ಒಂದು ಯಾಗವನ್ನು ಮಾಡಬೇಕೆಂದು ಯತ್ನಿಸುವರು. ಅದನ್ನು ನೋಡಿ ಕೃಷ್ಣನು, ಇಂದ್ರಪ್ರೀತಿಗಾಗಿ ಯಾಗವನ್ನು ಮಾಡಬೇಕಾದ ಅವಶ್ಯವಿಲ್ಲವೆಂದು ನಿರೋಧಿಸುವನು. ಇದರಿಂದ ದೇವೇಂದ್ರನು ಕೋಪಗೊಂಡು, ಕೃಷ್ಣನನ್ನು ನಿಗ್ರಹಿಸಬೇಕೆಂದೆಣಿಸಿ, ಭಯಂಕರವಾದ ಕಲ್ಲುಮಳೆಯನ್ನು ಕರೆಯುವನು ಈ ಶಿಲಾವರ್ಷದ ಪ್ರಹಾರವನ್ನು ತಡೆಯಲಾರದೆ, ಗೋವುಗಳೂ, ಗೋಪಾಲಕರೂ ಸಾಯುವ ಸ್ಥಿತಿಯಲ್ಲಿರುವುದನ್ನು ನೋಡಿ ಕೃಷ್ಣನು, ಸಮೀಪದಲ್ಲಿದ್ದ ಒಂದು ದೊಡ್ಡ ಬೆಟ್ಟವನ್ನು ತನ್ನ ಕಿರುಬೆರಳಿನಿಂದ ಮೇಲಕ್ಕೆತ್ತಿ, ಅದರಕೆಳಗೆ ಗೋವುಗಳನ್ನೂ, ಗೋಪಾಲಕರನ್ನೂ ನಿಲ್ಲುವಂತೆ ಹೇಳಿ, ಅವರನ್ನು ರಕ್ಷಿಸುವನು. ನಾರದಾ! ಇದರಲ್ಲಿ ಮತ್ತೊಂದಾಶ್ಚರ್ಯವುಂಟು! ಆ ಕೃಷ್ಣನು ತನ್ನ ಕಿರುಬೆರಳಿನಿಂದ ಮೇಲೆತ್ತಿ ಹಿಡಿದ ಆ ಬೆಟ್ಟವನ್ನು ಏಳುದಿನಗಳವರೆಗೆ ಅಹೋರಾತ್ರವೂ ಒಂದೇ ಸಮನಾಗಿ

ಹಿಡಿದಿರುವನು. ಆಗ ದೇವೇಂದ್ರನು ಕೃಷ್ಣನ ಮುಂದೆ ತನ್ನ ವೀರ್ಯವೊಂದೂ ಸಾಗದುದಕ್ಕಾಗಿ, ತಾನಾಗಿಯೇ ಕೃಷ್ಣನ ಬಳಿಗೆ ಬಂದು, ಅವನನ್ನು ಸ್ತುತಿಸಿ ಮರೆಹೊಕ್ಕು ಅವನ ದಯೆಗೆ ಪಾತ್ರನಾಗುವನು. ಮತ್ತೊಮ್ಮೆ ಕೃಷ್ಣನು ವನದಲ್ಲಿ ಸಂಚರಿಸುತ್ತ, ಒಂದಾನೊಂದು ರಾತ್ರಿಯಲ್ಲಿ ಶರತ್ಕಾಲದ ಚಂದ್ರಿಕೆಯು ಭೂಮಿಯೆಲ್ಲವನ್ನೂ ದಟ್ಟವಾಗಿ ವ್ಯಾಪಿಸಿರುವಾಗ, ತಾನು ಕೈಯಲ್ಲಿ ಕೊಳಲನ್ನು ಹಿಡಿದು, ಅವ್ಯಕ್ತಮಧುರವಾದ ಧ್ವನಿಯಿಂದ ನಾನಾಬಗೆಯ ಆಲಾಪಗಳನ್ನು ನುಡಿಸುವುದಕ್ಕೆ ತೊಡಗುವನು. ಆಗ ಈ ಗಾನಮಾಧುರ್ಯವನ್ನು ಕೇಳಿ ಗೋಪಸ್ತ್ರೀಯರೆಲ್ಲರೂ ವ್ಯಾಮೋಹಿತರಾಗಿರುವರು. ಆ ಸಮಯದಲ್ಲಿ ಇವರನ್ನು ಕುಬೇರದೂತನಾದ ಶಂಖಚೂಡನೆಂಬವನು ಕದ್ದೊಯ್ಯಬೇಕೆಂದು ಪ್ರಯತ್ನಿಸುತ್ತಿರುವುದನ್ನು ನೋಡಿ ಕೃಷ್ಣನು, ಆ ಕ್ಷಣವೇ ಅವನನ್ನು ಕೊಲ್ಲುವನು. ನಾರದಾ! ಇಷ್ಟುಮಾತ್ರವೇ ಅಲ್ಲ. ಕೃಷ್ಣನು, ಪ್ರಲಂಬನೆಂದೂ, ಧೇನುಕನೆಂದೂ, ಬಕಾಸುರನೆಂದೂ, ಕೇಶಿಯೆಂದೂ, ಅರಿಷ್ಟನೆಂದೂ, ಪ್ರಸಿದ್ಧರಾದ ರಾಕ್ಷಸರನ್ನೂ, ಚಾಣೂರಮುಷ್ಟಿಕರೆಂಬ ಜಟ್ಟಿಗಳನ್ನೂ, ಕುವಲಯಾಪೀಡವೆಂಬ ಮಹಾಗಜವನ್ನೂ, ತನ್ನ ಬಲದಿಂದ ಕೊಲ್ಲುವನು. ಮತ್ತು ಕಂಸನನ್ನೂ, ಕಾಲಯವನನನ್ನೂ, ನರಕಾಸುರನನ್ನೂ, ಪೌಂಡ್ರಕಾದಿಗಳನ್ನೂ, ಸಾಲ್ವ ದ್ವಿವಿದ ಬಲ್ವಲರನ್ನೂ, ಶಿಶುಪಾಲದಂತವಕ್ತ್ರರನ್ನೂ ಸಪ್ತವೃಷಭಗಳನ್ನೂ, ಶಂಬರವಿಡೂರಥರನ್ನೂ, ರುಕ್ಮಿ ಮೊದಲಾದವರನ್ನೂ, ಭಾರತಯುದ್ಧದಲ್ಲಿ ಮಹಾಧನುರ್ಧಾರಿಗಳಾದ ಕಾಂಭೋಜ, ಮತ್ಸ್ಯ ಕುರು, ಕೇಕಯಾಧಿಪತಿಗಳನ್ನು ತನ್ನ ಕೈಯಿಂದಲೂ, ತನ್ನ ಅಂಶದಿಂದ ಹುಟ್ಟಿದ ಭೀಮಾರ್ಜುನಾದಿಗಳ ಕೈಯಿಂದಲೂ ಕೊಲ್ಲಿಸುವನು. ಈ ಕೃಷ್ಣನ ವೀರ್ಯದಿಂದ ಹತರಾದವರೆಲ್ಲರೂ, ಪ್ರಕೃತಿಸಂಬಂಧವಾದ ಇಂದ್ರಿಯಗಳಿಗೆ ಅಗೋಚರವೆನಿಸಿದ ವೈಕುಂಠವನ್ನು ಹೊಂದುವರು. ಹೀಗೆ ಶ್ರೀಕೃಷ್ಣನು ನಡೆಸುವ ಕಾರ್ಯಗಳೆಲ್ಲವೂ ಅನಂತವಾಗಿಯೂ, ಅದ್ಭುತವಾಗಿಯೂ ಇರುವುವು! ನಾರದಾ! ನನಗೆ ತಿಳಿದಮಟ್ಟಿಗೆ ನಾನು ಸಂಗ್ರಹವಾಗಿ ಆತನ ಚರಿತ್ರವನ್ನು ವಿವರಿಸಿರುವೆನು.

---

## ವ್ಯಾಸಾವತಾರವು

ಭಗವಂತನಾದ ಶ್ರೀಮನ್ನಾರಾಯಣನು ವ್ಯಾಸಮಹರ್ಷಿಯಾಗಿ ಹುಟ್ಟಿ, ಕಲಿಯುಗದಲ್ಲಿ ಮುಂದೆ ಕ್ರಮಕ್ರಮವಾಗಿ ಜನರೆಲ್ಲರೂ ಅಲ್ಪಾಯುಸ್ಸುಳ್ಳವ

ರಾಗಿಯೂ, ಮಂದಬುದ್ಧಿಯುಳ್ಳವರಾಗಿಯೂ ಹುಟ್ಟುವರೆಂದೂ, ಅವರಿಗೆ ವೇದಾರ್ಥವನ್ನು ಗ್ರಹಿಸತಕ್ಕ ಶಕ್ತಿಯಿರಲಾರದೆಂದೂ ಎಣಿಸಿ, ಅಲ್ಪಬುದ್ಧಿಯುಳ್ಳವರೂ ಕೂಡ ಅವುಗಳ ಸಾರಾರ್ಥವನ್ನು ಗ್ರಹಿಸುವಂತೆ ವೇದಗಳನ್ನು ವಿಭಾಗಿಸಿಡುವನು.

———

### ಬೌದ್ಧಾವತಾರವು

ದೇವದ್ವೇಷಿಗಳಾದ ಅಸುರರು ವೈದಿಕಮಾರ್ಗದಲ್ಲಿ ಬಹಳಶ್ರದ್ಧೆಯನ್ನು ವಹಿಸಿ ನಿಂತು, ಮಯನಿರ್ಮಿತಗಳಾಗಿಯೂ, ಎಣೆಯಿಲ್ಲದ ವೇಗವುಳ್ಳವುಗಳಾಗಿಯೂ ಇದ್ದ ಪಟ್ಟಣಗಳಿಂದ ಲೋಕಗಳನ್ನು ನಾಶಮಾಡುತ್ತಿರುವಾಗ ಅವರನ್ನು ಮೋಸಗೊಳಿಸಿ ವಂಚಿಸುವುದಕ್ಕಾಗಿ ಭಗವಂತನು ಪಾಷಂಡವೇಷವನ್ನು ಧರಿಸಿ, ಆಭಾಸಧರ್ಮವಾದ ಆ ಪಾಷಂಡಧರ್ಮವನ್ನೇ ಹಿಡಿದು ಅವರಿಗೂ ಆ ಧರ್ಮವನ್ನು ಪದೇಶಿಸುವನು.

———

### ಕಲ್ಕ್ಯವತಾರವು

ನಾರದಾ! ಸತ್ಪುರುಷರ ಗೃಹಗಳಲ್ಲಿ ಭಗವತ್ಕಥಾಶ್ರವಣವೂ, ಸ್ವಾಹಾ ಸ್ವಧಾ, ವಷಟ್ಕಾರಗಳೂ ಯಾವಾಗ ನಿಂತು ಹೋಗುವುವೋ, ಆಗ ಭಗವಂತನು ಕಲ್ಕ್ಯವತಾರವನ್ನೆತ್ತುವನು. ಅದೇ ಕಲಿಯುಗದ ಕೊನೆ. ಹೀಗೆ ಕಲ್ಕಿರೂಪಿಯಾದ ಭಗವಂತನು, ಕರ್ಮಭ್ರಷ್ಟರೆಲ್ಲರನ್ನೂ ಶಿಕ್ಷಿಸುವನು. ಯಾವಾಗ ಮೂರುವರ್ಣಗಳೂ ಪಾಷಂಡಿಗಳಂತಾಗುವರೋ, ಯಾವಾಗ ಶೂದ್ರರೇ ರಾಜರಾಗುವರೋ ಆಕಾಲದಲ್ಲಿಯೇ ಭಗವಂತನು ಈ ಕಲ್ಕ್ಯವತಾರವನ್ನೆತ್ತಿ ಜನರನ್ನು ನಿಯಮಿಸುವನು.

ಓ ನಾರದಾ! ಸೃಷ್ಟಿವಿಷಯದಲ್ಲಿ ಚತುರ್ಮುಖನಾದ ನಾನೂ, ನವಬ್ರಹ್ಮರೂ, ಮರೀಚಿ ಮೊದಲಾದ ಮಹರ್ಷಿಗಳೂ ಆ ಭಗವಂತನಿಗೆ ಸಾಧನರೂಪವಾಗಿದ್ದುಕೊಂಡು, ಅವನಿಗಧೀನರಾಗಿ ಅವನ ಪ್ರೇರಣೆಯಿಂದಲೇ ಆ ಕಾರ್ಯಗಳನ್ನು ನಡೆಸುವೆವು. ಧರ್ಮವೂ, ಆ ವಿಷ್ಣುವಿನಲ್ಲಿರುವ ಪಾಲನಶಕ್ತಿಯೂ, ಮನುಗಳೂ, ಇಂದ್ರಾದಿದೇವತೆಗಳೂ, ರಾಜರೂ, ಪ್ರಪಂಚದ ರಕ್ಷಣಕಾರ್ಯದಲ್ಲಿ ನಿಯಮಿಸಲ್ಪಟ್ಟಿರುವರು. ಅಧರ್ಮವೂ, ರುದ್ರನೂ, ಕ್ರೋಧಸ್ವಭಾವ

ವುಳ್ಳ ಸರ್ಪಗಳೂ, ಕ್ರೂರಸ್ವಭಾವವುಳ್ಳ ರಾಕ್ಷಸಾದಿಗಳೂ, ಲೋಕಸಂಹಾರಕಾರ್ಯಕ್ಕಾಗಿ ನಿಯಮಿಸಲ್ಪಟ್ಟಿರುವರು. ಇವೆಲ್ಲಕ್ಕೂ ಸರ್ವಾತ್ಮಕನಾದ ಆ ನಾರಾಯಣನೊಬ್ಬನೇ ಪ್ರೇರಕನಾಗಿಯೂ, ಮೂಲಕಾರಣನಾಗಿಯೂ ಇರುವನು. ಈ ಕಾರ್ಯಗಳನ್ನು ನಡೆಸುವ ವಿಷಯದಲ್ಲಿ, ಅವನು ತೋರಿಸತಕ್ಕ ಲೀಲೆಗಳೂ, ಅವತಾರಗಳೂ, ಅದ್ಭುತಕಾರ್ಯಗಳೂ, ಕೊನೆಮೊದಲಿಲ್ಲದಂತಿರುವುವು. ನಾರದಾ! ಭೂಮಿಯಲ್ಲಿರುವ ರೇಣುಗಳನ್ನಾದರೂ ಲೆಕ್ಕಮಾಡಿ ತಿಳಿಯಬಹುದೇಹೊರತು, ಆ ನಾರಾಯಣನ ದಿವ್ಯಚೇಷ್ಟೆಗಳನ್ನು ಮಾತ್ರ ಲೆಕ್ಕವಿಡಲು ಯಾರಿಗೂ ಸಾಧ್ಯವಲ್ಲ ಹಾಗಿದ್ದರೂ ನನಗೆ ತಿಳಿದಷ್ಟನ್ನು ನಿನಗೂ ಸಂಗ್ರಹಿಸಿ ತಿಳಿಸಿರುವೆನು. ವಿಸ್ತರಿಸಿ ಹೇಳಬೇಕೆಂದರೆ ನನಗೂ ಸಾಧ್ಯವಲ್ಲ. ಪೂರ್ವದಲ್ಲಿ ಭಗವಂತನು ತ್ರಿವಿಕ್ರಮಾವತಾರವನ್ನೆತ್ತಿದಾಗ, ನಿರಂಕುಶವಾದ ಈತನ ಪಾದವೇಗದಿಂದ ಕದಲಿ, ತಮ್ಮತಮ್ಮ ನಿವಾಸಗಳಿಂದ ಜಾರಿಬೀಳುತ್ತಿದ್ದ ಪ್ರಾಣಿಗಳನ್ನು ನೋಡಿ, ಸತ್ಯಲೋಕವಾಸಿಗಳೆಲ್ಲರೂ ಭಯದಿಂದ ನಡುಗಿ ಸ್ತಬ್ಧರಾದರು ಅಂತಹ ಮಹಾಪುರುಷನ ದಿವ್ಯಕರ್ಮವನ್ನೂ, ವೀರ್ಯವನ್ನೂ ಯಾರು ತಾನೇ ಲೆಕ್ಕವಿಡಬಲ್ಲರು? ನಾರದಾ! ಆ ವಾಸುದೇವನ ಮಾಯಾಬಲವನ್ನು ನಾನೂ ಕಂಡರಿಯೆನು. ನಿನ್ನ ಒಡಹುಟ್ಟಿದವರಾದ ಸನಕಾದಿಗಳೂ ಕಂಡರಿಯರು! ಅಷ್ಟೇಕೆ? ನಮ್ಮೆಲ್ಲರ ಸಂಗತಿಯೂ ಹಾಗಿರಲಿ! ಆ ಪರಮಪುರುಷನ ಅಪರಾವತಾರವೆಂದೆನಿಕೊಂಡ ಆದಿಶೇಷನು ಎರಡು ಸಾವಿರನಾಲಗೆಯುಳ್ಳವನಾಗಿ, ಅನವರತವೂ ಆ ಭಗವಂತನ ಗುಣಗಳನ್ನು ತನ್ನ ಸಹಸ್ರಮುಖಗಳಿಂದ ಗಾನಮಾಡುತಿದ್ದರೂ, ಇನ್ನೂ ಅವುಗಳ ಕೊನೆಯನ್ನೇ ಕಾಣಲಾರದಿರುವನು ಇನ್ನು ನಮ್ಮಂತವರ ಪಾಡೇನು? ಆದರೆ ಆ ಭಗವಂತನ ಮಾಯಾಬಲವನ್ನತಿಕ್ರಮಿಸಿ ಉತ್ತೀರ್ಣರಾಗುವವರೊಬ್ಬರೂ ಇಲ್ಲವೆ?'' ಎಂದು ನೀನು ಶಂಕಿಸಬಹುದು. ನಾರದಾ! ಅಂತವರೂ ಕೆಲವರುಂಟು. ಹೇಳುವೆನು ಕೇಳು. ಸರ್ವಸಂಗಪರಿತ್ಯಾಗಮಾಡಿ, ನಿಷ್ಕಪಟವಾದ ಭಕ್ತಿಯಿಂದ ತನ್ನನ್ನು ಯಾರು ಸೇವಿಸುವರೋ ಅಂತವರಲ್ಲಿ ಭಗವಂತನು ತಾನಾಗಿಯೇ ಒಲಿಯುವನು. ಹೀಗೆ ಅವನ ದಯೆಗೆ ಪಾತ್ರರಾದವರು, ಸಂಸಾರದಲ್ಲಿ ಸಿಕ್ಕಿ ಕಾಲವನ್ನು ವ್ಯರ್ಥವಾಗಿ ಕಳೆಯಲಾರರು. ಅಂತವರು ನಾಯಿನರಿಗಳಿಗೆ ಆಹಾರಯೋಗ್ಯವಾದ ಈ ದೇಹದಲ್ಲಿ ಅಹಂಕಾರ ಮಮಕಾರಗಳನ್ನು ಬಿಟ್ಟು, ಆ ಭಗವಂತನ ಮಾಯೆಯನ್ನತಿಕ್ರಮಿಸಿ, ಆತನ ನಿಜತತ್ವವನ್ನು ಸ್ವಲ್ಪಮಾತ್ರವಾದರೂ ತಿಳಿದುಕೊಳ್ಳಬಲ್ಲರು. ಅಂತಹ ಮಹಾತ್ಮರು ಎಲ್ಲಿಯೋ ಕೆಲವರು ಮಾತ್ರವೇ ಇರುವರು. ಆ ಭಗವಂತನ ಮಹಿಮೆಗೆ ಕೊನೆಯಿಲ್ಲವೆಂಬುದನ್ನು ಮಾತ್ರ ದೃಢವಾಗಿ ತಿಳಿದು

ಕೊಂಡರೂ ಸಾಕು! ಇದರಿಂದಲೇ ಅವನ ನಿಜಸ್ಥಿತಿಯನ್ನು ಕಂಡಂತಾಗುವುದು. ನಾರದಾ! ಈ ವಿಧವಾದ ಜ್ಞಾನವುಳ್ಳವರು ಯಾರೆಂಬುದನ್ನು ತಿಳಿಸುವೆನು ಕೇಳು. ನಾನೊಬ್ಬನು ಆ ತತ್ತ್ವವನ್ನು ತಿಳಿದು ಮಾಯೆಯನ್ನು ದಾಟಿರುವೆನು. ಕೇವಲ ಭಕ್ತಿಯೋಗಾವಲಂಬಿಗಳಾದ ಸನಕಾದಿಗಳೂ ಅದನ್ನು ತಿಳಿದಿರುವರು. ಹಾಗೆಯೇ ಶಂಕರನೂ, ದೈತ್ಯಕುಲ ಪ್ರಭುವಾದ ಪ್ರಹ್ಲಾದನೂ, ಸ್ವಾಯಂಭುವಮನುವೂ, ಆತನ ಪತ್ನಿಯಾದ ಶತರೂಪೆಯೆಂಬವಳೂ, ಅವಳ ಮಕ್ಕಳಾದ ಪ್ರಿಯವ್ರತಾದಿಗಳೂ, ಇವರ ಸಹೋದರಿಯರಾದ ದೇವಹೂತಿ ಮೊದಲಾದ ನಾರೀಮಣಿಗಳೂ, ಆ ಪರಮಪುರುಷನ ತತ್ವವನ್ನು ತಿಳಿದು ಮಾಯೆಯನ್ನು ದಾಟಿರುವರು ಮತ್ತು ಪ್ರಾಚೀನಬರ್ಹಿಯೆಂಬ ರಾಜೇಂದ್ರನೂ, ಋಭುಮಹರ್ಷಿಯೂ, ಉತ್ತಾನಪಾದನ ಮಗನಾದ ಧ್ರುವನೂ, ಇಕ್ಷ್ವಾಕು, ದಿಲೀಪ, ಭೀಷ್ಮ, ಯಯಾತಿ, ಮುಚುಕುಂದ, ರಂತಿದೇವ, ಶ್ರುತದೇವ, ವಿಭೀಷಣ, ವಿದುರ, ದೇವಲ, ಜನಕ, ಹನುಮದಾದಿ ಮಹಾತ್ಮರೂ, ಗಯ, ನಹುಷಾದಿಗಳೂ, ಸೌಭರಿಯೂ, ಉದಂಕನೂ, ಶಿಬಿಯೂ, ಪಿಪ್ಪಲಾದನೂ, ಪರಾಶರನೂ, ಭೂರಿಷೇಣನೂ, ಉಪೇಂದ್ರದತ್ತನೂ, ಪಾರ್ಥನೂ, ಶ್ರುತಸೇನನೂ, ಇವರಂತೆ ಇನ್ನೂ ಕೆಲವರೂ ಆ ಭಗವಂತನಲ್ಲಿ ತಮಗಿರುವ ಭಕ್ತಿವಿಶೇಷದಿಂದ ಆತನನ್ನು ತಿಳಿದು ಮಾಯೆಯನ್ನು ದಾಟಿರುವರು. ನಾರದಾ! ಮತ್ತೊಂದು ರಹಸ್ಯವನ್ನು ಹೇಳುವೆನು ಕೇಳು! ಸ್ತ್ರೀಯರಾಗಲಿ, ಶೂದ್ರರಾಗಲಿ, ಬೇಡರಾಗಲಿ, ಮ್ಲೇಚ್ಛರಾಗಲಿ, ಪಾಪಜೀವಿಗಳಾದ ಬೇರೆ ಯಾರಾಗಲಿ, ಆ ನಾರಾಯಣನ ಪಾದಾರವಿಂದಗಳನ್ನೇ ನಂಬಿ, ನಿರಂತರವೂ ಆತನ ಸೇವೆಯಲ್ಲಿದ್ದರೆ ಅವನ ದಯೆಗೆ ಪಾತ್ರರಾಗಿ, ಅವನ ತತ್ವವನ್ನು ತಿಳಿದು ಮಾಯೆಯನ್ನು ತಪ್ಪಿಸಿಕೊಳ್ಳಬಲ್ಲರು. ಹೀಗಿರುವಾಗ ಧಾರಣಾಯೋಗದಲ್ಲಿ ಸಮರ್ಥರಾದ ಮಹಾತ್ಮರು ಅವನನಿಜವನ್ನು ತಿಳಿದು ಮಾಯೆಯನ್ನತಿಕ್ರಮಿಸಬಲ್ಲರೆಂಬುದನ್ನು ಹೇಳಬೇಕಾದುದೇನು? ನಾರದಾ! ಹಿಂದೆ ಹೇಳಿದಂತೆ ನಾವೆಲ್ಲರೂ ಆ ಭಗವಂತನ ಸ್ವರೂಪವನ್ನು ಯಾವ ವಿಧವಾಗಿ ತಿಳಿದಿರುವೆವೋ, ಅದೇರೀತಿಯಾಗಿ ನಿನಗೂ ಆತನಸ್ವರೂಪವನ್ನು ಸಂಗ್ರಹಿಸಿ ಹೇಳುವೆನು ಕೇಳು! ದುಃಖಮೋಹಾದಿ ವಿಕಾರಗಳೊಂದೂ ಇಲ್ಲದೆ, ನಿತ್ಯಾನಂದಸ್ವರೂಪವಾಗಿ, ವೇದಾಂತಗಳಿಂದ ಪರಬ್ರಹ್ಮವೆಂದು ಹೇಳಲ್ಪಡುವುದು ಯಾವುದೋ ಅದೇ ಆ ಪರಮಪುರುಷನ ಸ್ವರೂಪವು. ಆದರೆ “ವೇದವಾಕ್ಯಪ್ರಮಾಣಗಳಿಂದ ಹೊರತು ಬೇರೆ ಯಾವ ಮಾರ್ಗದಿಂದಲೂ ಆ ಸ್ವರೂಪವನ್ನು ತಿಳಿಯುವುದಕ್ಕೆ ಸಾಧ್ಯವಿಲ್ಲವೆ?” ಎಂದು ನೀನು ಕೇಳಬಹುದು! ಸಾಧ್ಯವಿಲ್ಲ. ಏಕೆಂದರೆ, ಜಡಸ್ವರೂಪವಾದ ಪ್ರಕೃತಿಯ (ಮಾಯೆಯ) ಕಾರ್ಯಗಳಾದ ಮನಸ್ಸು ಮೊದಲಾದ ಇಂದ್ರಿಯಗಳು ಅವನ ಸ್ವರೂಪವನ್ನು ತಾವಾಗಿ ತಿಳಿದು

ಕೊಳ್ಳಲಾರವು. ಆದುದರಿಂದ ಅವನ ಸ್ವರೂಪವನ್ನು ವೇದವಾಕ್ಯಪ್ರಮಾಣ ಗಳಿಂದ ತಿಳಿದುಕೊಳ್ಳಬೇಕಲ್ಲದೆ, ಬೇರೆ ವಿಧವಾದ ಪ್ರತ್ಯಕ್ಷಾದಿಪ್ರಮಾಣಗಳಿಂದ ತಿಳಿಯಲು ಸಾಧ್ಯವಿಲ್ಲ. ಇಷ್ಟು ಮಾತ್ರವಲ್ಲದೆ, ವೇದಗಳಲ್ಲಿಯೂ ಪೂರ್ವಭಾಗದಲ್ಲಿ ಹೇಳಲ್ಪಟ್ಟ ವಿಷಯಗಳಿಂದ ಯಥಾವತ್ತಾಗಿ ಆ ಭಗವಂತನ ಸ್ವರೂಪವನ್ನು ತಿಳಿಯುವುದು ಸಾಧ್ಯವಲ್ಲ. ಸಾಧ್ಯಸಾಧನೆ ಮೊದಲಾದ ವಿಷಯಗಳೊಡನೆ ಕೇವಲ ಕರ್ಮಕಲಾಪಗಳನ್ನೇ ವಿಶೇಷವಾಗಿ ಬೋಧಿಸುತ್ತಿರುವ ವೇದದ ಪೂರ್ವಭಾಗವು ಆ ಪರಮಾತ್ಮನ ವಿಷಯವನ್ನು ಪೂರ್ಣವಾಗಿ ತಿಳಿಸಲಾರವು. ಆದುದರಿಂದ ನಾವು ವೇದಾಂತಗಳೆನಿಸುವ ಉಪನಿಷತ್ತುಗಳಿಂದಲೇ ಆ ಪರಮಾತ್ಮತತ್ವವನ್ನು ತಿಳಿದುಕೊಳ್ಳಬೇಕಾಗಿರು ವುದು. ಆ ಪರಮಾತ್ಮಸ್ವರೂಪವು ಕೇವಲ ಸುಖರೂಪವಾದುದು. ಆದರೆ "ಜೀವನಿಗೂ ಆ ವಿಧವಾದ ಸುಖಾನುಭವವುಂಟಲ್ಲವೆ?" ಎಂದರೆ, ನಾರದಾ! ಜೀವಾತ್ಮ ಪರಮಾತ್ಮರಲ್ಲಿರುವ ಸುಖದಲ್ಲಿ ಬಹಳ ತಾರತಮ್ಯವುಂಟು! ಜೀವಾ ತ್ಮನು ಅನುಭವಿಸುವ ಸುಖಕ್ಕೆ ಎಲ್ಲೆಯುಂಟು! ಮತ್ತು ಇವನ ಸುಖವು ದುಃಖ ಮಿಶ್ರವಾಗಿರುವುದು! ದುಃಖಸಂಬಂಧವಿಲ್ಲದೆಯೂ, ಎಲ್ಲೆಯಿಲ್ಲದೆಯೂ ಇರುವ ನಿತ್ಯಾನಂದಸ್ವರೂಪವು ಆ ಪರಮಾತ್ಮನೊಬ್ಬನಿಗೇ ಹೊರತು ಬೇರೊಬ್ಬರಿಗಿಲ್ಲವು. ಜೀವನಂತೆ ಅವನಿಗೆ ಕರ್ಮಸಂಬಂಧವೂ ಇರುವುದಿಲ್ಲ. ಆ ಸ್ವರೂಪವು ಪ್ರಕೃತಿ ಪುರುಷರಿಗಿಂತಲೂ ವಿಲಕ್ಷಣವಾಗಿ, ವಿಕಾರವಿಲ್ಲದೆ, ಯಾವಾಗಲೂ ಏಕಸ್ವರೂಪ ವಾಗಿರುವುದು. ಆ ಪರಮಾತ್ಮನು ಸಮಸ್ತ ಚಿದಚಿತ್ತುಗಳಲ್ಲಿಯೂ ಅಂತರ್ಯಾಮಿ ಯಾಗಿ ನೆಲೆಗೊಂಡಿದ್ದರೂ, ಆಯಾ ವಸ್ತುವಿನಲ್ಲಿರತಕ್ಕ ದೋಷಗಳನ್ನು ತನಗೆ ಅಂಟಿಸಿಕೊಳ್ಳದೆ ಇರಬಲ್ಲನು. ಆತನ ಸ್ವರೂಪವು ಕೇವಲಜ್ಞಾನಮಯವಾದು ದರಿಂದ, ಯಾವಾಗಲೂ ಜಡತ್ವವನ್ನು ಹೊಂದದು. ಅದಕ್ಕೆ ಆಶ್ರಿತರ ಸಂಸಾರ ಬಂಧವನ್ನು ನೀಗಿಸತಕ್ಕ ಶಕ್ತಿಯುಂಟು! ಆ ಭಗವಂತನು ಹಸಿವು ಬಾಯಾರಿಕೆ ಮುಂತಾದ ವಿಕಾರಗಳಿಗೆ ಈಡಾಗತಕ್ಕವನಲ್ಲ. ಆತನು ತನ್ನನ್ನು ಉಪಾಸನೆ ಮಾಡತಕ್ಕವರಿಗೂ ಆ ಬಗೆಯ ವಿಕಾರಗಳಿಲ್ಲದಂತೆ ತಪ್ಪಿಸಿ ಶಾಂತಿಯನ್ನುಂ ಟುಮಾಡಬಲ್ಲನು. ಯೋಗೀಶ್ವರರು ಮಾತ್ರ ಜೀವಾತ್ಮನಿಗೆ ಸಹಚರವಾದ ಮನ ಸ್ಸನ್ನು ಚೆನ್ನಾಗಿ ನಿಗ್ರಹಿಸಿ ಆ ಭಗವಂತನ ಸ್ವರೂಪದಲ್ಲಿ ಅದನ್ನು ದೃಢವಾಗಿ ನೆಲೆಗೊಳಿಸಿ, ಸಮಸ್ತಸಂಶಯಗಳನ್ನೂ ನೀಗಿಬಿಡುವರು. ತಾನಾಗಿಯೇ ಬೇಕಾ ದಷ್ಟು ಮಳೆಯನ್ನು ಸುರಿಸಬಲ್ಲ ದೇವೇಂದ್ರನು, ಕೊಳ ಬಾವಿ ಮುಂದಾದುವು ಗಳನ್ನು ತೋಡುವುದಕ್ಕೆ ಬೇಕಾದ ಗುದ್ದಲಿ, ಮುಂತಾದ ಸಾಧನೆಗಳನ್ನು ಲಕ್ಷ್ಯಿಸ

ದೆ ತೂರಿದುಬಿಡುವಂತೆ, ಭಗವದುಪಾಸಕರು, ಸ್ವರ್ಗಾದಿಸುಖಗಳೆಂಬ ಸ್ವಲ್ಪಫಲಗಳಿಗೆ ಸಾಧನವಾದ ಕರ್ಮಸಂಬಂಧವನ್ನು ತೂರಿದುಬಿಡುವರು. "ಆದರೆ ಕರ್ಮವನ್ನು ಬಿಟ್ಟರೆ ಸ್ವರ್ಗಾದಿಸುಖಗಳನ್ನಪೇಕ್ಷಿಸತಕ್ಕವರ ಕೋರಿಕೆಯು ನೆರವೇರುವುದು ಹೇಗೆ?" ಎಂದು ಕೇಳುವೆಯಾ? ನಾರದಾ! ಭಗವದುಪಾಸನವನ್ನು ಮಾಡತಕ್ಕವರಿಗೆ ಯಾವವಿಧದಲ್ಲಿಯೂ ಕೊರತೆಯಿಲ್ಲ! ಆತನು ಸರ್ವಾಂತರ್ಯಾಮಿಯಾದುದರಿಂದ ವರ್ಣಾಶ್ರಮೋಚಿತಗಳಾದ ಕರ್ಮಗಳಿಗೆ ಫಲವನ್ನು ಕೊಡಬಲ್ಲವನೂ ಆತನಲ್ಲದೆ ಬೇರೆಯಲ್ಲ. ಆದುದರಿಂದ ಸ್ವರ್ಗಾದಿಗಳನ್ನು ಕೋರುವವರೂ ಭಗವದುಪಾಸನದಿಂದಲೇ ತಮ್ಮ ಕೋರಿಕೆಯನ್ನು ಈಡೇರಿಸಿಕೊಳ್ಳಬೇಕು. ಇಂದ್ರಾದಿದೇವತೆಗಳಲ್ಲಿರುವ ಮಹಿಮೆಯೂ ಕೂಡ ಅವನಲ್ಲಿ ಅಂತರಾತ್ಮನಾದ ಭಗವಂತನಿಂದಲೇ ಉಂಟಾದುದಲ್ಲದೆ ಬೇರೆಯಲ್ಲ. ಆದರೆ "ಭಗವಂತನು ಸರ್ವಾಂತರ್ಯಾಮಿಯಾಗಿರುವಾಗ, ಚೇತನಾಚೇತನಗಳಲ್ಲಿರುವ ದೋಷಕ್ಕೆ ಅವನೂ ಭಾಗಿಯಾಗದಿರುವನೆ?" ಎಂದು ನೀನು ಶಂಕಿಸಬೇಕಾದುದಿಲ್ಲ. ಆ ಭಗವಂತನು ಕರ್ಮಸಂಬಂಧದಿಂದುಂಟಾಗುವ ಉತ್ಪತ್ತಿ ವಿನಾಶಾದಿಗಳೊಂದೂ ಇಲ್ಲದವನು. ಆದುದರಿಂದ, ಈ ಮನುಷ್ಯದೇಹಕ್ಕೆ ಕಾರಣಗಳಾದ ಭೂತಸೂಕ್ಷ್ಮಗಳು ಕದಲಿಹೋಗುವುದರಿಂದ, ಈ ದೇಹವು ನಶಿಸಿಹೋದರೂ, ಆ ದೇಹದಲ್ಲಿ ಅಂತರ್ಯಾಮಿಯಾಗಿರುವ ಭಗವಂತನು ಮಾತ್ರ ಆಕಾಶದಂತೆ ನಿತ್ಯನಾಗಿರುವನೇ ಹೊರತು ದೇಹದೊಡನೆ ನಾಶಹೊಂದಲಾರನು. ಶರೀರಗತವಾದ ದೋಷಕ್ಕೆ ಆತನೂ ಭಾಗಿಯಾಗಿದ್ದಪಕ್ಷದಲ್ಲಿ, ಅವನೂ ಆ ಶರೀರದಂತೆಯೇ ನಾಶಕ್ಕೀಡಾಗಬೇಕಲ್ಲವೆ! ಹಾಗಿಲ್ಲದುದರಿಂದಲೇ ಪ್ರಕೃತಿಸಂಬಂಧವಾದದೋಷವು ಅವನಲ್ಲಿ ಅಂಟಲಾರದು. ಓ ನಾರದಾ! ಲೋಕಕಾರಣನಾಗಿಯೂ, ಜ್ಞಾನಾದಿಷಾಡ್ಗುಣ್ಯಪರಿಪೂರ್ಣನಾಗಿಯೂ ಇರುವ ಆ ಭಗವಂತನ ವಿಭೂತಿಗಳೆಲ್ಲವನ್ನೂ ನಿನಗೆ ನಾನು ಸಂಗ್ರಹವಾಗಿ ವಿವರಿಸಿರುವೆನು. ಇದನ್ನೇ ನೀನು ಇನ್ನೂ ವಿವರವಾಗಿ ಇತರರಿಗೂ ಬೋಧಿಸಬೇಕು. ಈ ಭಗದ್ವಿಭೂತಿವೃತ್ತಾಂತವನ್ನು ಮೊದಲು ಭಗವಂತನು ತಾನಾಗಿಯೇ ನನಗೆ ತಿಳಿಸಿದನು. ಸಾಕ್ಷಾತ್ತಾಗಿ ಭಗವಂತನಿಂದ ಬಂದುದರಿಂದಲೇ ಇದು ಭಾಗವತವೆನಿಸಿರುವುದು. ಈ ವಿಷಯವನ್ನು ನೀನು ಚೆನ್ನಾಗಿ ಮನಸ್ಸಿನಲ್ಲಿ ಮನನಮಾಡಿಕೊಂಡು, ಸರ್ವಾಂತರಾತ್ಮನಾದ ಆ ಭಗವಂತನಲ್ಲಿ ಮನುಷ್ಯರಿಗೆ ದೃಢವಾದ ಭಕ್ತಿಯುಂಟಾಗುವಂತೆ ಅದನ್ನು ಲೋಕದಲ್ಲಿ ಚೆನ್ನಾಗಿ ವಿವರಿಸಿ, ಚೇತನರನ್ನುದ್ಧರಿಸಬೇಕು. ನಾರದಾ! "ಹಾಗಿದ್ದರೆ ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳಿಂದ ಪ್ರಯೋಜನವೇನು?" ಎಂದು ನೀನು ಕೇಳಬಹುದು. ಮನುಷ್ಯರು ಭೂಮಿಯಲ್ಲಿ ಹುಟ್ಟಿ,

ತಾವು ನಡೆಸುವ ಕರ್ಮಕಲಾಪಗಳಿಂದ ಭಗವಂತನನ್ನು ಸಂತೋಷಪಡಿಸದಿದ್ದ ಪಕ್ಷದಲ್ಲಿ, ಅಂತಹ ಕರ್ಮಗಳೆಲ್ಲವೂ ನಿಷ್ಫಲವೆಂಬುದರಲ್ಲಿ ಸಂದೇಹವೇ ಇಲ್ಲ! ಅತನನ್ನು ಸಂತೋಷಪಡಿಸಬೇಕಾದರೆ ಭಕ್ತಿಗಿಂತಲೂ ಮೇಲಾದ ಬೇರೆ ಉಪಾಯವಿಲ್ಲ ಆದುದರಿಂದ ಎಂತವನಾದರೂ ಭಕ್ತಿಯನ್ನೇ ಮುಖ್ಯವಾಗಿ ಹಿಡಿಯಬೇಕೇ ಹೊರತು, ತ್ರಿವರ್ಗಸಾಧನಗಳಾದ ಕರ್ಮವನ್ನು ಮಾತ್ರವೇ ಅವಲಂಬಿಸಬಾರದು ಆ ಭಗವಂತನಲ್ಲಿ ದೃಢವಾದ ಭಕ್ತಿಯೊಂದು ಮಾತ್ರ ಹುಟ್ಟಿದ ಪಕ್ಷದಲ್ಲಿ, ವರ್ಣಾಶ್ರಮಾಚಾರಗಳಿಂದಲಾಗಲಿ, ದಾನದಿಂದಲಾಗಲಿ, ತಪಸ್ಸಿನಿಂದಾಗಲಿ, ವೇದಾಧ್ಯಯನದಿಂದಾಗಲಿ, ಪಡೆಯಬೇಕಾದ ಪ್ರಯೋಜನವೊಂದೂ ಇರುವುದಿಲ್ಲ. ಭಕ್ತಿಹೀನನಾದವನು ಇವೆಲ್ಲವನ್ನೂ ಕ್ರಮವಾಗಿ ನಡೆಸಿದರೂ ಫಲವಿಲ್ಲ. ಮಾಯೆಯಲ್ಲಿ ಕಟ್ಟಿಬಿದ್ದಿರುವ ನನುಗೆ, ಆ ವಿಧವಾದ ದೃಢಭಕ್ತಿಯು ಹೇಗೆ ಹುಟ್ಟುವುದೆಂದು ಕೇಳುವೆಯಾ? ನಾರದಾ! ಆ ಮಾಯೆಯನ್ನು ಬಿಡಿಸಿಕೊಳ್ಳುವುದೇನೂ ಅಷ್ಟೊಂದು ಅಸಾಧ್ಯಕಾರ್ಯವಲ್ಲ! ಯಾವಾಗಲೂ ಆ ಭಗವಂತನ ಚರಿತ್ರಗಳನ್ನೂ ಕೇಳುತ್ತ, ಆಗಾಗ ಅವುಗಳನ್ನು ಗಾನಮಾಡುತ್ತ, ಅನವರತವೂ ಆ ಮಹಾತ್ಮನ ನಾಮವನ್ನು ಸ್ಮರಿಸುತ್ತಿರುವವರನ್ನು, ಮಾಯೆಯು ಎಷ್ಟುಮಾತ್ರವೂ ಮೋಹಗೊಳಿಸಲಾರದು! ಭಕ್ತಿಯೂ ಅವರಲ್ಲಿ ತಾನಾಗಿಯೇ ಹುಟ್ಟದಿರದು. ಆದುದರಿಂದ ನಾನು ಹೇಳಿದಂತೆ "ಭಗವಚ್ಚರಿತ್ರಗಳನ್ನು ನೀನು ವಿಶದೀಕರಿಸಿ ಮನುಷ್ಯರಿಗೆ ಭಕ್ತಿಯುಂಟಾಗುವಂತೆ ಮಾಡಬೇಕಾದುದು ಅತ್ಯವಶ್ಯವು" ಎಂದು ಬ್ರಹ್ಮನು ನಾರದನಿಗೆ ಉಪದೇಶಿಸಿ ಕಳುಹಿಸಿದನು. ಇದು ಏಳನೆಯ ಅಧ್ಯಾಯವು.

———

{ ಪರೀಕ್ಷಿದ್ರಾಜನು ಇನ್ನೂ ಬೇರೆಬೇರೆ ವಿಷಯಗಳನ್ನು ಕುರಿತು ಶುಕಮುನಿಯನ್ನು ಪ್ರಶ್ನೆಮಾಡಿದುದು. }

ಈ ವಿಧವಾದ ಬ್ರಹ್ಮನಾರದ ಸಂವಾದವನ್ನು ಕೇಳಿದ ಮೇಲೆ, ಪರೀಕ್ಷಿದ್ರಾಜನು ತಿರುಗಿ ಶುಕಮುನಿಯನ್ನು ಕುರಿತು. "ಎಲೈ ಯೋಗೀಂದ್ರನೆ! ತತ್ವಜ್ಞನಾದ ನಾರದನು, ತನ್ನ ಜನಕನಾದ ಚತುರ್ಮುಖನಿಂದ ಪ್ರಕೃತಿಸಂಬಂಧವಿಲ್ಲದ ಭಗವಂತನ ಗುಣಗಳನ್ನು ಲೋಕದಲ್ಲಿ ಪ್ರಚಾರಗೊಳಿಸಬೇಕೆಂದು ಪ್ರೇರಿಸಲ್ಪಟ್ಟನಷ್ಟೆ?! ಅದರಂತೆ ನಾರದನು ಲೋಕದಲ್ಲಿ ಯಾರು ಯಾರಿಗೆ ಯಾವ ಯಾವ ವಿಧದಿಂದ ತತ್ವಜ್ಞಾನವನ್ನು ತಿಳಿಸಿದನು? ಅವೆಲ್ಲವನ್ನೂ ಕೇಳಬೇಕೆಂದು ನನ್ನಮನಸ್ಸು ಬಹಳವಾಗಿ ಕುತೂಹಲಗೊಂಡಿರುವುದು. ಎಲೈ ಮಹಾತ್ಮನೆ! ಅವೆಲ್ಲವನ್ನೂ

ನೀನು ಕೃಪೆಯಿಟ್ಟು ನನಗೆ ತಿಳಿಸಬೇಕು! ಆ ಭಗವಂತನ ಚರಿತ್ರಗಳೆಲ್ಲವೂ ಸಮಸ್ತ ವಿಧದಲ್ಲಿಯೂ ಮಂಗಳಪ್ರದಗಳಾದುದರಿಂದ ಆ ಚರಿತ್ರಗಳೆಲ್ಲವನ್ನೂ ವಿವರವಾಗಿ ತಿಳಿಸು! ಅವುಗಳನ್ನು ನೀನು ಉಪದೇಶಿಸುವುದರಿಂದ ನನ್ನ ಮನಸ್ಸಿನ ಸಂಶಯಗಳೆಲ್ಲವೂ ನೀಗಿ ನಿಷ್ಕಲ್ಮಷವಾದ ಮೇಲೆ, ಆ ಪರಮಾತ್ಮನಲ್ಲಿ ಅದನ್ನು ನೆಲೆಗೊಳಿಸಿ ತುಚ್ಛವಾದ ಈ ದೇಹವನ್ನು ಬಿಟ್ಟು ಬಿಡುವೆನು. ಓ! ಮಹಾತ್ಮಾ! ಸರ್ವಾಂತರ್ಯಾಮಿಯಾದ ಆ ಭಗವಂತನ ಕಥೆಗಳನ್ನು ಕಿವಿಯಿಂದ ಕೇಳುತ್ತ, ಆತನನ್ನು ಧ್ಯಾನಿಸುತಿದ್ದ ಹಾಗೆಯೇ ಈ ದೇಹವನ್ನು ತ್ಯಜಿಸಬೇಕೆಂದುದ್ದೇಶಿಸುವೆನು ಅವನ ಚರಿತ್ರಗಳನ್ನು ಕೇಳಿದ ಮಾತ್ರಕ್ಕೆ, ಭಗವಂತನು ತಾನಾಗಿ ಬಂದು ಅವರ ಹೃದಯದಲ್ಲಿ ನೆಲೆಸುವನು. ಆ ಭಗವಂತನ ಕಥೆಗಳನ್ನು ಭಕ್ತಿಪೂರ್ವಕವಾಗಿ ಕಿವಿಯಿಂದ ಕೇಳುತಿದ್ದರೆ, ಅಂತವನ ಕರ್ಣಮಾರ್ಗದಿಂದಲೇ ಭಗವಂತನು ಹೃದಯದಲ್ಲಿ ಪ್ರವೇಶಿಸುವನೆಂದೂ, ಶರತ್ಕಾಲವು ಕೆರೆಕೊಳಗಳಲ್ಲಿರುವ ನೀರಿನ ಕಲ್ಮಷವನ್ನು ನೀಗಿಸುವಂತೆ, ಭಗವಂತನು ಅಂತವರ ಹೃದಯದಲ್ಲಿರುವ ಕಲ್ಮಷವನ್ನು ನೀಗಿಸಿ ನಿರ್ಮಲವಾಗಿ ಮಾಡುವನೆಂದೂ ನಾನು ಹಿರಿಯರಿಂದ ಕೇಳಿರುವೆನು. ಇದಲ್ಲದೆ ಲೋಕದಲ್ಲಿ ಜನರು ಬೇರೆಬೇರೆ ಕಾರ್ಯಗಳಿಗಾಗಿ ದೇಶದೇಶಗಳನ್ನು ಸುತ್ತಿ, ಆ ಸುತ್ತಾಟದಿಂದ ಬಹಳವಾಗಿ ಬಳಲಿ, ತಮ್ಮ ಮನೆಗೆ ಬಂದು ಸೇರಿದ ಮೇಲೆ, ವಿಶ್ರಾಂತಿಸುಖದಲ್ಲಿಯೇ ಇದ್ದುಬಿಡುವಂತೆ ಭಗವದ್ಭಕ್ತರೂ ಕೂಡ, ಬಹಳದಿನಗಳವರೆಗೆ ಸಂಸಾರದಾಧೆಯಲ್ಲಿ ನರಳಿ, ಆತನ ಕೃಪೆಯಿಂದ ಅದನ್ನು ತಪ್ಪಿಸಿಕೊಂಡು, ಅವನ ಪಾದಾರವಿಂದಗಳನ್ನು ಸೇರಿದ ಮೇಲೆ, ಅವನನ್ನು ಬಿಟ್ಟುಬರುವುದಕ್ಕೆ ಎಷ್ಟುಮಾತ್ರವೂ ಇಷ್ಟಪಡಲಾರರು. ಇದಲ್ಲದೆ ಸಹಜವಾಗಿ ಭೌತಿಕದೋಷವಿಲ್ಲದ ಜೀವನಿಗೆ, ಆ ಭೂತಸೂಕ್ಷ್ಮಗಳ ಸಂಯೋಗದಿಂದಲೇ ಶರೀರಸಂಬಂಧವುಂಟಾಗುವುದೆಂದು ಕೇಳಿದೆನು. ಜೀವನಿಗೆ ಈ ವಿಧವಾದ ದೇಹಸಂಬಂಧವುಂಟಾಗುವುದು, ಬೇರೆ ಯಾವ ಕಾರಣವೂ ಇಲ್ಲದೆ ಸ್ವೇಚ್ಛೆಯಿಂದಲೇ ಸಂಭವಿಸುವುದೇ? ಅಥವಾ ಇದಕ್ಕೆ ಕಾರಣವೇನಾದರೂ ಉಂಟೇ? ಆವಿಷಯದಲ್ಲಿ ನಿನಗೆ ತಿಳಿದ ಸಂಗತಿಯನ್ನು ವಿವರಿಸಬೇಕು. ಸಮಸ್ತಲೋಕಗಳ ಸ್ಥಿತಿಗೂ ಕಾರಣವಾಗಿ ಆಲೋಕಸನ್ನಿವೇಶವನ್ನೇ ಆಕಾರವನ್ನಾಗಿ ಹೊಂದಿದ ಕಮಲವು, ಯಾವನ ನಾಭಿಯಿಂದ ಮೊದಲು ಹೊರಟಿತೋ. ಅಂತಹ ಪರಮಪುರುಷನ ಸ್ವರೂಪವು, ಬೇರೆಬೇರೆಯಾಗಿ ವಿಭಾಗಿಸಿ ಇಷ್ಟೇ ಎಂದು ನಿರ್ಣಯಿಸಬಹುದಾದ ಅವಯವವುಳ್ಳುದೆಂದೂ ನಿಮ್ಮ ವಾಕ್ಯದಿಂದ ತೋರುವುದು. ಜಗತ್ಕಾರಣನಾದ ಪುರುಷನು (ವಿರಾಟ್ಪುರುಷನು) ಎಷ್ಟು ಪ್ರಮಾಣವುಳ್ಳವನು?

ಜಗದ್ರೂಪವಾದ ಪದ್ಮದಲ್ಲಿ ಹುಟ್ಟಿದ ಬ್ರಹ್ಮನು ಯಾವನ ಅನುಗ್ರಹದಿಂದ ಈ ಲೋಕವನ್ನು ಸೃಷ್ಟಿಸತಕ್ಕ ಶಕ್ತಿಯನ್ನು ಪಡೆದಿರುವನು? ಮತ್ತು ಆ ಬ್ರಹ್ಮನು ಪರಮಪುರುಷನ ರೂಪವನ್ನು ಯಾವ ವಿಧದಿಂದ ಕಂಡುಕೊಂಡನು? ಇದಲ್ಲದೆ ಹಿಂದೆ ನೀವು ಹೇಳಿದ ವಾಕ್ಯಗಳಿಂದ ಸರ್ವೇಶ್ವರನೂ ಕೂಡ ಸಂಸಾರದಲ್ಲಿರುವ ಜೀವನಂತೆ ಒಬ್ಬನಾಗಿ ಗೋಚರಿಸಿದನೆಂದು ಹೇಳಿದ ಹಾಗೆ ತೋರುವುದು. ಹಾಗಿದ್ದ ಪಕ್ಷದಲ್ಲಿ ಜೀವನಿಗಿಂತಲೂ ಪರಮಾತ್ಮನಲ್ಲಿರುವ ವಿಶೇಷವೇನು? ಆ ಪರಮ ಪುರುಷನು, ಸೃಷ್ಟಿಸ್ಥಿತಿಸಂಹಾರಗಳಿಗೆ ಕಾರಣವಾದ ಮಾಯೆಯನ್ನು ಬಿಟ್ಟು, ಲೋಕವ್ಯಾಪಾರಗಳಲ್ಲಿಯೂ ವಿಮುಖನಾಗಿ ಸಮಸ್ತಗುಣಗಳಿಗೂ ಆಶ್ರಯನಾಗಿ ಯಾವ ಸ್ಥಳದಲ್ಲಿ ಶಯನಿಸುತ್ತಿರುವನು? ಪೂರ್ವಕಲ್ಪದಲ್ಲಿ ಅನಿರುದ್ಧನಿಂದ ಹುಟ್ಟಿದ ಚತುರ್ಮುಖನ ಅವಯವದಿಂದಲೇ ಸಮಸ್ತಲೋಕಪಾಲಕರಿಂದ ಕೂಡಿದ ಈ ಲೋಕಗಳೆಲ್ಲವೂ ನಿರ್ಮಿತವಾದುದೆಂದು ಹೇಳಿದಿರಷ್ಟೆ? ಇದರಿಂದ ಬ್ರಹ್ಮನು ಪೂರ್ವಕಲ್ಪಾನುಸಾರವಾಗಿಯೇ ಸೃಷ್ಟಿಸಿದನೆಂಬ ಶ್ರುತಿಗೆ ವಿರೋಧವು ತೋರುವದು. ಈ ವಿರೋಧಕ್ಕೆ ಪರಿಹಾರವೇನೆಂಬುದನ್ನೂ ತಿಳಿಸಬೇಕು. ಮತ್ತು ಅವಾಂತರ ಕಲ್ಪಕ್ಕೂ, ಮಹಾಕಲ್ಪಕ್ಕೂ ಇರುವ ಕಾಲಪ್ರಮಾಣದ ಭೇದವೇನು? ಭೂತ ಭವಿಷ್ಯದ್ವರ್ತಮಾನರೂಪವಾದ ಕಾಲವು, ಗ್ರಹಗಳ ಸಂಚಾರವನ್ನನುಸರಿಸಿ ಯಾವ ರೀತಿಯಾಗಿ ಎಣಿಸಲ್ಪಡುವುದು? ಮನುಷ್ಯರ ಆಯುಃಪ್ರಮಾಣವೆಷ್ಟು? ಕಾಲದಲ್ಲಿ ನಿಮಿಷವೇ ಮೊದಲಾದ ಸೂಕ್ಷ್ಮ ವಿಭಾಗಗಳನ್ನೂ, ಸಂವತ್ಸರವೇ ಮೊದಲಾದ ದೊಡ್ಡ ವಿಭಾಗಗಳನ್ನೂ ನಿರ್ಣಯಿಸುವ ಕ್ರಮ ಹೇಗೆ? ಯಾವ ಯಾವ ಕರ್ಮಗಳಿಂದ ಯಾವಯಾವ ಲೋಕವು ಲಭಿಸುವುದು? ಕರ್ಮಗಳಲ್ಲಿ ರುವ ಭೇದವೆಷ್ಟು? ಕರ್ಮಗಳಿಂದ ಸುಲಭವಾದ ಫಲಗಳನ್ನು ಕೈಗೂಡಿಸಿ ಕೊಳ್ಳುವುದಕ್ಕೆ ಯಾವ ಕ್ಷೇತ್ರವು ಉತ್ತಮವೆನಿಸುವುದು? ಯಾವಯಾವ ಕರ್ಮ ಗಳಿಗೆ ಯಾವಯಾವ ದೇವತೆಗಳಿಂದ ಫಲಪ್ರಾಪ್ತಿಯಾಗುವುದು? ಸತ್ವಾದಿ ಗುಣಗಳ ಪರಿಣಾಮಕ್ರಮವೇನು? ಆ ಗುಣಗಳು ದೇವಮನುಷ್ಯಾದಿಶರೀರಗಳಾಗಿ ಮಾರ್ಪಡುವ ರೀತಿಯನ್ನೂ, ಜೀವಾತ್ಮಗಳು ದೈವಾದಿಶರೀರಗಳನ್ನು ಪಡೆಯುವು ದಕ್ಕೆ ಕಾರಣವೇನೆಂಬುದನ್ನೂ ವಿಶದವಾಗಿ ತಿಳಿಸಬೇಕು. ಭೂಮಿ, ಪಾತಾಳ, ದಿಕ್ಕುಗಳು, ಆಕಾಶ, ಸೂರ್ಯಚಂದ್ರಾದಿಗಳು, ಅಶ್ವಿನಿ ಮೊದಲಾದ ತಾರೆಗಳು, ಪರ್ವತಗಳು, ನದಿಗಳು, ಸಮುದ್ರಗಳು, ದ್ವೀಪಗಳು, ಇವೆಲ್ಲವುಗಳ ಉತ್ಪತ್ತಿಕ್ರಮ ವೇನು? ಇವುಗಳಲ್ಲಿರುವ ಪ್ರಾಣಿಗಳು ಹುಟ್ಟಿದ ರೀತಿಯನ್ನೂ ತಿಳಿಸಬೇಕು. ಬ್ರಹ್ಮಾಂಡದ ಮತ್ತು ಅದರ ಹೊರಗಿನ ಆವರಣದ ಅಳತೆಯೆಷ್ಟು? ಇವುಗಳೊ

ಳಗಿನ ಬೇರೆಬೇರೆ ವಸ್ತುಗಳ ಸ್ವರೂಪವೇನು ? ಮಹಾತ್ಮರಾದ ಭಗವದ್ಭಕ್ತರ ಚರಿತ್ರವನ್ನೂ, ವರ್ಣಾಶ್ರಮಗಳ ಸ್ವಭಾವಭೇದವನ್ನೂ, ವಿವರಿಸಬೇಕು. ಮಹಾದ್ಭುತಗಳಾದ ಭಗವದವತಾರಚರಿತ್ರಗಳನ್ನೂ, ಯುಗಭೇದವನ್ನೂ, ಒಂದೊಂದು ಯುಗದ ಕಾಲಪ್ರಮಾಣವನ್ನೂ, ಆಯಾ ಯುಗಗಳಲ್ಲಿ ನಡೆಯುವ ಧರ್ಮಗಳನ್ನೂ, ವಿಶದವಾಗಿ ತಿಳಿಸಬೇಕು. ಮನುಷ್ಯವರ್ಗ ಕ್ಕೆಲ್ಲ ಸಾಮಾನ್ಯಧರ್ಮವಾವುದು ? ವರ್ಣಾಶ್ರಮಭೇದಗಳನ್ನು ಕುರಿತು ವಿಶೇಷಧರ್ಮಗಳಾವುವು ? ಆಯಾವೃತ್ತಿಗಳನ್ನು ಹಿಡಿದು ಜೀವಿಸುವ ಜನರು ತಮ್ಮ ತಮ್ಮ ವೃತ್ತಿಗಳಲ್ಲಿ ಅನುಸರಿಸಬೇಕಾದ ಧರ್ಮವಾವುದು ? ಪ್ರಜಾರಕ್ಷಣ ವೆಂಬ ಕಾರ್ಯದಲ್ಲಿ ನೆಲಸಿದ ರಾಜಋಷಿಗಳ ಧರ್ಮವೆಂತಹುದು ? ಆಪತ್ಕಾಲದಲ್ಲಿ ಜನರು ಅನುಸರಿಸಬಹುದಾದ ಧರ್ಮವೇನು ? ಮಹತ್ತು ಮೊದಲಾದ ತತ್ವ ಗಳೆಷ್ಟು ? ಅವುಗಳ ಸ್ವರೂಪವೇನು ? ಅವುಗಳಿಗೆ ಕಾರಣಭೂತವಾದ ವಸ್ತುವಿನ ಲಕ್ಷಣವೇನು ? ಭಗವದುಪಾಸನಕ್ರಮವು ಹೇಗೆ ? ಪ್ರಕೃತಿಯನ್ನು ಬಿಟ್ಟು ಹೋದ ಮೇಲೆ ಆತ್ಮವಸ್ತುವಿನ ವಿಷಯವಾದ ಜ್ಞಾನ ಹೋಗದ ಪ್ರಕಾರವೂ, ಯೋಗೀಶ್ವರರು ಹೊಂದಬಹುದಾದ ಅಣಿಮಾದ್ಯಷ್ಟೈಶ್ವರ್ಯಗಳ ಸ್ವರೂಪವೂ, ಯೋಗಿಗಳು ಶರೀರತ್ಯಾಗಮಾಡುವ ಕ್ರಮವೂ ಹೇಗೆ ? ಋಕ್ಕು ಮೊದಲಾದ ವೇದಗಳು, ಧನುರ್ವೇದವೇ ಮೊದಲಾದ ಉಪವೇದಗಳು, ಅವುಗಳಲ್ಲಿ ಹೇಳಲ್ಪಟ್ಟ ಧರ್ಮಗಳು, ಇತಿಹಾಸ ಪುರಾಣಗಳು, ಇವುಗಳ ಸ್ವರೂಪಲಕ್ಷಣಗಳೇನು ? ಸಮಸ್ತ ಜೀವರಾಶಿಗಳ ಉತ್ಪತ್ತಿಯನ್ನೂ, ಅವುಗಳಿಗುಂಟಾಗುವ ಅವಾಂತರಪ್ರಳಯ ವನ್ನೂ, ಈ ಉತ್ಪತ್ತಿ ವಿನಾಶಗಳ ನಡುವೆ ಅವುಗಳ ಸ್ಥಿತಿಯನ್ನೂ, ಮಹಾಪ್ರಳ ಯದ ಕ್ರಮವನ್ನೂ, ಯಾಗಾದಿವೈದಿಕಕರ್ಮಗಳನ್ನೂ, ಕೆರೆಬಾವಿಗಳ ನಿರ್ಮಾಣವೇ ಮೊದಲಾದ ಸ್ಮಾರ್ತ (ಪೂರ್ತ) ಕರ್ಮಗಳ ಕ್ರಮವನ್ನೂ, ಕಾಮ್ಯಕರ್ಮಗಳ ಸ್ವರೂಪವನ್ನೂ ಇದ್ದುದಿದ್ದಂತೆ ವಿವರಿಸಬೇಕು. ಜೀವಾತ್ಮನು ಕಾಮ್ಯಕರ್ಮಗಳ ಫಲ ವನ್ನನುಭವಿಸಿ ಪರಲೋಕದಿಂದ ಜಾರಿ ಬಿದ್ದ ಮೇಲೆ, ಆ ಜೀವನ ಪುನಸ್ಸೃಷ್ಟಿ ಪ್ರಕಾರವು ಹೇಗೆ ? ಪಾಷಂಡಧರ್ಮದ ಉತ್ಪತ್ತಿಕ್ರಮವೇನು ? ಜೀವಾತ್ಮನಿ ಗುಂಟಾಗತಕ್ಕ ಬಂಧಮೋಕ್ಷಗಳನ್ನೂ, ಆ ಜೀವಾತ್ಮನಿಗೆ ಮೋಕ್ಷದಶೆಯಲ್ಲಿ ಪ್ರಾಪ್ತವಾಗುವ ಸ್ವರೂಪವನ್ನೂ ವಿಶದವಾಗಿ ತಿಳಿಸಬೇಕು. ಮತ್ತೊಬ್ಬರಿಗೆ ವಶ ನಲ್ಲದೆ ಸರ್ವಸ್ವತಂತ್ರನಾಗಿ, ಸರ್ವಾಂತರಾತ್ಮನೆನಿಸಿದ ಭಗವಂತನು, ತನ್ನ ಆಜ್ಞಾ ಧೀನವಾಗಿರುವ ಮಾಯೆಯನ್ನು ಹಿಡಿದು ಪ್ರಪಂಚಗಳನ್ನು ನಡೆಸುವ ರೀತಿಯನ್ನೂ, ಅಮೇಲೆ ತನಗೆಕಾನೇ ಆ ಮಾಯೆಯನ್ನು ತೊರೆದು, ಪ್ರಳಯಕಾಲದಲ್ಲಿ ಕೇವಲ

ಉದಾಸೀನನಂತೆ ನೋಡುತ್ತ ಸುಮ್ಮನಿರುವ ಕ್ರಮವನ್ನೂ ನನಗೆ ವಿಶದವಾಗಿ ತಿಳಿಸುವುದಕ್ಕೆ ನೀನು ಸಮರ್ಥನೆಂಬುದರಲ್ಲಿ ಸಂದೇಹವಿಲ್ಲ ಮಹಾವಿಪತ್ತಿನ ಬಾಯಿಯಲ್ಲಿ ಸಿಕ್ಕಿಬಿದ್ದಿರುವ ನನಗೆ ಈಗ ನಿನ್ನನ್ನು ಬಿಟ್ಟರೆ ದಿಕ್ಕಿಲ್ಲ! ಓ ಮುನೀಂದ್ರಾ! ನನ್ನಲ್ಲಿ ಕರುಣೆಯಿಟ್ಟು ಇವೆಲ್ಲವನ್ನೂ ನನಗೆ ವಿವರವಾಗಿ ತಿಳಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು. ಹಿಂದೆ ಬ್ರಹ್ಮನಾರದಸಂವಾದದಲ್ಲಿ ವಿದಿತವಾದ ಸಂಪ್ರದಾಯಾರ್ಥಗಳೆಲ್ಲವೂ ನಿನಗೆ ತಿಳಿದಂತೆ ಮತ್ತೊಬ್ಬರಿಗೆ ತಿಳಿಯವು ಆದುದರಿಂದ ಈ ನನ್ನ ಪ್ರಶ್ನೆಗಳೆಲ್ಲಕ್ಕೂ ತಕ್ಕ ಉತ್ತರವನ್ನು ಕೊಡುವುದಕ್ಕೆ ನೀನೊಬ್ಬನೇ ಸಮರ್ಥನು. ಬ್ರಾಹ್ಮಣಶಾಪದಿಂದ ಬೆಂದು, ಅನ್ನಪಾನಗಳನ್ನು ಬಿಟ್ಟು, ತತ್ತಳಿಸುತ್ತಿರುವ ನಾನು, ಈ ನಿನ್ನ ತತ್ವೋಪದೇಶಗಳೆಲ್ಲವನ್ನೂ ಸಾವಧಾನದಿಂದ ಹೇಗೆ ಕೇಳಬಲ್ಲೆನೆಂದು ಸಂದೇಹಿಸಬೇಡ! ಓ ಮಹಾತ್ಮಾ! ನಾನು ಬ್ರಾಹ್ಮಣಶಾಪದಿಂದ ಬೆಂದವನಾದರೂ, ನಿರಾಹಾರನಾಗಿದ್ದರೂ, ಈಗ ನಿನ್ನ ಮುಖಪದ್ಮದಿಂದ ಹೊರಟ ಹರಿಕಥಾಮೃತವನ್ನು ಕುಡಿದಮೇಲೆ ನನ್ನ ಪ್ರಾಣಗಳು ನನ್ನನ್ನು ಬಿಟ್ಟುಹೋಗಲಾರದೆ ಉತ್ಸಾಹವಿಶಿಷ್ಟವಾಗಿಯೇ ಇರುವುವು. ನನ್ನ ಇಂದ್ರಿಯಗಳು ವ್ಯಾಕುಲತೆಯಿಲ್ಲದೆ ಪ್ರಸನ್ನವಾಗಿಯೇ ಇರುವುವು. ಆದುದರಿಂದ ನೀವು ನನ್ನ ಮನಸ್ಸಿನ ಸಂದೇಹಗಳೆಲ್ಲವೂ ನೀಗುವಂತೆ. ನಾನು ಕೇಳಿದ ಪ್ರಶ್ನೆಗಳಿಗೆಲ್ಲಕ್ಕೂ ಉತ್ತರವನ್ನು ಕೊಟ್ಟು ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು" ಎಂದನು. ಹೀಗೆ ಪರೀಕ್ಷಿದ್ರಾಜನು ಪ್ರಶ್ನೆಮಾಡಿದುದನ್ನು ಕೇಳಿ, ತತ್ವೋಪದೇಶದಲ್ಲಿ ನಿಪುಣನಾದ ಶುಕಮುನಿಯು ಬಹಳಸಂತೋಷಗೊಂಡು, ಆ ಮಹಾಸಭೆಯಲ್ಲಿ ವೇದತುಲ್ಯವಾದ ಭಾಗವತವೆಂಬ ಪುರಾಣವನ್ನು ಪರೀಕ್ಷಿದ್ರಾಜನಿಗೆ ಉಪದೇಶಿಸತೊಡಗಿದನು. ಮೊದಲು ಸೃಷ್ಟ್ಯಾರಂಭದಲ್ಲಿ ಭಗವಂತನೇ ಬ್ರಹ್ಮದೇವನಿಗೆ ಉಪದೇಶಿಸಿದುದರಿಂದ ಭಾಗವತವೆನಿಸಿದ ಪುರಾಣರತ್ನವನ್ನು ಅದೇ ಕ್ರಮದಲ್ಲಿಯೇ ಪಾಂಡುಕುಲತಿಲಕನಾದ ಪರೀಕ್ಷಿತ್ತಿಗೆ ಕ್ರಮವಾಗಿ ತಿಳಿಸಲಾರಂಭಿಸಿದನು ಇಲ್ಲಿಗೆ ಎಂಟನೆಯ ಅಧ್ಯಾಯವು.

---

{ ಶುಕಮುನಿಯು ಪರೀಕ್ಷಿದ್ರಾಜನ ಪ್ರಶ್ನೆಗಳಿಗೆ ಕ್ರಮವಾಗಿ ಉತ್ತರವನ್ನು ಹೇಳಿದುದು. }

ಹೀಗೆ ಪ್ರಶ್ನೆಮಾಡಿದ ಪರೀಕ್ಷಿದ್ರಾಜನನ್ನು ಕುರಿತು ಶುಕಮುನಿಯು "ಎಲೈ! ರಾಜೇಂದ್ರನೆ! ಜ್ಞಾನಸ್ವರೂಪನಾಗಿಯೂ, ದೇಹಾದಿರೂಪದಿಂದಿರುವ ಪ್ರಕೃತಿಗಿಂತಲೂ ವಿಲಕ್ಷಣನಾಗಿಯೂ ಇರುವ ಜೀವನಿಗೆ ಶಬ್ದಾದಿವಿಷಯಗಳನ್ನು ಅನುಭವಿಸತಕ್ಕ ಭೋಕ್ತೃತ್ವವೆಂಬ ಸಂಬಂಧವು ಆ ಪರಮಪುರುಷನ ಮಾಯಾಬಲದಿಂದ ಹೊರತು ಬೇರೆ ಯಾವ ವಿಧದಿಂದಲೂ ಸಂಭವಿಸಿದುದಲ್ಲ! ಕನಸ್ಸನ್ನು ಕಾಣುವವನು ಆ ಕಾಲದಲ್ಲಿ ನಿದ್ರೆಯಿಂದ ನಿಶ್ಚೇಷ್ಟನಾಗಿ, ಸತ್ತಹಾಗೆ ಬಿದ್ದಿರುವಾಗಲೂ, ಬೇರೆಬೇರೆ ವಸ್ತುಗಳನ್ನು ತಾನು ಅನುಭವಿಸಿದ ಹಾಗೆ ಭ್ರಮೆಗೊಳ್ಳುವುದು ಆ ಭಗವಂತನ ಮಾಯೆಯಿಂದಲ್ಲವೆ? ಹಾಗೆಯೇ ಇದೂ ಕಾರಣಾಂತರದಿಂದ ಸಂಭವಿಸಲಾರದು! ಜೀವಾತ್ಮರಿಗೆ ಅವರವರ ಪುಣ್ಯಪಾಪಗಳಿಗೆ ತಕ್ಕಂತೆ, ಆಯಾಕಾಲಗಳಲ್ಲಿ ಅನುಭವಿಸತಕ್ಕುದಾದ ದೇವಮನುಷ್ಯಾದಿಶರೀರಗಳನ್ನು ಪರಮಪುರುಷನು, ತನ್ನ ಮಾಯೆಯಿಂದ ಸೃಷ್ಟಿಸಿ, ಅವರವರಿಗೆ ಕೊಡುವನು. ಅವನ ಮಾಯೆಯಿಂದಲ್ಲದೆ ಬೇರೆಯಾವ ಕಾರಣದಿಂದಲೂ ಈ ಕಾರ್ಯವು ನಡೆಯಲಾರದು. ಆದುದರಿಂದ ಜೀವಾತ್ಮನು ಸಹಜವಾಗಿ ಜ್ಞಾನಸ್ವರೂಪನಾಗಿದ್ದರೂ, ಆ ಸ್ವರೂಪವು ಮಾಯೆಯ ಕಾರ್ಯಗಳಾದ ದೇಹಾದಿಗಳಿಂದ ಮರೆಸಲ್ಪಡುವುದು. ಆದುದರಿಂದ ಭಗವನ್ಮಾಯೆಯೇ ಜೀವನ ದೇಹಾರಂಭಕ್ಕೆ ಕಾರಣವು ಭಗವನ್ಮಾಯೆಯು (ಪ್ರಕೃತಿಯು) ಆಶ್ಚರ್ಯಕರಗಳಾದ ಅನೇಕರೀತಿಗಳಿಂದ ಪರಿಣಾಮಹೊಂದುವ ಸ್ವಭಾವವುಳ್ಳುದು. ಇದರ ಕಾರ್ಯದಿಂದ ಮರೆಸಲ್ಪಟ್ಟ ಸಹಜಸ್ವರೂಪವುಳ್ಳ ಜೀವನು, ಮೇಲೆ ಕಾಣುತ್ತಿರುವ ದೇವಾದ್ಯಾಕಾರಗಳನ್ನೇ ಆತ್ಮನಲ್ಲಿ ಆರೋಪಿಸಿಕೊಂಡು, ಬಹುರೂಪಗಳನ್ನು ಹೊಂದುತ್ತಿರುವಂತೆ ಕಾಣುವನು. ಜೀವನು ವಾಸ್ತವದಲ್ಲಿ ಪ್ರಕೃತಿಗಿಂತಲೂ ವಿಲಕ್ಷಣನಾಗಿದ್ದರೂ, ಮಾಯೆಯ ಗುಣಗಳಾದ ಸತ್ವರಜಸ್ತಮಸ್ಸುಗಳ ಕಾರ್ಯಗಳೆನಿಸಿದ ಶಬ್ದಾದಿವಿಷಯಗಳಲ್ಲಿ ಆಸಕ್ತನಾಗಿ, ದೇಹಾತ್ಮವಿವೇಚನೆಯಿಲ್ಲದೆ, ನಾನು ನನ್ನದು ಎಂಬ ಅಹಂಕಾರ ಮಮಕಾರಗಳಲ್ಲಿ ಸಿಕ್ಕಿ ಬಿದ್ದು ಸಂಸಾರಾಸಕ್ತನಾಗಿರುವನು. ಹೀಗೆ ಸಂಸಾರಬಂಧದಲ್ಲಿ ಸಿಕ್ಕಿದವನಿಗೂ ಕೂಡ ಮೋಕ್ಷಸಾಧನವಾದ ಜ್ಞಾನವೊಂದುಂಟು! ಯಾವಾಗ ಜೀವನು, ತನಗೆ ಮಾಯಾಸಂಬಂಧದಿಂದುಂಟಾಗಿರುವ ಅಹಂಕಾರ ಮಮಕಾರಾದಿಗಳನ್ನು ಬಿಟ್ಟು ತನ್ನ ಶುದ್ಧಸ್ವರೂಪವು ಸಹಜವಾಗಿ ಕಾಲಕ್ಕೂ, ಪ್ರಕೃತಿಗೂ ಈಡಾದುದಲ್ಲವೆಂದೂ, ಪಾಪ ಸಂಬಂಧವಾಗಲಿ, ಹಸಿವು, ಬಾಯಾರಿಕೆ, ಮುಪ್ಪು, ಸಾವು, ದುಃಖವೊದ

ಲಾದ ಕಷ್ಟಗಳಾಗಲಿ, ಇಲ್ಲದೆ, ಅಷ್ಟಗುಣಗಳಿಗೂ ನೆಲೆಯಾದುದೆಂದೂ, ತನ್ನ ಮಹಿಮೆಯನ್ನು ತಾನು ಚೆನ್ನಾಗಿ ನಿಶ್ಚಯಜ್ಞಾನದಿಂದ ತಿಳಿಯುವನೋ, ಆಗಲೇ ಪ್ರಕೃತಿ, ಮತ್ತು ಕಾಲವೆಂಬಿವುಗಳ ನಿರ್ಬಂಧವನ್ನು ತಪ್ಪಿಸಿಕೊಂಡು, ಶಬ್ದಾದಿ ವಿಷಯಗಳಲ್ಲಿಯೂ ವಿಮುಖನಾಗಿ, ಭಗವದ್ಭಕ್ತಿಯಿಂದುಂಟಾದ ಆನಂದಾತಿಶಯ ದಲ್ಲಿರುವನು. * (ಕಾಲದಿಂದಲೂ ಪ್ರಕೃತಿಯಿಂದಲೂ ಬದ್ಧನಾಗದೆ, ಇವುಗಳಿಗೆ ತಾನೇ ನಿಯಾಮಕನಾಗಿ, ಸತ್ಯಕಾಮತ್ವಾದಿಗುಣಗಳುಳ್ಳವನಾಗಿರುವ ಪರಮಾತ್ಮನ ಮಹಿಮೆಯನ್ನು ಯಾವಾಗ ತಿಳಿಯುವನೋ, ಆಗ ತಾನೂ ಕಾಲಪ್ರಕೃತಿಗಳನ್ನು ಮೀರಿ, ಶಬ್ದಾದಿ ವಿಷಯಗಳಿಂದ ವಿಮುಖನಾಗುವನು. ಜೀವಾತ್ಮನಲ್ಲಿ ಪಾಪನಿ ವೃತ್ತಿ ಮುಂತಾದ ಸ್ವಭಾವಗುಣಗಳು ತಲೆದೋರುವುದೇ ಮುಕ್ತದಶೆಯಲ್ಲಿರುವ ಸ್ವರೂಪವು. ಈ ಸ್ಥಿತಿಯಲ್ಲಿ ಮಹಾನಂದಸ್ವರೂಪನಾದ ಪರಮಾತ್ಮನನ್ನು ಅನುಭವಿಸುವುದೂ, ಆ ಪರಮಾತ್ಮನಿಗೆ ಶರೀರದಂತಿರುವ ತನ್ನ ಸ್ವರೂಪವನ್ನು ಅನುಭವಿಸುವುದೂ, ಇವೆರಡೂ ಆ ಜೀವನಿಗೆ ಶಬ್ದಾದಿವಿಷಯಗಳಲ್ಲಿರುವ ಆಸೆಯ ನ್ನು ತಾನೇ ನೀಗಿಸಿಬಿಡುವುದು. ಮೋಕ್ಷದಶೆಯಲ್ಲಿ ಜೀವಾತ್ಮನು ಯಾವ ಸ್ಥಿತಿ ಯಲ್ಲಿರುವನೆಂಬುದನ್ನು ಇದುವರೆಗಿನ ವಿಷಯಗಳಿಂದ ತಿಳಿಸಿದೆನು. ಇನ್ನು ಮುಂದೆ "ಜೀವನಂತೆಯೇ ಭಗವಂತನೂ ಕೂಡ ಲೋಕರೂಪಗಳಾದ ಅವಯವಗಳಿಂದ ಪರಿಮಿತವಾದ ಶರೀರವುಳ್ಳವನಾಗಿರುವಾಗ ಅವನನ್ನು ಮಾತ್ರ ಉಪಾಸನ ಮಾಡಿ ಮೋಕ್ಷವನ್ನು ಪಡೆಯುವುದು ಹೇಗೆ ಸಾಧ್ಯ" ವೆಂದು ನೀನು ಕೇಳಿ ದುದಕ್ಕೆ ಸಮಾಧಾನವನ್ನು ಹೇಳುವೆನು ಕೇಳು. ವ್ರತನಿಷ್ಠರಾದ ಮಹಾ ಮಹಾತ್ಮರಿಂದ ಉಪಾಸ್ಯನಾದ ಭಗವಂತನು, ಮೊದಲು ಬ್ರಹ್ಮದೇವನಿಗೆ ಅ ಪ್ರಾಕೃತವಾದ ತನ್ನ ದಿವ್ಯಮಂಗಳವಿಗ್ರಹವನ್ನು ತೋರಿಸಿದನು. ಜೀವನಿಗಿಂತಲೂ ವಿಲಕ್ಷಣನಾದ ತನ್ನ ನಿಜಸ್ಥಿತಿಯನ್ನು ಬ್ರಹ್ಮನಿಗೆ ತಿಳಿಸಬೇಕೆಂದು ಭಗವಂತನು ತಾನಾಗಿಯೇ ಉಪದೇಶಿಸಿದ ವಿಷಯಗಳನ್ನು ನಿನಗೂ ಹೇಳುವೆನು ಕೇಳು. ಸರ್ವ ಭೂತಪ್ರಭುವಾಗಿಯೂ, ಧರ್ಮೋಪದೇಶಕನಾಗಿಯೂ, ಆದಿದೇವನಾಗಿಯೂ ಇರುವ ಚತುರ್ಮುಖನು, ಭಗವಂತನ ನಾಭಿಕಮಲದಿಂದ ಹುಟ್ಟಿದಮೇಲೆ ಆಗ ತಾನಿದ್ದ ಸ್ಥಳವನ್ನು ಪರೀಕ್ಷಿಸಿ ನೋಡುವುದಕ್ಕಾಗಿ, ಮೊದಲು ಜಲದಲ್ಲಿ ಮುಳುಗಿ, ಏನನ್ನೂ ಕಾಣದೆ ತಿರುಗಿ ತಾನಿದ್ದ ಸ್ಥಳಕ್ಕೆ ಬಂದು, ಅಲ್ಲಿ ಜಗತ್ಸೃಷ್ಟಿಯನ್ನಾರಂಭಿ ಸುವುದು ಹೇಗೆಂದು ಯೋಚಿಸುತ್ತಿದ್ದನು. ಹೀಗೆ ಆಲೋಚಿಸುತ್ತಿದ್ದ ಬ್ರಹ್ಮದೇವನಿಗೆ ಎಷ್ಟೆಷ್ಟು ವಿಧದಿಂದ ಚಿಂತಿಸಿದರೂ, ಸೃಷ್ಟಿವಿಷಯಕವಾದ ತಿಳುವಳಿಕೆಯು

---

* ಇಲ್ಲಿ ಇದೂ ಒಂದು ಅರ್ಥಾಂತರವುಂಟು

ಹುಟ್ಟದೆ ಹೋಯಿತು. ಇದರಿಂದ ಬ್ರಹ್ಮನು ಚಿಂತಾಕುಲನಾಗಿದ್ದ ಸಮಯದಲ್ಲಿ ಒಮ್ಮೆ ಆ ಪ್ರಳಯ ಸಮುದ್ರಜಲಮಧ್ಯದಿಂದ ಎರಡಕ್ಷರಗಳುಳ್ಳ ಯಾವುದೋ ಒಂದುವಾಕ್ಯವು ಎರಡಾವರ್ತಿ ಉಚ್ಚರಿಸಲ್ಪಟ್ಟು ಹಾಗೆ ಕೇಳಿಸಿತು. ರಾಜಾ! ಆ ಅಕ್ಷರದ್ವಯವೇ ಸಮಸ್ತ ಯೋಗಿಶ್ವರರಿಗೂ ಧನರೂಪವು! ಈ ಶಬ್ದದಲ್ಲಿ ಕಕಾರ ದಿಂದ ಮಕಾರದವರೆಗಿರುವ ಇಪ್ಪತ್ತೈದುವರ್ಗಾಕ್ಷರಗಳಲ್ಲಿ ಹದಿನಾರನೆಯ ಅಕ್ಷರ ವಾದ ತಕಾರವೂ ಇಪ್ಪತ್ತೊಂದನೆಯ ವರ್ಣವಾದ ಪಕಾರವೂ ಕಲೆತು “ತಪ” ವೆಂಬ ಪದವು ಸಿದ್ಧಿಸಿತು. ಹೀಗೆ ‘ತಪ! ತಪ!’’ ವೆಂದು ಎರಡಾವರ್ತಿ ಉಚ್ಚರಿ ಸಲ್ಪಟ್ಟ ವಾಕ್ಯವನ್ನು ಕೇಳಿ ಚತುರ್ಮುಖನು, ಆ ವಾಕ್ಯವು ಎಲ್ಲಿಂದ ಹೊರಟಿ ತೆಂಬುದನ್ನು ಪರೀಕ್ಷಿಸುವುದಕ್ಕಾಗಿ ನಾಲ್ಕು ದಿಕ್ಕುಗಳನ್ನೂ ತಿರುಗಿ ತಿರುಗಿನೋಡಿ ದನು. ಆದರೆ ಅಲ್ಲಿ ಸುತ್ತಲೂ ಮಹಾಭಯಂಕರವಾದ ಸಮುದ್ರವೊಂದಲ್ಲದೆ ಬೇರೊಂದೂ ಕಾಣಿಸಲಿಲ್ಲ. ಇದರಿಂದ ಬ್ರಹ್ಮನು ಮುಂದೆ ಮಾಡಬೇಕಾದ ಕಾರ್ಯವೇ ನೆಂದು ತೋರದೆ, ತಿರುಗಿ ತನಗೆ ಜನ್ಮಸ್ಥಾನವಾದ ಆ ಕಮಲದಲ್ಲಿಯೇ ಸೇರಿ ಸ್ವಲ್ಪಕಾಲದವರೆಗೆ ತನ್ನಲ್ಲಿ ತಾನೇ ಆಲೋಚಿಸುತ್ತಿದ್ದು ತಪಸನ್ನು ಮಾಡ ಬೇಕೆಂದು ನಿಶ್ಚಯಿಸಿಕೊಂಡನು. ಹೀಗೆ ನಿಶ್ಚಯಿಸಿಕೊಂಡು ನಿಶ್ಚಲಚಿತ್ತನಾಗಿ, ಜ್ಞಾನೇಂದ್ರಿಯ ಕರ್ಮೇಂದ್ರಿಯಗಳನ್ನು ನಿಗ್ರಹಿಸಿ, ಶ್ವಾಸವನ್ನು ತಡೆದು, ಅಮೋಘ ಸಂಕಲ್ಪನಾಗಿ ಸಮಸ್ತಲೋಕಗಳನ್ನೂ ತಾನೆ ಪ್ರಕಾಶಗೊಳಿಸುವಂತೆ ಮಾಡುವ ಶಕ್ತಿಯುಳ್ಳ ಆ ತಪಸ್ಸನ್ನು ಒಂದು ಸಹಸ್ರದೇವವರುಷಗಳವರೆಗೆ ನಡೆಸಿದನು. ಇದ ರಿಂದ ಪ್ರಸನ್ನನಾದ ನಾರಾಯಣನು, ಬ್ರಹ್ಮದೇವನಿಗೆ ಪ್ರತ್ಯಕ್ಷನಾಗಿ, ಅವನಿಗೆ ಮನುಷ್ಯಲೋಕವನ್ನೂ, ತನಗೆ ನಿವಾಸಭೂತವಾದ ವೈಕುಂಠಲೋಕವನ್ನೂ ತೋರಿಸಿದನು! ರಾಜೇಂದ್ರಾ! ಆ ವೈಕುಂಠದ ಮಹಾವೈಭವವನ್ನು ಕೇಳಬೇಕೇ! ಅದಕ್ಕಿಂತಲೂ ಉತ್ತಮಸ್ಥಾನವು ಬೇರೊಂದಿಲ್ಲ! ಅಲ್ಲಿ ಅವಿದ್ಯೆ, ಕರ್ಮವಾಸನೆ, ಪ್ರಕೃತಿಸಂಬಂಧ, ಮುಂತಾದ ದೋಷಗಳಾಗಲಿ, ಅಹಂಕಾರಗಳಿಂದುಂಟಾಗುವ ಬುದ್ಧಿಮೋಹವಾಗಲಿ ಎಷ್ಟುಮಾತ್ರವೂ ಸಂಭವಿಸಲಾರದು. ತಮ್ಮನ್ನು ಶರೀರವಾಗಿ ಹೊಂದಿರುವ ಪರಮಾತ್ಮನನ್ನು ಅನುಭವಿಸುವ ನಿತ್ಯಮುಕ್ತರಿಗೆ ಅದೇ ವಾಸಸ್ಥಾನವಾ ಗಿರುವುದು. ಅಲ್ಲಿ ಆಧ್ಯಾತ್ಮಿಕಾದಿತಾಪತ್ರಯಗಳಾಗಲಿ, ಅಜ್ಞಾನವಾಗಲಿ, ಭಯವಾ ಗಲಿ, ರಜಸ್ತಮೋಗುಣಗಳಾಗಲಿ ಇವುಗಳಿಂದ, ಮಿಶ್ರವಾದ ಸತ್ವಗುಣವಾಗಲಿ ಎಷ್ಟು ಮಾತ್ರವೂ ತಲೆದೋರದೆ, ಕೇವಲ ಸತ್ವಗುಣವೊಂದೇ ಇರುವುದರಿಂದ, ಆಸ್ಥಾನವು ಶುದ್ಧಸತ್ವಮಯವೆನಿಸುವುದು. ಅಲ್ಲಿರುವ ನಿತ್ಯಮುಕ್ತರನ್ನು ದೇವಾಸುರರೂ ಕೂಡ ಪೂಜಿಸುವರು. ಅಲ್ಲಿನವರೆಲ್ಲರೂ ಶ್ಯಾಮಲವರ್ಣವುಳ್ಳವರಾಗಿ, ಜಗತ್ತನ್ನು ಮೋಹ

ಗೊಳಿಸುವಂತೆ ಪ್ರಕಾಶಿಸುವರು. ಅವರೆಲ್ಲರೂ ತಾವರೆಯೆಸಳಿನಂತೆ ವಿಶಾಲವಾದ ಕಣ್ಣುಳ್ಳವರು. ಪೀತಾಂಬರದಿಂದ ಶೋಭಿಸುವ ಮತ್ತು ಮನೋಹರವಾದ ಕಾಂತಿಯೊಡಗೂಡಿದ ಸುಕುಮಾರದೇಹವುಳ್ಳವರು. ಅವರೆಲ್ಲರೂ ಭಗವಂತನೊಡನೆ ಸಮಾನರೂಪವನ್ನು ಹೊಂದಿ, ನಾಲ್ಕುಭುಜಗಳಿಂದ ಶೋಭಿಸುವರು. ಅತ್ಯುತ್ತಮಗಳಾದ ರತ್ನಾಭರಣಗಳಿಂದ ಭೂಷಿತರಾಗಿರುವರು. ಅವರ ದೇಹವು ಅತ್ಯುತ್ತಮವಾದ ಲಾವಣ್ಯದಿಂದ ಕೂಡಿ, ಹವಳದಂತೆಯೂ, ವೈಡೂರ್ಯದಂತೆಯೂ, ತಾವರೆಯ ದಂಟಿನಂತೆಯೂ. ಹೊಳೆಯುವ ಬಣ್ಣದಿಂದ ಪ್ರಕಾಶಿಸುವುದು. ಅಲ್ಲಿನವರೊಬ್ಬೊಬ್ಬರೂ ಜಾಜ್ವಲ್ಯಮಾನಗಳಾದ ಕಿರೀಟಗಳಿಂದಲೂ, ಮಕರಕುಂಡಲಗಳಿಂದಲೂ, ವನಮಾಲಿಕೆಗಳಿಂದಲೂ ಶೋಭಿಸುತ್ತಿರುವರು ಇಂತಹ ಮಹಾತ್ಮರ ದಿವ್ಯವಿಮಾನಗಳೇ ಆ ಲೋಕದಲ್ಲಿ ದಟ್ಟವಾಗಿ ತುಂಬಿರುವುವು. ಮತ್ತು ಅನೇಕದಿವ್ಯಕಾಂತೆಯರು ತಮ್ಮತಮ್ಮ ದಿವ್ಯವಿಮಾನಗಳನ್ನೇರಿ ಅಲ್ಲಲ್ಲಿ ಸಂಚರಿಸುತ್ತಿರುವುದನ್ನು ನೋಡಿದರೆ ಆ ಸ್ಥಲವು ಮಿಂಚಿನಿಂದ ಹೊಳೆಯುವ ಮೇಘಪರಂಪರೆಗಳಿಂದ ಶೋಭಿತವಾದ ವಿಶಾಲವಾದ ಆಕಾಶದಂತೆ ತೋರುತ್ತಿರುವುದು ಆ ಲೋಕದಲ್ಲಿ ಶ್ರೀಮಹಾಲಕ್ಷ್ಮಿಯು ಭೂನೀಳಾದೇವಿಯರೊಡನೆ ಸೇರಿ, ತನ್ನ ಪತಿಯಾದ ಶ್ರೀಮನ್ನಾರಯಣನ ಪಾದಪದ್ಮಗಳನ್ನು ಪೂಜಿಸುತ್ತ ದಿವ್ಯವಿಗ್ರಹದಿಂದ ಪ್ರಕಾಶಿಸುತ್ತಿರುವಳು. ಮತ್ತು ಆಗಾಗ ಆ ಮಹಾಲಕ್ಷ್ಮಿಯು ಕೆಲವು ಕಾಲಗಳಲ್ಲಿ ಉಯ್ಯಾಲೆಯಲ್ಲಿ ಕುಳಿತು ತೂಗಾಡುತ್ತ, ವಸಂತಕಾಲದಲ್ಲಿ ಉಲ್ಲಾಸದಿಂದ ಕೂಗುತ್ತಿರುವ ಗಿಳಿ, ಕೋಗಿಲೆ ಮುಂತಾದ ಪಕ್ಷಿಗಳ ಗಾನಧ್ವನಿಯೊಡನೆ ಸೇರಿದಂತೆ ತಾನೂ ತನ್ನ ಮನೋಹರಧ್ವನಿಯಿಂದ ಆ ಭಗವಂತನ ಚರಿತ್ರಗಳನ್ನು ಹಾಡುತ್ತಿರುವಳು. ಎಲೈ ಪರೀಕ್ಷಿದ್ರಾಜನೆ! ಹೀಗೆ ನಿಜಸ್ವರೂಪದಿಂದೊಪ್ಪುತ್ತಿರುವ ಲಕ್ಷ್ಮೀನಾರಾಯಣರಿಗೆ ನಿವಾಸಸ್ಥಾನವಾದ ಆ ವೈಕುಂಠಕ್ಕಿಂತಲೂ ಉತ್ತಮವಾದ ಬೇರೆಸ್ಥಳವುಂಟೇ! ಆ ವೈಕುಂಠವಾಸಿಗಳ ಭಾಗ್ಯಕ್ಕಿಂತಲೂ ಮೇಲಾದ ಭಾಗ್ಯವುಂಟೆ! ಬ್ರಹ್ಮನಿಗೆ ಇಂತಹಲೋಕವು ಗೋಚರಿಸಿದೊಡನೆ ಆತನು ಪರಮಾನಂದಭರಿತನಾಗಿ, ಅಲ್ಲಿ ಶ್ರೀನಾರಾಯಣಮೂರ್ತಿಯ ದರ್ಶನಾನಂದವನ್ನೇ ಅನುಭವಿಸುತ್ತಿದ್ದನು. ತಪಸ್ಸು ಮೊದಲಾದ ಸತ್ಕರ್ಮಗಳಿಗೆ ತಾನು ಕರ್ತನಾಗಿಯೂ, ಅವುಗಳಿಗೆ ತಾನೇ ಆರಾಧ್ಯನಾಗಿಯೂ, ಅವುಗಳಿಗೆ ತಕ್ಕ ಫಲವನ್ನು ತಾನೇ ಕೊಡತಕ್ಕವನಾಗಿಯೂ, ಸಕಲಜಗನ್ನಾಯಕನಾಗಿಯೂ, ಪಾಂಚರಾತ್ರಧರ್ಮದಲ್ಲಿ ನೆಲೆಗೊಂಡ ಭಕ್ತರಿಗೆ ತನ್ನ ಲೋಕವನ್ನು ಕೊಟ್ಟು ರಕ್ಷಿಸತಕ್ಕವನಾಗಿಯೂ, ಲಕ್ಷ್ಮೀವಲ್ಲಭನಾಗಿಯೂ ಇರುವ ಆ ಪರಮಪುರುಷನನ್ನು

ಬ್ರಹ್ಮದೇವನು ಅತ್ಯಾನಂದದಿಂದ ಎವೆಮುಚ್ಚದೆ ನೋಡುತ್ತಿದ್ದನು. ಆ ಪರಮಪುರುಷನ ಸುತ್ತಲೂ ಸುನಂದ, ನಂದರೇ ಮೊದಲಾದ ಅನುಚರರು. ಅವನನ್ನು ಪರಿಚರಿಸುತ್ತಿದ್ದರು ರಾಜೇಂದ್ರಾ! ಆ ಪರಮಪುರುಷನ ಎಣೆಯಿಲ್ಲದ ಮಹಾಮಹಿಮೆಯನ್ನು ಕೇಳಬೇಕೇ? ಆ ಶ್ರೀಮನ್ನಾರಾಯಣನು ಯಾವಾಗಲೂ ತನ್ನ ಭೃತ್ಯರನ್ನನುಗ್ರಹಿಸುವುದಕ್ಕಾಗಿಯೇ ಇದಿರುನೋಡುತ್ತಿರುವನು! ತನ್ನ ಕಟಾಕ್ಷಗಳಿಂದಲೇ ಸುಧಾರಸವನ್ನು ಸುರಿಸುತ್ತಿರುವನು! ಯಾವಾಗ ನೋಡಿದರೂ ಅವನ ಮುಖದಲ್ಲಿ ನಿರ್ಮಲವಾದ ಮಂದಹಾಸವೇ ಮಿನುಗುತ್ತಿರುವದು! ರಕ್ತಾಂತಲೋಚನಗಳಿಂದ ಶೋಭಿಸುತ್ತಿರುವನು! ಆತನ ತಲೆಯಲ್ಲಿ ಜಾಜ್ವಲ್ಯಮಾನವಾದ ಕಿರೀಟವು ಬೆಳಗುತ್ತಿರುವುದು. ಕಿವಿಯಲ್ಲಿರುವ ಕುಂಡಲಗಳು ತಮ್ಮ ಕಾಂತಿಯ ಸಮೂಹದಿಂದ ಅವನ ಗಂಡಸ್ಥಲವನ್ನು ಮತ್ತಷ್ಟು ಬೆಳಗುತ್ತಿರುವುವು! ಆ ಮಹಾಪುರುಷನ ಶರೀರವು ಪೀತಾಂಬರದಿಂದಲೂ, ಚತುರ್ಭುಜಗಳಿಂದಲೂ ಶೋಭಿಸುತ್ತಿವುದು! ಆತನ ವಕ್ಷಃಸ್ಥಲವು ಶ್ರೀಮಹಾಲಕ್ಷ್ಮಿಯಿಂದಲಂಕೃತವಾಗಿರುವದು! ಮತ್ತು ಆ ಪರಮಪುರುಷನು ಸರ್ವಲೋಕಪೂಜ್ಯವಾದ ತನ್ನ ಆಸನದಮೇಲೆ ಕುಳಿತು, ಇಪ್ಪತ್ತೈದು ತತ್ವಗಳಿಗೆ ಅಧಿಷ್ಠಾನದೇವತೆಗಳಾದ ಶಕ್ತಿಗಳಿಂದ ಪರಿವೃತನಾಗಿ, ಜ್ಞಾನ, ಶಕ್ತಿ, ಮೊದಲಾದ ಮಿತಿಯಿಲ್ಲದ ಕಲ್ಯಾಣಗುಣಗಳಿಂದಲೂ ಪರಿಪೂರ್ಣನಾಗಿ, ತನ್ನ ದಿವ್ಯಮಹಿಮೆಯಲ್ಲಿ ತಾನೇ ವಿಹರಿಸುತ್ತಿರುನು. ಬ್ರಹ್ಮದೇವನು ಈ ರೂಪವನ್ನು ನೋಡಿನೋಡಿ ಅಪಾರವಾದ ಆನಂದಸಾಗರದಲ್ಲಿ ಮುಳುಗಿ ತೇಲುತ್ತಿದ್ದನು. ಆತನ ಕಣ್ಣುಗಳಲ್ಲಿ ಆನಂದಬಾಷ್ಪವು ಧಾರೆಧಾರೆಯಾಗಿ ಸುರಿಯ ತೊಡಗಿತು. ಅವನ ಸರ್ವಾವಯವಗಳಲ್ಲಿಯೂ ರೋಮಾಂಚವು ಹುಟ್ಟಿತು ಹೀಗೆ ಮಹಾನಂದಭರಿತನಾದ ಚತುರ್ಮುಖಬ್ರಹ್ಮನು, ಕೇವಲಭಕ್ತಿ ಮಾರ್ಗನಿಷ್ಠರಾದ ಪರಮಹಂಸರಿಗೆ ಮಾತ್ರ ಪಡೆಯಬಹುದಾದ ಆ ಭಗವಂತನ ಪಾದಾರವಿಂದಗಳನ್ನು ಹಿಡಿದು ನಮಸ್ಕರಿಸಿದನು. ಆಗ ಭಗವಂತನು ತನ್ನ ಆಜ್ಞಾಧೀನನಾಗಿ ಸೃಷ್ಟಿಕಾರ್ಯದಲ್ಲಿ ಉದ್ಯುಕ್ತನಾಗಿಯೂ, ತನಗೆ ಪರಮಭಕ್ತನಾಗಿಯೂ ಇರುವ ಆ ಬ್ರಹ್ಮನನ್ನು ಕೈಹಿಡಿದು ಮೇಲಕ್ಕೆತ್ತಿ, ಮಂದಹಾಸಪೂರ್ವಕವಾದ ಪ್ರಿಯವಾಕ್ಯದಿಂದ ಹೀಗೆಂದು ಹೇಳುವನು. "ಓ ಚತುರ್ಮುಖಾ! ನೀನು ನನ್ನಿಂದುಪದೇಶಿಸಲ್ಪಟ್ಟ ವೇದಗಳೆಲ್ಲವನ್ನೂ ಹೃದಯದಲ್ಲಿ ಧರಿಸಿರುವೆ. ಈಗ ನೀನು ಜಗತ್ತನ್ನು ಸೃಷ್ಟಿಸಬೇಕೆಂದು ಉದ್ಯುಕ್ತನಾಗಿ ಬಹುಕಾಲದಿಂದ ಇದುವರೆಗೆ ನನ್ನನ್ನು ಕುರಿತು ತಪಸ್ಸು ಮಾಡಿದುದಕ್ಕಾಗಿ, ನಾನು ಬಹಳ ಸಂತೋಷಿಸಿದೆನು. ಮುಖ್ಯವಾಗಿ ನೀನು ನಿಷ್ಕಲ್ಮಷವಾದ ಭಕ್ತಿ

ಯಿಂದ ನನ್ನನ್ನಾರಾಧಿಸಿದುದಕ್ಕಾಗಿ ನಿನ್ನಲ್ಲಿ ನಾನು ಪೂರ್ಣಾನುಗ್ರಹವನ್ನು ತೋರಿಸುವೆನು. ಹೀಗಿಲ್ಲದೇ ಕೇವಲಡಂಭಕ್ಕಾಗಿ ಕಪಟವೇಷವನ್ನು ಹಿಡಿದ ಕುತ್ಸಿತ ಯೋಗಿಗಳು ನನ್ನನ್ನು ಕುರಿತು ಎಷ್ಟುದಿನಗಳವರೆಗೆ ತಪಸ್ಸು ಮಾಡಿದರೂ ನಾನು ಸಂತೋಷಿಸುವವನಲ್ಲ. ವತ್ಸ ಚತುರ್ಮುಖಾ! ನಾನು ನಿನ್ನನ್ನು ಅನುಗ್ರಹಿಸಿರುವೆನು! ನಿನಗೆ ಇಷ್ಟವಾದವರವನ್ನು ಕೇಳು! ತಪ್ಪದೆ ಕೊಡುವೆನು! ನಿನಗೆ ಕ್ಷೇಮವುಂಟಾಗಲಿ! ಬ್ರಹ್ಮಾ! ಲೋಕದಲ್ಲಿ ಪ್ರಾಣಿಗಳು ತಮತಮಗೆ ಬೇಕಾದ ಕೋರಿಕೆಗಳನ್ನು ಈಡೇರಿಸಿಕೊಳ್ಳುವುದಕ್ಕಾಗಿ ನಡಸತಕ್ಕ ಪ್ರಯಾಸಗಳೆಲ್ಲವೂ ನನ್ನ ದರ್ಶನವನ್ನು ಪಡೆಯುವವರೆಗೆ ಮಾತ್ರವೇ ಹೊರತು ಇದಕ್ಕಿಂತಲೂ ಮೇಲಿನ ಅಭೀಷ್ಟಗಳೊಂದೂ ಇರುವುದಿಲ್ಲ! ಆ ವಿಧವಾದ ಕೋರಿಕೆಯೇ ಈಗ ನಿನಗೆ ಲಭಿಸಿದಮೇಲೆ, ಇನ್ನು ನಿನಗೆ ಬೇಕಾದುದೇನು? ಇದರಿಂದ ನಿನಗೆ ಸಮಸ್ತ ಕಲ್ಯಾಣಗಳೂ ಸಿದ್ಧಿಸುವುವು! ಓ ಕುಮಾರಾ! ನಿನಗೆ ಈಗ ಈ ನನ್ನ ಲೋಕವನ್ನು ಕಣ್ಣಾರೆ ಕಾಣತಕ್ಕ ಭಾಗ್ಯವು ಲಭಿಸಿದುದು, ನಿನ್ನ ತಪಃಪ್ರಭಾವದಿಂದಲೇ ಎಂದು ತಿಳಿಯಬೇಡ! ನಿನಗೆ ಈ ಭಾಗ್ಯವು ಲಭಿಸಿದುದೂ ನನ್ನ ಸಂಕಲ್ಪಪ್ರಭಾವದಿಂದಲ್ಲದೆ ಬೇರೆಯಲ್ಲ! ಇದನ್ನು ನೀನು ನಿಸ್ಸಂಶಯವಾಗಿ ನಂಬು! ವತ್ಸಾ! ಇದಕ್ಕೆ ಬೇರೆ ನಿದರ್ಶನವೇಕೆ? ನಾನು ಮೊದಲು ನಿನ್ನ ಕಣ್ಣಿಗೆ ಕಾಣಿಸದಂತೆ, ಏಕಾಂತಸ್ಥಳದಲ್ಲಿದ್ದು "ತಪ" "ತಪ" ಎಂದು ನುಡಿದ ವಾಕ್ಯವನ್ನು ಕೇಳಿದ ಮೇಲಲ್ಲವೇ ನಿನಗೆ ಈ ಬುದ್ಧಿಯು ಹುಟ್ಟಿತು? ಆದುದರಿಂದ ನಿನಗೆ ಯಾವ ವಿಧದಲ್ಲಿಯೂ ಸ್ವಾತಂತ್ರ್ಯವಿಲ್ಲ. ಇದಲ್ಲದೆ ನೀನು ಕೇವಲ ಕರ್ಮಪ್ರವಣನಾಗಿ, ಅದಕ್ಕೆ ಸಾಧನಗಳನ್ನು ಕಾಣದೆ ಚಿಂತಿಸುತ್ತಿದ್ದಾಗಲೂ ನನ್ನ ಪ್ರೇರಣೆಯಿಂದಲ್ಲವೇ ನಿನಗೆ ಈ ತಪಸ್ಸಿನಲ್ಲಿ ಬುದ್ಧಿಯು ಹುಟ್ಟಿತು? ಆದುದರಿಂದ ನನ್ನ ಪ್ರೇರಣೆಯಿಲ್ಲದೆ ಯಾರೂ ಯಾವ ಕಾರ್ಯವನ್ನೂ ನಡೆಸಲಾರರು. ಮತ್ತು ನನ್ನ ಆಜ್ಞೆಯನನ್ನುಸರಿಸಿ ನೀನು ನಡೆಸಿದ ತಪಸ್ಸಿಗಾಗಿ ನಾನು ಪ್ರಸನ್ನನಾದೆನೇ ಹೊರತು ನಿನ್ನ ನಿಯಮಗಳಿಗೆ ಮೆಚ್ಚಿ ನಿನಗೆ ಗೋಚರಿಸಿದವನಲ್ಲ. ಆದುದರಿಂದ ಕಾರ್ಯಸಾಧನೆಗಳಿಗೆ ತಪಸ್ಸಿಗಿಂತಲೂ ಉತ್ತಮ ಸಾಧನವು ಬೇರೊಂದಿಲ್ಲ! ಎಲೈ ವತ್ಸನೆ! ಮುಖ್ಯವಾಗಿ ತಪಸ್ಸೆಂಬುದೇ ನನ್ನ ಹೃದಯವೆಂದು ತಿಳಿ! ನಾನೇ ತಪಸ್ಸ್ವರೂಪನು! ತಪಸ್ಸಿನಿಂದಲೇ ನಾನೂ ನನ್ನನ್ನು ಈ ಪ್ರಪಂಚರೂಪವಾಗಿ ಮಾರ್ಪಡಿಸಿಕೊಳ್ಳುವೆನು! ತಪಸ್ಸಿನಿಂದಲೇ ಇವೆಲ್ಲವನ್ನೂ ಸಂಹರಿಸುವೆನು! ಈ ಪ್ರಪಂಚವನ್ನು ರಕ್ಷಿಸುತ್ತಿರುವುದೂ ತಪಸ್ಸಿನಿಂದಲೇ ಹೊರತು ಬೇರೆಯಲ್ಲ! ನನ್ನಲ್ಲಿರುವ ಅಮಿತವೀರ್ಯವೆಲ್ಲವೂ ತಪೋಮಯವೆಂದೇ ತಿಳಿ! ತಪಃಪ್ರಭಾವವೆಂಬುದು ಹೀಗಿರುವುದರಿಂದ ಇದನ್ನು ಹಿಡಿದೇ ನೀನು ಸೃಷ್ಟಿಕಾರ್ಯವನ್ನು ನೆರ

ವೇರಿಸಬಹುದು." ಎಂದನು. ಹೀಗೆ ಭಗವಂತನಿಂದ ಅನುಗ್ರಹಿಸಲ್ಪಟ್ಟ ಬ್ರಹ್ಮದೇವನು, ತಾನು ತಿಳಿಯಬೇಕೆಂದುದ್ದೇಶಿಸಿದ ಎರಡು ವಿಷಯಗಳನ್ನು ಕುರಿತು ಶ್ರೀಮನ್ನಾರಾಯಣನಲ್ಲಿ ಹೀಗೆಂದು ವಿಜ್ಞಾಪಿಸುವನು "ಎಲೈ ಭಗವಂತನೆ! ನೀನು ಸಮಸ್ತಪ್ರಾಣಿಗಳ ಹೃದಯದಲ್ಲಿಯೂ ಅಂತರ್ಯಾಮಿಯಾಗಿರತಕ್ಕವನು. ಇದರಿಂದ ಆಯಾಪ್ರಾಣಿಗಳ ಇಂದ್ರಿಯವ್ಯಾಪಾರಗಳೆಲ್ಲವನ್ನೂ ನೀನು ಪ್ರತ್ಯಕ್ಷದಲ್ಲಿ ಕಂಡುಕೊಳ್ಳಬಲ್ಲವನು. ಈ ವಿಧವಾದ ದಿವ್ಯಜ್ಞಾನದಿಂದ, ಆಯಾಭೂತಗಳು ಮನಸ್ಸಿನಲ್ಲಿ ಉದ್ದೇಶಿಸಿದ ಕಾರ್ಯಗಳೆಲ್ಲವೂ ನಿನಗೆ ಮೊದಲೇ ಚೆನ್ನಾಗಿ ತಿಳಿದುಹೋಗುವುದರಲ್ಲಿ ಸ್ವಲ್ಪಮಾತ್ರವೂ ಸಂದೇಹವಿಲ್ಲ. ಆದರೂ, ನಾಥಾ! ನನದೊಂದು ಪ್ರಾರ್ಥನೆಯುಂಟು! ಈ ನನ್ನ ಪ್ರಾರ್ಥನೆಯನ್ನು ಈಡೇರಿಸಿಕೊಡಬೇಕು! ಕರ್ಮಸಂಬಂಧವಾದ ಪ್ರಾಕೃತದೇಹವಿಲ್ಲದ ನಿನ್ನ ದಿವ್ಯಾತ್ಮಸ್ವರೂಪವನ್ನೂ, ನೀನು ಚೇತನಾಚೇತನವಸ್ತುಗಳನ್ನು ಶರೀರರೂಪವಾಗಿ ಹೊಂದಿ, ಅವುಗಳಲ್ಲಿ ಒಳಹೊಕ್ಕು, ಆಯಾವಸ್ತುಗಳ ಸ್ವರೂಪವೇ ನೀನೆಂಬಂತೆ ಕಾಣಿಸಿಕೊಳ್ಳುವ ನಿನ್ನ ಮತ್ತೊಂದು ರೂಪವನ್ನೂ, ಯಥಾಸ್ಥಿತವಾಗಿ ತಿಳಿದುಕೊಳ್ಳುವಂತೆ ನನಗೆ ನೀನು ಶಕ್ತಿಯನ್ನನುಗ್ರಹಿಸಬೇಕು. ನಾನಾಬಗೆಯ ಅದ್ಭುತಶಕ್ತಿಯುಳ್ಳ, ಮತ್ತು ಸತ್ಯಸಂಕಲ್ಪನಾದ ನೀನು, ಇಪ್ಪತ್ತೈದು ತತ್ವಗಳೆಂಬ ಶಕ್ತಿಗಳನ್ನು ಹಿಡಿದ ನೀನೇ ನಿನ್ನನ್ನು ಪ್ರಪಂಚರೂಪವಾಗಿ ಕಾಣಿಸಿಕೊಳ್ಳುವುದೂ, ಕೊನೆಗೆ ನೀನೇ ಅದನ್ನು ನಿನ್ನ ಅಶ್ಚರ್ಯಶಕ್ತಿಯಿಂದ ಉಪಸಂಹಾರಮಾಡಿಕೊಳ್ಳುವುದೂ, ಈ ಉತ್ಪತ್ತಿವಿನಾಶಗಳ ನಡುವೆ ಅದನ್ನು ರಕ್ಷಿಸುತ್ತಿರುವುದೂ ಇವೆಲ್ಲವೂ ನಿನಗೆ ಲೀಲೆಗಳಾಗಿರುವುವಷ್ಟೆ! ನಾಥಾ! ಅಮೋಘಸಂಕಲ್ಪನಾದ ನೀನು ಪಟ್ಟೆಯ (ರೇಷ್ಮೆಯ) ಹುಳುಗಳು ತನ್ನ ದೇಹದಿಂದಲೇ ನೂಲನ್ನು ಬಿಟ್ಟು, ತನ್ನ ಒಳಗೆ ಆಧಾರವಾಗಿಮಾಡಿಕೊಂಡು ಪ್ರಪಂಚಸೃಷ್ಟಿಯೆಂಬ ಲೀಲೆಗಳನ್ನು ನಡೆಸುತ್ತಿರುವೆ! ಮತ್ತು ಪೂರ್ವಸೃಷ್ಟಿಯನ್ನು ಸಂಹರಿಸಿ ತಿರುಗಿ ನಿನ್ನನ್ನೇ ಉಪಾದಾನಕಾರಣವಾಗಿ ಮಾಡಿಕೊಂಡು, ಅಸ್ಮದಾದಿರೂಪವನ್ನು ಹೊಂದಿ, ನಾನಾವಿಧಪ್ರಪಂಚವನ್ನು ಸೃಷ್ಟಿಸುತ್ತಲೂ ಪೋಷಿಸುತಲೂ, ಕೊನೆಗೆ ಸಂಹರಿಸುತ್ತಲೂ ವಿಹರಿಸುತ್ತಿರುವೆ! ಮಾಧವಾ! ಹೀಗೆ ನೀನು ನಡೆಸುವ ಸೃಷ್ಟ್ಯಾದಿಕಾರ್ಯಗಳನ್ನು ನಾನು ಯಥಾವತ್ತಾಗಿ ತಿಳಿಯುವಂತೆ ನನಗೆ ಬುದ್ಧಿಯನ್ನು ಕೊಟ್ಟು ಅನುಗ್ರಹಿಸಬೇಕು. ಈ ನನ್ನ ಎರಡು ಪ್ರಾರ್ಥನೆಗಳನ್ನು ನೀನು ಕೃಪೆಯಿಟ್ಟು ನಡೆಸಿಕೊಡಬೇಕು! ನಿನ್ನ ಆಜ್ಞಾಧೀನನಾಗಿದ್ದ ನಾನು ನೀನು ಹೇಳಿಕೊಟ್ಟ ಕ್ರಮದಲ್ಲಿ ಎಚ್ಚರಿಕೆಯಿಂದ ಸೃಷ್ಟಿಕಾರ್ಯವನ್ನು ನಡಸುವೆನು. ಆದರೆ ನಿನ್ನ ಅನುಗ್ರಹಬಲದಿಂದ ನಾನು ಆ ಸೃಷ್ಟಿಕಾರ್ಯವನ್ನು ನಡೆಸಿದರೂ,

ಅದರಿಂದುಂಟಾಗಬಹುದಾದ ಅಹಂಕಾರ ಮಮಕಾರಗಳಿಗೆ ನಾನು ಕಟ್ಟುಬಿದ್ದು ಕೆಟ್ಟುಹೋಗದಂತೆಯೂ ನನಗೆ ನೀನು ಸದ್ಬುದ್ಧಿಯನ್ನು ಕೊಟ್ಟು ರಕ್ಷಿಸಬೇಕು. ದೇವಾ! ನಾನು ನಿನ್ನ ದಯೆಗೆ ಪಾತ್ರನಾಗಿ ಸೃಷ್ಟಿಸಾಮರ್ಥ್ಯವನ್ನು ಪಡೆದರೂ ನಾನು ನಿನಗೆ ಆ ಸೃಷ್ಟಿವಿಷಯದಲ್ಲಿ ಸೇವಕನಾಗಿ ಕೆಲಸಮಾಡುವವನಲ್ಲದೆ ಬೇರೆಯಲ್ಲ. ಸ್ವಾಮೀ! ಲೋಕದಲ್ಲಿ ಮಿತ್ರನಾದವನೊಬ್ಬನು, ತನ್ನ ಮಿತ್ರನನ್ನು ಪ್ರೀತಿಯಿಂದಲೂ, ಸಲಿಗೆಯಿಂದಲೂ ಗೌರವಿಸಿ ಮನ್ನಿಸುವಂತೆ, ಸರ್ವೇಶ್ವರನಾದ ನೀನು ದಾಸಭೂತನಾದ ನನ್ನನ್ನು ಈ ವಿಧವಾಗಿ ಗೌರವಿಸಿ ನನಗೆ ಸೃಷ್ಟಿಸಾಮರ್ಥ್ಯವನ್ನು ಅನುಗ್ರಹಿಸಿಬಿಟ್ಟಮಾತ್ರಕ್ಕೆ ಸಾಲದು! ಈ ನಿನ್ನ ಆಜ್ಞಾಪ್ರಭಾವದಿಂದಲೇ ನನಗೆ ಸೃಷ್ಟಿಸಾಮರ್ಥ್ಯವೂ, ಆ ಕಾರ್ಯವನ್ನು ನಡೆಸುವ ವಿಷಯದಲ್ಲಿ ಧೈರ್ಯವೂ ಉಂಟಾದಮೇಲೆ, ನಿನ್ನ ಸೇವಾರೂಪವಾಗಿ ನಾನು ಆ ಕಾರ್ಯದಲ್ಲಿ ಕೈಯಿಟ್ಟು, ಉತ್ತಮ ಮಧ್ಯಮಾಧಮ ಭೇದಗಳಿಂದ ಲೋಕವನ್ನು ಸೃಷ್ಟಿಸುತ್ತ ಬಂದರೆ, ಆಗ ನನ್ನ ಮನಸ್ಸಿನಲ್ಲಿ ಉತ್ಕಟವಾದ ಒಂದು ಗರ್ವವು ಹುಟ್ಟಬಹುದು. ನಾನೇ ಈ ಸಮಸ್ತ ಜಗತ್ತನ್ನೂ ಸೃಷ್ಟಿಸತಕ್ಕವನೆಂದೂ, ಪ್ರಪಂಚವೆಲ್ಲವೂ ನನ್ನ ಕೈಗೆ ವಶವಾಗಿರುವುದೆಂದೂ, ನನ್ನ ಸಾಮರ್ಥ್ಯದಮೇಲೆ ಸಾಮರ್ಥ್ಯವಿಲ್ಲವೆಂದೂ, ನನಗೆ ಸಾವೇ ಇಲ್ಲವೆಂದೂ ನನ್ನ ಮನಸ್ಸಿನಲ್ಲಿ ಮಹತ್ತಾದ ಅಹಂಕಾರ ಮಮಕಾರಗಳು ಹುಟ್ಟುವುದಕ್ಕೆ ಪೂರ್ಣವಾದ ಅವಕಾಶವುಂಟು. ಈ ಗರ್ವವುಮಾತ್ರ ನನ್ನ ಮನಸ್ಸಿನಲ್ಲಿ ತಲೆದೋರದಂತೆ ಅನುಗ್ರಹಿಸಬೇಕು.” ಎಂದನು. ಹೀಗೆ ಬ್ರಹ್ಮದೇವನಿಂದ ಪ್ರಾರ್ಥಿತನಾದ ಭಗವಂತನು, ಅವನಲ್ಲಿ ಪ್ರಸನ್ನನಾಗಿ, ತನ್ನ ಪರಾವರ ಸ್ವರೂಪಗಳೆರಡನ್ನೂ ಆತನಿಗೆ ತಿಳಿಸಲಾರಂಭಿಸಿದನು. “ಓ ಕುಮಾರಾ! ಮುಖ್ಯವಾಗಿ ತಿಳಿಯಬೇಕಾದ ಪರಸ್ವರೂಪಜ್ಞಾನವನ್ನೂ, ಅದಕ್ಕೆ ಅಂಗವಾಗಿ ತಿಳಿದುಕೊಳ್ಳಬೇಕಾದ ಚೇತನಾಚೇತನಸ್ವರೂಪದ ಜ್ಞಾನವನ್ನೂ, ಶಾಸ್ತ್ರಗಳನ್ನೂ, ಅದರಿಂದ ತಿಳಿಯಬಹುದಾದ ಜ್ಞಾನಯೋಗಾದಿಗಳನ್ನೂ, ಅವುಗಳ ರಹಸ್ಯಮಂತ್ರಗಳನ್ನೂ ನಿನಗೆ ಕ್ರಮವಾಗಿ ತಿಳಿಸುವೆನು ಕೇಳು. ಈ ಜ್ಞಾನವನ್ನು ಪಡೆದಮೇಲೆ ನಿಧಿಯಂತೆ ಅದನ್ನು ನೀನು ಗೋಪ್ಯವಾಗಿ ಕಾಪಾಡುತ್ತ ಬರಬೇಕು. ಆತುರದಿಂದ ಬೇರೆ ಯಾರಿಗೂ ಉಪದೇಶಿಸಬಾರದು. ಆದರೆ ನಿನಗೆ ನಾನು ಹೇಳುವ ತತ್ವಗಳೆಲ್ಲವನ್ನೂ ತಿಳಿದುಕೊಳ್ಳುವ ಶಕ್ತಿಯು ಇರಲಾರದೆಂಬ ಭಯವನ್ನು ಬಿಟ್ಟುಬಿಡು. ಅದನ್ನು ತಿಳಿದುಕೊಳ್ಳತಕ್ಕ ಶಕ್ತಿಯೂ ನನ್ನ ಅನುಗ್ರಹದಿಂದಲೇ ನಿನಗೆ ಪ್ರಾಪ್ತವಾಗುವುದು. ನಾನು ಯಾವ ಪರಿಮಾಣವುಳ್ಳವನೋ, ನನ್ನ ಸ್ವರೂಪವೂ ನನ್ನ ಸ್ವಭಾವವೂ, ನನ್ನ ಗುಣಗಳೂ ಎಂತವುಗಳೋ, ನಾನು ನಡೆಸತಕ್ಕ ಸೃಷ್ಟಿಸ್ಥಿತಿ ಸಂಹಾರರೂಪಗಳಾದ ದಿವ್ಯ

ಲೀಲೆಗಳು ಎಂತವುಗಳೋ, ನಾನು ಯಾವಾಗ ಯಾವಯಾವ ಕರ್ಮಗಳನ್ನು ನಡೆಸು ವೆನೋ, ಅವೆಲ್ಲವೂ ನಿನಗೆ ಸ್ಪಷ್ಟವಾಗಿ ತಿಳಿಯುವುವು. ಚೇತನಗಳಿಗಿಂತಲೂ ವಿಲ ಕ್ಷಣವಾದ ಯಾವುದೊಂದು ಪರವಸ್ತುವುಂಟೋ ಆ ವಸ್ತುವೇ ನಾನೆಂದು ತಿಳಿ! ಮತ್ತು ಅಚೇತನಾಚೇತನಗಳಲ್ಲಿ ಅಂತರ್ಗತನಾಗಿರತಕ್ಕವನೂ ನಾನಲ್ಲದೆ ಬೇರೆಯ ಲ್ಲ! ಸೃಷ್ಟಿಗೆ ಮೊದಲು ನಾಮರೂಪ ವಿಭಾಗಗಳಿಲ್ಲದೆ ಸಮಷ್ಟಿ ರೂಪದಿಂದಿದ್ದ ಪ್ರಕೃ ತಿಪುರುಷರನ್ನು ಶರೀರವಾಗಿ ಧರಿಸಿದ್ದವನೂ ನಾನೇ! ಹೊರತು ಬೇರೆಯಲ್ಲ! ಸೃಷ್ಟಿ ಕಾಲದಲ್ಲಿ ನಾಮರೂಪವಿಭಾಗಗಳಿಂದ ತೋರುವ ಪ್ರಕೃತಿಪುರುಷರನ್ನು ಶರೀರವಾಗಿ ಹೊಂದುವವನೂ ನಾನೇ! ಸಮಸ್ತ ಜಗತ್ತನ್ನೂ ಉಪಸಂಹಾರ ಮಾಡಿಕೊಂಡು ಕೊನೆಗೆ ನಿಲ್ಲತಕ್ಕವನೂ ನಾನೊಬ್ಬನೇ! ಹೀಗೆ ಕಾರ್ಯಕಾರಣಾವಸ್ಥೆ ಗಳೆರಡರಲ್ಲಿಯೂ ಪ್ರಕೃತಿಪುರುಷರನ್ನು ನಾನು ಶರೀರವಾಗಿ ಹೊಂದಿದ್ದರೂ, ಹಾಗೆ ಶರೀರಭೂತಗಳಾದ ಚೇತನಾಚೇತನಗಳಲ್ಲಿರುವ ಅಜ್ಞತಾದಿ ದೋಷಗಳು ಮಾತ್ರ ನನ್ನಲ್ಲಿ ಅಂಟಲಾರವು. ಶರೀರದ ಕಾರ್ಯಗಳಾದ ಬಾಲ್ಯ, ಯೌವನ, ವಾರ್ಧಕ ಮುಂತಾದ ವಿಕಾರಗಳು ಜೀವನಿಗೆ ಹೇಗೆ ಸಂಬಂಧಿಸುವುದಿಲ್ಲವೋ ಹಾಗೆಯೇ, ಜೀವಪ್ರಕೃತಿಗಳೆರಡನ್ನೂ, ಶರೀರರೂಪವಾಗಿ ಹೊಂದಿದ ನನ್ನಲ್ಲಿ ಜೀವನಿಗುಂಟಾ ಗುವ ಅಜ್ಞತೆಯಾಗಲಿ, ಶೋಕಮೋಹಂಗಳಾಗಲಿ, ಇನ್ನೂ ಇತರವಿಧವಾದ ಯಾವ ದೋಷಗಳಾಗಲಿ ಅಂಟಲಾರವು. ಹಾಗೆಯೇ ಅಚೇತನಗಳಲ್ಲಿರುವ ಜಡತ್ವವಾಗಲಿ, ಪರಿಣಾಮ ಸ್ವಭಾವವಾಗಲಿ ನನ್ನಲ್ಲಿ ಸಂಬಂಧಿಸಲಾರವು. ನಾನು ಕಾಣಿಸತಕ್ಕ ಈ ಕಾರ್ಯಕಾರಣಸ್ವರೂಪಗಳೆರಡನ್ನೂ ನನಗೆ ಶರೀರಭೂತಗಳಾದ ಚೇತನಾಚೇತ ನಗಳಮೂಲಕವಾಗಿಯೇ ನಡೆಸುವೆನು. ಹೀಗೆ ಚಿದಚಿತ್ತುಗಳಿಗಿಂತಲೂ ವಿಲಕ್ಷಣ ವಾದ ನನ್ನ ಸ್ವರೂಪವನ್ನೂ ನಿನಗೆ ತಿಳಿಸಿದೆನಷ್ಟೆ? ಇನ್ನು ಅದಕ್ಕೆ ಅಂಗಭೂತ ಗಳಾಗಿ ತಿಳಿಯಬೇಕಾದ ಚೇತನಾಚೇತನಗಳ ಸ್ವರೂಪವನ್ನು ತಿಳಿಸುವೆನು ಕೇಳು! ಜೀವಾತ್ಮನು ಜ್ಞಾನಾನಂದಸ್ವರೂಪನಾಗಿರುವನು. ಲೋಕದಲ್ಲಿ ಎಲ್ಲರೂ ಆಶೆಪಡ ತಕ್ಕ ಪುರುಷಾರ್ಥಗಳು ಜ್ಞಾನಾನಂದಗಳೆರಡೇ ಹೊರತು ಬೇರೆಯಲ್ಲ. ಹೀಗೆ ಜ್ಞಾನಾನಂದಸ್ವರೂಪನಾದುದರಿಂದ ಉತ್ತಮಪುರುಷಾರ್ಥವೆನಿಸಿಕೊಂಡ ಚೇತನ ತತ್ವಕ್ಕಿಂತಲೂ, ಪ್ರಕೃತಿಯೆಂಬುದು ಪ್ರತ್ಯೇಕವಾಗಿ ಬೇರ್ಪಟ್ಟಿರುವುದು. ಪ್ರಕೃತಿ ಯು ತೋರುವಾಗ ಚೇತನತತ್ವವು ಕಾಣಲಾರದು. ಹಾಗೆಯೇ ಚೇತನತತ್ವವು ತೋರುವಾಗ ಪ್ರಕೃತಿತತ್ವವು ತೋರಲಾರದು. ಅಂಧಕಾರವಿರುವಾಗ ತೇಜಸ್ಸೂ ತೇಜಸ್ಸಿರುವಾಗ ಅಂಧಕಾರವೂ ಹೇಗೆ ತೋರಲಾರದೋ, ಹಾಗೆಯೇ ಜೀವ ಪ್ರಕೃತಿಗಳೆಂಬೆರಡರಲ್ಲಿ ಒಂದು ತೋರುವಾಗ ಮತ್ತೊಂದು ತೋರಲಾರದು.

ಹೀಗೆಮಾಡುವುದು ನನ್ನ ಮಾಯೆಯ ಕಾರ್ಯವೆಂದೇ ತಿಳಿ! ಈ ಜೀವಪ್ರಕೃತಿ ತತ್ವಗಳಲ್ಲಿರುವ ಭೇದವನ್ನು ತಿಳಿಸುವೆನು ಕೇಳು. ಚೇತನವಾದ ಆತ್ಮ ತತ್ವವೆಂಬುದು ಅಣುವಾಗಿಯೂ, ನಿತ್ಯವಾಗಿಯೂ, ಸ್ವಯಂಪ್ರಕಾಶವುಳ್ಳುದಾಗಿಯೂ ಇರುವುದು. ಅಚೇತನವಾದ ಪ್ರಕೃತಿತತ್ವವೆಂಬುದು ಸ್ಥೂಲವಾಗಿಯೂ, ಅನಿತ್ಯವಾಗಿಯೂ, ಜಡವಾಗಿಯೂ ಇರುವುದು. ಹೀಗೆ ಇವೆರಡರಲ್ಲಿ ಕೇವಲ ವಿರುದ್ಧಸ್ವಭಾವಗಳಿರುವದರಿಂದಲೇ ಒಂದನ್ನೊಂದು ಹೊಂದಿಕೊಂಡಿರಲಾರವು. ಹೀಗೆ ಪರಸ್ಪರವಿರುದ್ಧಸ್ವಭಾವವುಳ್ಳ ಚೇತನಾಚೇತನಗಳ ಸ್ವರೂಪವನ್ನು ತಿಳಿದೆಯಷ್ಟೆ. ಇನ್ನು ನಾನು ಆಚೇತನಾಚೇತನಗಳಲ್ಲಿ ಒಳಹೊಕ್ಕು ಅವುಗಳನ್ನು ಪ್ರೋಷಿಸುತ್ತ, ಅವುಗಳಲ್ಲಿರುವ ದೋಷಗಳನ್ನು ಮಾತ್ರ ಅಂಟಿಸಿಕೊಳ್ಳದೆ ಇರುವ ಕ್ರಮವನ್ನು ತಿಳಿಸುವೆನು ಕೇಳು. ಆಕಾಶ, ವಾಯು, ತೇಜಸ್ಸು, ಎಂಬ ಈ ಮಹಾಭೂತಗಳು ಗಡಿಗೆ ಮೊದಲಾದ ಇತರವಸ್ತುಗಳಲ್ಲಿ ಸೇರಿದ್ದಾಗಲೂ, ಆ ಘಟಾದಿವಸ್ತುಗಳಿಗೆ ಆಕಸ್ಮಾತ್ತಾಗಿ ಸಂಭವಿಸಬಹುದಾದ ಅಪಾಯಗಳಿಗೂ, ಅದರಿಂದುಂಟಾಗುವ ವಿಕಾರಗಳಿಗೂ, ಹೇಗೆ ಈಡಾಗಲಾರವೋ ಮತ್ತು ಆ ಬಗೆಯ ಆಶ್ರಯವಸ್ತುಗಳಿಗೆ ನಾಶವುಂಟಾದ ಮೇಲೆ ಅದರ ಸಂಬಂಧವೇ ತಮಗಿಲ್ಲದಂತೆ ಹೇಗೆ ಬೇರ್ಪಟ್ಟು ಹೋಗುವುವೋ, ಹಾಗೆಯೇ ನಾನೂಕೂಡ ಚೇತನಾಚೇತನಗಳಲ್ಲಿ ಅಂತರ್ಯಾಮಿಯಾಗಿದ್ದರೂ, ಅವುಗಳಲ್ಲಿ ನಡೆಯುವ ದೋಷಗಳಿಗಾಗಲಿ, ಬದಲಾವಣೆಗಳಿಗಾಗಲಿ. ಗುರಿಯಾಗಲಾರೆನು. ಮತ್ತು ಆಕಾಶವೇ ಮೊದಲಾದ ಆ ಮಹಾಭೂತಗಳು ಗಡಿಗೆ ಮೊದಲಾದ ವಸ್ತುಗಳಲ್ಲಿ ಒಳಹೊಕ್ಕು, ಅಲ್ಲಿಮಾತ್ರವೇ ನಿಲ್ಲದೆ ಹೊರಭಾಗವನ್ನೂ ಹೇಗೆ ವ್ಯಾಪಿಸುತ್ತಿರುವುವೋ, ಹಾಗೆಯೇ ನಾನೂ ಚೇತನಾಚೇತನಗಳಲ್ಲಿ ಅಡಗಿರುವುದಲ್ಲದೆ, ಅವುಗಳ ಹೊರಭಾಗವನ್ನೂ ವ್ಯಾಪಿಸಿರುವೆನು. ಮತ್ತು ಆಕಾಶವನ್ನಳೆಯುವುದು ಹೇಗೆ ಸಾಧ್ಯವಲ್ಲವೋ. ಹಾಗೆಯೇ ನನ್ನ ಪರಿಮಾಣವನ್ನು ಇಷ್ಟೆಂದು ನಿರ್ಣಯಿಸುವುದೂ ಸಾಧ್ಯವಲ್ಲ. ಹೀಗೆ ಅಪ್ರಮೇಯವಾದ ನನ್ನ ಸ್ವರೂಪವನ್ನೂ, ಸರ್ವಜ್ಞತ್ವ, ಸರ್ವಶಕ್ತತ್ವ ಮೊದಲಾದ ನನ್ನ ಸ್ವಭಾವವನ್ನೂ, ಚೇತನಾಚೇತನಗಳೆಂಬ ನನ್ನ ಶರೀರವನ್ನೂ, ಅವುಗಳ ದೋಷಕ್ಕೆ ನಾನು ಭಾಗಿಯಾಗದೆ ಇರುವ ರೀತಿಯನ್ನೂ ಲೋಕದ ಸೃಷ್ಟಿಸ್ಥಿತಿ ಸಂಹಾರಗಳೆಂಬ ನನ್ನ ಲೀಲೆಗಳನ್ನೂ ನಿನಗೆ ತಿಳಿಸಿರುವೆನು. ಇನ್ನು ಮುಂದೆ ಮತ್ತೊಂದು ವಿಷಯವನ್ನು ಹೇಳುವೆನು ಕೇಳು. ಪರಮಾತ್ಮನ ಸ್ವರೂಪವನ್ನು ತಿಳಿಯಲಪೇಕ್ಷೆಯುಳ್ಳವನು “ಪರಸ್ಪರ ವಿಲಕ್ಷಣಸ್ವಭಾವವುಳ್ಳ ಚೇತನಾಚೇತನಗಳೆರಡಕ್ಕೂ ಅಂತರಾತ್ಮನಾದ ಆ ಪರಮಾತ್ಮನಸ್ವರೂಪವೊಂದೇ ಕಾರ್ಯಕಾರಣರೂಪದಿಂದ ಬದಲಾಯಿಸುತ್ತಿರುವುದೆಂದೂ, ಅದು

ಹೊರತು ಬೇರೆಯಾವುದೂ ಇಲ್ಲವೆಂದೂ ಮೊದಲು ತನ್ನ ಮನಸ್ಸಿಗೆ ನಿರ್ಧಾರವಾಗಿ ತಿಳಿದುಕೊಳ್ಳಬೇಕು. ಇದೇ ಮುಖ್ಯವಾಗಿ ತಿಳಿದುಕೊಳ್ಳಬೇಕಾದ ವಿಷಯವು. ಈ ಜ್ಞಾನವುಂಟಾದಮೇಲೆ ತಿಳಿದುಕೊಳ್ಳಬೇಕಾದ ವಿಷಯವು ಮತ್ತೊಂದೂ ಇಲ್ಲವು. ನನ್ನನ್ನು ತಿಳಿಯುವುದರಿಂದ ಎಲ್ಲವನ್ನೂ ತಿಳಿದಂತೆಯೇ ಆಗುವುದು. ಇದಲ್ಲದೆ ನನ್ನ ಸ್ವರೂಪವು ವಿಕಾರಹೊಂದದೆ ಯಾವಾಗಲೂ ಒಂದೇವಿಧವಾಗಿರುವುದರಿಂದ, ಜೀವಪ್ರಕೃತಿಗಳೆರಡಕ್ಕಿಂತಲೂ ವಿಲಕ್ಷಣವೆನಿಸಿಕೊಂಡಿರುವುದು. ಜೀವಾತ್ಮನಿಗೂ, ನನಗೂ ಇರುವ ಮತ್ತೊಂದು ಮುಖ್ಯವ್ಯತ್ಯಾಸವನ್ನು ತಿಳಿಸುವೆನು ಕೇಳು. ನಾನು ಸಮಸ್ತ ವಸ್ತುಗಳಲ್ಲಿಯೂ ವರ್ತಿಸತಕ್ಕವನು ಜೀವಾತ್ಮನಾದರೋ ಅಣುಮಾತ್ರನಾಗಿ ಏಕದೇಶದಲ್ಲಿ ಮಾತ್ರ ಇರತಕ್ಕವನು ಇದೇ ನಮ್ಮಿಬ್ಬರಿಗೂ ಇರುವ ಭೇದವು. ಅಚೇತನವಾದ ಪ್ರಕೃತಿಯು ನನ್ನಂತೆಯೇ ಎಲ್ಲಾ ಕಡೆಯಲ್ಲಿ ವರ್ತಿಸತಕ್ಕುದಾದರೂ ಕ್ಷಣಕ್ಷಣಕ್ಕೂ ವಿಕಾರಹೊಂದುತ್ತಿರುವುದು ಇದಕ್ಕೆ ಒಂದು ನಿದರ್ಶನವನ್ನು ಹೇಳುವೆನು ಕೇಳು. ಗಡಿಗೆಗೆ ಬೇಕಾದ ಮಣ್ಣು ಮೊದಲು ಮುದ್ದೆಯಾಗಿರುವುದು. ಆಮೇಲೆ ಘಟರೂಪವನ್ನು ಹೊಂದುವುದು! ಕಾಲಕ್ರಮದಿಂದ ಒಡೆದು ಎರಡು ಹೋಳಾಗುವುದು! ಆಮೇಲೆ ಚೂರುಚೂರಾಗಿ ಒಡೆದು ಹೋಗುವುದು! ಕೊನೆಗೆ ಧೂಳಾಗಿ ಮಣ್ಣಿನಲ್ಲಿ ಸೇರಿಹೋಗುವುದು. ನನ್ನ ಸ್ವರೂಪಕ್ಕೆ ಇಂತಹ ವಿಕಾರವೊಂದೂ ಯಾವ ಕಾರಣದಿಂದಲೂ ಉಂಟಾಗಲಾರದು. ಆದುದರಿಂದ ಪ್ರಕೃತಿಗಿಂತಲೂ ನಾನು ವಿಲಕ್ಷಣನಾಗಿರುವೆನು. ಕುಮಾರಾ! ನೀನು ಕೇಳಿದಂತೆ ನನ್ನ ಪರಾವರಸ್ವರೂಪಗಳೆರಡನ್ನೂ ನಿನಗೆ ತಿಳಿಸಿರುವೆನು ಇನ್ನು ನೀನು ಲೋಕಸೃಷ್ಟಿಯನ್ನು ಮಾಡುವ ಕಾಲದಲ್ಲಿ, ಅದರಿಂದ ನಿನಗೆ ಅಹಂಕಾರ ಮಮಕಾರಗಳೊಂದೂ ಇಲ್ಲದಿರಬೇಕೆಂದು ಕೇಳಿಕೊಂಡೆಯಲ್ಲವೆ? ಅದಕ್ಕೊಂದುಪಾಯವನ್ನು ಹೇಳುವೆನು ಕೇಳು! ಚೇತನಾಚೇತನಗಳೆಲ್ಲವೂ ನನಗೆ ಶರೀರವಾಗಿ ನನ್ನ ವಶವಾಗಿರುವುದರಿಂದ, ನನ್ನನ್ನು ಬಿಟ್ಟು ಬೇರೆ ವಸ್ತುವಿಲ್ಲವೆಂದು ಮೊದಲೇ ಹೇಳಿದೆನಷ್ಟೆ? ಈ ರಹಸ್ಯವನ್ನು ಮಾತ್ರ ನೀನು ಯಾವಾಗಲೂ ಮರೆಯದೆ ಮನಸ್ಸಿನಲ್ಲಿ ಶ್ರದ್ಧೆಯಿಂದ ಭಾವಿಸಿಕೊಂಡು ಬರುತ್ತಿದ್ದ ಪಕ್ಷದಲ್ಲಿ ನಿನಗೆ ಸೃಷ್ಟಿಕಾಲದಲ್ಲಿ ಯಾವ ವಸ್ತುವಿನಲ್ಲಿಯೂ ಮೋಹವಾಗಲಿ, ಮಮತೆಯಾಗಲಿ, ಅಹಂಕಾರವಾಗಲಿ ಉಂಟಾಗಲಾರದು. ಈ ನನ್ನ ಶಾಸನವನ್ನನುಸರಿಸಿ ಸೃಷ್ಟಿಕಾರ್ಯವನ್ನು ನಡೆಸು! ನಿನಗೆ ಮೋಹಾದಿಗಳೊಂದೂ ಉಂಟಾಗದಂತೆ ವರವನ್ನು ಕೊಟ್ಟಿರುವೆನು. ನನ್ನನ್ನು ಬಿಟ್ಟು ಬೇರೆವಸ್ತುವಿಲ್ಲವೆಂಬ ಇದೇ ಅಭಿಪ್ರಾಯವನ್ನು ರುದ್ರನೂ ಕೂಡ ತನ್ನ ಮನಸ್ಸಿನಲ್ಲಿ ಮರೆಯದೆ ದೃಢವಾಗಿಟ್ಟುಕೊಂಡಿದ್ದ ಪಕ್ಷದಲ್ಲಿ ಅವನೂ ನಾನು

ನಡೆಸಬೇಕಾದ ಸಂಹಾರಕಾರ್ಯದಲ್ಲಿ ಅಹಂಕಾರವಿಲ್ಲದಂತಿರುವನು" ಎಂದನು. ಕರ್ಮಸಂಬಂಧಗಳಾದ ಉತ್ಪತ್ತಿ ವಿನಾಶಗಳಿಲ್ಲದವನಾಗಿಯೂ, ಆಶ್ರಿತರ ಪಾಪಗಳನ್ನು ನೀಗಿಸತಕ್ಕವನಾಗಿಯೂ ಇರುವ ಭಗವಂತನು ವ್ಯಷ್ಟಿರೂಪಗಳಾದ ದೇವಾದಿ ಭೂತಗಳಿಗೆ ಮುಖ್ಯಾಧಿಪತಿಯಾದ ದೇವನನ್ನು ಕುರಿತು ಈ ವಿಧವಾಗಿ ಉಪದೇಶಿಸಿ ಆ ಬ್ರಹ್ಮನು ನೋಡುತ್ತಿರುವ ಹಾಗೆಯೇ ತನ್ನ ನಿವಾಸಸ್ಥಾನವಾದ ವೈಕುಂಠಲೋಕದೊಡನೆ ಕಣ್ಮರೆಯಾಗಿಬಿಟ್ಟನು. ಆಗ ಬ್ರಹ್ಮದೇವನು ಅತ್ಯಂತ ಭಕ್ತಿ ವಿಶಿಷ್ಟನಾಗಿ ಆ ನಾರಾಯಣನ ಮಹಿಮೆಯನ್ನು ಮನಸ್ಸಿನಲ್ಲಿ ಬಾರಿಬಾರಿಗೂ ಕೊಂಡಾಡಿ ಹಿಗ್ಗುತ್ತ ಸ್ವಲ್ಪಹೊತ್ತಿನವರೆಗೆ ಕೈಜೋಡಿಸಿದಂತೆಯೇ ಸ್ತಬ್ಧನಾಗಿ ನಿಂತಿದ್ದನು. ಮುಂದೆ ತಾನು ಸೃಷ್ಟಿಸಬೇಕಾದ ದೇವಮನುಷ್ಯಾದಿ ಸಮಸ್ತಪ್ರಾಣಿಗಳನ್ನೂ, ಮನಸ್ಸಿನಲ್ಲಿ ಭಾವಿಸಿಕೊಂಡಿದ್ದುದರಿಂದ ಸಮಸ್ತ ಭೂತಸ್ವರೂಪನಾದ ಆ ಬ್ರಹ್ಮದೇವನು ಪೂರ್ವಕಲ್ಪದಲ್ಲಿದ್ದಂತೆಯೇ ಸಮಸ್ತ ಪ್ರಪಂಚವನ್ನೂ ಸೃಷ್ಟಿಸಿದನು. ಎಲೈ ಪರೀಕ್ಷಿದ್ರಾಜನೆ! ಆಮೇಲೆ ಬ್ರಹ್ಮನು ತಾನು ಸೃಷ್ಟಿಸಿದ ಪ್ರಪಂಚಕ್ಕೆ ಯಾವವಿಧದಿಂದ ಹಿತವನ್ನುಂಟುಮಾಡಬಹುದೆಂದು ಮನಸ್ಸಿನಲ್ಲಿ ಆಲೋಚಿಸುತ್ತಿದ್ದು ಒಮ್ಮೆ ಇದಕ್ಕಾಗಿ ಯಮನಿಯಮರೂಪವಾದ ತಪಸ್ಸನ್ನು ಮಾಡ ತೊಡಗಿದನು ಈ ಸಮಯಕ್ಕೆ ಸರಿಯಾಗಿ ಆತನ ಪುತ್ರನಾದ ನಾರದನು ಅಕಸ್ಮಾತ್ತಾಗಿ ಅಲ್ಲಿಗೆ ಬಂದು ಸೇರಿದನು. ಆ ನಾರದಮಹರ್ಷಿಯು ತಂದೆಯಾದ ಬ್ರಹ್ಮನಿಗೆ ನಮಸ್ಕರಿಸಿ, ಆತನಿಗೆ ಪರಿಚರ್ಯೆಗಳನ್ನು ಮಾಡುತ್ತ, ಭಕ್ತಿಪೂರ್ವಕವಾದ ತನ್ನ ಸೇವೆಯಿಂದ ಅವನನ್ನು ಸಂತೋಷಪಡಿಸಿ, ವಿನಯದಿಂದ ಅವನ ಮುಂದೆ ನಿಂತು, ಈಗ ನೀನು ನನ್ನನ್ನು ಪ್ರಶ್ನೆಮಾಡಿದಂತೆಯೇ ವಿಷ್ಣುವಿನ ಮಾಯಾಪ್ರಕಾರವನ್ನು (ಆಶ್ಚರ್ಯಶಕ್ತಿಯನ್ನು) ಕುರಿತು ವಿವರಿಸಬೇಕೆಂದು ಪ್ರಾರ್ಥಿಸಿ ಕೇಳಿದನು. ಆಗ ಬ್ರಹ್ಮದೇವನು ನಾರದನಲ್ಲಿ ಪ್ರಸನ್ನನಾಗಿ, ಹಿಂದೆ ತನಗೆ ಶ್ರೀಮನ್ನಾರಾಯಣನು ಉಪದೇಶಿಸಿದ ವಿಷಯಗಳೆಲ್ಲವನ್ನೂ ವಿವರಿಸಿ ತಿಳಿಸಿದನು. ಇದನ್ನು ಕೇಳಿ ನಾರದನು ಪರಮಸಂತೋಷಭರಿತನಾಗಿ ಲೋಕಸಂಚಾರಕ್ಕಾಗಿ ಹೊರಟನು. ಹೀಗೆ ಬಹುಕಾಲವು ಕಳೆದಮೇಲೆ ಒಮ್ಮೆ ನಾರದನು ಸರಸ್ವತೀನದೀತೀರದಲ್ಲಿ ಚಿಂತಾಕ್ರಾಂತನಾಗಿ ಕುಳಿತಿದ್ದ ಮಹಾತೇಜಸ್ವಿಯಾದ ವ್ಯಾಸಮಹರ್ಷಿಯ ಬಳಿಗೆಬಂದು ಅವನನ್ನು ಸಂಧಿಸಿದನು. ಮತ್ತು ಆ ವ್ಯಾಸಮಹಾಮುನಿಯು ಪ್ರಾರ್ಥನೆಯಮೇಲೆ ಹಿಂದೆತನ್ನ ತಂದೆಯಾದಬ್ರಹ್ಮನು ಉಪದೇಶಿಸಿದ ರೀತಿಯಲ್ಲಿಯೇ ಭಾಗವತಪುರಾಣವನ್ನು ತಿಳಿಸಿದನು. ಎಲೈ ಪರೀಕ್ಷಿದ್ರಾಜನೆ! ನನ್ನ ತಂದೆಯಾದ ವ್ಯಾಸಮುನಿಯೂ ಕೂಡ ತನಗೆ ನಾರದನಿಂದ ಉಪದೇಶಿಸಲ್ಪಟ್ಟ

ಹೊರತು ಬೇರೆಯಾವುದೂ ಇಲ್ಲವೆಂದೂ ಮೊದಲು ತನ್ನ ಮನಸ್ಸಿಗೆ ನಿರ್ಧಾರವಾಗಿ ತಿಳಿದುಕೊಳ್ಳಬೇಕು. ಇದೇ ಮುಖ್ಯವಾಗಿ ತಿಳಿದುಕೊಳ್ಳಬೇಕಾದ ವಿಷಯವು. ಈ ಜ್ಞಾನವುಂಟಾದಮೇಲೆ ತಿಳಿದುಕೊಳ್ಳಬೇಕಾದ ವಿಷಯವು ಮತ್ತೊಂದೂ ಇಲ್ಲವು. ನನ್ನನ್ನು ತಿಳಿಯುವುದರಿಂದ ಎಲ್ಲವನ್ನೂ ತಿಳಿದಂತೆಯೇ ಆಗುವುದು. ಇದಲ್ಲದೆ ನನ್ನ ಸ್ವರೂಪವು ವಿಕಾರಹೊಂದದೆ ಯಾವಾಗಲೂ ಒಂದೇವಿಧವಾಗಿರುವುದರಿಂದ, ಜೀವಪ್ರಕೃತಿಗಳೆರಡಕ್ಕಿಂತಲೂ ವಿಲಕ್ಷಣವೆನಿಸಿಕೊಂಡಿರುವುದು. ಜೀವಾತ್ಮನಿಗೂ, ನನಗೂ ಇರುವ ಮತ್ತೊಂದು ಮುಖ್ಯವ್ಯತ್ಯಾಸವನ್ನು ತಿಳಿಸುವೆನು ಕೇಳು. ನಾನು ಸಮಸ್ತ ವಸ್ತುಗಳಲ್ಲಿಯೂ ವರ್ತಿಸತಕ್ಕವನು ಜೀವಾತ್ಮನಾದರೋ ಅಣುಮಾತ್ರವಾಗಿ ಏಕದೇಶದಲ್ಲಿ ಮಾತ್ರ ಇರತಕ್ಕವನು ಇದೇ ನಮ್ಮಿಬ್ಬರಿಗೂ ಇರುವ ಭೇದವು. ಅಚೇತನವಾದ ಪ್ರಕೃತಿಯು ನನ್ನಂತೆಯೇ ಎಲ್ಲಾ ಕಡೆಯಲ್ಲಿ ವರ್ತಿಸತಕ್ಕುದಾದರೂ ಕ್ಷಣಕ್ಷಣಕ್ಕೂ ವಿಕಾರಹೊಂದುತ್ತಿರುವುದು ಇದಕ್ಕೆ ಒಂದು ನಿದರ್ಶನವನ್ನು ಹೇಳುವೆನು ಕೇಳು. ಗಡಿಗೆಗೆ ಬೇಕಾದ ಮಣ್ಣು ಮೊದಲು ಮುದ್ದೆಯಾಗಿರುವುದು. ಆಮೇಲೆ ಘಟರೂಪವನ್ನು ಹೊಂದುವುದು! ಕಾಲಕ್ರಮದಿಂದ ಒಡೆದು ಎರಡು ಹೋಳಾಗುವುದು! ಆಮೇಲೆ ಚೂರುಚೂರಾಗಿ ಒಡೆದು ಹೋಗುವುದು! ಕೊನೆಗೆ ಧೂಳಾಗಿ ಮಣ್ಣಿನಲ್ಲಿ ಸೇರಿಹೋಗುವುದು. ನನ್ನ ಸ್ವರೂಪಕ್ಕೆ ಇಂತಹ ವಿಕಾರವೊಂದೂ ಯಾವ ಕಾರಣದಿಂದಲೂ ಉಂಟಾಗಲಾರದು. ಆದುದರಿಂದ ಪ್ರಕೃತಿಗಿಂತಲೂ ನಾನು ವಿಲಕ್ಷಣನಾಗಿರುವೆನು. ಕುಮಾರಾ! ನೀನು ಕೇಳಿದಂತೆ ನನ್ನ ಪರಾವರಸ್ವರೂಪಗಳೆರಡನ್ನೂ ನಿನಗ ತಿಳಿಸಿರುವೆನು ಇನ್ನು ನೀನು ಲೋಕಸೃಷ್ಟಿಯನ್ನು ಮಾಡುವ ಕಾಲದಲ್ಲಿ, ಅದರಿಂದ ನಿನಗೆ ಅಹಂಕಾರಮಮಕಾರಗಳೊಂದೂ ಇಲ್ಲವಿರಬೇಕೆಂದು ಕೇಳಿಕೊಂಡೆಯಲ್ಲವೆ? ಅದಕ್ಕೊಂದುಪಾಯನ್ನು ಹೇಳುವೆನು ಕೇಳು! ಚೇತನಾಚೇತನಗಳೆಲ್ಲವೂ ನನಗೆ ಶರೀರವಾಗಿ ನನ್ನ ವಶವಾಗಿರುವುದರಿಂದ, ನನ್ನನ್ನು ಬಿಟ್ಟು ಬೇರೆ ವಸ್ತುವಿಲ್ಲವೆಂದು ಮೊದಲೇ ಹೇಳಿದೆನಷ್ಟೆ? ಈ ರಹಸ್ಯವನ್ನುಮಾತ್ರ ನೀನು ಯಾವಾಗಲೂ ಮರೆಯದೆ ಮನಸ್ಸಿನಲ್ಲಿ ಶ್ರದ್ಧೆಯಿಂದ ಭಾವಿಸಿಕೊಂಡು ಬರುತ್ತಿದ್ದ ಪಕ್ಷದಲ್ಲಿ ನಿನಗೆ ಸೃಷ್ಟಿಕಾಲದಲ್ಲಿ ಯಾವ ವಸ್ತುವಿನಲ್ಲಿಯೂ ಮೋಹವಾಗಲಿ, ಮಮತೆಯಾಗಲಿ, ಅಹಂಕಾರವಾಗಲಿ ಉಂಟಾಗಲಾರದು. ಈ ನನ್ನ ಶಾಸನವನ್ನನುಸರಿಸಿ ಸೃಷ್ಟಿಕಾರ್ಯವನ್ನು ನಡೆಸು! ನಿನಗೆ ಮೋಹಾದಿಗಳೊಂದೂ ಉಂಟಾಗದಂತೆ ವರವನ್ನು ಕೊಟ್ಟಿರುವೆನು. ನನ್ನನ್ನು ಬಿಟ್ಟು ಬೇರೆವಸ್ತುವಿಲ್ಲವೆಂಬ ಇದೇ ಅಭಿಪ್ರಾಯವನ್ನು ರುದ್ರನೂ ಕೂಡ ತನ್ನ ಮನಸ್ಸಿನಲ್ಲಿ ಮರೆಯದೆ ದೃಢವಾಗಿಟ್ಟುಕೊಂಡಿದ್ದ ಪಕ್ಷದಲ್ಲಿ ಅವನೂ ನಾನು

ನಡೆಸಬೇಕಾದ ಸಂಹಾರಕಾರ್ಯದಲ್ಲಿ ಅಹಂಕಾರವಿಲ್ಲದಂತಿರುವನು" ಎಂದನು. ಕರ್ಮಸಂಬಂಧಗಳಾದ ಉತ್ಪತ್ತಿ ವಿನಾಶಗಳಿಲ್ಲದವನಾಗಿಯೂ, ಆಶ್ರಿತರ ಪಾಪಗಳನ್ನು ನೀಗಿಸತಕ್ಕವನಾಗಿಯೂ ಇರುವ ಭಗವಂತನು ವ್ಯಷ್ಟಿರೂಪಗಳಾದ ದೇವಾದಿ ಭೂತಗಳಿಗೆ ಮುಖ್ಯಾಧಿಪತಿಯಾದ ದೇವನನ್ನು ಕುರಿತು ಈ ವಿಧವಾಗಿ ಉಪದೇಶಿಸಿ ಆ ಬ್ರಹ್ಮನು ನೋಡುತ್ತಿರುವ ಹಾಗೆಯೇ ತನ್ನ ನಿವಾಸಸ್ಥಾನವಾದ ವೈಕುಂಠಲೋಕದೊಡನೆ ಕಣ್ಮರೆಯಾಗಿಬಿಟ್ಟನು. ಆಗ ಬ್ರಹ್ಮದೇವನು ಅತ್ಯಂತ ಭಕ್ತಿ ವಿಶಿಷ್ಟನಾಗಿ ಆ ನಾರಾಯಣನ ಮಹಿಮೆಯನ್ನು ಮನಸ್ಸಿನಲ್ಲಿ ಬಾರಿಬಾರಿಗೂ ಕೊಂಡಾಡಿ ಹಿಗ್ಗುತ್ತ ಸ್ವಲ್ಪಹೊತ್ತಿನವರೆಗೆ ಕೈಜೋಡಿಸಿದಂತೆಯೇ ಸ್ತಬ್ಧನಾಗಿ ನಿಂತಿದ್ದನು. ಮುಂದೆ ತಾನು ಸೃಷ್ಟಿಸಬೇಕಾದ ದೇವಮನುಷ್ಯಾದಿ ಸಮಸ್ತಪ್ರಾಣಿಗಳನ್ನೂ, ಮನಸ್ಸಿನಲ್ಲಿ ಭಾವಿಸಿಕೊಂಡಿದ್ದುದರಿಂದ ಸಮಸ್ತ ಭೂತಸ್ವರೂಪನಾದ ಆ ಬ್ರಹ್ಮದೇವನು ಪೂರ್ವಕಲ್ಪದಲ್ಲಿದ್ದಂತೆಯೇ ಸಮಸ್ತ ಪ್ರಪಂಚವನ್ನೂ ಸೃಷ್ಟಿಸಿದನು. ಎಲೈ ಪರೀಕ್ಷಿದ್ರಾಜನೆ! ಆಮೇಲೆ ಬ್ರಹ್ಮನು ತಾನು ಸೃಷ್ಟಿಸಿದ ಪ್ರಪಂಚಕ್ಕೆ ಯಾವವಿಧದಿಂದ ಹಿತವನ್ನುಂಟುಮಾಡಬಹುದೆಂದು ಮನಸ್ಸಿನಲ್ಲಿ ಆಲೋಚಿಸುತ್ತಿದ್ದು ಒಮ್ಮೆ ಇದಕ್ಕಾಗಿ ಯಮನಿಯಮರೂಪವಾದ ತಪಸ್ಸನ್ನು ಮಾಡ ತೊಡಗಿದನು ಈ ಸಮಯಕ್ಕೆ ಸರಿಯಾಗಿ ಆತನ ಪುತ್ರನಾದ ನಾರದನು ಅಕಸ್ಮಾತ್ತಾಗಿ ಅಲ್ಲಿಗೆ ಬಂದು ಸೇರಿದನು. ಆ ನಾರದ ಮಹರ್ಷಿಯು ತಂದೆಯಾದ ಬ್ರಹ್ಮನಿಗೆ ನಮಸ್ಕರಿಸಿ, ಆತನಿಗೆ ಪರಿಚರ್ಯೆಗಳನ್ನು ಮಾಡುತ್ತ, ಭಕ್ತಿಪೂರ್ವಕವಾದ ತನ್ನ ಸೇವೆಯಿಂದ ಅವನನ್ನು ಸಂತೋಷಪಡಿಸಿ, ವಿನಯದಿಂದ ಅವನ ಮುಂದೆ ನಿಂತು, ಈಗ ನೀನು ನನ್ನನ್ನು ಪ್ರಶ್ನೆಮಾಡಿದಂತೆಯೇ ವಿಷ್ಣುವಿನ ಮಾಯಾಪ್ರಕಾರವನ್ನು (ಆಶ್ಚರ್ಯಶಕ್ತಿಯನ್ನು) ಕುರಿತು ವಿವರಿಸಬೇಕೆಂದು ಪ್ರಾರ್ಥಿಸಿ ಕೇಳಿದನು. ಆಗ ಬ್ರಹ್ಮದೇವನು ನಾರದನಲ್ಲಿ ಪ್ರಸನ್ನನಾಗಿ, ಹಿಂದೆ ತನಗೆ ಶ್ರೀಮನ್ನಾರಾಯಣನು ಉಪದೇಶಿಸಿದ ವಿಷಯಗಳೆಲ್ಲವನ್ನೂ ವಿವರಿಸಿ ತಿಳಿಸಿದನು. ಇದನ್ನು ಕೇಳಿ ನಾರದನು ಪರಮಸಂತೋಷಭರಿತನಾಗಿ ಲೋಕಸಂಚಾರಕ್ಕಾಗಿ ಹೊರಟನು. ಹೀಗೆ ಬಹುಕಾಲವು ಕಳೆದಮೇಲೆ ಒಮ್ಮೆ ನಾರದನು ಸರಸ್ವತೀನದೀತೀರದಲ್ಲಿ ಚಿಂತಾಕ್ರಾಂತನಾಗಿ ಕುಳಿತಿದ್ದ ಮಹಾತೇಜಸ್ವಿಯಾದ ವ್ಯಾಸಮಹರ್ಷಿಯ ಬಳಿಗೆಬಂದು ಅವನನ್ನು ಸಂಧಿಸಿದನು. ಮತ್ತು ಆ ವ್ಯಾಸಮಹಾಮುನಿಯ ಪ್ರಾರ್ಥನೆಯಮೇಲೆ ಹಿಂದೆತನ್ನ ತಂದೆಯಾದಬ್ರಹ್ಮನು ಉಪದೇಶಿಸಿದ ರೀತಿಯಲ್ಲಿಯೇ ಭಾಗವತಪುರಾಣವನ್ನು ತಿಳಿಸಿದನು. ಎಲೈ ಪರೀಕ್ಷಿದ್ರಾಜನೆ! ನನ್ನ ತಂದೆಯಾದ ವ್ಯಾಸಮುನಿಯೂ ಕೂಡ ತನಗೆ ನಾರದನಿಂದ ಉಪದೇಶಿಸಲ್ಪಟ್ಟ

ವಿಷಯಗಳೆಲ್ಲವನ್ನೂ ಸೇರಿಸಿ, ದಶಲಕ್ಷಣಪೂರ್ಣವಾದ ಭಾಗವತವೆಂಬ ಗ್ರಂಥವನ್ನು ರಚಿಸಿದನು. ಎಲೈ ರಾಜೇಂದ್ರನೆ! ನೀನು ವಿರಾಟ್ಪುರುಷನಿಂದ ಈ ಪ್ರಪಂಚವೆಲ್ಲವೂ ಹೇಗೆ ಹುಟ್ಟಿತೆಂದು ಕೇಳಿದೆಯಷ್ಟೆ? ಆ ವೃತ್ತಾಂತವೆಲ್ಲವನ್ನೂ ವಿವರವಾಗಿ ನಿನಗೆ ತಿಳಿಸಿ, ಮುಂದೆ ನೀನು ಕೇಳಿದ ಬೇರೆಬೇರೆ ಪ್ರಶ್ನೆಗಳಿಗೂ ಕ್ರಮವಾಗಿ ಉತ್ತರವನ್ನು ಹೇಳುವೆನು ಕೇಳು" ಎಂದು ಹೇಳಿ ಶುಕಮುನಿಯು, ತಿರುಗಿ ಮತ್ತೆ ಕೆಲವು ವಿಷಯಗಳನ್ನು ತಿಳಿಸುವುದಕ್ಕೆ ತೊಡಗಿದನು. ಇಲ್ಲಿಗೆ ಒಂಭತ್ತನೆಯ ಅಧ್ಯಾಯವು.

---

(ಶುಕಮುನಿಯು ಪರೀಕ್ಷಿದ್ರಾಜನಿಗೆ ಸೃಷ್ಟ್ಯಾದಿಕ್ರಮವನ್ನೂ, ಜೀವಾತ್ಮಪರಮಾತ್ಮಸ್ವರೂಪವನ್ನೂ ಇತರವಿಷಯಗಳನ್ನೂ ತಿಳಿಸಿದುದು.)

ಶುಕಮುನಿಯು ತಿರುಗಿ ಪರೀಕ್ಷಿದ್ರಾಜನನ್ನು ಕುರಿತು "ಎಲೈ ರಾಜೇಂದ್ರನೆ! ನನ್ನ ತಂದೆಯಾದ ವ್ಯಾಸಮುನಿಯು ಭಾಗವತವನ್ನು ರಚಿಸಿದ ಮೇಲೆ ಅದನ್ನು ನನಗೆ ಉಪದೇಶಿಸಿದನೆಂದು ನಾನು ಮೊದಲೇ ನಿನಗೆ ಹೇಳಿರುವೆನಷ್ಟೆ? ಆ ಪುರಾಣವನ್ನೇ ನಿನಗೆ ಕ್ರಮವಾಗಿ ಉಪದೇಶಿಸುತ್ತ ಬಂದ ಪಕ್ಷದಲ್ಲಿ, ನೀನು ಕೇಳಿದ ಎಲ್ಲಾ ಪ್ರಶ್ನೆಗಳಿಗೂ ತಾನಾಗಿಯೇ ಉತ್ತರವನ್ನು ಹೇಳಿದಂತಾಗುವುದು. ಮೊದಲು ಪುರಾಣದಲ್ಲಿರಬೇಕಾದ ಲಕ್ಷಣಗಳಾವುವೆಂಬುದನ್ನು ಹೇಳುವೆನು ಕೇಳು! ಸೃಷ್ಟಿ, ಪ್ರತಿಸೃಷ್ಟಿ, ಸ್ಥಾನ, ಪೋಷಣ, ಊತಿ, ಮನ್ವಂತರಗಳು, ಈಶಾನುಕಥನ, ನಿರೋಧ, ಮುಕ್ತಿ, ಆಶ್ರಯ, ಎಂಬಿವು ಹತ್ತೂ ಪುರಾಣಲಕ್ಷಣಗಳು. ಈ ಲಕ್ಷಣಗಳಿರುವುದರಿಂದಲೇ ಈ ಭಾಗವತವು ಪುರಾಣವೆಂಬ ಹೆಸರನ್ನು ಹೊಂದಿರುವುದು. ಈ ಹತ್ತರಲ್ಲಿ ಕೊನೆಯದಾದ ಆಶ್ರಯವೆಂಬುದು ಒಂದೊಂದು ಪುರಾಣಕ್ಕೂ ಅತಿಮುಖ್ಯವಾದುದು. ಆಶ್ರಯವೆಂಬುದೇ ಪರಬ್ರಹ್ಮವು. ಈಪರಬ್ರಹ್ಮದ ಸ್ವರೂಪವನ್ನು ಚೆನ್ನಾಗಿ ತಿಳಿಯಬೇಕೆಂಬುದಕ್ಕಾಗಿಯೇ ಪರಾಪರ ವಸ್ತುಗಳ ಸ್ವರೂಪವನ್ನು ಚೆನ್ನಾಗಿ ಕಂಡುಕೊಂಡಿರುವ ಮಹರ್ಷಿಗಳು ಸೃಷ್ಟಿಮೊದಲಾದ ಉಳಿದ ಒಂಭತ್ತು ಲಕ್ಷಣಗಳನ್ನೂ, ತಾವು ತಮ್ಮ ಗುರುಪರಂಪರೆಯಿಂದ ತಿಳಿದಂತೆ ಅದಕ್ಕೆ ಸಾಧನವಾಗಿ ವರ್ಣಿಸುವರು. ಇದರಿಂದ ಹತ್ತನೆಯದಾದ ಆಶ್ರಯವೆಂಬ ಲಕ್ಷಣವನ್ನು ಚೆನ್ನಾಗಿ ತಿಳಿಯಪಡಿಸುವುದಕ್ಕೆ ಹಿಂದಿನ ಲಕ್ಷಣಗಳೆಲ್ಲವೂ ಅಂಗಾಂಗಳಾಗಿರುವುದರಿಂದ, ಈ ಪ್ರಬಂಧವೆಲ್ಲಾ ಮುಖ್ಯವಾಗಿ ಪರಬ್ರಹ್ಮಸ್ವರೂಪವನ್ನು ವಿವರಿಸತಕ್ಕ ಒಂದೇ ಶಾಸ್ತ್ರರೂಪವಾಗಿರುವುದು. ಇದರಲ್ಲಿ ಬೇರೆಬೇರೆ ಅನೇಕಾರ್ಥಗಳ

ವಿವರಿಸಲ್ಪಟ್ಟಿದ್ದರೂ, ಅವೆಲ್ಲವನ್ನೂ ಬೇರೆಬೇರೆ ಗ್ರಂಥಗಳೆಂದು ಶಂಕಿಸುವುದಕ್ಕೆ ಅವಕಾಶವಿಲ್ಲ. ರಾಜೇಂದ್ರಾ! ಹಿಂದೆ ಹೇಳಿದ ಹತ್ತುವಿಧಲಕ್ಷಣಗಳನ್ನೂ ಬೇರೆ ಬೇರೆಯಾಗಿ ವಿವರಿಸಿ ಹೇಳುವೆನು ಕೇಳು. ಭೂಮಿ ಮೊದಲಾದ ಪಂಚಮಹಾ ಭೂತಗಳು, ಅವುಗಳಿಗೆ ಅಸಾಧಾರಣಧರ್ಮವಾದ ಗಂಧಾದಿತನ್ಮಾತ್ರಗಳೈದು, ಜ್ಞಾನೇಂದ್ರಿಯಗಳೈದು, ಕರ್ಮೇಂದ್ರಿಯಗಳೈದು, ಬುದ್ಧಿಯೊಂದು ಹೇಳಲ್ಪ ಡುವ ಮಹತ್ತತ್ವವೊಂದು, ಇವುಗಳ ಸೃಷ್ಟಿಯೇ ಸರ್ಗವೆಂದು ಹೇಳಲ್ಪಡು ವುದು. ಅದರಿಂದಾಚೆಗೆ ಚತುರ್ಮುಖಬ್ರಹ್ಮನು ವಿರಾಟ್ಪುರುಷನ ನಾಭಿಯಿಂದ ಹುಟ್ಟಿ ಸತ್ವರಜಸ್ತಮೋಗುಣಗಳ ವೈಷಮ್ಯದಿಂದ ರಜೋ ಗುಣದ ಪ್ರಾಧಾನ್ಯವನ್ನು ಹೊಂದಿ, ವ್ಯಷ್ಟಿರೂಪವಾದ ದೇವಮನುಷ್ಯಾದಿ ಸೃಷ್ಟಿಯನ್ನು ನಡೆಸಿದನೆಂದು ಹೇಳಿದೆನಷ್ಟೆ! ಆ ಭೂತಸೃಷ್ಟಿಗೆ ಪ್ರತಿಸ ರ್ಗವೆಂದು ಹೆಸರು. ಅದರಿಂದಾಚೆಗೆ ಶ್ರೀನಾರಾಯಣಮೂರ್ತಿಯು ದುಷ್ಟರನ್ನ ಡಗಿಸಿ ಲೋಕವನ್ನು ಕ್ಷೇಮದಿಂದ ಪಾಲಿಸಿದನು. ಇದಕ್ಕೆ ಸ್ಥಿತಿ ಅಥವಾ ಸ್ಥಾನ ವೆಂದು ಹೆಸರು. ಭಗವಂತನಾದ ನಾರಾಯಣನು ಪ್ರತಿಯುಗದಲ್ಲಿಯೂ, ಅವತಾರ ಗಳನ್ನೆತ್ತಿ ತನ್ನ ಭಕ್ತರನ್ನು ಪೋಷಿಸುವುದಕ್ಕೆ ಪೋಷಣವೆಂದು ಹೆಸರು. ಜೀವಾತ್ಮ ಗಳಿಗೆ ಜನ್ಮಾಂತರದಿಂದ ಅನುಸರಿಸಿ ಬರುತ್ತಿರುವ ಕರ್ಮವಾಸನೆಗಳೇ ಊತಿಯೆ ನಿಸುವುವು. ಭಗವದನುಗ್ರಹದಿಂದ ರಕ್ಷಣಕಾರ್ಯದಲ್ಲಿ ನಿಯುಕ್ತರಾದ ಮಹಾತ್ಮರ ಧರ್ಮಗಳನ್ನು ವಿಸ್ತರಿಸಿ ವರ್ಣಿಸುವುದೇ ಮನ್ವಂತರವೆನಿಸುವುದು. ಭಗವಂತನು ಆಯಾ ಅವತಾರಗಳಲ್ಲಿ ನಡೆಸಿದ ಅದ್ಭುತಕಾರ್ಯವುಗಳನ್ನು ವರ್ಣಿಸುವುದೇ ಈಶಾನು ಕಥನವೆಂದೆನಿಸುವುದು. ಈ ಜೀವಾತ್ಮಗಳು ಕರ್ಮರೂಪಗಳಾದ ಶಕ್ತಿಗಳೊಡ ಗೂಡಿ ಸೂಕ್ಷ್ಮಪ್ರಕೃತಿಯಲ್ಲಿರುವುದೇ ನಿರೋಧವೆನಿಸುವುದು. ಜೀವಾತ್ಮನು ಭಗವ ದನುಗ್ರಹಕ್ಕೆ ಪಾತ್ರನಾದಮೇಲೆ, ದೇವಾದಿರೂಪಗಳನ್ನು ತ್ಯಜಿಸಿ, ಪಾಪಹತಿ ಮೊದಲಾದ ಅಷ್ಟಗುಣಗಳಿಂದ ಕೂಡಿದ ರೂಪವನ್ನು ಹೊಂದುವುದೇ ಮುಕ್ತಿ ಯೆನಿಸುವುದು. ಯಾವ ಪರಬ್ರಹ್ಮನಿಂದ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಗಳು ನಡೆಯುವುವೋ, ಯಾವನು ಪರಮಾತ್ಮನೆಂದು ಕರೆಯಲ್ಪಡುವನೋ ಅವನೇ ಆಶ್ರಯವೆನಿಸುವನು. ಈ ಪರಮಪುರುಷನೇ ಜೀವಾತ್ಮನಲ್ಲಿ ಒಳಹೊಕ್ಕು ಅವನಿಗೆ ನಿಯಾಮಕನಾಗಿರುವನು. ಇದರಿಂದಲೇ ಇವನು ಆಧ್ಯಾತ್ಮಿಕನೆಂದೂ, ಅಧಿದೈವಿಕ ನೆಂದೂ ಹೇಳಲ್ಪಡುವನು. ಈತನೇ ಪ್ರತ್ಯಕ್ಷಮೊದಲಾದ ಜ್ಞಾನಗಳಿಗೆ ಕಾರಣ ವೆನಿಸಿದ ಚಕ್ಷುರಾದೀಂದ್ರಿಯಗಳಿಗೆ ಅಭಿಮಾನಿದೇವತೆಗಳೆನಿಸಿಕೊಂಡ ಸೂರ್ಯಾದಿ ದೇವತೆಗಳಲ್ಲಿಯೂ ಅಂತರ್ಯಾಮಿಯಾಗಿ ವರ್ತಿಸುವನು. ಈತನೇ ಜೀವನಿಗಿಂತಲೂ

ಮತ್ತು ಜ್ಞಾನಕಾರಣಗಳಾದ ಇಂದ್ರಿಯಗಳಿಗಿಂತಲೂ ವಿಲಕ್ಷಣಗಳೆನಿಸಿಕೊಂಡ ಆಕಾಶಾದಿಭೂತಗಳಲ್ಲಿರುವ ಶಬ್ದಾದಿವಿಷಯಗಳಲ್ಲಿಯೂ, ಅಂತರ್ಗತನಾಗಿ ಆಧಿಭೌತಿಕನೆನಿಸಿಕೊಂಡಿರುವನು. ಆದುದರಿಂದ ಜ್ಞಾನಾಶ್ರಯನಾದ ಆತ್ಮನೂ, ಜ್ಞಾನಕಾರಣಗಳಾದ ಇಂದ್ರಿಯಗಳೂ, ಆ ಜ್ಞಾನಕ್ಕೆ ವಿಷಯವಾದ ಶಬ್ದಾದಿಗಳೂ, ಇವೆಲ್ಲವೂ ಭಗವದಾತ್ಮಕವೆಂದೇ ತಿಳಿ! ಎಲೈ ರಾಜೇಂದ್ರನೆ! ಕಣ್ಣು ಕಿವಿ, ಮೊದಲಾದ ಇಂದ್ರಿಯಗಳಿಲ್ಲದ ಪಕ್ಷದಲ್ಲಿ ನಾವು ಯಾವ ವಸ್ತುಗಳನ್ನೂ ಅರಿಯಲಾರೆವು. ಮತ್ತು ಇಂದ್ರಿಯಸಂಬಂಧಕ್ಕೆ ಅವಕಾಶವಿಲ್ಲದ ಸೂಕ್ಷ್ಮವಸ್ತುಗಳನ್ನಾಗಲಿ, ಇಂದ್ರಿಯಸಂಬಂಧಕ್ಕೆ ಅವಕಾಶವನ್ನು ಕೊಡುವ ಯೋಗ್ಯತೆಯಿದ್ದರೂ ಕಣ್ಮರೆಯಾಗಿರುವುದರಿಂದ ಇಂದ್ರಿಯಗಳಿಗೆ ಗೋಚರಿಸದ ವಸ್ತುಗಳನ್ನಾಗಲಿ ನಾವು ತಿಳಿಯಲಾರೆವು. ಆದುದರಿಂದ ಮೇಲೆ ಹೇಳಿದ ಜ್ಞಾತೃ, ಜ್ಞಾನ, ಜ್ಞೇಯಗಳೆಂಬ ಮೂರರಲ್ಲಿ ಯಾವುದೊಂದಿಲ್ಲದಿದ್ದರೂ ಯಾವ ವಿಷಯವನ್ನೂ ಗ್ರಹಿಸಲು ಸಾಧ್ಯವಲ್ಲ. ಪರಮಪುರುಷನಾದರೋ ಇಂದ್ರಿಯಗಳ ಸಹಾಯದಿಂದ ಇತರ ವಸ್ತುಗಳನ್ನು ತಿಳಿಯುವ ಶಕ್ತಿಯುಳ್ಳ ಆತ್ಮನನ್ನೂ, ಅವನ ಜ್ಞಾನಕ್ಕೆ ಸಾಧನಗಳಾದ ಇಂದ್ರಿಯಗಳನ್ನೂ, ಆ ಇಂದ್ರಿಯಗಳಿಂದ ತಿಳಿಯಬಹುದಾದ ವಸ್ತುಗಳನ್ನೂ ಸಾಕ್ಷಾತ್ಕರಿಸಬಲ್ಲ ಶಕ್ತಿಯುಳ್ಳವನು. ಆತನು ಇಂದ್ರಿಯಗಳ ಸಹಾಯವಿಲ್ಲದೆಯೇ ಎಲ್ಲವನ್ನೂ ತಿಳಿಯಬಲ್ಲನು. ಆದುದರಿಂದ ಇಂದ್ರಿಯಸಂಬಂಧಕ್ಕೆ ಅವಕಾಶ ಕೊಡದ ಸೂಕ್ಷ್ಮವಸ್ತುಗಳನ್ನಾಗಲಿ, ಮರೆಯಲ್ಲಿರುವ ವಸ್ತುಗಳನ್ನಾಗಲಿ ತಿಳಿಯಬಲ್ಲನು. ಆ ಪರಮಪುರುಷನೇ ಜಡಪ್ರಕೃತಿಗೆ ಆಧಾರನೆನಿಸಿಕೊಂಡ ಜೀವಾತ್ಮಕ್ಕೂ ಆಧಾರನೆನಿಸಿರುವನು ಅಷ್ಟೇಕೆ? ಆತನು ತನಗೆ ತಾನೇ ಆಧಾರನೆನಿಸಿರುವನೇ ಹೊರತು, ಬೇರೆ ಆಧಾರವನ್ನು ಅಪೇಕ್ಷಿಸತಕ್ಕವನಲ್ಲ ಆತನಿಗೆ ಆಧಾರವಾಗತಕ್ಕ ಬೇರೆ ವಸ್ತುವೂ ಇಲ್ಲ. ಎಲೈ ಪರೀಕ್ಷಿದ್ರಾಜನೆ! ಹೀಗೆ ಸೃಷ್ಟಿಮೊದಲಾಗಿ ಹತ್ತುಬಗೆಯ ಪುರಾಣಲಕ್ಷಣಗಳೆಲ್ಲವನ್ನೂ ನಿನಗೆ ತಿಳಿಸಿದೆನು. ವಿರಾಟ್ಪುರುಷನಿಂದ ಈ ಲೋಕವು ಹೇಗೆ ಹುಟ್ಟಿತೆಂಬುದನ್ನು ತಿಳಿಸುವೆನು ಕೇಳು. ಮೊದಲು ವಿರಾಟ್ಪುರುಷನು ಬ್ರಹ್ಮಾಂಡವನ್ನು ಭೇದಿಸಿಕೊಂಡು ಬಂದು, ಚತುರ್ಮುಖರೂಪವುಳ್ಳ ಪುರುಷನನ್ನು ಪಡೆಯುವುದಕ್ಕೆ ಮೊದಲು, ಶುದ್ಧನಾದ ತನಗೆ ವಾಸಮಾಡುವುದಕ್ಕೆ ಯೋಗ್ಯವಾದ ಪರಿಶುದ್ಧವಾದ ಸ್ಥಲವೊಂದನ್ನು ಕೋರಿ, ಅದಕ್ಕಾಗಿ ಮೊದಲು ಪವಿತ್ರವೆನಿಸಿದ ಜಲವನ್ನು ಸೃಷ್ಟಿಸಿದನು. ತಾನು ಸೃಷ್ಟಿಸಿದ ಆ ಜಲದಲ್ಲಿಯೇ ಸಹಸ್ರಸಂವತ್ಸರಗಳವರೆಗೆ ವಾಸಮಾಡುತ್ತಿದ್ದನು. ಹೀಗೆ ನರಶಬ್ದವಾಚ್ಯನಾದ ತನ್ನಿಂದ ಸೃಷ್ಟಿಸಲ್ಪಟ್ಟ ಜಲರಾಶಿಯನ್ನೇ ತಾನು ತನಗೆ

ಆಶ್ರಯಸ್ಥಾನವಾಗಿಮಾಡಿಕೊಂಡಿದ್ದುದರಿಂದ, ಆವನು ನಾರಾಯಣನೆನಿಸಿಕೊಂಡನು. ಮಹತ್ತತ್ವದಿಂದ ಹಿಡಿದು ಪೃಥಿವಿಯವರೆಗಿರತಕ್ಕ ದ್ರವ್ಯವುಎಂದರೆ, ಭೂತವರ್ಗವೂ, ಜೀವಾತ್ಮನ ಪುಣ್ಯಪಾಪರೂಪವಾದ ಕರ್ಮವೂ, ಸತ್ವಾದಿಗುಣಗಳ ಹೆಚ್ಚು ಕಡಿಮೆಗೆ ಕಾರಣವೆನಿಸಿದ ಕಾಲವೂ, ಪ್ರಕೃತಿಯಲ್ಲಿರುವ ವಿಕಾರಹೊಂದುವ ಸ್ವಭಾವವೂ, ಇವೆಲ್ಲವೂ ಆ ಪರಮಪುರುಷನ ಅನುಗ್ರಹದಿಂದಲೇ ಆಗಿರುವುವು. ಆತನು ಉಪೇಕ್ಷಿಸಿದಪಕ್ಷದಲ್ಲಿ ಇವುಗಳೊಂದಕ್ಕೂ ಸತ್ತೆಯೇ ಇಲ್ಲವು. ದ್ರವ್ಯಾದಿಗಳ ಸ್ಥಿತಿ, ಪ್ರವೃತ್ತಿ ಮುಂತಾದುವುಗಳೆಲ್ಲಾ ಭಗವಂತನ ಸಂಕಲ್ಪವನ್ನನುಸರಿಸಿಯೇ ಬರುವುವು. ಇಂತಹ ನಾರಾಯಣನು ಸೃಷ್ಟಿಗೆ ಮೊದಲು ಬೇರೆಬೇರೆಯಾಗಿ ವಿಭಾಗಿಸಿ ನೋಡುವುದಕ್ಕಾಗಲಿ, ಹೇಳುವುದಕ್ಕಾಗಲಿ ಸಾಧ್ಯವಿಲ್ಲದ ಏಕಾಕಾರವಾಗಿಯೂ ಸೂಕ್ಷ್ಮಗಳಾಗಿಯೂ ಇದ್ದ ಚೇತನಾಚೇತನಗಳೆಲ್ಲವನ್ನೂ ತನಗೆ ಶರೀರವನ್ನಾಗಿ ಮಾಡಿಕೊಂಡು, ತಾನೊಬ್ಬನೇ ಇರುತ್ತಿದ್ದನು. ಆಮೇಲೆ ದೇವಮನುಷ್ಯಾದಿಗಳಾದ ಬೇರೆಬೇರೆ ನಾಮರೂಪಗಳನ್ನು ಹೊಂದಬೇಕೆಂಬ ಉದ್ದೇಶವು ಆತನಿಗೆ ಹುಟ್ಟಿತು. ಆಗ ತನ್ನನ್ನೇ ತಾನು ಅನುಭವಿಸುತ್ತ ಮಲಗಿದ್ದ ತನ್ನ ಯೋಗತಲ್ಪದಿಂದ ಮೇಲೆದ್ದು, ತನಗೆ ಶರೀರಭೂತವಾಗಿಯೂ, ಚೇತನಾಚೇತನಸ್ವರೂಪವುಳ್ಳುದಾಗಿಯೂ ಇದ್ದ ಕಾರಣದ್ರವ್ಯವನ್ನೇ ಹಿಡಿದು, ಪ್ರಕೃತಿಯ ತ್ರಿಗುಣಗಳಲ್ಲಿ ಒಂದಾದ ರಜೋಗುಣವನ್ನು ಪ್ರಧಾನವಾಗಿ ಹೊಂದಿದ ಚತುರ್ಮುಖನನ್ನು ತನ್ನ ಸಂಕಲ್ಪದಿಂದ ಪಡೆದು, ಆತನಿಗೆ ತಾನು ಅಂತರಾತ್ಮನಾಗಿದ್ದು, ಜ್ಞಾತೃ, ಜ್ಞಾನ, ಜ್ಞೇಯರೂಪವಾದ ಮೂರುವಿಧದಿಂದ ಆ ಚಿದಚಿದಾತ್ಮಕಕಾರಣದ್ರವ್ಯವನ್ನೇ ವ್ಯಷ್ಟಿರೂಪವಾಗಿ ಸೃಷ್ಟಿಸಿದನು. ಅವುಗಳಲ್ಲಿ ದಿಕ್ಕು ಮೊದಲಾದ ದೇವತೆಗಳಿಂದ ಅಧಿಷ್ಠಿತವಾದ ಏಕಾದಶೇಂದ್ರಿಯವರ್ಗವು ಅಧಿದೈವವೆನಿಸುವುದು. ಜ್ಞಾತೃವೆನಿಸಿಕೊಂಡ ಆತ್ಮವರ್ಗವೇ ಅಧ್ಯಾತ್ಮವೆನಿಸುವುದು. ಪೃಥಿವ್ಯಾದಿಗಳಲ್ಲಿರುವ ಗಂಧಾದಿಗುಣಗಳೇ ಅಧಿಭೂತವೆನಿಸುವುದು. ಹೀಗೆ ಭಗವಂತನು ಮೊದಲು ಪುರುಷಾಧಿಷ್ಠಿತವಾಗಿ, ಸಮಷ್ಟಿರೂಪದಿಂದ ಒಂದೇ ಆಗಿದ್ದ ಕಾರಣದ್ರವ್ಯವನ್ನೇ ಅಧಿಭೂತವೆಂದೂ, ಅಧ್ಯಾತ್ಮವೆಂದೂ ಅಧಿದೈವವೆಂದೂ ಮೂರುವಿಭಾಗಗಳಿಂದ ಸೃಷ್ಟಿಸಿದನು. ಎಲೈ ರಾಜೇಂದ್ರನೆ! ಇಲ್ಲಿ ಜ್ಞಾತೃವಾದ ಆತ್ಮನನ್ನು ಸೃಷ್ಟಿಸುವುದೆಂದರೆ ಆ ಜೀವಾತ್ಮಗಳಿಗೆ ದೇವಮನುಷ್ಯಾದಿಶರೀರಗಳನ್ನು ಸೇರಿಸಿಕೊಡುವುದೇ ಹೊರತು ಹೊಸದಾಗಿ ಜೀವವನ್ನು ಸೃಷ್ಟಿಸುವುದೆಂದೆಣಿಸಬೇಡ. ಮೇಲೆ ಹೇಳಿದಂತೆ ಕಾರಣದ್ರವ್ಯವನ್ನು ಜ್ಞಾತೃ ಜ್ಞಾನ ವಿಷಯಗಳೆಂಬ ಮೂರುವಿಧದಿಂದ ಸೃಷ್ಟಿಸಿದ ಕ್ರಮವನ್ನೂ ಹೇಳುವೆನು ಕೇಳು! ಸೃಷ್ಟಿಯಲ್ಲಿ ಸಮಷ್ಟಿಯೆಂದೂ, ವ್ಯಷ್ಟಿಯೆಂದೂ ಎರಡು

ಮುಖ್ಯವಿಭಾಗಗಳುಂಟು. ಪ್ರಕೃತಿ, ಮಹತ್ತು, ಅಹಂಕಾರ, ಶಬ್ದತನ್ಮಾತ್ರ ಮೊದಲಾದ ತನ್ಮಾತ್ರಗಳು, ಆಕಾಶಾದಿ ಭೂತಗಳು, ಶಬ್ದಾದಿವಿಷಯಗಳು ಇವೆಲ್ಲವನ್ನೂ ಸೃಷ್ಟಿಸಿದ ಮೇಲೆ ಆಕಾಶಾದಿಭೂತಗಳೈದು, ಮಹತ್ತು, ಅಹಂಕಾರಗಳೆಂಬಿವೆರಡು ತತ್ವಗಳು, ಇವೇಳನ್ನೂ ಸಪ್ತೀಕರಣರೀತಿಯಿಂದ ಒಂದಕ್ಕೊಂದನ್ನು ಸೇರಿಸಿ, ಅಂಡವನ್ನು ಸೃಷ್ಟಿಸಿ, ಅದರಲ್ಲಿ ಬ್ರಹ್ಮದೇವನನ್ನು ಪಡೆಯುವವರೆಗೆ ನಡೆದ ಸೃಷ್ಟಿಕಾರ್ಯಗಳೆಲ್ಲವೂ ಸಮಷ್ಟಿಯೆನಿಸುವುದು. ಈ ಸಮಷ್ಟಿಸೃಷ್ಟಿಯನ್ನು ಪರಮಪುರುಷನು ತಾನೇ ಸಾಕ್ಷಾತ್ತಾಗಿ ನಡೆಸುವನು. ಅದರಿಂದಾಚೆಗೆ ಆ ಪರಮಪುರುಷನು ಬ್ರಹ್ಮದೇವನಲ್ಲಿ ಅಂತರ್ಯಾಮಿಯಾಗಿದ್ದು, ಅವನ ಮೂಲಕ ನಡೆಸುವ ದೇವಮನುಷ್ಯಾದಿಸೃಷ್ಟಿಯನ್ನು ವ್ಯಷ್ಟಿಸೃಷ್ಟಿಯೆಂದು ಹೇಳುವರು. ಆ ಬ್ರಹ್ಮನಿಗೆ ಸಮಷ್ಟಿಪುರುಷನೆಂಬ ಹೆಸರುಂಟು. ಈ ಚತುರ್ಮುಖನು ಪ್ರಾಣವ್ಯಾಪಾರವನ್ನು ನಡೆಸುತ್ತಿರುವಾಗ (ಎಂದರೆ ಉಚ್ಛ್ವಾಸನಿಶ್ವಾಸಗಳನ್ನು ನಡೆಸುವಾಗ) ಅವನ ಶರೀರಾಂತರ್ಗತವಾಗಿಯೂ, ಆಕಾಶದ ಕಾರ್ಯರೂಪವಾಗಿಯೂ ಇರುವ ಪ್ರಾಣವಾಯುವಿನಿಂದ, ಓಜಸ್ಸು, ಸಹಸ್ಸು, ಬಲವೆಂಬ ಮೂರುಧರ್ಮಗಳುಂಟಾದುವು. ಓಜಸ್ಸೆಂಬುದು ಪ್ರಯತ್ನವೆನಿಸಿಕೊಳ್ಳುವ ಪ್ರವೃತ್ತಿಸಾಮರ್ಥ್ಯವು. ಸಹಸ್ಸೆಂಬುದು ವೇಗಸಾಮರ್ಥ್ಯವು. ಬಲವೆಂಬುದು ಧಾರಣಾಸಾಮರ್ಥ್ಯವು. ಈ ಮೂರುಧರ್ಮಗಳೊಡಗೂಡಿ ಆ ಚತುರ್ಮುಖನ ಶರೀರಾಂತರ್ಗತವಾಗಿದ್ದ ಬೇರೆಯಾದ ಪ್ರಾಣದಿಂದ ಎಲ್ಲಾ ಪ್ರಾಣಿಗಳ ಜೀವಕ್ಕೆ ಹೇತುವಾಗಿಯೂ, ಪ್ರಧಾನವಾಗಿಯೂ ಇರುವ ಪ್ರಾಣಗಳುಂಟಾದುವು, ರಾಜಾ! ಲೋಕದಲ್ಲಿ ರಾಜಸೇವಕರು ರಾಜನನ್ನನುಸರಿಸಿ ನಡೆಯುವಂತೆ, ಇಂದ್ರಿಯಗಳೆಲ್ಲವೂ ಈ ಪ್ರಾಣವನ್ನೇ ತಮಗೆ ಪ್ರಭುವನ್ನಾಗಿಟ್ಟುಕೊಂಡು, ಅದನ್ನೇ ಅನುಸರಿಸಿ ತಮ್ಮ ವ್ಯಾಪಾರಗಳನ್ನು ನಡೆಸುವುವು. ಆ ಪ್ರಾಣವಾಯುವು ಶಾಂತವಾದರೆ ಇಂದ್ರಿಯಗಳೆಲ್ಲವೂ ಶಾಂತವಾಗುವುವು. ದೇವಮನುಷ್ಯಾದಿಶರೀರಗಳಲ್ಲಿ ಸೇರತಕ್ಕ ಈ ವ್ಯಷ್ಟಿಪ್ರಾಣಗಳೂ ಕೂಡ, ಚತುರ್ಮುಖನ ಶರೀರದಲ್ಲಿ ತಮಗೆ ಕಾರಣಭೂತವಾಗಿದ್ದ ಪ್ರಾಣನ ಸ್ವಭಾವವನ್ನೇ ಅನುಸರಿಸುತ್ತ, ಅದರಂತೆಯೇ ಓಜಸ್ಸು, ಸಹಸ್ಸು, ಬಲವೆಂಬ ಮೂರುಶಕ್ತಿಗಳನ್ನೂ ಹೊಂದಿ, ಪ್ರಾಣ, ಅಪಾನ ಮುಂತಾದ, ವ್ಯಾಪಾರಗಳನ್ನು ನಡೆಸುವುವು. ಹೀಗೆ ಚತುರ್ಮುಖನ ಶರೀರದೊಳಗೆ ಪ್ರಾಣವಾಯುವು ತನ್ನ ಶಕ್ತಿಯನ್ನು ತೋರಿಸುತ್ತಿದ್ದುದರಿಂದ ಅವನ ಹೃದಯದಲ್ಲಿರುವ ಜಠರಾಗ್ನಿಯು ಜ್ವಲಿಸತೊಡಗಿತು. ಈ ಜಾಠರಾಗ್ನಿಯ ಉರಿಯಿಂದ ಹಸಿವು ಬಾಯಾರಿಕೆ ಮುಂತಾದುವು ಹುಟ್ಟಿದುವು. ಇದರಿಂದ ಅನ್ನ

ಪಾನಗಳಲ್ಲಿ ಆಸೆಯು ಹುಟ್ಟಿತು. ಆಮೇಲೆ ಆ ಚತುರ್ಮುಖನಿಗೆ ಈ ಅನ್ನ ಪಾನಾಭಿಲಾಷೆಯನ್ನು ತೀರಿಸಿಕೊಳ್ಳುವುದಕ್ಕಾಗಿ, ! ವ್ಯಷ್ಟಿಶರೀರಕ್ಕೆ ತಕ್ಕ ಮುಖವು ಏರ್ಪಟ್ಟಿತು. ಆ ಮುಖವುಂಟಾದ ಕೂಡಲೆ ಅದರಲ್ಲಿ ಅಣ್ಣಾಲಗೆ (ತಾಲು) ಯುಂಟಾಯಿತು. ಅದರಿಂದ ರಸನೇಂದ್ರಿಯವು ಜನಿಸಿತು. ಅದರಿಂದ ಆ ಇಂದ್ರಿಯಕ್ಕೆ ಅಭಿಮಾನಿದೇವತೆಯಾದ ವರುಣನು ಹುಟ್ಟಿದನು. ಅದರ ಮೇಲೆ ರಸನೇಂದ್ರಿಯಗಳಿಗೆ ಅನುಭವಯೋಗ್ಯಗಳಾದ ಉಪ್ಪು, ಹುಳಿ, ಮುಂತಾದ ಷಡ್ರಸಗಳು ಹುಟ್ಟಿದುವು. ಆ ಮೇಲೆ ಆ ಚತುರ್ಮುಖನಿಗೆ ಬಾಯಿಂದ ಮಾತಾಡಬೇಕೆಂಬ ಅಭಿಲಾಷೆಯು ಹುಟ್ಟಲು, ಆತನ ಮುಖದಿಂದ ವಾಗಿಂದ್ರಿಯವೂ, ಅದಕ್ಕೆ ಅಧಿಷ್ಠಾನದೇವತೆಯಾದ ವಹ್ನಿಯೂ ಇವೆರಡೂ ಉದ್ಭವಿಸಿದುವು. ಅವೆರಡರಿಂದ ಇಂದ್ರಿಯವ್ಯಾಪಾರವಾದ ವಾಕ್ಯವು ಹೊರಟಿತು. ಅದರಿಂದಾಚೆಗೆ ಬ್ರಹ್ಮನ ಕಂಠದಲ್ಲಿ ಬಹುಕಾಲದವರೆಗೆ ವಾಯುವು ತಡೆದು ನಿಂತು ಹೋಯಿತು. ಹೀಗೆ ವಾಯುವು ಹೊರಗೆ ಬರುವುದಕ್ಕೆ ದಾರಿಯಿಲ್ಲದುದರಿಂದ ಅದು ಕಂಠಸ್ಥಾನದಲ್ಲಿಯೇ ನಿಂತು, ಬಲಾತ್ಕಾರದಿಂದ ಹೊರಗೆ ಬರಲು ಪ್ರಯತ್ನಿಸುತ್ತಿರುವಾಗ ಅದಕ್ಕೆ ನಿರ್ಗಮನಮಾರ್ಗವಾಗಿ ನಾಸಾರಂಧ್ರಗಳುಂಟಾದುವು. ಆಗ ಬ್ರಹ್ಮನಿಗೆ ಗಂಧವನ್ನು ಆಘ್ರಾಣಿಸಬೇಕೆಂಬ ಅಭಿಲಾಷೆಯು ಹುಟ್ಟಿದುದರಿಂದ, ಕೂಡಲೇ ಘ್ರಾಣೇಂದ್ರಿಯವೂ, ಅದಕ್ಕೆ ಅಭಿಮಾನಿದೇವತೆಯಾದ ವಾಯುವೂ ಉದ್ಭವಿಸಿದುವು. ಆಮೇಲೆ ಆ ಬ್ರಹ್ಮನಿಗೆ ತನ್ನ ದೇಹವನ್ನೂ ಇತರವಸ್ತುಗಳನ್ನೂ, ನೋಡಬೇಕೆಂಬ ಅಭಿಲಾಷೆಯು ಹುಟ್ಟಿತು. ಅವನಿಗೆ ಈ ಅಭಿಲಾಷೆಯು ಹುಟ್ಟಿದೊಡನೆ ಅವನ ಮುಖದಲ್ಲಿ ಕಣ್ಣುಗುಡ್ಡೆಗಳು ಹುಟ್ಟಿದುವು. ಅದರಿಂದ ನೇತ್ರೇಂದ್ರಿಯವೂ, ಆ ಇಂದ್ರಿಯಕ್ಕೆ ಅಭಿಮಾನಿದೇವತೆಯಾದ ಸೂರ್ಯನೂ ಹುಟ್ಟಿದರು. ಆಮೇಲೆ ಆ ಬ್ರಹ್ಮನಿಗೆ ಶಬ್ದಗಳನ್ನು ಗ್ರಹಿಸಬೇಕೆಂಬ ಇಚ್ಛೆಯುಂಟಾಗಲು, ಒಡನೆಯೇ ಅವನಿಗೆ ಕಿವಿಗಳುಂಟಾದುವು. ಅದರಲ್ಲಿ ಶಬ್ದವನ್ನು ಗ್ರಹಿಸುವುದಕ್ಕೆ ಸಮರ್ಥವಾದ ಶ್ರವಣೇಂದ್ರಿಯವೂ, ಆ ಇಂದ್ರಿಯಕ್ಕೆ ಅಧಿಷ್ಠಾನ ದೇವತೆಗಳಾದ ದಿಕ್ಕುಗಳೂ ಹುಟ್ಟಿದುವು. ಆಮೇಲೆ ಆ ಪುರುಷನಿಗೆ ಇತರ ವಸ್ತುಗಳಲ್ಲಿರುವ ಮೃದುತ್ವ, ಕಾಠಿನ್ಯ, ಶೀತೋಷ್ಣಗಳೆಂಬ ಗುಣಗಳನ್ನು ಗ್ರಹಿಸಬೇಕೆಂಬ ಇಚ್ಛೆಯು ಹುಟ್ಟಿತು ಒಡನೆಯೇ ಅವನಲ್ಲಿ ಸ್ಪರ್ಶೇಂದ್ರಿಯಕ್ಕೆ ಸ್ಥಾನವಾದ ಚರ್ಮವು ಹುಟ್ಟಿತು. ಅದರಿಂದಾಚೆಗೆ ಕಾಠಿನ್ಯಾದಿಗಳನ್ನು ಗ್ರಹಿಸತಕ್ಕ ತ್ವಗಿಂದ್ರಿಯವೂ ಆ ಚರ್ಮದ ಮೇಲೆ ರೋಮಗಳೂ ಹುಟ್ಟಿದುವು. ರೋಮಗಳಿಗೆ ವೃಕ್ಷಗಳು ಅಧಿದೇವತೆಗಳೆನಿಸಿಕೊಂಡುವು. ತ್ವಗಿಂದ್ರಿಯಕ್ಕೆ ವಾಯುವು ಅಧಿಷ್ಠಾನದೇವತೆಯಾಗಿ, ಆ ಇಂದ್ರಿಯದಿಂದಲೇ

ಒಳಭಾಗದಲ್ಲಿಯೂ, ಹೊರಭಾಗದಲ್ಲಿಯೂ ಸ್ಪರ್ಶಗುಣಗಳನ್ನು ಗ್ರಹಿಸುತ್ತಿರುವನು. ಮೇಲೆ ಹೇಳಿದ ತ್ವಗಿಂದ್ರಿಯಕ್ಕೆ ಸೂಕ್ಷ್ಮವಾದ ಮೇಲಿನ ಚರ್ಮವೊಂದು, ಮಂದವಾದ ಅಡಿಯ ಚರ್ಮವೊಂದು, ಇವೆರಡೂ ಆಧಾರಗಳಾದುವು. ಈ ಆಧಾರಭೇದದಿಂದ ತ್ವಗಿಂದ್ರಿಯದಿಂದ ಗ್ರಹಿಸಬೇಕಾದ ವಿಷಯಗಳೂ ಬೇರ್ಪಟ್ಟುವು. ಒಂದಕ್ಕೆ ನವೆಯೂ, ಮತ್ತೊಂದಕ್ಕೆ ಸ್ಪರ್ಶವೂ ವಿಷಯಗಳಾದುವು. ಈ ವಿಷಯಭೇದದಿಂದಲೇ ಮೇಲೆ ಹೇಳಿದಂತೆ ವೃಕ್ಷವಾಯುಗಳೆಂಬ ಅಭಿಮಾನಿದೇವತೆಗಳೂ ಬೇರ್ಪಟ್ಟಿರುವರು ಹೀಗೆ ಒಂದೇ ತ್ವಗಿಂದ್ರಿಯವು ಹೊರಗಿನ ಚರ್ಮದಲ್ಲಿರುವ ರೋಮಗಳಲ್ಲಿ ವ್ಯಾಪಿಸಿ, ಓಷಧಿಗಳನ್ನು ಅಧಿದೇವತೆಗಳನ್ನಾಗಿ ಹೊಂದಿ, ನವೆಯನ್ನು ತಿಳಿಸುವುದು. ಇದೇ ಒಳಗಿನ ಚರ್ಮದಲ್ಲಿಷ್ಟು ವಾಯುವನ್ನು ಅಭಿಮಾನದೇವತೆಯನ್ನಾಗಿ ಹೊಂದಿ ಸ್ಪರ್ಶವನ್ನು ತಿಳಿಸುವುದು. ಆಮೇಲೆ ಆ ಬ್ರಹ್ಮನು ಕರ್ಮಗಳನ್ನು ನಡೆಸಬೇಕೆಂಬ ಉದ್ದೇಶದಿಂದಿರಲು ಆತನಿಗೆ ಕಾರ್ಯಗಳನ್ನು ನಡೆಸುವುದಕ್ಕೆ ಬೇಕಾದ ಹಸ್ತಗಳು ಹುಟ್ಟಿದುವು ಅದಕ್ಕೆ ಇಂದ್ರನು ಅಧಿಷ್ಠಾನದೇವತೆಯಾದನು. ಆದರಿಂದಾಚೆಗೆ ಬ್ರಹ್ಮನಿಗೆ ಸಂಚರಿಸಬೇಕೆಂಬ ಆಸೆಯು ಹುಟ್ಟಿದುದರಿಂದ ಪಾದಗಳುಂಟಾದುವು. ಅದಕ್ಕೆ ಯಜ್ಞಸ್ವರೂಪನಾದವಿಷ್ಣುವು ಅಧಿದೇವತೆಯಾದನು. ಆಮೇಲೆ ಬ್ರಹ್ಮನಿಗೆ ಪ್ರಜೋತ್ಪಾದನದಲ್ಲಿಯೂ, ಸುಖಾನುಭವದಲ್ಲಿಯೂ ಆಸೆಯು ಹುಟ್ಟಿತು. ಒಡನೆಯೇ ಅವನಿಗೆ ಆ ಕಾರ್ಯಕ್ಕುಪಯೋಗಪಡುವ ಉಪಸ್ಥದಲ್ಲಿ ಪುರುಷಲಿಂಗವು ಹುಟ್ಟಿತು. ಅದಕ್ಕೆ ಪ್ರಜಾಧಿಪತಿಯು ಅಧಿಷ್ಠಾನದೇವತೆಯಾದನು ಆಮೇಲೆ ಬ್ರಹ್ಮನಿಗೆ ತಿಂದ ಪದಾರ್ಥಗಳಲ್ಲಿ ನಿಸ್ಸಾರವಾದ ಚರಟಗಳನ್ನು ದೇಹದಿಂದ ಹೊರಗೆ ಬಿಡಬೇಕೆಂಬ ಉದ್ದೇಶವು ಹುಟ್ಟಿತು. ಒಡನೆಯೇ ಅವನಿಗೆ ಗುದಸ್ಥಾನವು ಏರ್ಪಟ್ಟಿತು. ಅದಕ್ಕೆ ಮಿತ್ರನು ಅಧಿದೇವತೆಯಾದನು. ಆಮೇಲೆ ಈ ದೇಹವನ್ನು ಬಿಟ್ಟು ಮತ್ತೊಂದು ದೇಹಕ್ಕೆ ಹೋಗಬೇಕೆಂದು ಬ್ರಹ್ಮನಿಗೆ ಇಚ್ಛೆಯುಂಟಾಗಲು, ಆತನ ಅಪಾನಸ್ಥಾನವಾದ ನಾಭಿಯಿಂದ ದೇವಮನುಷ್ಯಾದಿಗಳ ನಾಭಿದ್ವಾರವುಂಟಾಯಿತು. ಆ ಬ್ರಹ್ಮನ ಸಮಷ್ಟಿರೂಪವಾದ ಅಪಾನವಾಯುವಿನಿಂದ ವ್ಯಷ್ಟಿರೂಪವಾದ ಅಪಾನವೂ, ಅದಕ್ಕೆ ಅಧಿದೇವತೆಯಾದ ಮೃತ್ಯುವೂ, ಪ್ರಾಣಾಪಾನಗಳೆಂಬ ಈ ಎರಡು ವಾಯುಗಳನ್ನೂ ಮುಖ್ಯಾಧಾರವಾಗಿವುಳ್ಳ ಮರಣವೂ ಉಂಟಾದುವು. ಆಮೇಲೆ ಆ ಬ್ರಹ್ಮನು ಅನ್ನಪಾನಗಳನ್ನು ಗ್ರಹಿಸಬೇಕೆಂದು ಇಚ್ಛಿಸಲು, ಅವುಗಳಿಗೆ ಆಶ್ರಯಗಳಾದ ಹೊಟ್ಟೆ, ಕರುಳು, ಜಲಮಾರ್ಗಗಳಾದ ನಾಡಿಗಳು, ಇವೆಲ್ಲವೂ ಉಂಟಾದುವು. ಈ ನಾಡಿಗಳಿಗೂ, ಅಂತ್ರಗಳೆಂದು

ಕರೆಯಲ್ಪಡುವ ಕರುಳುಗಳಿಗೂ, ಕ್ರಮವಾಗಿ ನದಿಗಳೂ, ಸಮುದ್ರಗಳೂ, ಅಧಿದೇವತೆಗಳಾದುವು. ಅದದರಿಂದಾಚೆಗೆ ಆತ್ಮಸ್ವರೂಪವನ್ನು ಮರೆಸತಕ್ಕ ಗುಣವುಳ್ಳ ಪ್ರಕೃತಿಯು ಸ್ವಭಾವವನ್ನು ನಿರೂಪಿಸಬೇಕೆಂದು ತೋರಿ, ಮಾಯೆಯನ್ನು ಧ್ಯಾನಿಸಲು, ಅವನಲ್ಲಿ ಕಮಲದ ಆಕೃತಿಯುಳ್ಳ ಹೃದಯವೆಂಬ ಸ್ಥಾನವು ಹುಟ್ಟಿತು. ಅದರಲ್ಲಿ ಮನಸ್ಸೆಂಬ ಇಂದ್ರಿಯವೂ, ಆ ಇಂದ್ರಿಯಕ್ಕೆ ಅಧಿದೇವತೆಯಾದ ಚಂದ್ರನೂ, ಆ ಮನಸ್ಸಿನಲ್ಲಿ ನಡೆಯಬೇಕಾದ ಸಂಕಲ್ಪ, ಕಾಮ, ಮುಂತಾದುವುಗಳೂ ಉಂಟಾದುವು. ತ್ವಕ್ಕೆಂಬ ಮಂದವಾದ ಚರ್ಮ, ಅದಕ್ಕೆ ಮೇಲಿನ ಸೂಕ್ಷ್ಮ ಚರ್ಮ, ಮಾಂಸ, ರಕ್ತ, ಮೇದಸ್ಸು ಅಸ್ಥಿ, ಮಜ್ಜೆ, ಈ ಏಳುಧಾತುಗಳೂ ಭೂಮಿ, ನೀರು, ವಾಯು, ಈ ಮೂರುಭೂತಗಳಿಂದ ಏರ್ಪಟ್ಟಿರುವುವು. ಶಬ್ದಾದಿಗುಣಗಳು ಅಹಂಕಾರದಿಂದ ಹುಟ್ಟಿದುವುಗಳು ಇಂದ್ರಿಯಗಳು ಶಬ್ದಾದಿಗುಣಗಳಿಂದ ಹುಟ್ಟಿದಂತವು. ಕಾಮ, ಸಂಕಲ್ಪ, ಮೊದಲಾದವುಗಳಿಗೆ ಮನಸ್ಸೇ ಆಧಾರವಾಯಿತು. ಬುದ್ಧಿಯೆಂಬುದು ವಿಜ್ಞಾನ (ಮಹತ್ತತ್ವ) ಸ್ವರೂಪವೆನಿಸಿತು. ಎಲೈ ಪರೀಕ್ಷಿದ್ರಾಜನೆ! ದೇವಮನುಷ್ಯಾದಿ ಚೇತನಾಚೇತನಗಳನ್ನು ತನ್ನೊಳಗೆ ಅಡಗಿಸಿಕೊಂಡುದಾಗಿಯೂ ಹೊರಭಾಗದಲ್ಲಿ ಭೂಮಿ, ನೀರು, ತೇಜಸ್ಸು, ವಾಯು, ಆಕಾಶ, ಅಹಂಕಾರ, ಮಹತ್ತು, ಅವ್ಯಕ್ತಗಳೆಂಬ ಅಷ್ಟಾವರಣಗಳಿಂದ ವ್ಯಾಪ್ತವಾಗಿಯೂ ಇರುವ ಇದನ್ನು ಭಗವಂತನ ಸ್ಥೂಲರೂಪವೆನ್ನುವರು ಭಗವಂತನಿಗೆ ಈ ಸ್ಥೂಲರೂಪಕ್ಕಿಂತಲೂ ಅತಿಸೂಕ್ಷ್ಮವಾದ ಬೇರೊಂದು ರೂಪವುಂಟು. ಮತ್ತು ದೇವಮನುಷ್ಯಾದಿಗಳ ಬುದ್ಧಿಗಾಗಲಿ, ವಾಕ್ಕುಗಳಿಗಾಗಲಿ ಗೋಚರಿಸಲಾರದು. ಅದಕ್ಕೆ ಉತ್ಪತ್ತಿ ಸ್ಥಿತಿ ವಿನಾಶಗಳೊಂದೂ ಇಲ್ಲವು. ಮತ್ತು ಕಾಲಪರಿಮಾಣಕ್ಕೆ ಒಳಪಡದೆ ನಿತ್ಯವಸ್ತುವೆನಿಸಿಕೊಂಡಿರುವುದು ಇದೇ ಮುಕ್ತಾತ್ಮಸ್ವರೂಪವೆನಿಸುವುದು. (ಮುಕ್ತಾತ್ಮಸ್ವರೂಪವೆಂದರೆ, ಭಗವದನುಗ್ರಹಕ್ಕೆ ಪಾತ್ರನಾಗಿ, ಸಂಸಾರಸಂಬಂಧವಿಲ್ಲದೆ, ದೇಹವನ್ನು ತ್ಯಜಿಸಿ, ಪ್ರಕೃತಿಮಂಡಲವನ್ನು ದಾಟಿ, ಪರಮಪದವನ್ನು ಸೇರಿದ ಜೀವಾತ್ಮಸ್ವರೂಪವು. ಇದನ್ನೇ ಭಗವಂತನ ಸೂಕ್ಷ್ಮರೂಪವೆಂದು ಹೇಳುವರು. ಇದಕ್ಕೆ ಅಮೂರ್ತವೆಂದೂ ಪರವೆಂದೂ ಹೆಸರುಂಟು. ಮೊದಲು ಹೇಳಿದ ಸ್ಥೂಲರೂಪವನ್ನು ಮೂರ್ತವೆಂದೂ, ಅಪರವೆಂದೂ ಹೇಳುವರು.) ಎಲೈ ರಾಜೇಂದ್ರನೆ! ಭಗವಂತನ ಈ ಪರಾಪರಸ್ವರೂಪಗಳೆರಡನ್ನೂ ತಿಳಿದುಕೊಂಡೆಯಷ್ಟೆ! ಆದರೆ "ಇವು ಭಗವದ್ರೂಪಗಳಾಗಿದ್ದಮೇಲೆ ಈ ಸ್ಥೂಲಸೂಕ್ಷ್ಮರೂಪಗಳನ್ನೇ ಏಕೆ ಭಜಿಸಬಾರದು"? ಎಂದು ನಿನಗೆ ಶಂಕೆಯುಂಟಾಗಬಹುದು. ಜ್ಞಾನಿಗಳು ಈ ಸ್ಥೂಲಸೂಕ್ಷ್ಮರೂಪಗಳೆರಡನ್ನೂ ಧ್ಯಾನಯೋಗ್ಯಗಳಾದ

ಶುಭಾಶ್ರಯವಸ್ತುಗಳನ್ನಾಗಿ ಅಂಗೀಕರಿಸಲಾರರು. ಏಕೆಂದರೆ, ಇವೆರಡು ರೂಪಗಳಿಗೂ ಮಾಯಾಸಂಬಂಧವುಂಟು. ಅಚೇತನವಾದ ಪ್ರಕೃತಿಯೇ ಮಾಯೆಯೆನಿಸುವುದು. ಈ ಮೇಲಿನ ಎರಡುರೂಪಗಳಲ್ಲಿ ಸ್ಥೂಲರೂಪವೆಂಬುದು ದೇವಮನುಷ್ಯಾದಿಚೇತನಸ್ವರೂಪಗಳಾದುದರಿಂದ ಅನೇಕದೋಷಗಳಿಗೆಡೆಯಾದ ಪ್ರಕೃತಿಯ ಸಂಬಂಧವು ಇದಕ್ಕಿದ್ದೇ ಇರಬೇಕು. ಮುಕ್ತಾತ್ಮರೂಪವೆಂಬ ಸೂಕ್ಷ್ಮರೂಪಕ್ಕೆ ಭಗವದನುಗ್ರಹದಿಂದ ಪ್ರಕೃತಿಸಂಬಂಧವು ಬಿಟ್ಟು ಹೋಗಿದ್ದರೂ, ಹಿಂದೆ ಅದಕ್ಕೆ ಪ್ರಕೃತಿಸಂಬಂಧವಿದ್ದುದರಿಂದ, ಯೋಗಿಗಳು ಅದನ್ನು ಶುಭಾಶ್ರಯವಾದ ಧ್ಯೇಯವಸ್ತುವನ್ನಾಗಿ ಎಣಿಸಲಾರರು. ಜೀವನ ಬಂಧಮೋಕ್ಷಗಳೆರಡೂ ಭಗವಂತನ ಸಂಕಲ್ಪದಿಂದಲೇ ನಡೆಯಬೇಕಾದುದರಿಂದ, ಆ ಸ್ವರೂಪಕ್ಕೆ ಶುದ್ಧಿಯೆಂಬುದು ಸ್ವತಸ್ಸಿದ್ಧವಲ್ಲ. ಇದರಿಂದಲೇ ಯೋಗಿಗಳು ಅವೆರಡನ್ನೂ ಉಪಾಸನೆ ಮಾಡಲಾರರು. ಭಗವಂತನ ಸ್ವರೂಪವನ್ನು ಉಪಾಸಿಸಬೇಕೆಂದರೆ, ಬಹುದಿನಗಳವರೆಗೆ ಶಬ್ದಾದಿವಿಷಯಗಳಲ್ಲಿ ಬಳಿಕೆಗೊಂಡ ಮನಸ್ಸನ್ನು ಸ್ವಾಧೀನಪಡಿಸುವುದು ಕಷ್ಟವಾಗುವುದು. ಆದುದರಿಂದ ಮೊದಲು ಭಗವಂತನ ಅವತಾರಗಳನ್ನೇ ಧ್ಯಾನಿಸಿ, ಮನಸ್ಸನ್ನು ಕ್ರಮಕ್ರಮವಾಗಿ ವಶಪಡಿಸಿಕೊಂಡು ಆ ಮೇಲೆ ಭಗವಂತನಲ್ಲಿಯೇ ಸಾಕ್ಷಾತ್ತಾಗಿ ಮನಸ್ಸನ್ನು ನೆಲೆಗೊಳಿಸಬೇಕು. ಭಗವಂತನ ಆಕೃತಿಗಳು ಸ್ಥೂಲವೆಂದೂ, ಸೂಕ್ಷ್ಮವೆಂದೂ, ದಿವ್ಯಮಂಗಳವಿಗ್ರಹವೆಂದೂ ಮೂರುವಿಧವಾಗಿರುವುವು. ಸ್ಥೂಲಸೂಕ್ಷ್ಮರೂಪಗಳೆರಡೂ ಧ್ಯಾನಕ್ಕೆ ಆಶ್ರಯವಾಗಲಾರವೆಂದು ಮೊದಲೇ ಹೇಳಿದೆನಷ್ಟೆ? ಆದುದರಿಂದ ಭಗವಂತನ ದಿವ್ಯಮಂಗಳವಿಗ್ರಹವೇ ಧ್ಯಾನಯೋಗ್ಯವು. ಇದೇ ಶುಭಾಶ್ರಯವೆನಿಸುವುದು. ಶುಭಾಶ್ರಯವೆಂದರೆ ಮನಸ್ಸನ್ನು ಬೇರೆವಿಷಯಗಳಲ್ಲಿ ಪ್ರವರ್ತಿಸದಂತೆ ಮಾಡಿ ಅದರಲ್ಲಿರುವ ಕಲ್ಮಷಗಳನ್ನು ನೀಗಿಸಿ, ಶುದ್ಧಮಾಡಿಡುವ ಶಕ್ತಿಯುಳ್ಳ ಭಗವಂತನ ದಿವ್ಯವಿಗ್ರಹವೇ ಹೊರತು ಬೇರೆಯಲ್ಲ. ಇದು ರಾಮಕೃಷ್ಣಾದಿರೂಪಗಳಿಂದ ಅನೇಕವಿಧವಾಗಿರುವುದು. ಎಲೈ ಪರೀಕ್ಷಿದ್ರಾಜನೆ! “ಚತುರ್ಮುಖನಿಂದ ಸೃಷ್ಟಿಸಲ್ಪಟ್ಟ ಈ ಬ್ರಹ್ಮಾಂಡವನ್ನು ಪರಮಪುರುಷನ ಸ್ವರೂಪವೆಂದು ಹೇಳುವುದು ಯುಕ್ತವೇ?” ಎಂದು ನೀನು ಶಂಕಿಸಬೇಡ! ಆ ಬ್ರಹ್ಮದೇವನಲ್ಲಿಯೂ ಪರಮಪುರುಷನೇ ಅಂತರ್ಯಾಮಿಯಾಗಿದ್ದು ಇದನ್ನು ಸೃಷ್ಟಿಸುವನು. ಅವನು ಈ ಜಗತ್ತೆಲ್ಲವನ್ನೂ ಶರೀರವಾಗಿ ಹೊಂದಿದವನಾದುದರಿಂದ ಸಮಸ್ತವೂ ಭಗವತ್ಸ್ವರೂಪವು. ಆ ವಸ್ತುಗಳಿಗೆ ವಾಚಕಗಳಾದ ಶಬ್ದಗಳೂ ಅವನಲ್ಲದೆ ಬೇರೆಯಲ್ಲ. ಅವನು ಬ್ರಹ್ಮನನ್ನೇ ತನಗೆ ಶರೀರವನ್ನಾಗಿ ಹೊಂದಿ, ದೇವಮನುಷ್ಯಾದಿಗಳೆಂಬ ನಾಮರೂಪಭೇದಗಳನ್ನೂ, ಅವುಗಳ

ವ್ಯಾಪಾರಗಳನ್ನೂ ನಡೆಸುತ್ತಿರುವನು. ಜೀವನಂತೆ ಕರ್ಮಾಧೀನನಲ್ಲದೆಯೇ ಕಾರಗಳನ್ನು ನಡೆಸುವನು. ಈ ಜಗತ್ತನ್ನು ಸೃಷ್ಟಿಸುವುದಕ್ಕೆ ಬೇರೊಬ್ಬರ ಸಹಾಯವನ್ನೂ ಅಪೇಕ್ಷಿಸುವವನಲ್ಲ. ಅವನ ಮನಸ್ಸಂಕಲ್ಪದಿಂದಲೇ ಜಗದ್ವ್ಯಾಪಾರಗಳೆಲ್ಲವೂ ನಡೆದುಹೋಗುವುವು. ಆ ಭಗವಂತನು ದೇವಾದಿರೂಪಗಳನ್ನೂ, ಆಯಾ ನಾಮಗಳನ್ನೂ, ಅವರವರ ಕೃತ್ಯಗಳನ್ನೂ ಬೇರೆಬೇರೆಯಾಗಿ ಉಂಟುಮಾಡಿದ ರೀತಿಯನ್ನು ಹೇಳುವೆನು ಕೇಳು. ಪ್ರಜಾಧಿಪತಿಗಳು ದೇವತೆಗಳು, ಋಷಿಗಳು, ಪಿತೃದೇವತೆಗಳು, ಸಿದ್ಧರು, ಚಾರಣರು, ಗಂಧರ್ವರು, ವಿದ್ಯಾಧರರು, ಅಸುರರು, ಗುಹ್ಯಕರು, ಕಿನ್ನರರು, ಅಪ್ಸರಸ್ಸುಗಳು, ಯಕ್ಷರು, ರಾಕ್ಷಸರು, ಕಿಂಪುರುಷರು, ಭೂತಪ್ರೇತಪಿಶಾಚಾದಿಗಳು, ಯಾತುಧಾನರು, ಗ್ರಹಗಳು, ಮೃಗಪಕ್ಷಿಗಳು, ಪಶುಗಳು, ವೃಕ್ಷಗಳು, ಪರ್ವತಗಳು, ಸರೀಸೃಪಗಳು, (ಸರ್ಪಗಳು ಇವೆಲ್ಲವನ್ನೂ ಬೇರೆ ಬೇರೆಯಾಗಿ ಸೃಷ್ಟಿಸಿ, ಅದಕ್ಕೆ ಬೇರೆಬೇರೆ ನಾಮಗಳನ್ನೂ, ವ್ಯಾಪಾರಗಳನ್ನೂ ಕಲ್ಪಿಸಿರುವನು. ಇದಲ್ಲದೆ ಸ್ಥಾವರಜಂಗಮಗಳೆಂಬ ಎರಡುವರ್ಗಗಳನ್ನೂ, ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜಗಳೆಂಬ ನಾಲ್ಕು ವರ್ಗಗಳನ್ನೂ, ಜಲದಲ್ಲಿಯೂ, ಸ್ಥಲದಲ್ಲಿಯೂ, ಆಕಾಶದಲ್ಲಿಯೂ ವರ್ತಿಸುವ ಸಮಸ್ತ ವಸ್ತುಗಳನ್ನೂ ಸೃಷ್ಟಿಸಿರುವನು. ಆದರೆ “ಈ ಸಮಸ್ತ ವಸ್ತುಗಳನ್ನೂ ಒಂದೇವಿಧವಾಗಿ ಸೃಷ್ಟಿಸದೆ ಬೇರೆಬೇರೆ ಇಷ್ಟೊಂದು ವಿಧದಿಂದ ಸೃಷ್ಟಿಸಿದ್ದುದೇಕೆ” ಎಂದು ಕೇಳುವೆಯಾ? ರಾಜೇಂದ್ರಾ! ಜೀವನ (ಕ್ಷೇತ್ರಜ್ಞನ) ಪುಣ್ಯಪಾಪರೂಪವಾದ ಕರ್ಮಗಳು, ಉತ್ತಮಮಧ್ಯಮಾಧಮಭೇದದಿಂದ ನಾನಾರೂಪವಾಗಿರುವುವು. ಇದಕ್ಕಾಗಿ ಸೃಷ್ಟಿಯೂ ಅದೇ ತರದಲ್ಲಿ ಬೇರ್ಪಟ್ಟಿತೇ ಹೊರತು ಬೇರೆಯಲ್ಲ. ಹೀಗೆ ಜೀವಾತ್ಮನ ಕರ್ಮಗಳು ವಿಚಿತ್ರಗಳಾಗಿರುವುದರಿಂದ, ಆ ಕರ್ಮಫಲಗಳೂ ವಿಚಿತ್ರಗಳಾಗಿ ಆಯಾ ಕರ್ಮಗಳಿಗೆ ತಕ್ಕಂತೆ ದೇವಮನುಷ್ಯಾದಿಗಳಾದ ಹಲವು ಬಗೆಯ ರೂಪಗಳೂ, ನಾಮಗಳೂ ವ್ಯಾಪಾರಗಳೂ ಬೇರ್ಪಡುವುವು. ಇಷ್ಟೇ ಹೊರತು ಸರ್ವೇಶ್ವರನು ಪಕ್ಷಪಾತದಿಂದ ನಾಮರೂಪಭೇದಗಳನ್ನುಂಟುಮಾಡಿರುವನೆಂದೆಣಿಸಬಾರದು. ಸತ್ವರಜಸ್ತಮಸ್ಸುಗಳೆಂಬ ಈ ಮೂರು ಗುಣಗಳ ವ್ಯತ್ಯಾಸದಿಂದ ಕರ್ಮಗಳ ಗತಿಯೂ ಮೂರುಬಗೆಯಾಗಿರುವುವು. ಇವುಗಳಲ್ಲಿ ಸಾತ್ವಿಕಕರ್ಮಗಳನ್ನು ನಡೆಸಿದವರು ಸುಖಹೇತುವಾಗಿಯೂ, ಉತ್ತಮವಾಗಿಯೂ ಇರುವ ದೇವತ್ವವನ್ನು ಹೊಂದುವರು. ರಾಜಸಕರ್ಮವನ್ನು ನಡೆಸಿದವರು ಮಧ್ಯಮವಾದ ಮನುಷ್ಯಜನ್ಮವನ್ನೈತ್ತುವರು. ತಾಮಸಕರ್ಮಗಳನ್ನಾಚರಿಸಿದವರು ಜಡವಾದ ಪಶು, ಪಕ್ಷಿ, ಕ್ರಿಮಿ, ಕೀಟ, ಸ್ಥಾವರಾದಿಜನ್ಮಗಳನ್ನೈತ್ತುವರು. ಈ ಮೂರು

ತರಗತಿಯವರೂಕೂಡ ಒಂದೇ ಸ್ಥಿತಿಯಲ್ಲಿರಲಾರರು! ಅವರಲ್ಲಿ ಪ್ರಧಾನವೆನಿಸಿಕೊಂಡ ರಜೋಗುಣವಾಗಲಿ, ಸತ್ವಗುಣವಾಗಲಿ ಮತ್ತೊಂದು ಗುಣದಿಂದ ಉಪಹತವಾದಾಗ, ಆ ಒಂದೊಂದು ಗುಣವುಳ್ಳವರಲ್ಲಿಯೇ ಮೂರು ವಿಭಾಗಗಳುಂಟಾಗುವುವು. ಹೇಗೆಂದರೆ, ರಜೋಗುಣಪ್ರಧಾನವಾದ ಮಾನವಜನ್ಮದಲ್ಲಿಯೇ ಕೇವಲ ರಜೋಗುಣವುಳ್ಳವರೆಂದೂ, ಸತ್ವಮಿಶ್ರವಾದ ರಜೋಗುಣವುಳ್ಳವರೆಂದೂ, ತಮೋಮಿಶ್ರವಾದ ರಜೋಗುಣವುಳ್ಳವರೆಂದೂ ಮೂರು ಬಗೆಯಾಗಿರುವರು. ಇದೇರೀತಿಯಲ್ಲಿ ಸತ್ವಪ್ರಧಾನರಾದ ದೇವತೆಗಳಲ್ಲಿಯೂ, ತಮಃಪ್ರಧಾನಗಳಾದ ಮೃಗಾದಿಗಳಲ್ಲಿಯೂ ಮೂರು ವಿಧಗಳುಂಟು. ಎಲೈ ರಾಜೇಂದ್ರನೆ! ಕರ್ಮಗಳ ಫಲವನ್ನೂ, ಸೃಷ್ಟಿಕ್ರಮವನ್ನೂ ಕೇಳಿದೆಯಷ್ಟೆ? ಇನ್ನು ಮೇಲೆ ಆ ಭಗವಂತನು ತನ್ನಿಂದ ಸೃಷ್ಟವಾದ ಜಗತ್ತನ್ನು ತಾನಾಗಿಯೇ ಹೇಗೆ ರಕ್ಷಿಸುತ್ತಿರುವನೆಂಬುದನ್ನು ತಿಳಿಸುವೆನು ಕೇಳು! ಜಗತ್ಕರ್ತನಾದ ಆ ಭಗವಂತನು, ತಿರ್ಯಕ್ಕುಗಳಲ್ಲಿ ಮತ್ಸ್ಯಕೂರ್ಮವರಾಹಾದ್ಯವತಾರಗಳನ್ನೂ, ಮನುಷ್ಯರಲ್ಲಿ ರಾಮಕೃಷ್ಣಾದ್ಯವತಾರಗಳನ್ನೂ, ದೇವತೆಗಳಲ್ಲಿ ವಾಮನಾದ್ಯವತಾರಗಳನ್ನೂ ಸ್ವೀಕರಿಸಿ, ಧರ್ಮಶರೀರಕನಾಗಿ, ಈ ವಿಶ್ವವನ್ನು ಪಾಲಿಸುತ್ತಿರುವನು. ಆ ಭಗವಂತನೇ ಕಲ್ಪಾಂತದಲ್ಲಿ ಕಾಲಾಗ್ನಿರುದ್ರಶರೀರವುಳ್ಳವನಾಗಿ, ತನ್ನಿಂದ ಸೃಷ್ಟವಾದ ಈ ಸಮಸ್ತ ಜಗತ್ತನ್ನೂ ವಾಯುವು ಮೇಘಪಙ್ತಿಯನ್ನು ನಾಶಮಾಡುವಂತೆ ನಾಶಹೊಂದಿಸುವನು. ಹೀಗೆ ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣನಾಗಿ ಜ್ಞಾನಶಕ್ತಿ ಬಲಾದಿಷಡ್ಗುಣಪರಿಪೂರ್ಣನಾದ ಭಗವಂತನ ಸ್ವರೂಪವನ್ನು ನಿನಗೆ ತಿಳಿಸಿದುದಾಯಿತು. ಬ್ರಹ್ಮಜ್ಞಾನಿಗಳು ಅವನನ್ನು ಕೇವಲ ಚಿದಚಿದ್ರೂಪನನ್ನಾಗಿ ಭಾವಿಸದೆ ಅವುಗಳಿಗಿಂತಲೂ ವಿಲಕ್ಷಣನನ್ನಾಗಿಯೇ ಭಾವಿಸುವರು. ಜೀವನಿಗೆ ಜ್ಞಾನಾದಿಗುಣಗಳ ಪೂರ್ಣತೆಯಿಲ್ಲದುದರಿಂದ ಅವನ ಕಾರ್ಯಗಳೆಲ್ಲವೂ ಕರ್ಮಾಧೀನವಾಗಿರುವುವು. ಪರಮಾತ್ಮನ ಕಾರ್ಯಗಳಾದರೋ ಆತನ ಸಂಕಲ್ಪಮಾತ್ರದಿಂದಲೇ ನಡೆಯುವುವು. ಆದರೆ "ಆ ಭಗವಂತನೇ ಸೃಷ್ಟಿಕರ್ತನಾಗಿಯೂ, ಸೃಷ್ಟಿಸಲ್ಪಡತಕ್ಕವನಾಗಿಯೂ ಇರುವನೆಂಬುದು ಹೇಗೆ? ಮತ್ತು ಅವನೇ ಸೃಷ್ಟಿಕರ್ತನಾಗಿದ್ದರೂ ಆತನು ಕರ್ತನಲ್ಲವೆಂಬುದು ಹೇಗೆ? ಹೀಗೆ ಒಬ್ಬನಲ್ಲಿಯೇ ಪರಸ್ಪರವಿರುದ್ಧಧರ್ಮಗಳಿಗೆ ಅವಕಾಶವುಂಟೇ?" ಎಂದು ನೀನು ಆಕ್ಷೇಪಿಸಬಹುದು. ಅದರೂ ಸಮಾಧಾನವನ್ನು ಹೇಳುವೆನು ಕೇಳು! ಪರಮಾತ್ಮನು ಸೃಷ್ಟ್ಯಾದಿಕಾರ್ಯಗಳನ್ನು ನಡೆಸುವಾಗ, ಆಯಾಕಾಲದಲ್ಲಿ ಆಯಾಕಾರ್ಯಗಳಿಗೆ ತಾನೂ ಭಾಗಿಯಾಗಿ ನಿಲ್ಲುವನು. ಆದರೆ ಅವನ ಸ್ವರೂಪವು ವಾಸ್ತವದಲ್ಲಿ ಈ ವಿಕಾರಗಳಿಗೆ ಈಡಾದುದಲ್ಲ. ಹೇಗೆಂದರೆ,

ಆತನು ಸೃಷ್ಟಿಸ್ಥಿತಿ ಸಂಹಾರಗಳಿಗೆ ಈಡಾಗತಕ್ಕ ಸಮಸ್ತವಸ್ತುಗಳಲ್ಲಿಯೂ ಅಂತ ರಾತ್ಮನಾಗಿರುವುದರಿಂದ, ಅವುಗಳ ಮೂಲಕವಾಗಿ ಅವನಿಗೂ ಈ ಅವಸ್ಥೆಗಳುಂ ಟಾಗುವುವೆಂದು ಹೇಳುವುವೇ ಹೊರತು, ಇನ್ನೊಂದೂ ಅವನಿಗೆ ಸ್ವರೂಪಸಿದ್ಧವಲ್ಲ, ಇನ್ನು ಅವನಿಗೆ ಕರ್ತೃತ್ವದ ಸಂಬಂಧವು ಹೇಗೆಂಬುದನ್ನು ತಿಳಿಸುವೆನು ಕೇಳು. ಪ್ರಕೃತಿಸಂಬಂಧದಿಂದ ಜೀವಾತ್ಮನಲ್ಲಿ ಆರೋಪಿತವಾಗಿಯೂ, ಆ ಪ್ರಕೃತಿಯ ಪರಿಣಾಮದಿಂದುಂಟಾದ ಶರೀರೇಂದ್ರಿಯಗಳನ್ನು ಹೊಂದತಕ್ಕುದಾಗಿಯೂ ಇರುವ ಕರ್ತೃತ್ವವು ಪರಮಾತ್ಮನಲ್ಲಿ ಎಂದಿಗೂ ಸೇರಲಾರದು. ಇದ ರಿಂದಲೇ ಆತನು ಕರ್ತನಲ್ಲವೆಂದು ಸಿದ್ಧವಾಗುವುದು. ಜೀವನಂತೆ ಪ್ರ ಕೃತಿಸಂಬಂಧದಿಂದ ಬಂದ ಕರ್ತೃತ್ವವು ಆತನಿಗಿಲ್ಲವೆಂಬ ಅಭಿಪ್ರಾಯದಿಂದಲೇ ಅವನಿಗೆ ಕರ್ತೃತ್ವವಿಲ್ಲವೆಂದು ಹೇಳುವರು. ತನ್ನ ಸಂಕಲ್ಪಮಾತ್ರದಿಂದಲೇ ಸೃಷ್ಟಿ ಮೊದಲಾದ ಕಾರ್ಯಗಳನ್ನು ನಡೆಸುವನೆಂಬ ಭಾವದಿಂದ ಅವನನ್ನು ಕರ್ತ ನೆಂದೂ ಹೇಳುವರು. ಇದರಿಂದ ಕರ್ತೃತ್ವಾಕರ್ತೃತ್ವಗಳೆರಡೂ ಅವನಲ್ಲಿ ಹೊಂದು ವುವು. ಆದುದರಿಂದ ಎಲೈ ಪರೀಕ್ಷಿದ್ರಾಜನೆ! ನೀನು ಹೇಳಿದ ವಿರೋಧವು ಪರಿಹೃತವಾಯಿತಷ್ಟೆ! ಪ್ರಪಂಚದಂತೆ ಕರ್ಮಸಂಬಂಧದಿಂದುಂಟಾಗುವ ಜನ್ಮಾದಿಗಳೊಂದೂ ಪರಮಾತ್ಮನಲ್ಲಿ ಸೇರಲಾರವು. ಆ ಭಗವಂತನ ಜನ್ಮಾದಿಗಳೂ, ವ್ಯಾಪಾರಗಳೂ ಅವನ ಸಂಕಲ್ಪದಿಂದಲೂ, ಜ್ಞಾನದಿಂದಲೂ ನಡೆಯುವುವೇ ಹೊರತು ಬೇರೆಯಲ್ಲ! ಕರ್ಮಸಂಬಂಧದಿಂದುಂಟಾಗುವ ಕರ್ತೃತ್ವವು ತನಗಿಲ್ಲ ವೆಂಬುದನ್ನು ತೋರಿಸುವುದಕ್ಕಾಗಿಯೇ, ತನ್ನ ಸಂಕಲ್ಪದಿಂದ ದೇವಮನುಷ್ಯಾದಿ ಜನ್ಮಗಳನ್ನೂ ಅದರ ವ್ಯಾಪಾರಗಳನ್ನೂ ತನ್ನಲ್ಲಿ ಆರೋಪಿಸಿಕೊಂಡು, ಅವತಾರ ಗಳನ್ನೆತ್ತಿ, ಅಮಾನುಷಕೃತ್ಯಗಳಿಂದ ತಾನೇ ಪರಮಪುರುಷನೆಂಬುವನ್ನು ತೋರಿ ಸುತ್ತಿರುವನು. ಓ ರಾಜೇಂದ್ರನೆ! ಬ್ರಹ್ಮನಿಗೆ ಸಂಬಂಧಪಟ್ಟ ಮಹಾಕಲ್ಪವನ್ನೂ ಅವಾಂತರಕಲ್ಪವನ್ನೂ ಸಂಗ್ರಹಿಸಿ ನಿನಗೆ ಹೇಳಿರುವೆನು. ಮಹತ್ತತ್ವದಿಂದ ಭೂಮಿ ಯವರೆಗಿರುವ ಪ್ರಾಕೃತಸೃಷ್ಟಿಗಳೂ, ಪೃಥಿವ್ಯಾದಿವಿಕಾರಗಳಾದ ಸೃಷ್ಟಿಗಳೂ, ಮಹಾಕಲ್ಪದಲ್ಲಿಯೇ ಉಂಟಾಗುವುವು. ಒಂದೊಂದು ಮಹಾಕಲ್ಪದಲ್ಲಿಯೂ ಇದೇ ವಿಧವಾದ ಸೃಷ್ಟಿಯು ನಡೆಯುತ್ತಿರುವುದು. ಎಲೈ ಪರೀಕ್ಷಿದ್ರಾಜನೆ! ನೀನು ಕೇಳಿದ ಪ್ರಶ್ನೆಗಳಲ್ಲಿ ಕೆಲವಕ್ಕೆಮಾತ್ರ ಉತ್ತರವನ್ನು ಹೇಳಿರುವೆನು. ಸ್ಥೂಲಸೂಕ್ಷ್ಮ ಗಳೆಂಬ ಕಾಲಪರಿಮಾಣವನ್ನೂ, ಕಲ್ಪಲಕ್ಷಣಗಳನ್ನೂ, ಮನ್ವಂತರಾದಿಗಳನ್ನೂ, ಮುಂದಿನ ಸ್ಕಂಧದಲ್ಲಿ ವಿವರಿಸಿ ಹೇಳುವೆನು ಅಲ್ಲಿಯೇ ಪದ್ಮಕಲ್ಪವನ್ನೂ ವಿಸ್ತ ರಿಸಿ ತಿಳಿಸುವೆನು. ಅವೆಲ್ಲವನ್ನೂ ನೀನು ಸಾವಧಾನವಾಗಿ ಕೇಳಬೇಕು” ಎಂದನು.

ಹೀಗೆಂದು ಶುಕಮಹಾಮುನಿಯು ಪರೀಕ್ಷಿದ್ರಾಜನಿಗೆ ಹೇಳಿದ ವಿಷಯಗಳೆಲ್ಲವನ್ನೂ ಸೂತಪೌರಾಣಿಕನು ಶೌನಕಾದಿಗಳಿಗೆ ತಿಳಿಸಲು ಶೌನಕಮಹಾಮುನಿಯು ತಿರುಗಿ ಸೂತನನ್ನು ಕುರಿತು, "ಓ ಮಹಾತ್ಮಾ! ಭಕ್ತೋತ್ತಮನಾಗಿಯೂ, ತತ್ವಜ್ಞನಾಗಿಯೂ ಇರುವ ವಿದುರನು ತನ್ನ ಬಂಧುವರ್ಗವೆಲ್ಲವನ್ನೂ ತೊರೆದು, ಪುಣ್ಯತೀರ್ಥಯಾತ್ರೆಗೆ ಹೊರಟನೆಂದೂ, ಈ ಸಂದರ್ಭದಲ್ಲಿ ವಿದುರನಿಗೂ ಮೈತ್ರೇಯ ಮಹರ್ಷಿಗೂ ಸಮಾಗಮವುಂಟಾಯಿತೆಂದೂ ಮೊದಲು ನೀನು ಹೇಳಿದೆಯಷ್ಟೆ! ಆ ವಿದುರನು ಮೈತ್ರೇಯನನ್ನು ಸಂಧಿಸಿದ ಸ್ಥಳವಾವುದು? ಮೈತ್ರೇಯನು ವಿದುರನಿಗೆ ಉಪದೇಶಿಸಿದ ವೇದಾಂತವಿಷಯಗಳಾವುವು? ಅವರಿಬ್ಬರಿಗೂ ನಡೆದ ಸಂವಾದದ ಕ್ರಮವೇನು? ಆ ವಿದುರನ ಮುಂದಿನ ವೃತ್ತಾಂತವೇನು? ಅತನು ತನ್ನ ಇಷ್ಟಬಂಧುಗಳನ್ನೆಲ್ಲಾ ತೊರೆದು ಬರುವುದಕ್ಕೆ ಕಾರಣವೇನು? ಈ ವಿವರಗಳೆಲ್ಲವನ್ನೂ ನಮಗೆ ವಿಸ್ತಾರವಾಗಿ ತಿಳಿಸಬೇಕು!" ಎಂದು ಪ್ರಾರ್ಥಿಸಿದನು. ಅದಕ್ಕಾ ಸೂತನು ಶೌನಕಾದಿಗಳನ್ನು ಕುರಿತು "ಪರೀಕ್ಷಿದ್ರಾಜನು ಶುಕಮುನಿಯನ್ನು ಪ್ರಶ್ನೆಮಾಡಿದುದರ ಮೇಲೆ, ಶುಕನು ಆ ವಿಷಯಗಳೆಲ್ಲವನ್ನೂ ಕ್ರಮವಾಗಿ ತಿಳಿಸಿರುವನು. ಅದನ್ನೇ ನಿಮಗೆ ತಿಳಿಸುವೆನು. ಕೇಳಿರಿ!" ಎಂದನು. ಇದು ಹತ್ತನೆಯ ಅಧ್ಯಾಯವು.

ದ್ವಿತೀಯಸ್ಕಂಧವು ಸಮಾಪ್ತವು.

ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ.

ಶುಭಂ ಭೂಯಾತ್.



Ananda Press, Madras